# ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ

ಡಾ॥ ಪಿ. ಶ್ರೀಕೃಷ್ಣಭಟ್







ವಿದ್ಯಾ ಪ್ರಕಾಶನ :: ಕಾಸರಗೋಡು

# ಅಭಿಪ್ರಾಯ

(ಈ ಮಹಾಪ್ರಬಂಧದ ಮಾರ್ಗದರ್ಶಕರಿಂದ)

ಕನ್ನಡ ಭಾಷೆ ಸಾಹಿತ್ಯಗಳ ಮೇಲೆ ಸಂಸ್ಕೃತದ ಪ್ರಭಾವ ಹೊಸತಾದುದಲ್ಲ. ಆರಂಭದಿಂದಲೂ ಅದು ಕಾಣಿಸಿಕೊಂಡಿದೆ. ಆದರೆ ಈ ಪ್ರಭಾವದ ಅಧ್ಯಯನ ಮಾತ್ರ ಹೊಸತು. ಇಲ್ಲಿಯವರೆಗೆ ಯಾರೂ ಈ ಕುರಿತು ವಿವರವಾಗಿ ಅಧ್ಯಯನ ಮಾಡಿದಂತಿಲ್ಲ. ಶ್ರೀಕೃಷ್ಣಭಟ್ಟರು ವ್ಯಾಕರಣ ವಿಷಯವೊಂದನ್ನೇ ಆಯ್ದುಕೊಂಡು ಸಂಸ್ಕೃತದಿಂದಾದ ಪ್ರಭಾವ ವನ್ನು ಸಾಕಷ್ಟು ವಿವರವಾಗಿ ಪ್ರತಿಪಾದಿಸಿದ್ದಾರೆ. ಕನ್ನಡ ವ್ಯಾಕರಣದ ಯಾವ ಯಾವ ಅಂಶಗಳು ನೇರವಾಗಿ ಸಂಸ್ಕೃತದ ಪ್ರಭಾವದಿಂದುಂಟಾದವು, ಯಾವ ಯಾವ ಅಂಶಗಳು ಸ್ವೋಪಜ್ಞವಾದವು ಎಂಬುದನ್ನು ಸ್ಪಷ್ಟಪಡಿಸಿ ದ್ದಾರೆ. ಈ ಅಧ್ಯಯನದಿಂದ ಕನ್ನಡ ವ್ಯಾಕರಣಗಳ ನೈಜ ಸ್ವರೂಪವನ್ನು ಅರಿತುಕೊಳ್ಳಬಹುದು. ಕನ್ನಡ ವ್ಯಾಕರಣಗಳ ಅಧ್ಯಯನಕ್ಕೆ ಪ್ರಸ್ತುತ ಪ್ರಬಂಧದಿಂದ ಬಹಳ ಸಹಾಯವಾಗುತ್ತದೆ. ಇದುವರೆಗೆ ಅಲ್ಲಿ ಇಲ್ಲಿ ಚೆಲ್ಲಿ ಹೋಗಿದ್ದ ಅನೇಕ ಸಂಗತಿಗಳನ್ನು ಶ್ರೀಕೃಷ್ಣಭಟ್ಟರು ಒಂದೆಡೆಗೆ ತಂದು ಉಪಕಾರ ಮಾಡಿದ್ದಾರೆ. ಈ ಅಧ್ಯಯನದಲ್ಲಿ ಅವರು ಕನ್ನಡ ಮತ್ತು ಸಂಸ್ಕೃತ ವ್ಯಾಕರಣಗಳಲ್ಲಿ ಹೊಂದಿರುವ ವಿದ್ವತ್ತು ನಿಚ್ಚಳವಾಗಿ ಕಾಣಿಸಿ ಕೊಂಡಿದೆ. ಬೇರೆ ಬೇರೆ ಭಾಷಾವರ್ಗಗಳಿಗೆ ಸೇರಿದ ಎರಡು ಭಾಷೆಗಳ ನಡುವಿನ ಸಂಬಂಧ ಸ್ವರೂಪವನ್ನು ಅವರು ವಿವೇಚಿಸಿರುವ ರೀತಿ ಮೆಚ್ಚುಗೆಗೆ ಅರ್ಹವಾಗಿದೆ.

**ಡಾ. ಹಾ. ಮಾ. ನಾಯಕ**

ಕನ್ನಡ ಮತ್ತು ಭಾಷಾವಿಜ್ಞಾನ ಪ್ರಾಧ್ಯಾಪಕ
ಮತ್ತು ಗುಲಬರ್ಗ ವಿಶ್ವವಿದ್ಯಾಲಯದ ಹಿಂದಿನ ಕುಲಪತಿ

# ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ






ಡಾ|| ಪಿ. ಶ್ರೀಕೃಷ್ಣಭಟ್

ವಿದ್ಯಾ ಪ್ರಕಾಶನ : : ಕಾಸರಗೋಡು

KANNADA VYAKARANA PARAMPAREYA MELE
SAMSKRITHADA PRABHAVA
(Influence of Sanskrit on Ancient Kannada Grammars)
by Dr. P. Srikrishna Bhat, Head of the Department of
Post-Graduate Studies and Research in Kannada
Government College, Kasaragod. (Calicut University)
Published by Vidya Prakashana, 'Sridhama', Chinmaya Colony
Vidyanagar Post, Kasaragod-670 123

First Edition 1989. Pages xii + 372.

Price: Rs. 75-00



ಮೊದಲ ಮುದ್ರಣ : 1989

ಬೆಲೆ : ರೂ. 75-00

Forwarded free of cost,
and with the compliments of
the Department of Education,
Govt. of India, New Delhi.

ಮುದ್ರಣ : ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು-570 008.

ಅರ್ಪಣೆ

ನನ್ನ ಪೂಜ್ಯ ತಾಯಿ ತಂದೆ

ಶ್ರೀಮತಿ ಸರಸ್ವತಿ

ಮತ್ತು

ಶ್ರೀ ಈಶ್ವರಭಟ್ಟ

ಅವರ ನೆನಪಿಗೆ

# ಅರಿಕೆ

ಹಳಗನ್ನಡ ವ್ಯಾಕರಣ ಗ್ರಂಥಗಳ ಮೇಲೆ ಸಂಸ್ಕೃತದ ವಿಭಿನ್ನ ವ್ಯಾಕರಣ ಪರಂಪರೆಗಳಿಗೆ ಸೇರಿದ ಕೃತಿಗಳು ಬೀರಿರುವ ಪ್ರಭಾವದ ಕುರಿತಾಗಿ ನಾನು ಕೈಗೊಂಡ ಸಂಶೋಧನೆಯ ಫಲವಾಗಿ ಈ ಕೃತಿ ರೂಪುಗೊಂಡಿದೆ. ೧೯೭೬ ರಿಂದ ೧೯೮೫ರವರೆಗಿನ ಕಾಲಾವಧಿಯಲ್ಲಿ ಅಧ್ಯಯನ ಮಾಡಿ ಸಿದ್ಧಪಡಿಸಿ ಒಪ್ಪಿಸಿದ ಈ ಸಂಶೋಧನ ಪ್ರಬಂಧಕ್ಕೆ ೧೯೮೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿ. ಹೆಚ್. ಡಿ. ಪದವಿ ಲಭಿಸಿತು. ಅನಿವಾರ್ಯವೆನಿಸಿದಲ್ಲಿ ಮಾತ್ರ ಮಾಡಿರುವ ವಿನ್ಯಾಸ ಮತ್ತು ಶಬ್ದರೂಪಗಳಿಗೆ ಸಂಬಂಧಿಸಿದ ವ್ಯತ್ಯಾಸಗಳನ್ನು ಬಿಟ್ಟರೆ, ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ ಅದೇ ರೂಪದಲ್ಲೇ ಪ್ರಬಂಧವೀಗ ಪ್ರಕಟವಾಗುತ್ತಿದೆ.

ಕನ್ನಡ ಎಂ. ಎ. ವಿದ್ಯಾರ್ಥಿಗಳಿಗೆ ಕೇಶಿರಾಜನ ಶಬ್ದಮಣಿದರ್ಪಣವನ್ನು ಪಾಠ ಹೇಳುವಾಗ ಎದುರಿಸಬೇಕಾಗಿ ಬಂದ ಹಲವಾರು ಸಮಸ್ಯೆಗಳು-ಅವುಗಳ ಪರಿಹಾರಕ್ಕಾಗಿ ಸಂಸ್ಕೃತ ವ್ಯಾಕರಣ ಗ್ರಂಥಗಳತ್ತ ಕಣ್ಣು ಹಾಯಿಸಬೇಕಾಗಿ ಬಂದ ಅನಿವಾರ್ಯತೆ, ಹಾಗೆಯೇ, ನನಗೆ ಭಾಷಾವಿಜ್ಞಾನವನ್ನು ಬೋಧಿಸಿದ ಪ್ರಾಧ್ಯಾಪಕರಾದ ದಿ| ಡಾ| ಜೆ. ಎಸ್. ಕುಳ್ಳ ಅವರು ಈ ವಿಷಯವನ್ನೇ ಪಿಹೆಚ್. ಡಿ ಅಧ್ಯಯನಕ್ಕೆ ಆರಿಸಿಕೊಳ್ಳುವಂತೆ ಸಲಹೆ ನೀಡಿದ್ದು-ನಾನೀ ಪ್ರಬಂಧವನ್ನು ಬರೆಯುವುದಕ್ಕೆ ಒದಗಿಬಂದ ಕಾರಣಗಳು. ನನ್ನ ಸಂಶೋಧನ ಕಾರ್ಯದಲ್ಲಿ ಮಾರ್ಗದರ್ಶಕರಾಗಿ ನಿಂತುಕೊಂಡವರು ಮೊದಲಿಗೆ (೧೯೭೬-೮೦) ದಿ| ಪ್ರೊ| ಎಂ. ಮರಿಯಪ್ಪಭಟ್ಟರು, ಅವರ ನಿಧನಾನಂತರ (೨೧-೩-೧೯೮೦) ಡಾ| ಹಾ. ಮಾ. ನಾಯಕರು. ಈ ಇಬ್ಬರು ಕನ್ನಡದ ಖ್ಯಾತ ವಿದ್ವಾಂಸರ ಮಾರ್ಗದರ್ಶನ ಲಭಿಸಿದ್ದು ನನ್ನ ಭಾಗ್ಯವೆಂದೇ ತಿಳಿಯುತ್ತೇನೆ. ದಿ| ಪ್ರೊ| ಮರಿಯಪ್ಪಭಟ್ಟರು ನನ್ನನ್ನು ಅತ್ಯಂತ ವಾತ್ಸಲ್ಯದಿಂದ ಕಂಡಿದ್ದಾರೆ. ಡಾ. ಹಾ. ಮಾ. ನಾಯಕರು ತಮ್ಮ ಬಿಡುವಿಲ್ಲದ ಕೆಲಸಗಳ ನಡುವೆ ಕೂಡಾ ನನ್ನನ್ನು ಬಹಳ ಆತ್ಮೀಯತೆಯಿಂದ ನಡೆಸಿಕೊಂಡಿದ್ದಾರೆ, ಅತ್ಯಂತ ಸಹಾನುಭೂತಿಯಿಂದ ನನ್ನ ಸಮಸ್ಯೆಗಳನ್ನು ಪರಿಹರಿಸಿಕೊಟ್ಟಿದ್ದಾರೆ. ಪ್ರಬಂಧವನ್ನು ಅಚ್ಚುಹಾಕಿಸುವ ಬಗೆಗೆ ತಿಳಿಸಿದಾಗ ಸಂತೋಷಪಟ್ಟಿದ್ದಾರೆ. ಈ ಇಬ್ಬರು ವಿದ್ವಾಂಸರ ಔದಾರ್ಯ-ವಿಶ್ವಾಸಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ನನಗೆ ಸಂಸ್ಕೃತದ ವಿಭಿನ್ನ ವ್ಯಾಕರಣ ವಿಷಯಗಳ ಹಾಗು ಗ್ರಂಥಗಳ ಪರಿಚಯ ಮಾಡಿಕೊಟ್ಟು, ಕ್ಲಿಷ್ಟ ಸಮಸ್ಯೆಗಳನ್ನು ಪರಿಹರಿಸುತ್ತ ಪ್ರಬಂಧ ಬರವಣಿಗೆಯುದ್ದಕ್ಕೂ

ಸೂಕ್ತ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸಿದವರು ಸಂಸ್ಕೃತದ ಘನವಿದ್ವಾಂಸರೂ, ದೆಹಲಿ ವಿಶ್ವವಿದ್ಯಾಲಯದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರೂ ಆದ ಪ್ರೊ। ಎಂ. ರಾಮಕೃಷ್ಣಭಟ್ಟರು. ನನ್ನ ಹಿರಿಯ ಬಂಧುಗಳೂ ಪೂಜ್ಯರೂ ಆದ ಅವರ ಪ್ರೀತಿ ವಾತ್ಸಲ್ಯಗಳಿಗೆ ನಾನು ಚಿರಋಣಿಯಾಗಿರುವೆನು.

ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಗೌರವ ನಿರ್ದೇಶಕರಾದ ಪ್ರೊ। ಕು. ಶಿ. ಹರಿದಾಸ ಭಟ್ಟರನ್ನು ನಾನು ನೆನೆಯಬೇಕು. ಅವರು ತಮ್ಮ ಸಂಶೋಧನ ಕೇಂದ್ರದಲ್ಲಿ ನೋಂದಾಯಿಸಿಕೊಳ್ಳಲು, ಅಲ್ಲಿನ ಗ್ರಂಥಾಲಯವನ್ನು ಉಪಯೋಗಿಸಿಕೊಳ್ಳಲು ಅನುಕೂಲಮಾಡಿಕೊಟ್ಟು ಬಹಳಷ್ಟು ಉಪಕಾರ ಮಾಡಿದ್ದಾರೆ. ಆ ಕೇಂದ್ರದ ಒಬ್ಬ ಸಂಶೋಧನ ವಿದ್ಯಾರ್ಥಿಯೆಂದು ಹೇಳಿಕೊಳ್ಳುವುದಕ್ಕೆ ನನಗೆ ತುಂಬ ಅಭಿಮಾನವಿದೆ.

ನನ್ನ ಸಂಶೋಧನ ಕಾರ್ಯದಲ್ಲಿ, ವಿಷಯ ಸಂಗ್ರಹದಲ್ಲಿ ಸಾಕಷ್ಟು ಜನ ವಿದ್ವಾಂಸರಿಂದ ಸಂಸ್ಥೆಗಳಿಂದ ನಾನು ಉಪಕೃತನಾಗಿದ್ದೇನೆ. ಮದರಾಸು ವಿಶ್ವ ವಿದ್ಯಾಲಯ ಮತ್ತು ಪ್ರೆಸಿಡೆನ್ಸಿ ಕಾಲೇಜಿನ ಸಂಸ್ಕೃತ ವಿಭಾಗದ ಗ್ರಂಥಾಲಯದ ಅಧಿಕಾರಿಗಳು ಸಂಸ್ಕೃತವ್ಯಾಕರಣ ಸಾಹಿತ್ಯದ ಪ್ರಾಚೀನ ಗ್ರಂಥಗಳನ್ನು ನೋಡಲು ಅನುಮತಿ ನೀಡಿ ಸಹಕರಿಸಿದ್ದಾರೆ. ಡಾ। ಕೆ. ಕುಶಾಲಪ್ಪಗೌಡ, ಡಾ। ಕೆ. ಮಹಾಲಿಂಗ ಭಟ್, ಡಾ। ಟಿ. ವಿ. ವೆಂಕಟಾಚಲ ಶಾಸ್ತ್ರೀ, ಡಾ। ಎಚ್. ತಿಪ್ಪೇರುದ್ರಸ್ವಾಮಿ, ಡಾ। ಯು. ಪಿ. ಉಪಾಧ್ಯಾಯ ಮೊದಲಾದ ಹಲವಾರು ಜನ ವಿದ್ವಾಂಸರು ಸಮಾಲೋಚನೆ ಹಾಗೂ ಇತರ ಸಂದರ್ಭಗಳಲ್ಲಿ ಹಲವಾರು ಮಾಹಿತಿಗಳನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಡಾ। ಆರ್. ಸಿ. ಹಿರೇಮಠ ಮತ್ತು ಡಾ। ವಿ.ಶಿವಾನಂದ ಪ್ರಬಂಧ ಉತ್ತಮಗೊಳ್ಳುವುದಕ್ಕೆ ಅಗತ್ಯವಾದ ಸಲಹೆ ಸೂಚನೆಗಳನ್ನಿತ್ತು ಉಪಚರಿಸಿದ್ದಾರೆ. ಇವರೆಲ್ಲರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

ನನ್ನ ಸಂಶೋಧನ ಪ್ರಬಂಧ ಈ ತೆರನಾಗಿ ಪುಸ್ತಕರೂಪದಲ್ಲಿ ಬೆಳಕು ಕಾಣುವುದಕ್ಕೆ ಮುಖ್ಯ ಕಾರಣಕರ್ತರಾದ ಮೈಸೂರಿನ ಪ್ರೊ। ಎಸ್. ಅನಂತನಾರಾಯಣ ಅವರನ್ನು ನಾನೆಂದೂ ಮರೆಯಲಾರೆ. ಕರ್ನಾಟಕದ ಹೊರಗಿರುವ ನಾನು ಪ್ರಬಂಧದ ಪ್ರಕಟಣೆಗೆ ದಾರಿಕಾಣದೆ ಕೈಕಟ್ಟಿ ಕುಳಿತಿದ್ದಾಗ ಕನ್ನಡದ ಖ್ಯಾತ ಸಾಹಿತಿಗಳೂ ಹಲವಾರು ಪುಸ್ತಕಗಳನ್ನು ಬರೆದು ಪ್ರಕಟಿಸಿದ ಅನುಭವ ಸಂಪತ್ತಿಯುಳ್ಳವರೂ ಆದ ಅವರು ನನ್ನ ಬೆನ್ನು ತಟ್ಟಿ ಪ್ರೋತ್ಸಾಹಿಸಿದರು. ನನ್ನ ಮೇಲೆ, ನಮ್ಮ ಕನ್ನಡ ವಿಭಾಗದ ಮೇಲೆ ಅವರಿಟ್ಟಿರುವ ಪ್ರೀತಿ-ವಿಶ್ವಾಸ, ಅಂತಃಕರಣ ಅನುಪಮವಾದುದು. ಈ ಪುಸ್ತಕದ ವಿನ್ಯಾಸ, ಅಚ್ಚಿನ ಕೆಲಸಗಳ ಮೇಲ್ವಿಚಾರಣೆ, ಅಚ್ಚಿನ ತಪ್ಪುಗಳ ತಿದ್ದುವಿಕೆ ಇತ್ಯಾದಿ

ಎಲ್ಲ ಜವಾಬ್ದಾರಿಯು ಮತ್ತು ಅತ್ಯಂತ ಶ್ರಮದಾಯಕ ಕೆಲಸಗಳನ್ನು ತಾವೇ ಆಸಕ್ತಿಯಿಂದ ವಹಿಸಿಕೊಂಡು ಪುಸ್ತಕವು ಸುಂದರವಾಗಿ ಮೂಡಿಬರುವಂತೆ ಮಾಡಿದ್ದಾರೆ. ಪುಸ್ತಕ ಮುದ್ರಣಕ್ಕೆ ಅಗತ್ಯವಾದ ಅನುಭವ ಮತ್ತು ಅನುಕೂಲತೆಗಳಿಲ್ಲದ ನನ್ನ ಕೆಲಸವನ್ನು ಪರಿಪೂರ್ಣವಾಗಿ ಮಾಡಿಕೊಟ್ಟಿದ್ದಲ್ಲದೆ ಸಲ್ಮುಡಿ ಬರೆದು ಪ್ರೋತ್ಸಾಹಿಸಿದ್ದಾರೆ. ಕಗ್ಗತ್ತಲೆಯಲ್ಲಿದ್ದ ಪ್ರಬಂಧವನ್ನು ಬೆಳಕಿಗೆ ತಂದ ಅವರಿಗೆ ನಾನೆಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಅದು ಕಡಮೆಯೇ ಸರಿ.

ಮೂಲ ಪ್ರಬಂಧವನ್ನು ಪ್ರತಿಪಾದುವಲ್ಲಿ ಆಸಕ್ತಿಯಿಂದ ಉಪಚರಿಸಿದ ಸಹೋದ್ಯೋಗಿ ಮಿತ್ರರಾದ ಪ್ರೊ। ಕೆ. ಸುಬ್ರಹ್ಮಣ್ಯಭಟ್ಟರು, ಆಗಾಗ್ಗೆ ಸಲಹೆ-ಸೂಚನೆ ನೀಡುತ್ತಿದ್ದ ಹಿರಿಯ ಸಹೋದ್ಯೋಗಿ ದಿ। ಡಾ! ಬಿ. ಕೆ. ತಿಮ್ಮಪ್ಪನವರು ನನ್ನ ಪ್ರಯತ್ನದಲ್ಲಿ ಯಶಸ್ವಿಯಾಗುವಂತೆ ಸದಾಹಾರೈಸುತ್ತಿರುವ ಕನ್ನಡ ವಿಭಾಗದ ಸಹೋದ್ಯೋಗಿ ಬಂಧುಗಳು, ಬರವಣಿಗೆಯಲ್ಲಿ ಮನೆಯ ಕಷ್ಟಕಾರ್ಪಣ್ಯಗಳು ಅಡ್ಡಿ ಬಾರದಂತೆ ಜಾಗ್ರತೆವಹಿಸುತ್ತಿರುವ ಪತ್ನಿ ಹೇಮಾ, ಕೃತಿಪ್ರಕಟಣೆಯ ಗುರುತರ ಭಾರವನ್ನು ವಹಿಸಿದ 'ವಿದ್ಯಾಪ್ರಕಾಶನ, ಕಾಸರಗೋಡು', ಸುಂದರವಾಗಿ ಮುದ್ರಿಸಿದ ಮೈಸೂರಿನ 'ಮಿತ್ರಪ್ರಿಂಟರ್ಸ್'ನ ಒಡೆಯರಾದ ಶ್ರೀ ರಘುವೀರ ಮತ್ತು ಸಿಬ್ಬಂದಿವರ್ಗ ಎಲ್ಲರನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ.

ಒಂದು ಪರಿಮಿತಿಯೊಳಗೆ ಮಾಡಿದ ಕೆಲಸದಲ್ಲಿ ದೋಷಗಳಿರುವುದು ಸ್ವಾಭಾವಿಕ ಪ್ರಾಜ್ಞರು ಅಂಥವನ್ನು ಎತ್ತಿ ತೋರಿಸಿಕೊಟ್ಟಲ್ಲಿ ವಿನಮ್ರನಾಗಿ ಸ್ವೀಕರಿಸುತ್ತೇನೆ.

ಕನ್ನಡ ಸ್ನಾತಕೊತ್ತರ ಅಧ್ಯಯನ ಮತ್ತು
ಸಂಶೋಧನ ವಿಭಾಗ (ಕಲ್ಲಿಕೋಟೆ ವಿಶ್ವವಿದ್ಯಾಲಯ) ಪಿ. ಶ್ರೀಕೃಷ್ಣಭಟ್ಟ
ಸರಕಾರಿ ಕಾಲೇಜು, ಕಾಸರಗೋಡು 670 123

# ಪರಿವಿಡಿ

# ಸಂಕ್ಷಿಪ್ತಗಳು

| | |
|---|---|
| ಅ.ಕ.ಸಾ.ಚ. | ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ |
| ಅ.ಪ್ರಾ. | ಅಥರ್ವವೇದ ಪ್ರಾತಿಶಾಖ್ಯ |
| ಋ.ಪ್ರಾ. | ಋಗ್ವೇದ ಪ್ರಾತಿಶಾಖ್ಯ |
| ಕ.ಕ. | ಕರ್ಣಾಟಕ ಕವಿಚರಿತೆ |
| ಕ.ಕೈ. | ಕನ್ನಡ ಕೈಪಿಡಿ |
| ಕ.ನು. | ಕನ್ನಡ ನುಡಿ |
| ಕ.ಪ.ಕ.ಸಾ. | ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ |
| ಕ.ಭಾ. | ಕರ್ನಾಟಕ ಭಾರತಿ |
| ಕ.ಭಾ.ಚ. | ಕನ್ನಡ ಭಾಷೆಯ ಚರಿತ್ರೆ |
| ಕ.ಭಾ.ಶಾ. | ಕನ್ನಡ ಭಾಷಾ ಶಾಸ್ತ್ರ |
| ಕ.ಮಾ. | ಕವಿರಾಜಮಾರ್ಗ |
| ಕ.ಮಾ.ವಿ. | ಕವಿರಾಜಮಾರ್ಗ ವಿವೇಕ |
| ಕ.ಲಿ.ವಿ. | ಕನ್ನಡ ಲಿಪಿಯ ಉಗಮ ಮತ್ತು ವಿಕಾಸ |
| ಕ.ಶ.ಪ್ರ. | ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ |
| ಕ.ಸ. | ಕನ್ನಡ ಸಮಾಸಗಳು |
| ಕೆ.ಕ.ಕಾ.ವಿ. | ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ |
| ತೈ.ಪ್ರಾ. | ತೈತ್ತಿರೀಯ ಪ್ರಾತಿಶಾಖ್ಯ |
| ದರ್ಪಣ | ಶಬ್ದಮಣಿದರ್ಪಣಂ (ಸಂ. ಡಿ.ಎಲ್.ಎನ್.) |
| ದರ್ಪಣ (ಕಿ) | ,, (ಸಂ. ಕಿಟ್ಟೆಲ್) |
| ದರ್ಪಣ (ಪ) | ,, (ಸಂ. ಪದ್ಮನಾಭ ಶರ್ಮ) |
| ದರ್ಪಣ (ಭೀ) | ,, (ಸಂ. ಡಿ. ಕೆ. ಭೀಮಸೇನ ರಾವ್) |
| ದರ್ಪಣ (ಮ) | ,, (ಸಂ. ವೆಂಕಟರಾವ್ ಎ ಮತ್ತು ಶೇಷ ಅಯ್ಯಂಗಾರ್) |
| ದರ್ಪಣ (ಶಾ) | ,, (ಸಂ. ತ. ಸು. ಶಾಮರಾಯ ಮತ್ತು ನಂಜೇಗೌಡ) |
| ದ್ರಾ.ಭಾ.ವಿ. | ದ್ರಾವಿಡ ಭಾಷಾ ವಿಜ್ಞಾನ |
| ಪೀ.ಲೇ. | ಪೀಠಿಕೆಗಳು ಮತ್ತು ಲೇಖನಗಳು |
| ಪ್ರ.ಕ. | ಪ್ರಬುದ್ಧ ಕರ್ಣಾಟಕ |
| ಪ್ರ.ಸಂ. | ಪ್ರಕ್ರಿಯಾ ಸಂಗ್ರಹ |
| ಪ್ರಾ.ಕ.ವ್ಯಾ. | ಪ್ರಾಚೀನ ಕನ್ನಡ ವ್ಯಾಕರಣಗಳು |
| ಪ್ರಾ.ಪ್ರ. | ಪ್ರಾಕೃತ ಪ್ರಕಾಶ |

| | |
|---|---|
| ಪ್ರಾ.ಪ್ರ. (ಬ) | ಪ್ರಾಕೃತ ಪ್ರಕಾಶ (ಸಂ: ಪಿ. ಬಿ. ಬಡಿಗೇರ) |
| ಭಾ.ಸಾ.ಚ. | ಭಾರತೀಯ ಸಾಹಿತ್ಯ ಚರಿತ್ರೆ |
| ಭೂಷಣ | ಕರ್ಣಾಟಕ ಭಾಷಾ ಭೂಷಣ |
| ಮ.ಭಾ. | ಮಹಾಭಾಷ್ಯ |
| ವಾ.ಪ್ರಾ. | ವಾಜಸನೇಯಿ ಪ್ರಾತಿಶಾಖ್ಯೆ |
| ಶಾಸನ | ಕರ್ಣಾಟಕ ಶಬ್ದಾನುಶಾಸನ |
| ಸ.ಕಂ. | ಸರಸ್ವತೀ ಕಂಠಾಭರಣ |
| ಸಂ.ರ. | ಸಂಶೋಧನ ರತ್ನಮಾಲಿಕೆ |
| ಸಂ.ವ್ಯಾ.ವಿ. | ಸಂಸ್ಕೃತ ವ್ಯಾಕರಣ್‌ಕಾ ಉದ್ಭವ್ ಔರ್ ವಿಕಾಸ್ |
| ಸಾ.ಪ್ರ. | ಸಾರಸ್ವತ ಪ್ರಕ್ರಿಯೆ (ಸಾರಸ್ವತ ವ್ಯಾಕರಣ) |
| ಸಿ.ಕೌ. | ಸಿದ್ಧಾಂತ ಕೌಮುದಿ |
| ಸಿ.ಹೇ.ಶ. | ಸಿದ್ಧಹೇಮ ಶಬ್ದಾನುಶಾಸನ |
| ಸ್ಮೃತಿ | ಶಬ್ದಸ್ಮೃತ್ಯಧಿಕರಣಂ (ಕಾವ್ಯಾವಲೋಕನಂ) |

| | |
|---|---|
| AGPL | A Grammar of the Prakrit Language |
| AOP | Astadhyayi of Panini |
| CGDL | A Comparative Grammar of Dravidian or South Indian Family of Languages |
| CML | A Course in Modern Linguistics |
| DSG | A Dictionary of Sanskrit Grammar |
| EBP | Epistemology of Bhatta School of Poorva Meemamsa |
| GSODL | The Grammatical Structure of Dravidian Languages |
| HGOK | Historical Grammar of Old Kannada |
| HKL | History of Kannada Language |
| KS | Kannada Studies |
| KSD | Kesiraja's Sabdamanidarpana |
| LSOH | Linguistic Speculations of Hindus |
| OASG | On the Aindra School of Sanskrit Grammarians |
| Ph.S.G. | Philosophy of Sanskrit Grammar |
| SED | A Sanskrit English Dictionary |
| SP | Sanskrit Phonetics |
| TTSG | Technical terms and technique of Sanskrit Grammar |

Forwarded free of cost, and with the Compliments of the Department of Education, Govt. of India, New Delhi.

# ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ

# ಅಧ್ಯಾಯ 1

## ಪೀಠಿಕೆ

### ವ್ಯಾಕರಣದ ಅರ್ಥ

ಒಂದು ಭಾಷೆಯ ವರ್ಣವಿಚಾರ, ಪದನಿರ್ಮಾಣ ಮತ್ತು ವಾಕ್ಯರಚನೆಯನ್ನು ನಿರವಿಸುವ ಶಾಸ್ತ್ರಕ್ಕೆ 'ವ್ಯಾಕರಣ' ಎಂದು ಹೆಸರು. ಯಾವುದೇ ಒಂದು ಭಾಷೆ ತನ್ನ ರಚನೆಗೆ (ವರ್ಣ, ಪದ, ವಾಕ್ಯ) ಸಂಬಂಧಿಸಿದಂತೆ ಹಲವು ನಿಯಮಗಳನ್ನು ಹೊಂದಿರುತ್ತದೆ. ಅಂಥ ನಿಯಮಗಳ ಸಮುದಾಯವೆ ಆ ಭಾಷೆಯ ವ್ಯಾಕರಣವಾಗಿದೆ. ಭಾಷೆಯ ಕೋಶದಲ್ಲಿ (Vocabulary) ಯಾವುದೇ ತೆರನಾದ ಬದಲಾವಣೆಗಳಾದರೂ ರಚನೆಯಲ್ಲಿ (ಪದರಚನೆ ಮತ್ತು ವಾಕ್ಯರಚನೆ) ಮಾತ್ರ ಅಂತರ ತಲೆದೋರಲಾರದು.[1] ಅಂಥ ಬದಲಾವಣೆಗೊಳ್ಳದ ರಚನೆಯೇ ಭಾಷೆಯ ಮೂಲಸತ್ವವಾಗಿದೆ. 'ವ್ಯಾಕರಣ' ಎಂಬ ಶಬ್ದಕ್ಕೆ ಅವಯವಾರ್ಥವನ್ನು ಬಿಟ್ಟು ಅಖಂಡಾರ್ಥವನ್ನು ಹೇಳುವುದಾದರೆ ಈ ರಚನೆಯನ್ನೇ ಭಾಷೆಯ ವ್ಯಾಕರಣವೆನ್ನಬಹುದು. ವೈಯಾಕರಣನ ವಿಶ್ಲೇಷಣೆಯಿಂದ ವ್ಯಕ್ತವಾಗುವ ಭಾಷೆಯ ಈ ರಚನೆಸಂಬಂಧವಾದ ನಿಯಮಗಳ ಸಮುದಾಯವೆ ಆ ಭಾಷೆಯ ವ್ಯಾಕರಣ ಶಾಸ್ತ್ರವಾಗಿದೆ.

ಭಾಷೆಯೊಂದು ವ್ಯವಸ್ಥೆ. ಅದು ಬಳಸುವ ವರ್ಣಗಳಲ್ಲಿ, ಪದಗಳ ನಿರ್ಮಾಣದಲ್ಲಿ ವಾಕ್ಯಗಳ ರಚನೆಯಲ್ಲಿ ಆ ವ್ಯವಸ್ಥೆ ಗೋಚರಿಸುತ್ತದೆ. ಅದನ್ನು ಮೀರಿದ ಅಪಪ್ರಯೋಗಗಳು ಭಾಷೆಯಲ್ಲಿ ಸ್ವೀಕೃತವಾಗಲಾರವು, ಬಾಳಲಾರವು. ಆದ್ದರಿಂದ ಈ ವ್ಯವಸ್ಥೆಯನ್ನೇ ವ್ಯಾಕರಣವೆನ್ನಬಹುದು. ಭಾಷೆಯ ವ್ಯವಸ್ಥೆಗೆ ಸಂಬಂಧಿಸಿದ ನಿಯಮಗಳನ್ನು ಒಂದೆಡೆ ಕ್ರೋಢೀಕರಿಸಿ ಬರೆದಿಟ್ಟರೆ ಆಗ ಅದು ಆ ಭಾಷೆಯ ವ್ಯಾಕರಣ ಶಾಸ್ತ್ರವಾಗುತ್ತದೆ. ಅನುಕರಣೆಯಿಂದ ಭಾಷೆಯನ್ನು ಕಲಿಯುವಲ್ಲಿ ಭಾಷೆಯೊಂದರ ವ್ಯವಸ್ಥೆಯನ್ನು ವಿವರಿಸುವ ಗ್ರಂಥದ ಅಗತ್ಯವಿಲ್ಲ. ಗ್ರಾಂಥಿಕ ಭಾಷೆಯಿರಲಿ, ಆಡು ನುಡಿಯಿರಲಿ, ಯಾವುದೇ ಒಂದು ಭಾಷೆ ವ್ಯಾಕರಣವಿಲ್ಲದ್ದಾಗಿ ಅಥವಾ ವ್ಯಾಕರಣವನ್ನು ಮೀರಿದ್ದಾಗಿ (ಅವ್ಯವಸ್ಥಿತವಾಗಿ) ಬದುಕಲಾರದು. ಇದರಿಂದ ಭಾಷೆ ಮತ್ತು ವ್ಯಾಕರಣದ ನಡುವಿನ ಸಂಬಂಧದ ಅರಿವಾಗುತ್ತದೆ.

ಪ್ರಾಚೀನ ವೈಯಾಕರಣರು 'ವ್ಯಾಕರಣ'ವನ್ನು ನಿರ್ವಚಿಸುವ ರೀತಿ ಮೇಲೆ ಹೇಳಿದುದಕ್ಕಿಂತ ಭಿನ್ನವಾಗಿದೆ. ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಕೆಲವು ನಿರ್ವಚನಗಳು ಹೀಗಿವೆ:

1. ವ್ಯಾಕ್ರಿಯಂತೇ ವ್ಯುತ್ಪಾದ್ಯಂತೇ ಅಸಾಧುಭ್ಯಃ
ಶಬ್ದೇಭ್ಯಃ ವಿವಿಚ್ಯಬೋಧ್ಯಂತೇ ಯತ್ರ ತತ್ ವ್ಯಾಕರಣಂ (ಕ. ಶ. ಪ್ರ: ಪು : 3)

2. ವ್ಯಾಕ್ರಿಯಂತೇ ವ್ಯುತ್ಪಾದ್ಯಂತೇ ಪ್ರಕೃತಿ ಪ್ರತ್ಯಯ ವಿಭಾಗೇನ ಶಬ್ದಾಃ
ಇತಿ ವ್ಯಾಕರಣಮ್.

3. ವ್ಯಾಕ್ರಿಯತೇ ಅನೇನೇತಿ ವ್ಯಾಕರಣಮ್ (ಕರಣ ಪ್ರಧಾನ). ವ್ಯಾಕರೋತಿ ಭಾಷಾಮಿತಿ ವ್ಯಾಕರಣಮ್ (ಕರ್ತೃ ಪ್ರಧಾನ). ವ್ಯಾಕೃತಿಃ ವ್ಯಾಕರಣಮ್ (ಭಾವ ಪ್ರಧಾನ). (ಹಿಂದೀ ಶಬ್ದಾನು ಶಾಸನಃ ಪು : 78).

ಈ ನಿರ್ವಚನಗಳಲ್ಲಿ 'ವ್ಯಾಕ್ರಿಯತೇ' ಎಂಬುದನ್ನು ಮೊದಲು ಗಮನಿಸಬೇಕು. 'ವ್ಯಾಕೃ' ಎಂದರೆ ಭೇದಿಸು, ಬೇರ್ಪಡಿಸು ಎಂದರ್ಥ. ಈ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಪದವನ್ನೊಡೆದು ಪ್ರಕೃತಿ — ಪ್ರತ್ಯಯಗಳನ್ನು ಬೇರ್ಪಡಿಸು ಎಂದು ತಾತ್ಪರ್ಯ ವಾಗುತ್ತದೆ.

ಭಾಷೆಯಲ್ಲಿ ವ್ಯಾವಹಾರಿಕ ದೃಷ್ಟಿಯಿಂದ ಸಣ್ಣ ಘಟಕವೆಂದರೆ ವಾಕ್ಯ.[2] ಅದು ಪದಗಳಿಂದ ನಿರ್ಮಾಣಗೊಳ್ಳುತ್ತದೆ. ಅಂಥ ಪದಗಳನ್ನು ವಿಶ್ಲೇಷಿಸಿ 'ಇದು ಪ್ರಕೃತಿ', 'ಇದು ಪ್ರತ್ಯಯ' ಎಂಬುದಾಗಿ ಪ್ರಕೃತಿ ಪ್ರತ್ಯಯಗಳ ಕಲ್ಪನೆಯನ್ನು ಮಾಡಿ ಪದವ್ಯುತ್ಪತ್ತಿಯನ್ನು ಮಾಡುವ ಅರ್ಥಾತ್ ವ್ಯಾಕೃತಗೊಳಿಸುವ ಶಾಸ್ತ್ರಕ್ಕೆ ವ್ಯಾಕರಣ ವೆಂಬ ನಾಮ ಅನ್ವರ್ಥಕವಾಗುತ್ತದೆ.

ಪದವನ್ನು ವಿಚ್ಛೇದಿಸಿ ಪ್ರಕೃತಿ-ಪ್ರತ್ಯಯಗಳನ್ನು ತೋರಿಸಿ ಕೊಡುವ ಕೆಲಸವನ್ನು ವ್ಯಾಕರಣ ಮಾಡುತ್ತದೆಯೆನ್ನುವುದಕ್ಕೆ ಸಾಧಕವಾದ ಸಂದರ್ಭವೊಂದು ತೈತ್ತಿರೀಯ ಸಂಹಿತೆಯಲ್ಲಿದೆ.

"ವಾಗ್ವೈಪರಾಚ್ಯ ವ್ಯಾಕೃತಾವದತ್। ತೇ ದೇವಾ ಇಂದ್ರಮಬ್ರುವನ್ ; ಇಮಾಂ ನೋ ವಾಚಂ ವ್ಯಾಕುರ್ವಿತಿ.......ತಾಮಿಂದ್ರೋ ಮಧ್ಯತೋವಕ್ರಮ್ಯ ವ್ಯಾಕರೋತ್ ತಸ್ಮಾದಿಯಂ ವ್ಯಾಕೃತಾವಾಕ್" (6–4–7). ದೇವಭಾಷೆ ಮೊದಲು ಅವ್ಯಾಕೃತ ವಾಗಿತ್ತೆಂದೂ, ದೇವತೆಗಳ ಕೇಳಿಕೆಯ ಮೇರೆಗೆ ಇಂದ್ರನು ಅದಕ್ಕೆ ವ್ಯಾಕರಣವನ್ನು ರಚಿಸಿದನೆಂದೂ ಇದರಿಂದ ವ್ಯಕ್ತವಾಗುತ್ತದೆ. ಅಲ್ಲಿ ಬರುವ ವ್ಯಾಕುರು, ವ್ಯಾಕರೋತ್ ವ್ಯಾಕೃತಾ ಎಂಬ ಪದಗಳು ಗಮನಾರ್ಹವಾಗಿವೆ. ಮೇಲಿನ ಸಂಹಿತೋಕ್ತಿಗೆ ಸಾಯಣಾ ಚಾರ್ಯರ "ತಾಮಖಂಡಾಂ ವಾಚಂ ಮಧ್ಯೇ ವಿಚ್ಛಿದ್ಯ ಪ್ರಕೃತಿ ಪ್ರತ್ಯಯ ವಿಭಾಗಂ

ಸರ್ವತ್ರಾ ಕರೋತ್'' ಎಂಬ ವಿವರಣೆ ನಿಸ್ಸಂದೇಹವಾಗಿ ಮೇಲಿನ ನಿರ್ವಚನವನ್ನು ಪುಷ್ಟೀಕರಿಸುತ್ತದೆ. ಒಟ್ಟಿನಲ್ಲಿ ಪ್ರಕೃತಿ ಪ್ರತ್ಯಯಗಳ ಕಲ್ಪನೆಯನ್ನುಂಟುಮಾಡಿ ಪದ ವ್ಯುತ್ಪತ್ತಿಯನ್ನು ಸಾಧಿಸುವ ಶಾಸ್ತ್ರವೇ ವ್ಯಾಕರಣವೆಂಬುದಾಗಿ ಪ್ರಾಚೀನರು ನಂಬಿದ್ದರು ಎಂಬುದು ಇದರಿಂದ ಖಚಿತವಾಗುತ್ತದೆ.

ಪ್ರಕೃತಿ–ಪ್ರತ್ಯಯ ವಿಭಾಗವಿಲ್ಲದಿದ್ದ ವ್ಯಾಕರಣ ಸಂಪ್ರದಾಯವೊಂದು ಪ್ರಾಚೀನ ಕಾಲದಲ್ಲಿದ್ದಂತೆ ತಿಳಿದುಬಂದಿದೆ (ಅದರ ವಿವರಣೆ ಮುಂದಿನ ಅಧ್ಯಾಯದಲ್ಲಿದೆ). ಆದರೆ ಆ ಸಂಪ್ರದಾಯದ ಕೃತಿಗಳು ಈಗ ಅಲಭ್ಯವಾಗಿರುವುದರಿಂದ ಮೇಲಿನ ನಿರ್ಣಯಕ್ಕೆ ಯಾವುದೇ ಬಾಧಕಾಂಶ ಸದ್ಯಕ್ಕಿಲ್ಲವೆನ್ನಬಹುದು.

'ವ್ಯಾಕೃತಿ' ಎಂಬುದು ವ್ಯಾಕರಣದ ಪರ್ಯಾಯ ನಾಮ. 'ಆಕೃತಿಗಳನ್ನು (ಶಬ್ದ ರೂಪಗಳನ್ನು) ಬೇರ್ಪಡಿಸು' (ವಿ+ಆಕೃತಿ) ಎಂದೇ ಇದಕ್ಕೆ ಅರ್ಥಮಾಡುವುದು ಸಮಂಜಸ.

'ವ್ಯಾಕರಣ'ಕ್ಕೆ ಸಂವಾದಿಯಾಗಿ ತೋರುವ ಮತ್ತೊಂದು ಪದ 'ಶಬ್ದಾನುಶಾಸನ'. ವೇದಾಂಗಗಳಲ್ಲಿ 'ವ್ಯಾಕರಣ'ಕ್ಕೆ ಮೊದಲ ಸ್ಥಾನ ಸಂದರೂ ಮುಂದೆ ಅದರ ಸ್ಥಾನದಲ್ಲಿ 'ಶಬ್ದಾನುಶಾಸನ' ಎಂಬುದೇ ಹೆಚ್ಚಾಗಿ ಬಳಕೆಗೊಂಡಿದೆ. ಪತಂಜಲಿ 'ಶಬ್ದಾನುಶಾಸನ' ಎಂದೇ ವ್ಯಾಕರಣವನ್ನು ಕರೆದಿದ್ದಾನೆ.[3] ವ್ಯಾಕರಣವನ್ನು ಭಾಷೆಯ ನಿಯಂತ್ರಕ ಅಥವಾ ಶಾಸಕ ಎಂದು ತಿಳಿಯುವುದಕ್ಕೆ ಈ ಪದ ಹೆಚ್ಚು ಅನುಕೂಲ ಮಾಡಿದೆಯಾದರೂ ಹಾಗೆ ತಿಳಿಯುವುದು ಮಾತ್ರ ತಪ್ಪು. ವ್ಯಾಕರಣವೆಂದೂ ತನ್ನ ಆಜ್ಞೆಯಿಂದ ಶಬ್ದಗಳ ಸ್ವರೂಪವನ್ನಾಗಲೀ ಅರ್ಥವನ್ನಾಗಲೀ ಭಾಷೆಯ ಗತಿಯನ್ನಾಗಲೀ ಪರಿವರ್ತಿಸಲಾರದು. ಅದು ಪರಂಪರೆಯಲ್ಲಿ ಒಂದು ಶಬ್ದದ ರೂಪ ಹಾಗೂ ಅದರ ಪ್ರಯೋಗವೇನು ಎಂಬುದನ್ನು ಮಾತ್ರ ಹೇಳಬಲ್ಲುದು. 'ಅನುಶಾಸನ'ದಲ್ಲಿರುವ 'ಅನು' ಎಂಬ ಉಪಸರ್ಗಕ್ಕೆ 'ಪಶ್ಚಾತ್' ಇಲ್ಲವೆ 'ಅನುಸಾರ' ಎಂದರ್ಥ. ಶಬ್ದದ ರೂಪ ಮತ್ತು ಪ್ರಯೋಗವನ್ನು ಭಾಷಾಮರ್ಯಾದೆಗನುಗುಣವಾಗಿ ಅನುಸರಿಸುವುದೆಂಬ ಅರ್ಥವನ್ನೇ 'ಶಬ್ದಾನುಶಾಸನ' ಎಂಬ ಪದ ಹೇಳುತ್ತದೆ. ವ್ಯಾಕರಣವು ಪ್ರಯೋಗಗಳನ್ನು ಆಧರಿಸಿಕೊಂಡಿರಬೇಕಾದುದರಿಂದಲೇ ''ಪ್ರಯೋಗ ಶರಣಾಃ ವೈಯಾಕರಣಾಃ'' ಎಂಬ ಉಕ್ತಿ ಪ್ರಸಿದ್ಧವಾಗಿದೆ. ಭಾಷಾ ಸ್ವಭಾವವನ್ನು ಮೀರಿದ ಅಪಪ್ರಯೋಗಗಳನ್ನು ಮಾತ್ರ ವ್ಯಾಕರಣ ನಿಷೇಧಿಸುತ್ತದೆ. ಅಲ್ಲಿ ಅದು ಶಾಸಕನ ಕೆಲಸವನ್ನೆ ಕೈಗೊಳ್ಳುತ್ತದೆ. ಮೊದಲ ನಿರ್ವಚನದಲ್ಲಿ ಬರುವ ''ಅಸಾಧುಭ್ಯಃ ಶಬ್ದೇಭ್ಯಃ ವಿವಿಚ್ಯ ಬೋಧ್ಯಂತೇ'' ಎಂಬ ಮಾತು ಇಂಥ ಸಂದರ್ಭವನ್ನೇ ಸೂಚಿಸುತ್ತದೆ. ವ್ಯಾಕರಣದ ವ್ಯಾಪ್ತಿಯಲ್ಲಿ ಬರುವ ಶಬ್ದಗಳ ಸಾಧುತ್ವ ಹಾಗೂ ಪ್ರಯೋಗಾರ್ಹತೆಯ ವಿಚಾರ ಇಲ್ಲಿ ಮಾತ್ರ ಹೊಂದಾಣಿಕೆಯಾಗುತ್ತದೆ. ಆದ್ದರಿಂದ ಪ್ರಕೃತಿ–ಪ್ರತ್ಯಯಗಳ ಕಲ್ಪನೆ, ಪದವ್ಯುತ್ಪತ್ತಿ, ಪದಸಾಧುತ್ವ ವಿಚಾರ–ಈ ಮೂರನ್ನು ವ್ಯಾಕರಣ ಕಾರ್ಯಗಳೆಂದು ಹೇಳಬಹುದು.

ಅವಯವಾರ್ಥಗಳ ದೃಷ್ಟಿಯಿಂದ ವ್ಯಾಕರಣ ಮತ್ತು ಶಬ್ದಾನುಶಾಸನ ಈ ಪದಗಳಲ್ಲಿ ಸಾಕಷ್ಟು ಅಂತರವಿದೆ. ಹಾಗಾಗಿ ಒಂದಾದ ಈ ಶಾಸ್ತ್ರವು ಪ್ರಕೃತಿ–ಪ್ರತ್ಯಯಗಳ ವಿವೇಚನೆಯಲ್ಲಿ, ಪದವ್ಯುತ್ಪತ್ತಿಯನ್ನು ಹೇಳುವಲ್ಲಿ ವ್ಯಾಕರಣವೆನಿಸಿದರೆ ಸಾಧ್ವಸಾಧು ಪ್ರಯೋಗಗಳ ವಿವೇಚನೆಯಲ್ಲಿ ಶಬ್ದಾನುಶಾಸನವೆನಿಸುತ್ತದೆಯೆಂದು ತೀರ್ಮಾನಿಸಬಹುದು.

ವ್ಯಾಕರಣಕ್ಕೆ 'ಶಬ್ದಶಾಸ್ತ್ರ' ಎಂಬ ಹೆಸರೂ ಇದೆ. "ಶಬ್ದಗಳನ್ನು ವೈಜ್ಞಾನಿಕವಾಗಿ ಅಭ್ಯಸಿಸುವ ಶಾಸ್ತ್ರವೇ ಶಬ್ದಶಾಸ್ತ್ರ" (ಆಲೋಕಃ ಪು : 7). ಕೇಶಿರಾಜನು ತನ್ನ ಕೃತಿ "ಕರ್ಣಾಟಕ ಲಕ್ಷಣ ಶಬ್ದಶಾಸ್ತ್ರ" (ದರ್ಪಣ. ಸೂ. 3) ಎಂದು ಹೇಳಿಕೊಂಡಿದ್ದಾನೆ.[4] ಶಬ್ದರೂಪ ಸಿದ್ಧಿಯ ಕುರಿತು ವಿಚಾರಿಸುವ ಪ್ರಕ್ರಿಯಾತ್ಮಕ ವ್ಯವಸ್ಥೆಯು ವ್ಯಾಕರಣವನ್ನು ಹಾಗೆ ಕರೆದುದು ಔಚಿತ್ಯಪೂರ್ಣವಾಗಿದೆ.

## ವ್ಯಾಕರಣಾಭ್ಯಾಸದ ಪ್ರಯೋಜನ

ಸಂಸ್ಕೃತ ವ್ಯಾಕರಣವನ್ನು ಏಕೆ ಅಭ್ಯಸಿಸಬೇಕು ? ಅದರಿಂದ ದೊರಕುವ ಪ್ರಯೋಜನವೇನು ? ಎಂಬುದರ ಕುರಿತು ಪ್ರಾಚೀನರು ಸಾಕಷ್ಟು ವಿಚಾರಿಸಿದ್ದಾರೆ. ಮಹಾಭಾಷ್ಯದಲ್ಲಿ "ರಕ್ಷೋಹಾಗಮಲಘ್ವಸಂದೇಹಾಃ ಪ್ರಯೋಜನಮ್" (ಪ್ರಥಮಾಹ್ನಿಕ) ಎಂಬ ಮಾತಿದೆ.[5] ಪ್ರಾಚೀನ ಸಂಸ್ಕೃತ ವೈಯಾಕರಣರಿಗೆ ವೇದರಕ್ಷಣೆಯೇ ವ್ಯಾಕರಣದ ಪರಮ ಗುರಿಯೆನಿಸಿತ್ತು. ಅದಕ್ಕಾಗಿಯೇ ಪತಂಜಲಿ ರಕ್ಷೆಯನ್ನು ಮೊದಲ ಪ್ರಯೋಜನವಾಗಿ ಪರಿಗಣಿಸಿ "ರಕ್ಷಾರ್ಥಂ ವೇದಾನಾಮಧ್ಯೇಯಂ ವ್ಯಾಕರಣಮ್" ಎಂದಿದ್ದಾನೆ. ವೇದರಕ್ಷಣೆ ಎಂಬ ಒಂದಂಶವನ್ನು ಬಿಟ್ಟುಳಿದ ಮೇಲಿನ ಪ್ರಯೋಜನಗಳು ಸಂಸ್ಕೃತ ವ್ಯಾಕರಣಗಳಿಗೆ ಅನ್ವಯಿಸುವಂತೆ ಇತರ ಭಾಷಾ ವ್ಯಾಕರಣಗಳಿಗೂ ಅನ್ವಯಿಸಿಕೊಳ್ಳುತ್ತವೆ. ವ್ಯಾಕರಣ ಜ್ಞಾನವಿಲ್ಲದೆ ಶಬ್ದಾರ್ಥಗಳ ನಿರ್ಣಯವಾಗದೆಂದೂ, ಶಬ್ದಾರ್ಥ ನಿರ್ಣಯವಾಗದೆ ಭಾಷೆಯನ್ನು ಬಳಸುವುದು ನಿಷ್ಪ್ರಯೋಜಕವೆಂದೂ ಕೆಲವೊಮ್ಮೆ ಅನರ್ಥಕಾರಿಯೆಂದೂ ಪ್ರಾಚೀನರು ನಂಬಿದ್ದರು.[6] ಒಟ್ಟಿನಲ್ಲಿ, ಒಂದು ಭಾಷೆಯಲ್ಲಿ ರಚಿತವಾದುದನ್ನು ಸರಿಯಾಗಿ ತಿಳಿಯಲು, ಆ ಭಾಷೆಯಲ್ಲಿ ಸಮರ್ಥವಾಗಿ ವ್ಯವಹರಿಸಲು ಅದರ ವ್ಯಾಕರಣವನ್ನು ತಿಳಿದಿರಬೇಕಾದುದು ಅತ್ಯವಶ್ಯವೆನ್ನಬಹುದು.

ನಿತ್ಯಪರಿವರ್ತನಶೀಲವಾದ ಭಾಷೆಯಲ್ಲಿ ಕಾಲಾನುಕ್ರಮದಲ್ಲಿ ಬೇರೆ ಬೇರೆ ಅವಸ್ಥೆಗಳು (stages) ತಲೆದೋರುತ್ತವೆ. ಒಂದು ಅವಸ್ಥೆಯಲ್ಲಿನ ರೂಪಕ್ಕಿಂತ ಭಿನ್ನವಾದ ರೂಪವನ್ನು ಭಾಷೆ ಇನ್ನೊಂದು ಅವಸ್ಥೆಯಲ್ಲಿ ಹೊಂದುತ್ತದೆ. ಇದರಿಂದ ಮುಂದಿನ ಪೀಳಿಗೆ ಹಿಂದಿನ ಅವಸ್ಥೆಯಲ್ಲಿ ಹುಟ್ಟಿಕೊಂಡ ಕೃತಿಗಳನ್ನು ಅರ್ಥೈಸಲು ಆ ಅವಸ್ಥೆಯ ವ್ಯಾಕರಣವನ್ನು ತಿಳಿದಿರಬೇಕಾಗುತ್ತದೆ. ಹಳಗನ್ನಡ ವ್ಯಾಕರಣಗಳನ್ನು ಈ ದೃಷ್ಟಿಯಿಂದ ಅಭ್ಯಸಿಸಬೇಕಾಗಿದೆ. ಹಳಗನ್ನಡದ ವಿಪುಲವೂ ಶ್ರೀಮಂತವೂ ಆದ ಸಾಹಿತ್ಯವನ್ನು, ಅಲ್ಲಿ ವ್ಯಕ್ತವಾಗುವ ಕನ್ನಡ ಜನತೆಯ ಸಂಸ್ಕೃತಿಯನ್ನು ಅರಿಯಬೇಕಾದರೆ ಹಳಗನ್ನಡ

ವ್ಯಾಕರಣಗಳ ಪರಿಚಯ ಅನಿವಾರ್ಯವಾಗಿದೆ. ಅದೇ ಹಳಗನ್ನಡ ವ್ಯಾಕರಣಾಭ್ಯಾಸದ ಪ್ರಯೋಜನವೂ ಹೌದು.

ಪ್ರತಿಯೊಂದರಲ್ಲೂ ಮೋಕ್ಷ ಲಾಭವನ್ನು ಕಾಣುವುದು ಭಾರತೀಯ ಮನೋಧರ್ಮವಷ್ಟೆ. ಇದು ವ್ಯಾಕರಣಕ್ಕೂ ಅನ್ವಯವಾಗಿದೆ. ಪತಂಜಲಿ ವ್ಯಾಕರಣದ ಪ್ರಯೋಜನಗಳಲ್ಲಿ ಶಾಸ್ತ್ರಜ್ಞಾನ (ಆಗಮ) ಒಂದೆಂದು ಹೇಳಿದ್ದಾನೆ. ಭರ್ತೃಹರಿ ವ್ಯಾಕರಣವನ್ನು 'ಅಪವರ್ಗದ ದ್ವಾರ' (ವಾಕ್ಯಪದೀಯ 1-14) ಹಾಗೂ 'ಬ್ರಹ್ಮಾಧಿಗಮನಕ್ಕೆ ಸಾಧಕ' (ಅದೇ 1-22) ವೆಂದು ತಿಳಿದಿದ್ದಾನೆ. ಕೇಶಿರಾಜ ಇಂಥ ಪರಂಪರೆಯಲ್ಲೇ ಮುಂದುವರಿದು 'ತತ್ವಾಲೋಕ', ಆ ಮೂಲಕ 'ಆಕಾಂಕ್ಷಿಪ ಮುಕ್ತಿ' ವ್ಯಾಕರಣದಿಂದ ಬುಧರಿಗೆ ದೊರಕುವ ಫಲವೆಂದು ಸಾರಿದ್ದಾನೆ (ದರ್ಪಣ. ಸೂ. 11).

## ಅಧ್ಯಯನದ ಉದ್ದೇಶ

ಸಂಸ್ಕೃತದ ವಿಭಿನ್ನ ವ್ಯಾಕರಣ ಸಂಪ್ರದಾಯಗಳಲ್ಲಿ ಬಲ್ಲಿದರಾಗಿದ್ದ ಹಳಗನ್ನಡ ವೈಯಾಕರಣರು ಸಂಸ್ಕೃತ ವ್ಯಾಕರಣಗಳ ವಿಧಾನಗಳನ್ನನುಸರಿಸಿಯೆ ಕನ್ನಡ ಭಾಷೆಯನ್ನು ವಿಶ್ಲೇಷಣೆ ಮಾಡಿದ್ದಾರೆ. "ಈ ಕಾರಣದಿಂದ ನಮ್ಮ ಕನ್ನಡ ವ್ಯಾಕರಣಗಳ ವಿಷಯ ವರ್ಗೀಕರಣ, ನಿರೂಪಣ ಪದ್ಧತಿ, ಸೂತ್ರಗಳ ರಚನೆ, ಶಾಸ್ತ್ರೀಯ ಪದಗಳ ಬಳಕೆ, ಈ ಮುಂತಾದ ವ್ಯಾಕರಣ, ವಿಧಾನಗಳೆಲ್ಲವೂ ಸಂಸ್ಕೃತ ವ್ಯಾಕರಣ ಶಾಸ್ತ್ರ ಪ್ರಪಂಚದಿಂದ ಆಮದು ಮಾಡಿಕೊಂಡವಾಗಿವೆ" (ಶಾಸ್ತ್ರ ಸಾಹಿತ್ಯ : ಪು : 151). ಇಂದು (ಸಂಸ್ಕೃತ ವ್ಯಾಕರಣಗಳನ್ನಭ್ಯಸಿಸದ) 'ಕನ್ನಡ ವ್ಯಾಕರಣ' ವಿದ್ಯಾರ್ಥಿ ಈ ಕಾರಣಕ್ಕಾಗಿಯೆ, ಹಳಗನ್ನಡ ವ್ಯಾಕರಣ ಶಾಸ್ತ್ರವನ್ನು ಅರ್ಥಮಾಡಿಕೊಳ್ಳುವಲ್ಲಿ ಸೋಲನ್ನನುಭವಿಸುತ್ತಾನೆ. ಇದರಿಂದ ಕನ್ನಡ ವ್ಯಾಕರಣಗಳ ಮೇಲಾಗಿರುವ ಸಂಸ್ಕೃತ ವ್ಯಾಕರಣಗಳ ಪ್ರಭಾವದ ಪರಿಚಯ ಎಷ್ಟು ಅನಿವಾರ್ಯವೆಂಬುದನ್ನು ತಿಳಿಯಬಹುದು.

ದೇಶಭಾಷೆಗಳ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ ಅಪೇಕ್ಷಿತವೂ ಅನಿವಾರ್ಯವೂ ಆಗಿದ್ದ ಕಾಲದಲ್ಲಿ ಹಳಗನ್ನಡ ವೈಯಾಕರಣರು ಅಲ್ಲಲ್ಲಿ ತಮ್ಮ ಸ್ವೋಪಜ್ಞಶೀಲತೆಯನ್ನು ಮೆರೆದಿದ್ದಾರೆ. ಕನ್ನಡ ನುಡಿಯ ಸಹಜ ಸ್ಪಂದನವನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅವು ಯಾವುವು ಎಂದು ಬೊಟ್ಟಿಟ್ಟು ತೋರಿಸಿ ಕೊಡಬೇಕಾದರೆ ಮೊದಲಿಗೆ ಸಂಸ್ಕೃತ ವ್ಯಾಕರಣಗಳಿಂದ ಎತ್ತಿಕೊಂಡ ವಿಚಾರಗಳನ್ನು ಬೇರ್ಪಡಿಸಬೇಕು. ಇದಕ್ಕೂ ಸಂಸ್ಕೃತ ವ್ಯಾಕರಣಗಳ ಪ್ರಭಾವದ ಪರಿಚಯ ಅನಿವಾರ್ಯ.

ಹಳಗನ್ನಡ ವೈಯಾಕರಣರ ಕೆಲವು ಹೇಳಿಕೆಗಳನ್ನು ವಿದ್ವಾಂಸರು ಸಂಸ್ಕೃತ ವ್ಯಾಕರಣಗಳ ಅಂಧಾನುಕರಣೆಯಿಂದ ಹುಟ್ಟಿಕೊಂಡವುಗಳೆಂದು ತೀರ್ಮಾನಿಸುತ್ತಾರೆ (ಸ್ತ್ರೀಪುಂನಪುಂಸಕ ಲಿಂಗ ವ್ಯವಸ್ಥೆ, ಪಂಚಮಿ ಪ್ರತ್ಯಯದ ಕಲ್ಪನೆ ಇತ್ಯಾದಿ). ಇದರ

ಯಥಾರ್ಥತೆಯನ್ನರಿಯಲು ಸಂಸ್ಕೃತ ವ್ಯಾಕರಣಗಳಲ್ಲಿ ಬಂದಿರುವ ಆ ಸಂಬಂಧವಾದ ಹೇಳಿಕೆಗಳನ್ನು ನೋಡದೆ ವಿಧಿಯಿಲ್ಲ.[7]

ಮೇಲೆ ಹೇಳಿದ ನಿಟ್ಟಿನಲ್ಲಿ ಈವರೆಗೆ ನೇರವಾದ ತೌಲನಿಕ ಅಧ್ಯಯನ ನಡೆದಿಲ್ಲ. ಕೆಳಗಿನ ಗ್ರಂಥಗಳಲ್ಲಿ ಸಂಸ್ಕೃತ ಪ್ರಭಾವವನ್ನು ಭಾಗಶಃ ಸೂಚಿಸುವ ಕಾರ್ಯ ಮಾತ್ರ ನಡೆದಿದೆ.

1. ಶಬ್ದಮಣಿದರ್ಪಣಂ (ಮ) ಅವತರಣಿಕೆ. ಎಚ್. ಚೆನ್ನಕೇಶವಯ್ಯಂಗಾರ್ (1939)
2. ಆಲೋಕ : ಎಚ್. ಎಸ್. ಬಿಳಿಗಿರಿ (1969)
3. ಕನ್ನಡ ಸಮಾಸಗಳು : ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ (1970)
4. ಪ್ರಾಚೀನ ಕನ್ನಡ ವ್ಯಾಕರಣಗಳು : ಎಂ. ವಿ. ಸೀತಾರಾಮಯ್ಯ (1979)

ಮೊದಲನೆಯದರಲ್ಲಿ ಪ್ರಧಾನವಾಗಿ ಕನ್ನಡದ ಅಸಾಧಾರಣ ಲಕ್ಷಣಗಳನ್ನು ವಿವರಿಸುವಲ್ಲಿ ಸಂಸ್ಕೃತದ ಹಿನ್ನೆಲೆಯನ್ನು ಸಮೀಕ್ಷಿಸಲಾಗಿದೆ. ಅದೇ ಗ್ರಂಥದ 'ಪರಿಶಿಷ್ಟ : 6' ರಲ್ಲಿ ದರ್ಪಣದ ಸೂತ್ರಗಳಿಗೆ ಸಂವಾದಿಯಾದ, ಸಂಸ್ಕೃತ ವ್ಯಾಕರಣಗಳ ಮತ್ತು ಅಲಂಕಾರ ಗ್ರಂಥಗಳ ಹೇಳಿಕೆಗಳನ್ನು ಕೊಡಲಾಗಿದೆ.

ಎಚ್. ಎಸ್. ಬಿಳಿಗಿರಿಯವರು ತಮ್ಮ ಕೃತಿಯಲ್ಲಿ ದರ್ಪಣಕಾರನ ನಿರೂಪಣೆಗೆ ಹಿನ್ನೆಲೆಯಾಗಿರುವ ಪ್ರಾತಿಶಾಖ್ಯಗಳು, ಕಾತಂತ್ರ ಮೊದಲಾದ ಸಂಸ್ಕೃತ ವ್ಯಾಕರಣಗಳ ಸೂತ್ರ, ವೃತ್ತಿ ವಾಕ್ಯಗಳನ್ನು ಗಮನಿಸಿದ್ದಾರೆ. 81ನೇ ಸೂತ್ರದ ವಿವರಣೆಯೊಂದಿಗೆ 'ಆಲೋಕ' ಕೊನೆಗೊಂಡಿರುವುದು ಕನ್ನಡ ವ್ಯಾಕರಣ ವಿದ್ಯಾರ್ಥಿಗಳಿಗೆ ಬಹುದೊಡ್ಡ ನಷ್ಟವಾಗಿದೆ,

ಸಂಸ್ಕೃತ ಸಮಾಸಗಳ ಲಕ್ಷಣ ವಿವರಣೆಯ ಹಿನ್ನೆಲೆಯೊಂದಿಗೆ ಕನ್ನಡ ಸಮಾಸಗಳ ವಿವರಣೆ ಹೆಚ್ಚು ಸಮರ್ಪಕವಾಗಿ ಮೂರನೆಯ ಗ್ರಂಥದಲ್ಲಿ ಮೂಡಿಬಂದಿದೆ.

ಈ ದಿಸೆಯಲ್ಲಿ 'ಪ್ರಾಚೀನ ಕನ್ನಡ ವ್ಯಾಕರಣಗಳು' ಒಂದು ಗಮನಾರ್ಹ ಕೃತಿಯಾಗಿದೆ. ಇದರಲ್ಲಿ ಸಂಸ್ಕೃತ ವ್ಯಾಕರಣ ಸಂಪ್ರದಾಯಗಳ ಸ್ಥೂಲ ಪರಿಚಯದೊಂದಿಗೆ ಹಳಗನ್ನಡದ ನಾಲ್ಕು ವ್ಯಾಕರಣ ಗ್ರಂಥಗಳ ಮೇಲಿನ ಸಂಸ್ಕೃತ ವ್ಯಾಕರಣಗಳ ಪ್ರಭಾವದ ಕಾರಣ ಮತ್ತು ಸ್ವರೂಪದ ಮೇಲೆ ವಿಹಂಗಮ ದೃಷ್ಟಿ ಬೀರಲಾಗಿದೆ. ಡಿ. ಪದ್ಮನಾಭ ಶರ್ಮ, ಭುವನಹಳ್ಳಿಯವರ "ನಲ್ನುಡಿಗನ್ನಡಿ ವ್ಯಾಖ್ಯಾನ"ಗಳಲ್ಲೂ (ಶಾಸನ : 1968 ದರ್ಪಣ : 1976) ಸಂಸ್ಕೃತದ ಹಿನ್ನೆಲೆಯತ್ತ ನೋಡಲಾಗಿದೆ.

ಮೇಲಿನ ಕೃತಿಗಳಲ್ಲದೆ ಬಿಡಿಬಿಡಿಯಾಗಿ ಬಂದ ಕೆಲವು ಕನ್ನಡ ವ್ಯಾಕರಣ ವಿಚಾರಗಳ-ವರ್ಣಮಾಲೆ, ಸಂಧ್ಯಕ್ಷರ, ಲಿಂಗ, ವಚನ, ವಿಭಕ್ತಿ, ಕಾರಕ, ಸಂಬೋಧನೆ, ಕೃಲ್ಲಿಂಗ ಸಮಾಸ, ಸತಿಸಪ್ತಮೀ ಮೊದಲಾದವುಗಳ-ಕುರಿತಾಗಿರುವ ಲೇಖನಗಳಲ್ಲಿ ಸಂಸ್ಕೃತ ವ್ಯಾಕರಣಗಳ ಹಿನ್ನೆಲೆಯತ್ತ ದೃಷ್ಟಿಬೀರಿದ್ದು ಗೋಚರಿಸುತ್ತದೆ. ಇಷ್ಟಲ್ಲದೆ ನೇರವಾಗಿ

ಕನ್ನಡ ವ್ಯಾಕರಣ ವಿಷಯಗಳ ನಿರೂಪಣೆಯಲ್ಲಿ ಸಂಸ್ಕೃತ ವ್ಯಾಕರಣ ಶಾಸ್ತ್ರದ ವಿಭಿನ್ನ ಪರಂಪರೆಗಳಿಗೆ ಕನ್ನಡ ವೈಯಾಕರಣರು ಹೇಗೆ ಋಣಿಗಳಾಗಿರುವರೆಂಬುದನ್ನು ತೌಲನಿಕವಾಗಿ ವಿಚಾರಿಸುವ ಪ್ರಯತ್ನ ಈವರೆಗೆ ನಡೆದಿಲ್ಲ. ಆದುದರಿಂದ ಅಂಥ ಒಂದು ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಕನ್ನಡ ವ್ಯಾಕರಣ ಪರಂಪರೆ ಎಂಬುದರ ಹರಹು **ಕವಿರಾಜಮಾರ್ಗ** ಮೊದಲುಗೊಂಡು ಇತ್ತೀಚೆಗಿನ ಶಾಲಾ ವ್ಯಾಕರಣಗಳವರೆಗಿದ್ದರೂ ಈ ಪ್ರಬಂಧದಲ್ಲಿ ಅದನ್ನು ಹಳಗನ್ನಡ ವ್ಯಾಕರಣಗಳಿಗಷ್ಟೇ ಸೀಮಿತಗೊಳಿಸಲಾಗಿದೆ. ಹಳಗನ್ನಡ ವ್ಯಾಕರಣಗಳಲ್ಲಿ ಸ್ಮೃತಿ, ಭೂಷಣ, ದರ್ಪಣಗಳದು ಒಂದು ಸಂಪ್ರದಾಯ. ಭೂಷಣದ ಭಾಷೆ ಸಂಸ್ಕೃತವಾದರೂ ವ್ಯಾಕರಣ ಮಾರ್ಗದಲ್ಲಿ ಸ್ಮೃತಿ, ದರ್ಪಣಗಳಿಗಿಂತ ಅದು ಭಿನ್ನವಲ್ಲ. ಆದುದರಿಂದ ಈ ಮೂರು ಗ್ರಂಥಗಳನ್ನು ಮಾತ್ರ ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ. ಇಲ್ಲಿನ ವಿಚಾರಗಳಿಗೆ ಹಿನ್ನೆಲೆ ಹಾಗೂ ಪೂರಕವಾಗಿರುವ ವಿಚಾರಗಳಿಗಾಗಿ **ಕವಿರಾಜಮಾರ್ಗ**ವನ್ನು ಪರಿಶೀಲಿಸಲಾಗಿದೆ. ಈ ಮೂರು ಕೃತಿಗಳ ಪ್ರಕರಣಗಳ ಜೋಡಣೆಯಲ್ಲಿ, ಪಾರಿಭಾಷಿಕ ಪದಗಳ ಬಳಕೆಯಲ್ಲಿ ಪ್ರಕ್ರಿಯೆಗಳ ನಿರೂಪಣೆಯಲ್ಲಿ ಸಂಸ್ಕೃತದ ವಿಭಿನ್ನ ವ್ಯಾಕರಣಗಳ ಪ್ರಭಾವವೇನು ಎಂಬುದನ್ನೇ ಪ್ರಧಾನವಾಗಿ ವಿಚಾರಿಸಲಾಗಿದೆ. ಸಂಸ್ಕೃತ ವ್ಯಾಕರಣಗಳ ಪರಿಚಯ ಅವುಗಳ ಪ್ರಭಾವವನ್ನು ಗುರುತಿಸುವುದಕ್ಕೆ ಅಗತ್ಯವಿರುವುದರಿಂದ ಪ್ರಬಂಧದಲ್ಲಿ ಮೊದಲಿಗೆ ಸಂಸ್ಕೃತ ವ್ಯಾಕರಣ ಪರಂಪರೆಯ ಕಿರು ಪರಿಚಯ ಕೊಡಲಾಗಿದೆ (ಅಧ್ಯಾಯ–2). ದರ್ಪಣದ ಕಾಲದ (ಕ್ರಿ.ಶ. 1260)ವರೆಗಿನ ಇತಿಹಾಸ ಪರ್ಯಾಪ್ತವಾದ್ದರಿಂದ ಆಮೇಲಿನ ಸಂಸ್ಕೃತ ವ್ಯಾಕರಣಗಳನ್ನು ಗಮನಿಸಿಲ್ಲ. ಕನ್ನಡ ವ್ಯಾಕರಣ ಪರಂಪರೆಯನ್ನು ಸಮೀಕ್ಷಿಸಿದ (ಅಧ್ಯಾಯ : 3) ಬಳಿಕ ಸಂಸ್ಕೃತ ವ್ಯಾಕರಣಗಳ ಪ್ರಭಾವಕ್ಕಿರುವ ಕಾರಣ ಮತ್ತು ಪ್ರಭಾವದ ಸ್ವರೂಪದ ಕುರಿತು ಚರ್ಚಿಸಿದೆ (ಅಧ್ಯಾಯ : 4) ಕನ್ನಡ ವ್ಯಾಕರಣ ಕೃತಿಗಳ ವಿಷಯ ವರ್ಗೀಕರಣದಲ್ಲೇ ಸಂಸ್ಕೃತ ವ್ಯಾಕರಣಗಳ ಪ್ರಭಾವ ಗೋಚರವಾಗುವುದರಿಂದ ಅದನ್ನು ಪ್ರಸ್ತಾಪಿಸಿದ (ಅಧ್ಯಾಯ : 5) ಬಳಿಕ ಮುಂದಿನ ಅಧ್ಯಾಯಗಳಲ್ಲಿ ಕ್ರಮವಾಗಿ ವರ್ಣಮಾಲೆ, ಸಂಧಿ, ನಾಮ, ಸಮಾಸ, ಕ್ರಿಯೆಗಳ ನಿರೂಪಣೆಯ ಮೇಲಾಗಿರುವ ಸಂಸ್ಕೃತದ ಪ್ರಭಾವದತ್ತ ದೃಷ್ಟಿಬೀರಲಾಗಿದೆ (ಅಧ್ಯಾಯ : 6, 7, 8, 9, 10). ಸ್ಮೃತಿ, ಭೂಷಣ, ದರ್ಪಣಗಳಲ್ಲಿ ಕೃತ್ ಪ್ರತ್ಯಯಗಳ ನಿರೂಪಣೆಗೆ ಪ್ರತ್ಯೇಕವಾದ ಅಧ್ಯಾಯವಿಲ್ಲದುದರಿಂದ ಈ ಪ್ರಬಂಧದಲ್ಲಿ ತದ್ಧಿತ ಮತ್ತು ಕೃತ್ತನ್ನು "ನಿಷ್ಪನ್ನ ಶಬ್ದಗಳು" ಎಂದು ಪ್ರತ್ಯೇಕವಾದ ಅಧ್ಯಾಯದಲ್ಲಿ ನಿರವಿಸಲಾಗಿದೆ,[8] (ಅಧ್ಯಾಯ : 11). ನಿಪಾತ ಮತ್ತು ಅವ್ಯಯಗಳನ್ನು ಒಂದೇ ಅಧ್ಯಾಯದಲ್ಲಿ (ಅಧ್ಯಾಯ : 12) ಹೇಳಿದ ಬಳಿಕ 'ವಾಕ್ಯ ರಚನೆ'ಗೆ ಸಂಬಂಧಿಸಿದಂತೆ 'ಅಲ್ಲಿ, ಇಲ್ಲಿ' ಬಂದಿರುವ ವಿಚಾರಗಳನ್ನು ಕ್ರೋಢೀಕರಿಸಿ ಕೊಡಲಾಗಿದೆ

(ಅಧ್ಯಾಯ : 13). ಉಪಸಂಹಾರದಲ್ಲಿ (ಅಧ್ಯಾಯ : 14) ಅಧ್ಯಯನದ ಪರಿಣಾಮವನ್ನು ಸಂಗ್ರಹಿಸಲಾಗಿದೆ. ಹೆಚ್ಚಾಗಿ ಸಂಸ್ಕೃತದ ವ್ಯಾಕರಣಗಳ ಪ್ರಭಾವ ಗೋಚರಿಸುವುದು ವ್ಯಾಕರಣ ವಿಷಯಗಳ ನಿರೂಪಣೆಯ ಮೇಲಾಗಿರುವುದರಿಂದ ಅಗತ್ಯವಿದ್ದೆಡೆಗಳಲ್ಲಿ ಮಾತ್ರ ಪ್ರಯೋಗಗಳನ್ನು ಗಮನಿಸಲಾಗಿದೆ. ಇಲ್ಲೆಲ್ಲ ಪೂರ್ಣವಾಗಿ ಸಾಂಪ್ರದಾಯಿಕವಾದ ವ್ಯಾಕರಣ ದೃಷ್ಟಿಯನ್ನೇ ಇಟ್ಟುಕೊಳ್ಳಲಾಗಿದೆ.

ಹಳಗನ್ನಡ ವ್ಯಾಕರಣಗಳು, ಸಂಸ್ಕೃತದ ನ್ಯಾಯ, ವೈಶೇಷಿಕ, ಮೀಮಾಂಸಾ, ಕಾವ್ಯಮೀಮಾಂಸಾ ಗ್ರಂಥಗಳ ಅಲ್ಪ ಪ್ರಭಾವಕ್ಕೆ ಸಿಲುಕಿಕೊಂಡಿವೆಯಾದರೂ ಆ ಕಡೆಗೆ ಈ ಅಧ್ಯಯನದಲ್ಲಿ ಹೆಚ್ಚಿನ ದೃಷ್ಟಿ ಬೀರಿಲ್ಲ. ಹಾಗೆಯೆ, ಕನ್ನಡ ಭಾಷೆಯ ಮೇಲೆ ಸಂಸ್ಕೃತ ಭಾಷೆಯ ಪ್ರಭಾವ ಬೇರೆ, ಕನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ ಬೇರೆ. ಈ ಅಧ್ಯಯನದಲ್ಲಿ ಕನ್ನಡ ವ್ಯಾಕರಣಗಳ ಮೇಲಿನ ಸಂಸ್ಕೃತ ವ್ಯಾಕರಣಗಳ ಪ್ರಭಾವವನ್ನು ಮಾತ್ರ ಪರಿಶೀಲಿಸಲಾಗಿದೆ.

ಪಾಲಿ ಮತ್ತು ಪ್ರಾಕೃತ ವ್ಯಾಕರಣಗಳೂ ಕನ್ನಡ ವ್ಯಾಕರಣಗಳ ಮೇಲೆ ಪ್ರಭಾವ ಬೀರಿವೆ. "ಕೇಶಿರಾಜನ ಅಪಭ್ರಂಶ ಪ್ರಕರಣವನ್ನು ಓದಿದರೆ ಇದೇನೋ ಪ್ರಾಕೃತ ವ್ಯಾಕರಣದ ಪ್ರತಿಬಿಂಬವೆಂದೇ ಹೇಳಬಹುದು" (ಪಾಲಿ ಮತ್ತು ಪ್ರಾಕೃತ: ಪು : 3) ಎಂಬ ಹೇಳಿಕೆ ಈ ದೃಷ್ಟಿಯಿಂದ ಗಮನಾರ್ಹ. ಈ ಪ್ರಬಂಧದಲ್ಲಿ ಪ್ರಾಕೃತ ವ್ಯಾಕರಣಗಳಿಂದ ಕನ್ನಡ ವ್ಯಾಕರಣಗಳು ಎಷ್ಟರಮಟ್ಟಿಗೆ ಪ್ರಭಾವಿತವಾಗಿವೆಯೆಂಬುದನ್ನು ಪರಿಶೀಲಿಸಿಲ್ಲ. ಆದುದರಿಂದಲೇ 'ಅಪಭ್ರಂಶ'ಗಳ ವಿಚಾರವನ್ನಿಲ್ಲಿ ಕೈಬಿಡಲಾಗಿದೆ. ಸಂಸ್ಕೃತದ ಪ್ರಭಾವವನ್ನು ಗುರುತಿಸುವಲ್ಲಿ ಪೂರಕವಾಗಿರುವ ವಿಷಯಗಳ ಕುರಿತು ಮಾತ್ರ ಪಾಲಿ ಮತ್ತು ಪಾಕೃತ ವ್ಯಾಕರಣಗಳನ್ನು ಗಮನಿಸಲಾಗಿದೆ.

ಹಳಗನ್ನಡ ವ್ಯಾಕರಣಗಳನ್ನು ಆಧುನಿಕ ಭಾಷಾವಿಜ್ಞಾನದ ದೃಷ್ಟಿಯಿಂದ ಅಭ್ಯಸಿಸುವತ್ತ ವಿದ್ವಾಂಸರ ಒಲವು ಹರಿಯುತ್ತಿದೆ.[9] ಆದರೆ ಈ ಪ್ರಬಂಧದಲ್ಲಿ ಅಂಥ ಪ್ರಯತ್ನಕ್ಕೆ ಕೈ ಹಾಕಿಲ್ಲ. ಇಲ್ಲಿನದು ಪೂರ್ಣವಾಗಿ ಸಾಂಪ್ರದಾಯಿಕ ದೃಷ್ಟಿಯಿಂದ ಕೈಗೊಂಡ ಅಧ್ಯಯನವಾಗಿದೆ. ಪ್ರಬಂಧದ ಅಧ್ಯಾಯದ ಹೆಸರುಗಳಲ್ಲಿ, ವಿಷಯಗಳ ಜೋಡಣೆಯಲ್ಲಿ ಈ ಪರಂಪರಾಗತ ದೃಷ್ಟಿ ವ್ಯಕ್ತವಾಗುತ್ತದೆ.

ಮೊತ್ತದಲ್ಲಿ ಹೇಳುವುದಾದರೆ ಸ್ಮೃತಿ, ಭೂಷಣ, ದರ್ಪಣಗಳಲ್ಲಿ ಸಂಸ್ಕೃತ ವ್ಯಾಕರಣಗಳಿಂದ ತೆಗೆದುಕೊಂಡುದೆಷ್ಟು? ಅದನ್ನು ಕನ್ನಡಕ್ಕೆ ಹೊಂದಿಸಿಕೊಂಡುದು ಹೇಗೆ ಸಂಸ್ಕೃತದ ಅನುಸರಣೆ ಕನ್ನಡಕ್ಕೆ ಒಗ್ಗಿಕೊಂಡಿದೆಯೇ ? ಕಣ್ಣುಮುಚ್ಚಿ ಅನುಸರಿಸಿದುದರಿಂದ ಉಂಟಾದ ಲೋಪ ದೋಷಗಳೇನು ? ಇವುಗಳ ವಿವೇಚನೆಯೇ ಈ ಅಧ್ಯಯನದ ಮುಖ್ಯಾಂಶವಾಗಿದೆ.

## ಅಡಿಟಿಪ್ಪಣಿಗಳು

1. ನೋ : ಕ. ಭಾ. ಶಾ. ಪು : 32 "A language can adopt and create as many words as it pleases, without changing its character; but it cannot alter its grammar, its syntax, without becoming another......"—*Gustave Oppert.*

2. *Foundations of Language.* Page 224-225 "The unit of speech is neither the individual sound nor the individual word, but the sentence i.e. a word or group of words expressing a complete concept, each word composed of individual sounds, and the meaning of the single word when the sentence consists of only one word or the combination of meanings of the group of words conveying a unitary idea"

3. Ph. S. G. Page 12 "The expression 'Sabdanusasana' as significantly used by Patanjali instead of the more popular term 'Vyakarana' serves to indicate that the main function of grammar is as much to support the correct forms in confirmity, with the fixed rules..."

4. ನೋ : 1) ಜೈನೇಂದ್ರ ಮಹಾವೃತ್ತಿ ಶ್ಲೋಕ : 1 ಇಲ್ಲಿ 'ಶಬ್ದಶಾಸ್ತ್ರಸ್ಯ ಸೂತ್ರಾಣಾಂ' ಎಂಬ ಪ್ರಯೋಗವಿದೆ.
   2) ಶಬ್ದಮಣಿ ದರ್ಪಣ ಸಂಗ್ರಹಃ ಪ್ರಸ್ತಾವನೆ : ಪು : 5
   'ಶಬ್ದಶಾಸ್ತ್ರದೆಡೆಯೊಳ್ ಭುವನಸ್ತುತ ಪೂಜ್ಯಪಾದರೆಂಬುದು'
   'ಶಬ್ದಶಾಸ್ತ್ರರೂಪಾವತಾರನ್ಯಾಸ'

5. See : Lectures on Patanjali's Mahabhashya (Vol. I) P : 21
   1. Raksha = Protection of Vedas
   2. Uha = Modification of vedic mantras
   3. Laghu = Easy means acquiring the knowledge of words
   4. Asandeha = Absense of ambiguity

6. ನೋ : ಕ. ಶ. ಪ್ರ. ಪು : 2
   'ಸರ್ವೇಷಾಂ ವ್ಯವಹಾರಾಣಾಂ ಮೂಲಂ ಶಬ್ದಾರ್ಥ ನಿರ್ಣಯಃ
   .ಸಚ ವ್ಯಾಕರಣಾದೇವ ಮುನಿಭಿಸ್ತೇನ ತತ್ ಕೃತಂ'

ವ್ಯಾಕರಣ ಜ್ಞಾನವಿಲ್ಲದೆ ಅಪಪ್ರಯೋಗ ಮಾಡಿ ಅಪಾಯಕ್ಕೊಳಗಾದುದಕ್ಕೆ 'ಇಂದ್ರ ಶತ್ರು ವರ್ಧಸ್ವ' (ನೋ : ಕ. ಭಾ. ಶಾ. ಪು. 24) ಎಂಬ ಮಾತೂ, ಅಪಹಾಸ್ಯಗೊಳಗಾದುದಕ್ಕೆ 'ಮೋದಕಂ ದೇಹಿ ದೇವ' (ನೋ : ಪ್ರಾ. ಕ. ವ್ಯಾ : ಪು : 33) 'ದಧಿವಾನಯ' (ನೋ : ಕ. ಭಾ. ಶಾ. ಪು : 28) ಎಂಬ ಉಕ್ತಿಗಳೂ ಸಂಸ್ಕೃತ ವ್ಯಾಕರಣ ಲೋಕದಲ್ಲಿ ಪ್ರಚುರವಾಗಿವೆ. ಅಂತೆಯೇ ವ್ಯಾಕರಣ ಜ್ಞಾನವಿದ್ದು ಮಾಡಿದ ಪ್ರಯೋಗ, ತಿಳಿದ ಅರ್ಥ ಇಹಪರಗಳಲ್ಲಿ ಇಷ್ಟಾರ್ಥ ಸಿದ್ಧಿಯನ್ನು ಉಂಟು ಮಾಡುತ್ತದೆ ಎಂಬುದರ ಬಗ್ಗೆ ಕೆಳಗಿನ ಮಾತು ಪ್ರಸಿದ್ಧವಾಗಿದೆ.

"ಏಕಃ ಶಬ್ದಃ ಸುಪ್ರಯುಕ್ತಃ ಸಮ್ಯಕ್ ಜ್ಞಾತಃ ಸ್ವರ್ಗೇ ಲೋಕೇ ಕಾಮಧುಗ್ ಭವತಿ" (ನೋ : ವ್ಯಾಕರಣಗಳು : ಪು : 154)

7. ಕನ್ನಡ ವ್ಯಾಕರಣಗಳ ಹಿನ್ನೆಲೆಯಾಗಿರುವ ಸಂಸ್ಕೃತ ವ್ಯಾಕರಣಗಳನ್ನು ಸರಿಯಾಗಿ ವಿಚಾರಿಸದೆ ಅಸಮರ್ಪಕವಾದ ಹೇಳಿಕೆಗಳು ಬಂದಿವೆ.

1) ನೋ : ಕ. ಭಾ. 11-1 ಪು: 25. ಕೇಶಿರಾಜ 'ವೈಯಾಕರಣ ಸಿದ್ಧಾಂತ ಕೌಮುದಿ'ಗೆ ಋಣಿಯೆಂದು ಹೇಳಿರುವುದು ಸರಿಯಲ್ಲ. ಆದರ ಕರ್ತೃವಾದ ಭಟ್ಟೋಜಿ ದೀಕ್ಷಿತ (ಕ್ರಿ. ಶ. 1625) ಕೇಶಿರಾಜನಿಗಿಂತ ಈಚಿನವ.

2) ನೋ : ದರ್ಪಣ (ಪ) ಪು : 62, 'ಸ್ರೋರ್ವಿಸರ್ಗಃ ಎಂಬುದು ಅಷ್ಟಾಧ್ಯಾಯಿಯ ಸೂತ್ರವೆಂದು ಭಾವಿಸಿರುವುದು ತಪ್ಪು. ಅಷ್ಟಾಧ್ಯಾಯಿಯಲ್ಲಿ 'ವಿಸರ್ಗ' ಎಂಬ ಪಾರಿಭಾಷಿಕ ಪದವೇ ಬಳಕೆಗೊಂಡಿಲ್ಲ. ಈ ಸೂತ್ರ ಸಾರಸ್ವತ ವ್ಯಾಕರಣದಲ್ಲಿ (7-4) ಗೋಚರಿಸುತ್ತದೆ.

8. ನೋ : ಕ. ಕೈ. ಪು : 15, ಕೃದಂತ ಮತ್ತು ತದ್ಧಿತಾಂತವನ್ನು 'ನಿಷ್ಪನ್ನ ಶಬ್ದಗಳು' ಎಂದು ಕರೆಯಲಾಗಿದೆ.

9 ಹಳಗನ್ನಡ ವ್ಯಾಕರಣಗಳನ್ನು, ವ್ಯಾಕರಣ ವಿಚಾರಗಳನ್ನು ಕುರಿತು ಆಧುನಿಕ ಭಾಷಾವಿಜ್ಞಾನದ ದೃಷ್ಟಿಯಿಂದ ಮಾಡಿರುವ ಅಧ್ಯಯನಗಳಲ್ಲಿ ಗಮನಾರ್ಹವಾದ ಕೆಲವು ಹೀಗಿವೆ: (ಪೂರ್ಣ ವಿವರ ಗ್ರಂಥಲೇಖನ ಸೂಚಿಯಲ್ಲಿದೆ).

| | | |
|---|---|---|
| ಕುಶಾಲಪ್ಪಗೌಡ ಕೆ. | 1. | ವಿಭಕ್ತಿಗಳ ಕುರಿತಾಗಿರುವ ಲೇಖನಗಳು |
| | 2. | ಲಿಂಗವೊಂಬತ್ತು ತೆಱಂ (ಶ್ರೀಕಂಠತೀರ್ಥ) |
| ಕುಳ್ಳಿ. ಜೆ. ಎಸ್. | 1. | Kesiraja's Sabdamanidarpana |
| ಚಿದಾನಂದ ಮೂರ್ತಿ | 1. | ಕನ್ನಡ ವ್ಯಾಕರಣಕಾರರು ಮತ್ತು ಸ್ತ್ರೀಕರಣ ವಿಚಾರ |
| ವಿಲ್ಯಂ ಮಾಡ್ರ | 1. | ಕನ್ನಡ ವರ್ಣಗಳು |
| | 2. | ಕನ್ನಡದಲ್ಲಿ ಅನುನಾಸಿಕ ನಿರನುನಾಸಿಕಗಳು |
| | 3. | ಕನ್ನಡದಲ್ಲಿ ಸಮಾಸ |

# ಅಧ್ಯಾಯ 2

## ಸಂಸ್ಕೃತ ವ್ಯಾಕರಣ ಪರಂಪರೆ

"ಭಾರತೀಯರಿಗೆ ಶಾಸ್ತ್ರಗಳಲ್ಲೆಲ್ಲಾ ವ್ಯಾಕರಣವೇ ಪ್ರಥಮ ಹಾಗೂ ಅತ್ಯಂತ ಪ್ರಮುಖವಾದುದು" (ಭಾ. ಸಾ. ಚ. 3–2 ಪು. 5). ಪ್ರಾಚೀನ ಕಾಲದಲ್ಲಿ ಬೇರೆ ಯಾವುದೇ ಶಾಸ್ತ್ರದ ಅಧ್ಯಯನಕ್ಕೆ ಹೊರಡುವ ಮೊದಲು ವ್ಯಾಕರಣವನ್ನು ಕಲಿಯ ಬೇಕಾಗಿತ್ತು. ತಂತ್ರಾಖ್ಯಾಯಿಕದ ಪೀಠಿಕೆಯಲ್ಲಿ ಹೇಳುವಂತೆ ವ್ಯಾಕರಣಾಭ್ಯಾಸದ ಕಾಲಾವಧಿ ಹನ್ನೆರಡು ವರ್ಷ. ಆನಂದವರ್ಧನನ ಪ್ರಕಾರ ವೈಯಾಕರಣರೇ ವಿದ್ವಾಂಸರ ಲ್ಲೆಲ್ಲ ಮೊದಲಿಗರು (ಧ್ವನ್ಯಾಲೋಕ 1-16ರ ವೃತ್ತಿ). ಈ ತೆರನಾದ ನಿಲುವಿಗೆ "ಸರ್ವ ವಿದ್ಯೆಗಳಿಗೂ ವ್ಯಾಕರಣವೇ ಮೂಲ"ವೆಂಬ ನಂಬಿಕೆಯೇ ಕಾರಣ. ವೇದಾಂಗಗಳಲ್ಲಿ ಉಳಿದವುಗಳಿಗಿಂತ ಮಿಗಿಲಾಗಿ ವ್ಯಾಕರಣಶಾಸ್ತ್ರ ಬೆಳೆದು ಬಂದಿದೆ. ಸಂಸ್ಕೃತದಲ್ಲಿ ಸಂಖ್ಯೆ ಯಲ್ಲಿ ಸಾವಿರಕ್ಕಿಂತಲೂ ಹೆಚ್ಚು ವ್ಯಾಕರಣ ಗ್ರಂಥಗಳಿವೆಯೆಂದು ಪ್ರತೀತಿ. ಸಂಖ್ಯೆ ಮಾತ್ರದಿಂದಲೇ ಸಂಸ್ಕೃತ ಭಾಷೆಯ ಕುರಿತಾಗಿ ನಡೆದ ವ್ಯಾಕರಣಾತ್ಮಕ ಚಿಂತನೆಯ ಅಗಾಧತೆಯನ್ನು ಊಹಿಸಿಕೊಳ್ಳಬಹುದು.[1]

ಸಂಸ್ಕೃತ ವ್ಯಾಕರಣ ಪರಂಪರೆಯ ಮೂಲವನ್ನು ಖಚಿತವಾಗಿ ಹೇಳಲು ಆಧಾರ ಸಾಮಗ್ರಿ ಸಾಲದು. ಹಾಗಾಗಿ ಪರಿಪೂರ್ಣವಾದ ಸಂಸ್ಕೃತ ವ್ಯಾಕರಣದ ಉಗಮವಾದುದು ಎಂದು ಎಂಬುದನ್ನು ಹೇಳುವಂತಿಲ್ಲ. ಆದರೆ "ಪ್ರಬುದ್ಧ ಮನಸ್ಸಿನ ವಿಶ್ಲೇಷಣ ಶಕ್ತಿಯ ಹೆಸರೇ ವ್ಯಾಕರಣ" (ಸಂ. ವ್ಯಾ. ವಿ. ಪು. 5) ಎಂದಿಟ್ಟುಕೊಂಡರೆ ವೈದಿಕ ಚಿಂತನೆಯ ಜೊತೆಯಲ್ಲಿ ವ್ಯಾಕರಣದ ಉದಯವೂ ಆಗಿರಬೇಕೆಂದು ಊಹಿಸಬೇಕಾಗುತ್ತದೆ. ಭರ್ತೃಹರಿಯ ಪ್ರಕಾರ ಆರಂಭದಲ್ಲಿ ಋಷಿಗಳ ಜ್ಞಾನ ಸ್ವಪ್ನಕಾಲದ ಅವಬೋಧದಂತೆ ಅವಿಭಕ್ತವಾಗಿತ್ತು (ವಾಕ್ಯಪದೀಯ 1–146) ಎಂದರೆ ಅವರ ಜ್ಞಾನ ಬೇರೆ ಬೇರೆ ಜ್ಞಾನಾಂಗಗಳಾಗಿ ವಿಭಕ್ತವಾಗದೆ ಏಕೀಭೂತವಾಗಿತ್ತು ಎಂದಭಿಪ್ರಾಯ. ವೇದ ಮತ್ತು ಅದಕ್ಕೆ ಸಂಬಂಧಿಸಿದ ವಿಚಾರಗಳ ಶಾಸ್ತ್ರೀಯ ಅಭ್ಯಾಸ ಆರಂಭವಾದಾಗ ಆ ಏಕೀಭೂತ ವಾದ ಜ್ಞಾನ ವೇದದ ಷಡಂಗಗಳಾಗಿ ಕವಲೊಡೆದು ಬೆಳೆದು ಬಂದಿರಬೇಕು. ಹೀಗಿರಲು ವೇದಪೂರ್ವದಲ್ಲಿ ವ್ಯಾಕರಣವೆಂಬ ಪ್ರತ್ಯೇಕವಾದ ಜ್ಞಾನ ಶಾಖೆಯ ಅಸ್ತಿತ್ವವನ್ನು ಕಾಣಲೆಡೆಯಿಲ್ಲ. ಆದರೆ ವ್ಯಾಕರಣ ಶಾಸ್ತ್ರಕ್ಕೆ ಸಂಬಂಧಿಸಿದ ಎಷ್ಟೋ ತತ್ವಗಳು ವೇದದ ಅವಿಭಕ್ತ ಜ್ಞಾನದಲ್ಲಿ ಅಡಗಿರುವುದನ್ನು ಅವಗಣಿಸುವಂತಿಲ್ಲ.

ವ್ಯಾಕರಣ, ನಿರುಕ್ತ, ಕಲ್ಪ, ಛಂದ, ಜ್ಯೋತಿಷ, ಶಿಕ್ಷಾ ಎಂಬ ಆರು ವೇದಾಂಗಗಳಲ್ಲಿ ವ್ಯಾಕರಣಕ್ಕೇ ಅಗ್ರಸ್ಥಾನ. ನಿರುಕ್ತ ಮತ್ತು ಶಿಕ್ಷಾ ನೇರವಾಗಿ ವ್ಯಾಕರಣಕ್ಕೇ ಸಂಬಂಧಿಸಿದ ಜ್ಞಾನಗಳಾಗಿವೆಯೆಂಬುದು ಗಮನಾರ್ಹ.

ವೇದಗಳಲ್ಲಿ, ಬ್ರಾಹ್ಮಣಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ವ್ಯಾಕರಣ ವಿಚಾರಗಳು, ವ್ಯಾಕರಣದ ಕೆಲವೊಂದು ಪಾರಿಭಾಷಿಕ ಪದಗಳು ಗೋಚರಿಸುತ್ತವೆಯಾದರೂ ಅವುಗಳ ಪ್ರತಿಪಾದ್ಯ ವಿಷಯ ವ್ಯಾಕರಣವಲ್ಲವಾದ್ದರಿಂದ ಪೂರ್ಣ ಸ್ವರೂಪದ ವ್ಯಾಕರಣವನ್ನು ಅಲ್ಲಿ ನಿರೀಕ್ಷಿಸುವಂತಿಲ್ಲ. ವೈದಿಕ ಯುಗಕ್ಕೆ ಸೇರಿದ ಯಾವುದೇ ಶುದ್ಧ ವ್ಯಾಕರಣ ಗ್ರಂಥ ಈವರೆಗೆ ದೊರಕಿಲ್ಲ. ವ್ಯಾಕರಣ ಪ್ರಕ್ರಿಯೆಯನ್ನು ಆಂಶಿಕವಾಗಿ ಚರ್ಚಿಸುವ ಪ್ರಾತಿಶಾಖ್ಯಗಳೇ ಈ ಕ್ಷೇತ್ರದಲ್ಲಿ ಲಭ್ಯವಿರುವ ಪ್ರಾಚೀನಕೃತಿಗಳು. ಅಲ್ಲಿಂದ ತೊಡಗಿ ಬೆಳೆದುಬಂದ ಸಂಸ್ಕೃತ ವ್ಯಾಕರಣದ ದೀರ್ಘಾವಧಿಯ ಇತಿಹಾಸದಲ್ಲಿ ಪಾಣಿನಿಯ ಅಷ್ಟಾಧ್ಯಾಯಿ ಒಂದು ಮೇರುಕೃತಿ. ಸಂಸ್ಕೃತ ವೈಯಾಕರಣರಲ್ಲಿ ಪಾಣಿನಿಗೆ ಅತ್ಯಂತ ಗೌರವದ ಸ್ಥಾನ. ಪಾಣಿನಿಗೆ ಸಂದ ಈ ಸರ್ವೋಚ್ಚ ಸ್ಥಾನವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಸ್ಕೃತ ವ್ಯಾಕರಣದ ಇತಿಹಾಸವನ್ನು ಕೆಳಗಿನಂತೆ ವಿಭಾಗಿಸುತ್ತಾರೆ (ನೋ. ಸಂ. ವ್ಯಾ. ವಿ.)

1. ಪಾಣಿನಿ ಪೂರ್ವಯುಗ
2. ಪಾಣಿನಿ ಯುಗ
3. ಪಾಣಿನ್ಯುತ್ತರಯುಗ

## ಪಾಣಿನಿಪೂರ್ವ ಯುಗ

ಪಾಣಿನಿಗಿಂತ ಮುಂಚೆ ವ್ಯವಸ್ಥಿತವಾದ ಸಂಸ್ಕೃತ ವ್ಯಾಕರಣ ಬೆಳೆದು ಬಂದಿರಬೇಕೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ತನ್ನ ಕಾಲದವರೆಗೆ ಬೆಳೆದು ಬಂದ ವ್ಯಾಕರಣ ಸಂಪ್ರದಾಯಗಳನ್ನು ಪಾಣಿನಿ ಸರಿಯಾಗಿ ಉಪಯೋಗಿಸಿಕೊಂಡು ಮಹಾಕೃತಿಯನ್ನು ನೀಡಿದನು. ಪಾಣಿನಿಗಿಂತ ಹಿಂದೆ ಮುಖ್ಯವಾಗಿ ಎರಡು ವ್ಯಾಕರಣ ಸಂಪ್ರದಾಯಗಳಿದ್ದಂತೆ ಭರ್ತೃಹರಿಯ ಮಾತಿನಿಂದ ಊಹಿಸಬೇಕಾಗುತ್ತದೆ (ವಾಕ್ಯಪದೀಯ : 1-144-146) ಮಹಾಭಾಷ್ಯದಲ್ಲಿ ಬರುವ ಇಂದ್ರ ಬೃಹಸ್ಪತಿ ಪ್ರಸಂಗವೂ ಭರ್ತೃಹರಿಯ ಹೇಳಿಕೆಗೆ ಒತ್ತುಕೊಡುತ್ತದೆ. ಆ ಎರಡು ಸಂಪ್ರದಾಯಗಳನ್ನು ಸವಿಭಾಗ ಮತ್ತು ಅವಿಭಾಗ ಪದ್ಧತಿಗಳೆಂದು ಹೆಸರಿಸುತ್ತಾರೆ (ಸಂ. ವ್ಯಾ. ವಿ. ಪು. 10). ಅವಿಭಾಗ ವ್ಯಾಕರಣದಲ್ಲಿ ಶಬ್ದಗಳ, ಶಬ್ದರೂಪಗಳ ಪೂರ್ಣಪಾಠವಿದ್ದು ಪ್ರಕೃತಿ ಪ್ರತ್ಯಯಗಳ ವಿವೇಚನೆ ಅಥವಾ ವಿಶ್ಲೇಷಣೆಯಿಲ್ಲ. ಇದಕ್ಕೆ ತೀರ ವಿರುದ್ಧವಾದ ರೀತಿ ಸವಿಭಾಗ ವ್ಯಾಕರಣದ್ದು. ಎಂದರೆ ಸವಿಭಾಗ ವ್ಯಾಕರಣಗಳಲ್ಲಿ ಪ್ರಕೃತಿ ಪ್ರತ್ಯಯಗಳ ವಿವೇಚನೆಯೇ ಪ್ರಧಾನವಾದುದು.

ಬಾರ್ಹಸ್ಪತ್ಯ ವ್ಯಾಕರಣ, ವ್ಯಾಡಿಯ ಸಂಗ್ರಹ ಅವಿಭಾಗ ಪದ್ಧತಿಗೆ ಸೇರಿದರೆ ಮುಂದೆ ಹುಟ್ಟಿಕೊಂಡ ಪಾಣಿನಿಯ ಅಷ್ಟಾಧ್ಯಾಯಿ ಸವಿಭಾಗ ಪದ್ಧತಿಯ ಪ್ರತಿನಿಧಿ.

ಪಾಣಿನಿಗಿಂತ ಮೊದಲು ನಡೆದ ಸಂಸ್ಕೃತ ವ್ಯಾಕರಣ ವ್ಯವಸಾಯವನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ವಿಂಗಡಿಸಬಹುದು.

1. ಪ್ರಾತಿಶಾಖ್ಯಗಳು
2. ವ್ಯಾಕರಣಗಳು
3. ಶಿಕ್ಷಾ ಗ್ರಂಥಗಳು

## 1. ಪ್ರಾತಿಶಾಖ್ಯಗಳು

ಸಂಹಿತೆಯ ಒಂದೊಂದು ಶಾಖೆಗೂ ಸೇರಿದಂತೆ ಹುಟ್ಟಿಕೊಂಡಿರುವ ಗ್ರಂಥಗಳೇ ಪ್ರಾತಿಶಾಖ್ಯಗಳು (ಪ್ರತಿ ಶಾಖೆಗೂ ಸಂಬಂಧಿಸಿದುದು-ಪ್ರಾತಿಶಾಖ್ಯ).[3] ಇವುಗಳು ದೈವೀ ವಾಕ್‌ಗಳ ವಿಶ್ಲೇಷಣೆ ಮಾಡುವುದರಿಂದ ವೈದಿಕ ಶಬ್ದಾನುಶಾಸನಗಳೆನಿಸಿವೆ. ಪದಪಾಠ ಮತ್ತು ಸಂಹಿತೆಯ ರಕ್ಷಣೆಯೇ ಪ್ರಾತಿಶಾಖ್ಯಗಳ ಗುರಿ. ಉಚ್ಚಾರಣೆ, ಸ್ವರ ವಿಧಾನ, ಸಂಧಿಗಳು, ಸ್ಥಾನಸ್ಥಾನಗಳಲ್ಲಿ ಹ್ರಸ್ವ ದೀರ್ಘವಿಧಾನ ಮುಂತಾದವನ್ನು ಇವು ಚರ್ಚಿಸುತ್ತವೆ. ಆದ್ದರಿಂದ ಪಾಣಿನಿ ಮತ್ತು ಶಾಕಟಾಯನರ ಪದ್ಧತಿಗಿಂತ ಇವು ಭಿನ್ನವಾಗಿವೆ. ಸವಿಭಾಗ ಪದ್ಧತಿಗೆ ಸೇರಿಯೂ ಪ್ರಕೃತಿ ಪ್ರತ್ಯಯ ವಿಭಾಗವನ್ನು ಮಾಡದಿರುವುದು ಇವುಗಳ ವೈಶಿಷ್ಟ್ಯ. ವೇದಾಂಗಗಳಲ್ಲಿ ಇವು ವ್ಯಾಕರಣಕ್ಕೆ ಸೇರುತ್ತವೆಯೆಂಬುದು ಗಮನಾರ್ಹ.

ಈ ವರೆಗೆ ಒಟ್ಟು ಆರು ಪ್ರಮುಖ ಪ್ರಾತಿಶಾಖ್ಯಗಳು ಲಭ್ಯವಾಗಿವೆ.

1. ಋಕ್ ಪ್ರಾತಿಶಾಖ್ಯೆ
2. ವಾಜಸನೇಯಿ ಪ್ರಾತಿಶಾಖ್ಯೆ
3. ಸಾಮ ಪ್ರಾತಿಶಾಖ್ಯೆ
4. ತೈತ್ತಿರೀಯ ಪ್ರಾತಿಶಾಖ್ಯೆ.
5. ಮೈತ್ರಾಯಣೀಯ ಪ್ರಾತಿಶಾಖ್ಯೆ
6. ಅಥರ್ವ ಪ್ರಾತಿಶಾಖ್ಯೆ

ಈ ಪ್ರಾತಿಶಾಖ್ಯೆಗಳ ಗುಂಪಿಗೆ ಋಕ್ ತಂತ್ರ, ಸಾಮತಂತ್ರ, ಅಥರ್ವ ಚತುರಾಧ್ಯಾಯಿಗಳನ್ನು ಸೇರಿಸಿಕೊಳ್ಳುತ್ತಾರೆ. ಹೆಚ್ಚಿನ ಪ್ರಾತಿಶಾಖ್ಯಗಳು ಪಾಣಿನಿ ಮತ್ತು ಯಾಸ್ಕನಿಗಿಂತ ಬಹಳ ಹಿಂದೆಯೇ ಹುಟ್ಟಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ.

ಪ್ರಾತಿಶಾಖ್ಯಗಳಲ್ಲಿ ಅತ್ಯಂತ ಪ್ರಾಚೀನವಾದುದು ಋಕ್ ಪ್ರಾತಿಶಾಖ್ಯ. ಅದರ ಕರ್ತೃ ಶೌನಕ, ಅದರಲ್ಲಿ ಪ್ರಕರಣಗಳಿಗೆ ಪಟಲವೆಂಬ ಹೆಸರಿದ್ದು ಒಟ್ಟು 18 ಪಟಲಗಳಿವೆ. ಸಂಜ್ಞಾ–ಪರಿಭಾಷಾ, ಸಂಹಿತಾ, ಸ್ವರ ಸಂಧಿ, ನತಿ, ಧ್ವನ್ಯಾಗಮ ಇತ್ಯಾದಿಯಾಗಿ ಪ್ರತಿಯೊಂದು ಪಟಲದ ಹೆಸರಿದೆ. ಉದಾತ್ತಾದಿ ಸ್ವರಗಳು, ವರ್ಣಗಳ ಸಂಧಿ, ವರ್ಣೋಚ್ಚಾರಣಗಳ ಗುಣದೋಷ, ವರ್ಣೋತ್ಪತ್ತಿ, ಪದಪಾಠದಿಂದ ಸಂಹಿತಾಪಾಠ ನಿರ್ಮಾಣ ಮೊದಲಾದ ಮಹತ್ವಪೂರ್ಣ ವಿಷಯಗಳ ಸುಸಂಬದ್ಧವಾದ ವಿವರಣೆಯಿಂದರಲ್ಲಿದೆ. ಸೂತ್ರಗಳು ಸರಳವಾಗಿದ್ದು ಅವುಗಳನ್ನು ಜೋಡಿಸಿದಾಗ ಕಾರಿಕೆಗಳಾಗುತ್ತವೆ. ಸಾಮಾನ್ಯವಾಗಿ ಪ್ರಾತಿಶಾಖ್ಯಗಳೆಲ್ಲದರ ಪ್ರತಿಪಾದ್ಯ ವಿಷಯದಲ್ಲಿ ಏಕರೂಪತೆಯಿದೆ.

ಪ್ರಾತಿಶಾಖ್ಯಗಳೆಲ್ಲ ಮೂಲದಲ್ಲಿ ಈಗಿರುವ ರೂಪಕ್ಕಿಂತ ಭಿನ್ನವಾದ ರೂಪವನ್ನು ಹೊಂದಿದ್ದಿರಬೇಕೆಂದು ಊಹಿಸಲಾಗಿದೆ. ಪಾಣಿನಿಯಲ್ಲಿ ಕಂಡುಬರುವ ಪ್ರೌಢತೆ ಮತ್ತು ಪರಿಪೂರ್ಣತೆ ಈ ಗ್ರಂಥಗಳಲ್ಲಿಲ್ಲದುದರಿಂದ ಇವು ಪಾಣಿನಿಗಿಂತ ಪ್ರಾಚೀನವಾಗಿಯೇ ನಿಲ್ಲುತ್ತವೆ.

ಪ್ರಾತಿಶಾಖ್ಯಗಳು ಮೂಲಭೂತವಾಗಿ ವ್ಯಾಕರಣ ಗ್ರಂಥಗಳಲ್ಲವಾದರೂ ಅವುಗಳಲ್ಲಿ ಬರುವ ವ್ಯಾಕರಣ ವಿಚಾರಗಳನ್ನು ಅಲ್ಲಗಳೆಯುವಂತಿಲ್ಲ.[3] ಸಾಮಾನ್ಯವಾಗಿ ವ್ಯಾಕರಣದ ಪ್ರತಿಪಾದ್ಯ ವಿಷಯ ವರ್ಣೋಪದೇಶ, ಸಂಜ್ಞಾಪ್ರಕರಣ, ಸ್ವರಪ್ರಕರಣ, ಸಂಧಿಪ್ರಕರಣ, ಧ್ವನಿಪರಿವರ್ತನೆ, ಪ್ರಕೃತಿ ಪ್ರತ್ಯಯ ವಿಚಾರ ಇತ್ಯಾದಿಯೆಂದಿಟ್ಟುಕೊಂಡರೆ ಪ್ರಾತಿಶಾಖ್ಯಗಳಲ್ಲಿ ವ್ಯಾಕರಣದ ಹಲವಾರು ವಿಚಾರಗಳು ಪ್ರತಿಪಾದಿತವಾಗಿರುವುದಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ವ್ಯಾಕರಣ ಸಮ್ಮತವಾದ ಅನೇಕ ಸಿದ್ಧಾಂತಗಳು ಪ್ರಾತಿಶಾಖ್ಯಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ. ಸಮಾನಾಕ್ಷರ, ಸಂಧ್ಯಕ್ಷರ, ಸ್ಪರ್ಶ, ಅಂತಸ್ಥ, ಊಷ್ಮ, ಅನುನಾಸಿಕ ಇತ್ಯಾದಿ ಪಾರಿಭಾಷಿಕ ಪದಗಳು ಅಲ್ಲಿ ತಲೆದೋರಿವೆ. ಪಾಣಿನಿಗಿಂತ ಹಿಂದೆ ಪ್ರಚಾರದಲ್ಲಿದ್ದ ಹಾಗೂ ಮಾಹೇಶ್ವರ ಪದ್ಧತಿಗಿಂತ ಭಿನ್ನವಾದ ವರ್ಣಸಮಾಮ್ನಾಯದ ಪದ್ಧತಿ ಪ್ರಾತಿಶಾಖ್ಯಗಳಲ್ಲಿ ಗೋಚರಿಸುತ್ತದೆ. ಮುಂದೆ ಈ ವರ್ಣೋಪದೇಶ ಪದ್ಧತಿಯನ್ನು ಪ್ರಾತಿಶಾಖ್ಯ ಪದ್ಧತಿಯೆಂದೇ ಕರೆಯುವುದನ್ನು ಕಾಣಬಹುದು. ಶಿಕ್ಷಾ ಮತ್ತು ವ್ಯಾಕರಣವನ್ನು ಜೋಡಿಸುವ ಕೊಂಡಿಯೆಂದೂ ಪ್ರಾತಿಶಾಖ್ಯಗಳು ಮಹತ್ವವನ್ನು ಹೊಂದಿವೆ.

## 2. ವ್ಯಾಕರಣಗಳು

ಪಾಣಿನಿಯ ವ್ಯಾಕರಣಕ್ಕೆ ಭದ್ರವಾದ ಪರಂಪರೆಯ ಹಿನ್ನೆಲೆಯಿದ್ದುದರಿಂದ ಅದು ಪರಿಪೂರ್ಣವಾಗಲು ಸಾಧ್ಯವಾಯಿತು. ಅಷ್ಟಾಧ್ಯಾಯಿಯಲ್ಲಿ ವಿವರಣೆಯಿಲ್ಲದ ಹಲವು ಪಾರಿಭಾಷಿಕ ಪದಗಳಿವೆ. ಪ್ರತ್ಯಯ, ಸಮಾಸ, ವಿಭಕ್ತಿಗಳ ಹೆಸರುಗಳು, ಅವ್ಯಯೀಭಾವ, ಬಹುವ್ರೀಹಿ ಮೊದಲಾದ ಪಾರಿಭಾಷಿಕ ಪದಗಳು ಪೂರ್ವ ಪ್ರಸಿದ್ಧವಾಗಿದ್ದುದರಿಂದ ಪಾಣಿನಿ ಅವುಗಳನ್ನು ವಿವರಿಸಿಲ್ಲವೆಂದು ತೋರುತ್ತದೆ. ವಿಂಟರ್ನಿಟ್ಸ್ ಹೇಳುವಂತೆ

"ಪಾಣಿನಿಯ ವ್ಯಾಕರಣವು ವ್ಯಾಕರಣ ಶಾಸ್ತ್ರದ ದೀರ್ಘಾವಧಿ ಬೆಳವಣಿಗೆಯ ಮಂಕ್ತಾಯ ರೂಪ" (ಭಾ. ಸಾ. ಚ. ಪು. 8) ಆಪಿಶಲಿ, ಕಾಶಕೃತ್ಸ್ನ ಮೊದಲಾದ ಸುಮಾರು ಹನ್ನೆರಡು ವೈಯಾಕರಣರನ್ನು ಪಾಣಿನಿ ಹೆಸರಿಸಿದ್ದಾನೆ. ಆದರೆ ಅವರಲ್ಲಿ ಯಾರೊಬ್ಬರ ಕೃತಿಯೂ ಲಭ್ಯವಾಗಿಲ್ಲ. ಇಂದ್ರ, ಭರದ್ವಾಜ, ಭಾಗುರಿ, ಕಾಶಕೃತ್ಸ್ನ, ಆಪಿಶಲಿ, ಶಾಕಟಾಯನ, ಯಾಸ್ಕ, ವ್ಯಾಡಿ ಮೊದಲಾದವರು ಪಾಣಿನಿ ಪೂರ್ವಯುಗದ ಪ್ರಸಿದ್ಧ ವೈಯಾಕರಣರೆಂದು ತಿಳಿಯಲಾಗಿದೆ. ಅವರಲ್ಲೂ ಇಂದ್ರನ ಐಂದ್ರವ್ಯಾಕರಣ ಅತ್ಯಂತ ಮಹತ್ವ ಪೂರ್ಣವಾಗಿದೆ.

## ಐಂದ್ರ ವ್ಯಾಕರಣ

ಸವಿಭಾಗ ಪದ್ಧತಿಯಲ್ಲಿ ಎರಡು ಪ್ರಮುಖ ವ್ಯಾಕರಣ ಸಂಪ್ರದಾಯಗಳಿದ್ದಂತೆ ತಿಳಿಯಲಾಗಿದೆ. 1. ಐಂದ್ರ 2. ಮಾಹೇಶ್ವರ. ಭಾರತೀಯ ವ್ಯಾಕರಣದ ಪ್ರಾಚ್ಯ ಶಾಖೆ ಐಂದ್ರವಾದರೆ ಔದೀಚ್ಯ ಶಾಖೆ ಮಾಹೇಶ್ವರ. ಮಾಹೇಶ್ವರ ಸೂತ್ರಗಳು, ಉಣಾದಿ, ಗಣಪಾಠ, ಪ್ರತ್ಯಾಹಾರ–ಇವು ಮಾಹೇಶ್ವರ ಶಾಖೆಯ ವೈಶಿಷ್ಟ್ಯಗಳು. ಪ್ರಾಚ್ಯ ಶಾಖೆಯಲ್ಲಿ ಸಂಧಿ ಸೂತ್ರಗಳವರೆಗೆ ಪೂರ್ಣವಾಗಿ ವರ್ಣಗಳ ಪರಿಗಣನೆಯಿದೆ. ಪ್ರಾತಿಶಾಖ್ಯಗಳು ಐಂದ್ರ ಸಂಪ್ರದಾಯಕ್ಕೆ ಸೇರಿದವುಗಳೆಂದು ತಿಳಿಯಲಾಗಿದೆ. ಮುಂದೆ ಬಂದ ಅಷ್ಟಾಧ್ಯಾಯಿ ಮಾಹೇಶ್ವರ ಸಂಪ್ರದಾಯದ ಶ್ರೇಷ್ಠ ಪ್ರತಿನಿಧಿ.

ಐಂದ್ರ ವ್ಯಾಕರಣದ ಕರ್ತೃ ಇಂದ್ರ. ಸವಿಭಾಗ ವ್ಯಾಕರಣ ನಾಂದಿಯನ್ನು ಹಾಡಿದಾತನು ಇಂದ್ರನೇ ಆಗಿರಬೇಕು. ತೈತ್ತಿರೀಯ ಸಂಹಿತೆಯಲ್ಲಿ ಬರುವ "ವಾಗ್ವೈ ಪರಾಚ್ಯ ವ್ಯಾಕೃತಾ ವದತ್ ತೇ ದೇವಾ ಇಂದ್ರಮಬ್ರುವನ್, ಇಮಾಂ ನೋವಾಚಂ ವ್ಯಾಕುರ್ವಿತಿ......ತಾಮಿಂದ್ರೋ ಮಧ್ಯತೋವಕ್ರಮ್ಯ ವ್ಯಾಕರೋತ್"[4] (6-4-7) ಎಂಬ ಉಕ್ತಿಗೆ ಸಾಯಣಾಚಾರ್ಯರು "ತಾಮಖಂಡಾಂ ವಾಚಂ ಮಧ್ಯೇ ವಿಚ್ಛಿದ್ಯ ಪ್ರಕೃತಿ ಪ್ರತ್ಯಯ ವಿಭಾಗಂ ಸರ್ವತ್ರಾಕರೋತ್" ಎಂಬ ವಿವರಣೆಯನ್ನು ನೀಡುತ್ತಾರೆ. ಋಕ್ ತಂತ್ರದ "ಬ್ರಹ್ಮಾಬೃಹಸ್ಪತಯೇ ಪ್ರೋವಾಚ, ಬೃಹಸ್ಪತಿರಿಂದ್ರಾಯ, ಇಂದ್ರೋ ಭರದ್ವಾಜಾಯ, ಭರದ್ವಾಜ ಋಷಿಭ್ಯಃ, ಋಷಯೋ ಬ್ರಾಹ್ಮಣೇಭ್ಯಃ" (1-4) ಎಂಬ ನಿರೂಪಣೆ ಮೇಲಿನದಕ್ಕೆ ಮಂತ್ರಷ್ಟು ಒತ್ತುಕೊಡುತ್ತದೆ. ಐಂದ್ರ ವ್ಯಾಕರಣ ಇಂದು ನಷ್ಟವಾಗಿ ಹೋಗಿದೆ. ಟಿಬೇಟಿನಲ್ಲಿ ಪ್ರಚಲಿತವಿರುವ ಮಾಹಿತಿನಂತೆ ಅದರಲ್ಲಿ ಒಟ್ಟು 25 ಸಾವಿರ ಶ್ಲೋಕಗಳಿದ್ದುವು (ಸಂ. ವ್ಯಾ. ವಿ. ಪು. 65). ಪ್ರಾತಿಶಾಖ್ಯಗಳು ಮಾತ್ರವಲ್ಲ, ಕಾಶಕೃತ್ಸ್ನನ ವ್ಯಾಕರಣ, ಕಾತಂತ್ರ ವ್ಯಾಕರಣ ಮೊದಲಾದುವು ಐಂದ್ರ ಸಂಪ್ರದಾಯಕ್ಕೆ ಸೇರಿದವುಗಳು. ಡಾ.ಬರ್ನೆಲ್ ಅವರ ಪ್ರಕಾರ ಕಾತಂತ್ರ, ಕಚ್ಚಾಯನನ ಪಾಲಿ ವ್ಯಾಕರಣ, ತಮಿಳಿನ ತೊಲ್‌ಕಾಪ್ಪಿಯಂ, ಹಳಗನ್ನಡ ವ್ಯಾಕರಣಗಳು ಐಂದ್ರ ಸಂಪ್ರದಾಯಕ್ಕೆ ಸೇರುತ್ತವೆ. (ಒಎಎಸ್‌ಜಿಪಿ 56-58). ಮಾಹೇಶ್ವರ ಸಂಪ್ರದಾಯ ಐಂದ್ರ ವ್ಯಾಕರಣಕ್ಕಿಂತ ಈಚೆಗಿನದೆಂದೂ ಸಂಸ್ಕೃತ ವ್ಯಾಕರಣ ಸಂಪ್ರದಾಯಗಳಲ್ಲಿ ಈಗ ತಿಳಿದಿ

ರುವ ಪಂಟ್ಟಿಗೆ ಐಂದ್ರವೇ ಅತ್ಯಂತ ಪ್ರಾಚೀನವೆಂದೂ ಹೇಳುತ್ತಾರೆ (ಪ್ರಾ. ಕ. ವ್ಯಾ. ಪು. 13). ಐಂದ್ರದ ಪ್ರಭಾವ ಪಾಣಿನಿಯ ಮೇಲಾಗಿದೆಯಾದರೂ ಪಾಣಿನಿ ಐಂದ್ರ ವನ್ನು ಅನುಸರಿಸಿಲ್ಲ.

### 3. ಶಿಕ್ಷಾಗ್ರಂಥಗಳು

ವರ್ಣಗಳ ಉಚ್ಚಾರ ವಿಧಾನವನ್ನು ತಿಳಿಸುವ ಶಾಸ್ತ್ರವೇ ಶಿಕ್ಷಾ. ಸಾಯಣರು ತಮ್ಮ ಋಗ್ವೇದಭಾಷ್ಯ ಭೂಮಿಕೆಯಲ್ಲಿ "ಸ್ವರವರ್ಣಾದ್ಯುಚ್ಚಾರಣ ಪ್ರಕಾರೋ ಯತ್ರ ಶಿಕ್ಷ್ಯತೇ ಉಪದಿಶ್ಯತೇ ಸಾ ಶಿಕ್ಷಾ" ಎಂದು ಹೇಳಿದ್ದಾರೆ. ಈ ದೃಷ್ಟಿಯಿಂದಲೇ ಅದು ವೇದದ ಘ್ರಾಣವೆನಿಸಿದೆ. ಶಿಕ್ಷಾಗ್ರಂಥಗಳು ಪ್ರಾತಿಶಾಖ್ಯಗಳಿಗಿಂತ ಮೊದಲು ರಚಿತ ಗೊಂಡವುಗಳೆಂದೂ ಆದರೆ ಈಗಿನ ಅವುಗಳ ರೂಪ ಪ್ರಾತಿಶಾಖ್ಯಗಳಿಗಿಂತ ಈಚಿನದೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೂ ಅವುಗಳಲ್ಲಿ ವೈದಿಕ ಮತ್ತು ಲೌಕಿಕ ವರ್ಣೋಚ್ಚಾರಣ ಪ್ರಕ್ರಿಯೆಯನ್ನು ಸುರಕ್ಷಿತವಾಗಿಡುವ ಪ್ರಯತ್ನ ಕಾಣಿಸಿಕೊಳ್ಳುತ್ತಿದೆ. ಹಲವಾರು ಶಿಕ್ಷಾಗ್ರಂಥಗಳು ದೊರಕುವುದಿದ್ದರೂ ಅವುಗಳಲ್ಲಿ ಪಾಣಿನೀಯ ಶಿಕ್ಷಾ, ಆಪಿಶಲ ಶಿಕ್ಷಾ, ಚಾಂದ್ರಶಿಕ್ಷಾ, ಭಾರದ್ವಾಜ ಶಿಕ್ಷಾ ಮೊದಲಾದವುಗಳು ಪ್ರಮುಖ ಶಿಕ್ಷಾ ಗ್ರಂಥಗಳೆ ನಿಸಿವೆ. ಪಾಣಿನೀಯ ಶಿಕ್ಷಾ ಇವುಗಳಲ್ಲಿ ಅತ್ಯಂತ ಪ್ರಮುಖವಾದುದು. ಇದರ ಕರ್ತೃವಿನ ಬಗ್ಗೆ ಭಿನ್ನಾಭಿಪ್ರಾಯವಿದೆ. ಅಷ್ಟಾಧ್ಯಾಯಿಯ ಕರ್ತೃವಾದ ಪಾಣಿನಿಯ ಕೃತಿ ಇದಲ್ಲ ವೆಂದೇ ಹೆಚ್ಚಿನ ವಿದ್ವಾಂಸರ ಅಭಿಮತ.

ಶಿಕ್ಷಾ ಗ್ರಂಥಗಳಂತೆ ನಿರುಕ್ತವೂ ಪಾಣಿನಿಪೂರ್ವಯುಗದಲ್ಲಿ ಹುಟ್ಟಿದ ಜ್ಞಾನ ಶಾಖೆ. ಅದು ವೇದಾಂಗಗಳಲ್ಲಿ ಒಂದಾಗಿದ್ದು ವೇದ ಮಂತ್ರಗಳ ಅರ್ಥಾನುಸಂಧಾನವನ್ನು ಗುರಿಯಾಗಿರಿಸಿಕೊಂಡಿದೆ. ಹಾಗಾಗಿ ಅದರ ನೇರವಾದ ಸಂಬಂಧ ವ್ಯಾಕರಣಕ್ಕಿದೆ. ನಮಗೆ ಉಪಲಬ್ಧವಾಗಿರುವುದು ಯಾಸ್ಕನ ನಿರುಕ್ತವೊಂದೇ ಆದರೂ ಹಲವಾರು ನಿರುಕ್ತಕಾರರು ಆಗಿ ಹೋಗಿರುವಂತೆ ಯಾಸ್ಕನ ಉಲ್ಲೇಖದಿಂದ ತಿಳಿದುಬರುತ್ತದೆ. ಯಾಸ್ಕನು ಹಲವಾರು ವ್ಯಾಕರಣ ಪಂಥಗಳನ್ನೂ ವೈಯಾಕರಣರನ್ನೂ ಹೆಸರಿಸಿರುವುದು ಗಮನಾರ್ಹ.

ಹೀಗೆ ಪಾಣಿನಿಪೂರ್ವಯುಗವನ್ನು ಅವಲೋಕಿಸಿದರೆ ಪಾಣಿನಿಗಿಂತ ಹಿಂದೆ ವ್ಯಾಕರಣ ಶಾಸ್ತ್ರ ಗಟ್ಟಿಯಾಗಿ ಬೆಳೆದು ಬಂದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಅಂದಿನ ಯಾವುದೇ ಒಂದು ವ್ಯಾಕರಣ ಗ್ರಂಥ ಉಪಲಬ್ಧವಿಲ್ಲವಾದರೂ ಪಾಣಿನಿಗೆ ದೊರಕಿದ ಭದ್ರ ಬುನಾದಿಯನ್ನು ಊಹಿಸಿಕೊಳ್ಳುವುದಕ್ಕೆ ಧಾರಾಳವಾಗಿ ಸಾಮಗ್ರಿ ಲಭ್ಯವಿದೆ.

## ಪಾಣಿನಿ ಯುಗ

ಈ ಯುಗದಲ್ಲಿ ಪಾಣಿನಿ ಮತ್ತು ಅವನ ಕೃತಿ; ಆ ಕೃತಿಯ ವಾರ್ತಿಕ, ಭಾಷ್ಯ, ವೃತ್ತಿ, ಟೀಕೆಗಳು ಹಾಗೂ ಅದರ ಪ್ರಕ್ರಿಯಾತ್ಮಕ ರೂಪಗಳು – ಇವುಗಳ ವಿಚಾರ ಬರುತ್ತದೆ.

## ಪಾಣಿನಿ

ವ್ಯಾಕರಣ ಕ್ಷೇತ್ರದ ಮಹಾ ಮಾನವ ಹಾಗೂ ಭಾರತೀಯ ಪ್ರತಿಭೆಯ ಅಪ್ರತಿಮ ಪವಾಡ ಎಂಬ ಹೊಗಳಿಕೆಗೆ ಪಾತ್ರನಾದವನು ಪಾಣಿನಿ (ಸಂ. ವ್ಯಾ. ವಿ. ಪು. 123). ಅವನ ಕುರಿತು ಶಾಲಾತುರೀಯ ಎಂಬುದಾಗಿ ಮುಂದಿನ ಗ್ರಂಥಗಳು ನಿರ್ದೇಶಿಸಿರುವುದ ರಿಂದ ಬಹುಶಃ ಆತನು 'ಶಾಲಾತುರ' ಎಂಬ ಊರಿನವನಾಗಿರಬೇಕು. ಈ ಶಾಲಾತುರ ಈಗಿನ ಪಾಕಿಸ್ಥಾನದಲ್ಲಿರುವ ಲಹೌರ. ಪತಂಜಲಿಯು ತನ್ನ ಮಹಾಭಾಷ್ಯದಲ್ಲಿ ಪಾಣಿನಿ ಯನ್ನು 'ದಾಕ್ಷೀಪುತ್ರ' ಎಂದು ಕರೆಯುವುದನ್ನು ನೋಡಿದರೆ ಈತನ ತಾಯಿಯ ಹೆಸರು 'ದಾಕ್ಷೀ' ಎಂದಾಗಿರಬೇಕೆಂದು ತೋರುತ್ತದೆ. ಇದಕ್ಕಿಂತ ಹೊರತಾಗಿ ಇವನ ಜೀವಿತದ ವಿಚಾರ ಹೆಚ್ಚು ತಿಳಿದುಬಂದಿಲ್ಲ. ಪಾಣಿನಿಯ ಕಾಲದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯ ವಿದ್ದರೂ ಹೆಚ್ಚು ಕಡಮೆ ಕ್ರಿ. ಪೂ. 700–600 ರಲ್ಲಿ ಆತನು ಜೀವಿಸಿದ್ದಿರಬಹುದೆಂಬ ಕಡೆಗೆ ವಿದ್ವಾಂಸರ ಒಲವಿದೆ.

## ಅಷ್ಟಾಧ್ಯಾಯಿ

ಪಾಣಿನಿಯ ವ್ಯಾಕರಣ ಗ್ರಂಥದಲ್ಲಿ ಎಂಟು ಅಧ್ಯಾಯಗಳಿರುವುದರಿಂದ ಅದು ಅಷ್ಟಾಧ್ಯಾಯಿಯೆಂದೇ ಪ್ರಸಿದ್ಧವಾಗಿದೆ. ಪ್ರತಿಯೊಂದು ಅಧ್ಯಾಯದಲ್ಲೂ ನಾಲ್ಕು ನಾಲ್ಕು ಪಾದಗಳಿದ್ದು ಅದರಲ್ಲಿ ಒಟ್ಟು 3779 ಸೂತ್ರಗಳಿವೆ. ಎಂಟು ಅಧ್ಯಾಯಗಳನ್ನು ಎರಡು ಭಾಗಗಳಾಗಿ ವಿಂಗಡಿಸುವುದುಂಟು. "(ಅ) ವಿಭಜನಾತ್ಮಕ ಭಾಗ–ಅಧ್ಯಾಯ ಒಂದರಿಂದ ಐದರವರೆಗೆ (ಆ) ಸಂಯೋಜನಾತ್ಮಕ ಭಾಗ–ಅಧ್ಯಾಯ ಆರರಿಂದ ಎಂಟರ ವರೆಗೆ. ಎರಡನೆಯ ಭಾಗದಲ್ಲಿ ಧ್ವನಿಶಾಸ್ತ್ರವೂ ಶಬ್ದಶಾಸ್ತ್ರವೂ ಒಂದರಲ್ಲೊಂದು ಸಂಕೀರ್ಣವಾಗಿವೆ" (ಭಾ. ಸಾ. ಚ. ಪು. 8.)

ಅಷ್ಟಾಧ್ಯಾಯಿಯು ಸಂಕ್ಷೇಪವಾದ ಸೂತ್ರ ಶೈಲಿಯನ್ನು ಸ್ವೀಕರಿಸಿದೆ. ಅಲ್ಲಿನ ಸೂತ್ರಗಳು ಬೀಜಗಣಿತದ ಸೂತ್ರಗಳಂತಿವೆ. ಮೊದಲೇ ಅವುಗಳ ಅರ್ಥವನ್ನು ತಿಳಿದಿರ ಬೇಕಲ್ಲದೆ ಪ್ರತಿಯೊಂದು ಸೂತ್ರದ ತಾತ್ಪರ್ಯವನ್ನು ಅರಿಯಲು ಹಿಂದಿನ ಸೂತ್ರಗಳು ನೆನಪಿನಲ್ಲಿರಬೇಕಾದುದು ಅಗತ್ಯ. ಪಾಣಿನಿಯು ಧಾತು ಪರಿಚಯಕ್ಕಾಗಿ ಧಾತುಪಾಠ ವನ್ನೂ ಸೂತ್ರಗಳ ಅರ್ಥಜ್ಞಾನಕ್ಕಾಗಿ ಗಣಪಾಠಗಳನ್ನೂ ಕೊಟ್ಟಿದ್ದಾನೆ. "ಅತ್ಯಂತ ಬುದ್ಧಿಪೂರ್ವಕವೂ ಸುವ್ಯವಸ್ಥಿತವೂ ಆದ ಸಂಕ್ಷೇಪ ಶೈಲಿಯನ್ನು ಪಾಣಿನಿ ಅನುಸರಿಸಿದ್ದ ರಿಂದಲೇ ಅಷ್ಟೊಂದು ಸಣ್ಣ ಸ್ವರೂಪದ ಸೂತ್ರಗಳನ್ನು ನಿರ್ಮಿಸಲು ಅವನಿಗೆ ಶಕ್ಯ

ವಾಯಿತು....ಒಂದು ಸಂಪೂರ್ಣ ವ್ಯಾಕರಣವನ್ನು ಊಹಿಸಲು ಅಸಾಧ್ಯವಾಗುವಷ್ಟು ಸಣ್ಣ ಪರಿಮಿತಿಯಲ್ಲಿ ಪಾಣಿನಿಯು ಬರೆಯಲು ಸಮರ್ಥನಾಗಿದ್ದಾನೆ'' (ಅದೇ ಪು. 12) ಎಂಬ ಅಭಿಪ್ರಾಯ ಸಮರ್ಥನೀಯವಾಗಿದೆ.

ಅಷ್ಟಾಧ್ಯಾಯಿ ಮಾಹೇಶ್ವರ ಪದ್ಧತಿಯ ವ್ಯಾಕರಣ. ವರ್ಣಗಳ ನಿರೂಪಣೆಗೆ ಶಿವ ಸೂತ್ರಗಳನ್ನಿಲ್ಲಿ ಬಳಸಲಾಗಿದೆ. ಪ್ರತ್ಯಾಹಾರಗಳ ಬಳಕೆಗೆ ಅದೇ ಕಾರಣ. ಪಾರಿಭಾಷಿಕ ಪದಗಳಲ್ಲಿ ಸಾರ್ಥಕ (ವಿಭಕ್ತಿ, ಪ್ರತ್ಯಯ, ಸಮಾಸ, ಅವ್ಯಯ ಇತ್ಯಾದಿ) ಮತ್ತು ನಿರರ್ಥಕ (ಘ, ಲುಕ್, ಶ್ಲು ಇತ್ಯಾದಿ) ಎರಡು ವಿಧವಾದವುಗಳನ್ನೂ ಬಳಸಿಕೊಳ್ಳಲಾಗಿದೆ. ಅನುವೃತ್ತಿ, ಅನುಬಂಧ, ಪರಿಭಾಷಾ ಸೂತ್ರಗಳೂ ಅದರಲ್ಲಿವೆ.

ಅಷ್ಟಾಧ್ಯಾಯಿಯು ಸಾಹಿತ್ಯ ಸಂಸ್ಕೃತದ ವ್ಯಾಕರಣವನ್ನು ಮಾತ್ರವಲ್ಲ, ವೈದಿಕ ವ್ಯಾಕರಣಾಂಶಗಳನ್ನೂ ಬೋಧಿಸುತ್ತದೆ. ಅದರ ಸೂತ್ರಗಳಿಗೆ ಆಧಾರವಾಗಿರುವ ಭಾಷೆ ಮುಖ್ಯವಾಗಿ ಬ್ರಾಹ್ಮಣಗಳು, ಉಪನಿಷತ್ತುಗಳು ಮತ್ತು ಸೂತ್ರಗಳು. ಪಾಣಿನಿಯ ನಿರೂಪಣಾ ವಿಧಾನ ಕ್ಲಿಷ್ಟವೂ ಸಂಕೀರ್ಣವೂ ಆಗಿದೆ. ಆದರೆ ಅದರ ಶಾಸ್ತ್ರೀಯತೆಯ ಬಗ್ಗೆ ಎರಡಭಿಪ್ರಾಯವಿಲ್ಲ. ಅಷ್ಟಾಧ್ಯಾಯಿಯಲ್ಲಿ ತೋರಿಬರುವ ಸೂತ್ರರಚನಾ ಪದ್ಧತಿ ಮುಂದಿನ ವೈಯಾಕರಣರಿಗೆ ಮಾರ್ಗದರ್ಶಕವಾಯಿತು. ಒಟ್ಟಿನಲ್ಲಿ ''ಅಷ್ಟಾಧ್ಯಾಯಿ ಸಂಬದ್ಧವೂ ಸುವ್ಯವಸ್ಥಿತವೂ ಆಗಿದ್ದು ಕೃತ್ರಿಮವಾದರೂ ಕಲಾಪೂರ್ಣವಾಗಿದೆ'' (ಅದೇ ಪು. 13) ಎಂಬುದರಲ್ಲಿ ಅನುಮಾನವಿಲ್ಲ.

ಹಿಂದಿನ ತಲೆಮಾರಿನ ಅನೇಕ ಸಂಶೋಧಕರು ಪಾಣಿನಿಯು ಉಪದೇಶಿಸಿದ್ದು 'ಭಾಷೆ ಇಲ್ಲದ ವ್ಯಾಕರಣ' (ಬೆನೆಫ್) ಅಥವಾ 'ವ್ಯಾಕರಣ ಶುದ್ಧ ಸಂಸ್ಕೃತ' (ವ್ಹಿಟ್ನಿ) ಎಂದು ಆಕ್ಷೇಪಿಸಿದ್ದುಂಟು. ''ಧಾತುಪಾಠದಲ್ಲಿರುವ ಧಾತುಗಳು ಹೆಚ್ಚಾಗಿ ಕಲ್ಪಿತವೆಂದೂ ವಾಸ್ತವವಾಗಿ ಭಾಷೆಯಲ್ಲಿ ಇಲ್ಲದೇ ಇರುವ ವ್ಯಾಕರಣ ರೂಪಗಳನ್ನು ಪಾಣಿನಿ ಬೋಧಿಸಿದನೆಂದೂ'' (ಅದೇ.) ಮತ್ತೆ ಕೆಲವರು ಭಾವಿಸಿದ್ದುಂಟು. ''ಪಾಣಿನಿಗಿದ್ದ ವೇದಜ್ಞಾನದ ಬಗ್ಗೆ ಸಂದೇಹ ತಲೆದೋರಿದ್ದಿದೆ. ಆದರೆ ಯಾವುದೇ ಯುರೋಪಿಯನ್ನನು ಪಾಣಿನಿ ಬರೆದ ಮಾದರಿಯ ವ್ಯಾಕರಣವನ್ನು ಬರೆಯಲು ಶಕ್ತನಿರಲಿಲ್ಲ'' (ಅದೇ) ಎಂಬುದು ಗಮನಿಸಲೇ ಬೇಕಾದ ವಿಚಾರ.

## ಕಾತ್ಯಾಯನ

ಈ ಹೆಸರಿನ ಹಲವಾರು ವಿದ್ವಾಂಸರು ಆಗಿಹೋದಂತೆ ತಿಳಿದು ಬರುತ್ತದೆ. ಪಾಣಿನಿಯ ಸೂತ್ರಗಳಿಗೆ ವಾರ್ತಿಕಗಳನ್ನು ಬರೆದ ಕಾತ್ಯಾಯನನ ಕಾಲ ಹೆಚ್ಚುಕಡಿಮೆ ಕ್ರಿ.ಪೂ. 500—400 ಆಗಿರಬೇಕು (ಸಂ.ವ್ಯಾ.ವಿ.ಪು. 187). ವಾಜಸನೇಯಿ ಪ್ರಾತಿಶಾಖ್ಯದ ಕರ್ತೃವಾದ ಕಾತ್ಯಾಯನನಿಗಿಂತ ಈತನು ಭಿನ್ನನು. ವಾರ್ತಿಕವೆಂದರೆ ಉಕ್ತ, ಅನುಕ್ತ ಮತ್ತು ದುರುಕ್ತ ವಿಷಯಗಳನ್ನು ಚರ್ಚಿಸುವುದಾಗಿದೆ. ಕಾತ್ಯಾಯನನ ವಾರ್ತಿಕಗಳು ಅಷ್ಟಾಧ್ಯಾಯಿಯ ಕೆಲವು ಸೂತ್ರಗಳಿಗೆ (ಸುಮಾರು 1500) ಬರೆದ

ವಿಮರ್ಶಾತ್ಮಕ, ವಿವರಣಾತ್ಮಕ ಹಾಗೂ ಪ್ರಶಂಸಾತ್ಮಕ ಟಿಪ್ಪಣಿಗಳಾಗಿವೆ. ವಾರ್ತಿಕಗಳಲ್ಲಿ ತೋರುವ ಭಿನ್ನಾಭಿಪ್ರಾಯಗಳಿಗೆ ಪಾಣಿನಿ ಮತ್ತು ಕಾತ್ಯಾಯನನ ನಡುವಿನ ದೀರ್ಘಾವಧಿ ಕಾಲದಲ್ಲಿ ಭಾಷೆಯಲ್ಲಿ ತಲೆದೋರಿದ ವ್ಯತ್ಯಾಸಗಳೇ ಕಾರಣವಾಗಿರಬೇಕೆಂದು ತೋರುತ್ತದೆ.

ವಾರ್ತಿಕಗಳ ಸಂಖ್ಯೆ ಸುಮಾರು 4000. ಇವುಗಳಲ್ಲಿ ಕೆಲವು ಗದ್ಯದಲ್ಲಿವೆ. ಉಳಿದವು ಪದ್ಯದಲ್ಲಿವೆ. ಪಾರಿಭಾಷಿಕ ಪದಗಳಲ್ಲಿ ಕೆಲವೊಂದು ಮಾರ್ಪಾಟುಗಳೂ ವಾರ್ತಿಕಗಳಲ್ಲಿ ಗೋಚರಿಸುತ್ತವೆ. 'ಅಚ್' 'ಗೆ' 'ಸ್ವರ', 'ಹಲ್' ಗೆ 'ವ್ಯಂಜನ' 'ಅಕ್'ಗೆ 'ಸಮಾನಾಕ್ಷರ' ಇತ್ಯಾದಿ

**ಪತಂಜಲಿ**

ಈತ ಮಹಾಭಾಷ್ಯದ ಕರ್ತೃ. ಸುಮಾರು ಕ್ರಿ.ಪೂ. 2 ನೆಯ ಶತಮಾನ ಇವನ ಜೀವಿತ ಕಾಲವೆಂದು ತಿಳಿಯಲಾಗಿದೆ. ಪರಂಪರೆಯ ಪ್ರಕಾರ ಪತಂಜಲಿಯು ಆದಿಶೇಷನ ಅವತಾರವೆಂಬುದನ್ನು ಬಿಟ್ಟರೆ ಇವನ ಬಗ್ಗೆ ಮತ್ತೇನೂ ತಿಳಿಯದು. ವಾರ್ತಿಕಕಾರನಾದ ಕಾತ್ಯಾಯನನಿಗೂ ಪತಂಜಲಿಗೂ ನಡುವೆ ಗಮನಾರ್ಹವಾದ ಕಾಲಾವಧಿ ಕಳೆದಿರಬೇಕೆಂದು ವಿದ್ವಾಂಸರ ಅಭಿಪ್ರಾಯ.

ಭಾಷ್ಯ ಶೈಲಿಯಲ್ಲಿ ಹುಟ್ಟಿಕೊಂಡ ಕೃತಿಗಳಲ್ಲಿ ಮಹಾಭಾಷ್ಯ ಅತ್ಯಂತ ಪ್ರಾಚೀನವಾದುದು. ಇದು ವ್ಯಾಡಿಯ ಸಂಗ್ರಹದ (ಅನುಪಲಬ್ಧ) ಆಧಾರದಲ್ಲಿ ರಚಿತವಾದುದೆಂದು ತಿಳಿಯಲಾಗಿದೆ. ಮಹಾಭಾಷ್ಯದಲ್ಲಿ 8 ಅಧ್ಯಾಯಗಳು; ಪ್ರತಿ ಅಧ್ಯಾಯದಲ್ಲೂ 4 ಪಾದಗಳು, ಪ್ರತಿಪಾದದಲ್ಲೂ 9 ಆಹ್ನಿಕಗಳು. ಹೀಗೆ ಅಷ್ಟಾಧ್ಯಾಯಿಯ ಸೂತ್ರಗಳ ಸೂಕ್ಷ್ಮವಾದ ಅಧ್ಯಯನ ಮಹಾಭಾಷ್ಯದಲ್ಲಿದೆ. ಅದರ ಶೈಲಿಯು ನೇರವಾದ ಮಾತು ಕತೆಯಲ್ಲಿ ಮತ್ತು ಸರಸಸಲ್ಲಾಪಗಳಲ್ಲಿ ಕಾಣುವಂತಹ ವ್ಯಾವಹಾರಿಕ ಸಂಭಾಷಣೆಯ ಸ್ವರೂಪವನ್ನು ತಾಳಿದೆ. ಸಣ್ಣ ಸಣ್ಣ ವಾಕ್ಯಗಳನ್ನದರಲ್ಲಿ ಬಳಸಲಾಗಿದೆ. "ಸಾಮಾನ್ಯವಾಗಿ ಶಿಷ್ಯನು ಪ್ರಶ್ನೆ ಮಾಡುತ್ತಾನೆ; ಗುರುವಿನ ಸ್ಥಾನದಲ್ಲಿರುವವನು (ಆಚಾರ್ಯ ದೇಶೀಯ) ಮೇಲಿಂದಮೇಲೆ ಆ ಪ್ರಶ್ನೆಯನ್ನು ಉತ್ತರಿಸಲು ಯತ್ನಿಸುತ್ತಾನೆ; ಆದರೆ ತೊಂದರೆಗಳನ್ನೆಲ್ಲ ಬಿಡಿಸುವುದಿಲ್ಲ; ಆಗ ಒಬ್ಬ ಸಮರ್ಥ ಆಚಾರ್ಯನು ಪ್ರವೇಶಿಸಿ ಚರ್ಚಾಪನ್ನವಾದ ವಿಷಯವನ್ನು ವಿವರಿಸುತ್ತಾನೆ. ಸಂವಾದ ಶೈಲಿಯು ಎಷ್ಟೋ ವೇಳೆ ತುಂಬಾ ಮನೋಹರವಾಗಿರುತ್ತದೆ" (ಭಾ.ಸಾ.ಚ.ಪು. 15–16). ಮಹಾಭಾಷ್ಯದಲ್ಲಿ ಪಾಣಿನಿಯನ್ನು ಸರಿಯಾಗಿ ಸಮರ್ಥಿಸಲಾಗಿದೆ.

ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿ–ಈ ಮೂವರು ಸಂಸ್ಕೃತ ವ್ಯಾಕರಣದಲ್ಲಿ ಮುನಿತ್ರಯರೆಂದೇ ಪ್ರಸಿದ್ಧರಾಗಿದ್ದಾರೆ. ಮುಂದಿನ ವ್ಯಾಕರಣಕಾರರಲ್ಲಿ ಯಾರೂ ಇವರು ಮತ್ತು ಇವರ ಪೂರ್ವಸೂರಿಗಳು ಮಾಡಿಟ್ಟುದಕ್ಕೆ ಮೂಲತಃ ಹೊಸದಾದುದೇನನ್ನೂ ಸೇರಿಸಲಿಲ್ಲ. ಒಂದೋ ಪಾಣಿನಿಯ ಸೂತ್ರಗಳನ್ನು ವಾರ್ತಿಕಗಳು ಹಾಗೂ ಮಹಾಭಾಷ್ಯದ ಉಪಯೋಗದಿಂದ ಪುನರ್ವಿಂಗಡಿಸಿದರು. ಇಲ್ಲವೆ ಅವುಗಳನ್ನು ಮತ್ತೂ

ವಿವರಿಸಹೊರಟರು. ಕೆಲವರು ಸೂತ್ರಗಳಲ್ಲಿ ತಿದ್ದುಪಡಿಗಳನ್ನು ಮಾಡಿದರು. ಹೊಸ ವ್ಯಾಕರಣ ಸಂಪ್ರದಾಯವನ್ನು ನಿರ್ಮಿಸಹೊರಟವರು ಹೊಸ ವ್ಯಾಕರಣ ಪರಿಭಾಷೆಗಳನ್ನು ಬಳಸಿಕೊಂಡು ಹೊಸ ವ್ಯಾಕರಣ ಶಾಸ್ತ್ರವನ್ನು ಬರೆದಂತೆ ತೋರಿಸಿಕೊಂಡರಲ್ಲದೆ ಯಾರೂ ಹೊಸ ಭಾಷಾಶಾಸ್ತ್ರೀಯ ಸಂಗತಿಗಳನ್ನು ಸಮೀಕ್ಷಿಸಲಿಲ್ಲ. ವಿಂಟರ್ನಿಟ್ಸ್‌ನ ಪ್ರಕಾರ "ಅವರು ಯಾರೂ ಸಂಸ್ಕೃತದ ವ್ಯಾಕರಣವನ್ನು ಕುರಿತು ಬರೆಯಲಿಲ್ಲ. ಅವರು ಬರೆದುದು ವಿಶೇಷತಃ ಪಾಣಿನಿಯ ವ್ಯಾಕರಣದ ನಿಯಮಗಳನ್ನು ಕುರಿತೇ" (ಅದೇ. ಪು. 20).

ಮಹಾಭಾಷ್ಯದ ಅನಂತರ ಅಷ್ಟಾಧ್ಯಾಯಿಯ ಕುರಿತು ನಡೆದ ಚಿಂತನೆಯನ್ನು ಮುಖ್ಯವಾಗಿ ಮೂರು ಗುಂಪುಗಳಲ್ಲಿ ವಿಂಗಡಿಸಬಹುದು.

1. ಮಹಾಭಾಷ್ಯವನ್ನು ಅನುಸರಿಸಿದ ಟೀಕೆಗಳು
2. ಅಷ್ಟಾಧ್ಯಾಯಿಗೆ ಬರೆದ ವೃತ್ತಿಗಳು
3. ಅಷ್ಟಾಧ್ಯಾಯಿಯ ಪ್ರಕ್ರಿಯಾ ರೂಪಗಳು

## 1. ಮಹಾಭಾಷ್ಯವನ್ನು ಅನುಸರಿಸಿದ ಟೀಕೆಗಳು :

ಮಹಾಭಾಷ್ಯವನ್ನು ಅಧ್ಯಯನ ಮಾಡುವಾಗ ಎದುರಾದ ಕ್ಲಿಷ್ಟತೆಯನ್ನು ದೂರೀಕರಿಸಲು ಕೆಲವು ಟೀಕಾಗ್ರಂಥಗಳು ಹುಟ್ಟಿಕೊಂಡುವು. ಅವುಗಳಲ್ಲಿ ಭರ್ತೃಹರಿಯ (ಕ್ರಿ.ಶ. ಸುಮಾರು 500) ಮಹಾಭಾಷ್ಯ ದೀಪಿಕೆ, ವಾಕ್ಯಪದೀಯ, ಕೈಯಟನ (ಕ್ರಿ.ಶ. ಸು. 11 ನೆಯ ಶತಮಾನದ ಪೂರ್ವಾರ್ಧ) ಪ್ರದೀಪ, ಭಟ್ಟೋಜಿ ದೀಕ್ಷಿತನ (ಕ್ರಿ.ಶ. 1600-1650) ಶಬ್ದಕೌಸ್ತುಭ ಪ್ರಧಾನವಾಗಿವೆ.

## 2. ಅಷ್ಟಾಧ್ಯಾಯಿಯ ವೃತ್ತಿಗಳು

ಭಾಷ್ಯಕ್ಕೂ ವೃತ್ತಿಗೂ ಅಂತರವಿದೆ. ವೃತ್ತಿಯಲ್ಲಿ ಲೇಖಕ ಮೂಲಸೂತ್ರಗಳನ್ನು ತಾನು ತಿಳಿದುಕೊಂಡಂತೆ ವಿವರಿಸುತ್ತಾನೆ. ಭಾಷ್ಯದಲ್ಲಾದರೆ ಮೂಲ ಗ್ರಂಥಕಾರನ ಹೇಳಿಕೆ ಮತ್ತು ತನ್ನ ಹೇಳಿಕೆಗಳ ಜೊತೆಯಲ್ಲಿ ಬೇರೆ ವಿದ್ವಾಂಸರ ಅಭಿಪ್ರಾಯಗಳ ವಿವೇಚನೆಯೂ ಇರುತ್ತದೆ. ಕೊಡುವ ಆಧಾರದ ವ್ಯಾಪಕತೆಯೇ ಭಾಷ್ಯವನ್ನು ವೃತ್ತಿಯಿಂದ ಬೇರ್ಪಡಿಸುತ್ತದೆ.

### ಕಾಶಿಕಾ

ಭರ್ತೃಹರಿಯ ಭಾಗವೃತ್ತಿ ಅನುಪಲಬ್ಧವಾಗಿರುವುದರಿಂದ ಜಯಾದಿತ್ಯ ಮತ್ತು ವಾಮನರ ಕಾಶಿಕಾವೃತ್ತಿಯೇ ಅಷ್ಟಾಧ್ಯಾಯಿಯ ವೃತ್ತಿಗಳಲ್ಲಿ ಅತ್ಯಂತ ಪ್ರಾಚೀನವೂ ಮಹತ್ವಪೂರ್ಣವೂ ಆದುದಾಗಿದೆ. ಕಾಶಿಕಾವೃತ್ತಿಯ ರಚನಾ ಕಾಲ ಕ್ರಿ. ಶ. 600-

650. ಜಯಾದಿತ್ಯ ಮತ್ತು ವಾಮನ, ಇಬ್ಬರೂ ಕೂಡಿ ಅದನ್ನು ಬರೆದಂತೆ ಹೇಳಲಾಗುತ್ತಿದೆ. ಜಯಾದಿತ್ಯನು ಮೊದಲ 5 ಅಧ್ಯಾಯಗಳಿಗೂ ವಾಮನನು ಮುಂದಿನ ಮೂರು ಅಧ್ಯಾಯಗಳಿಗೂ ವೃತ್ತಿಯನ್ನು ಬರೆದಿರಬೇಕೆಂಬ ಹೇಳಿಕೆಯೂ ಇದೆ. "ಸರಳವಾದ ವಿವರಣೆ, ಎಲ್ಲಾ ಅನುವೃತ್ತಿಗಳ ಉಲ್ಲೇಖ, ಪ್ರತಿ ನಿಯಮಕ್ಕೂ ಉದಾಹರಣೆ ಕೊಡುವುದು, ಚಂದ್ರಗೋಮಿ ಸೂಚಿಸಿದ್ದ ಮೇಲ್ಪಾಟುಗಳೆಲ್ಲವನ್ನೂ ಕಾಶಿಕಾ ವೃತ್ತಿ ಒಳಗೊಂಡಿದೆ" (ಪ್ರಾ.ಕ.ವ್ಯಾ. ಪು. 20–21).

ಜಿನೇಂದ್ರ ಬುದ್ಧಿಯ (ಕ್ರಿ. ಶ. 750) ನ್ಯಾಸ ಅಥವಾ ಕಾಶಿಕಾ ವಿವರಣ ಪಂಚಿಕಾ, ಹರದತ್ತನ (ಕ್ರಿ. ಶ. 1100) ಪದಮಂಜರಿ, ಪುರುಷೋತ್ತಮ ದೇವನ (ಕ್ರಿ. ಶ. 1140) ಭಾಷಾವೃತ್ತಿ ಮೊದಲಾದವು ಉಳಿದ ಕೆಲವು ಮಹತ್ವಪೂರ್ಣವಾದ ವೃತ್ತಿಗಳು.



### 3. ಅಷ್ಟಾಧ್ಯಾಯಿಯ ಪ್ರಕ್ರಿಯಾ ರೂಪಗಳು

ರೂಪಸಿದ್ಧಿಯನ್ನು ಗುರಿಯಾಗಿಟ್ಟುಕೊಂಡು ರಚಿತವಾದ ಕೃತಿಗಳಿಗೆ ಪ್ರಕ್ರಿಯಾ ಗ್ರಂಥಗಳೆಂದು ಹೆಸರು. ಪ್ರಕ್ರಿಯೆಯೆಂದರೆ ರೂಪಸಿದ್ಧಿ ಪ್ರಕ್ರಿಯೆ (word formation). ಮಹಾಭಾಷ್ಯದ ಚಿಂತನ ಪದ್ಧತಿಯಲ್ಲಾಗಲಿ ವೃತ್ತಿ ಗ್ರಂಥಗಳ ವ್ಯಾಖ್ಯಾನ ಪದ್ಧತಿಯಲ್ಲಾಗಲಿ ರೂಪಸಿದ್ಧಿ ಪ್ರಕ್ರಿಯೆಗೆ ಹೇಳಿಕೊಳ್ಳುವಂತಹ ಮಹತ್ವ ದೊರಕಿಲ್ಲ. ರೂಪಸಿದ್ಧಿಯೇ ವ್ಯಾಕರಣದ ಪರಮಗುರಿಯಾಗಿರದೆ ವ್ಯಾಕರಣದ ತತ್ವವನ್ನು ಅರಿತುಕೊಳ್ಳುವುದು ಅಲ್ಲಿನ ಮುಖ್ಯ ಉದ್ದೇಶವಾಗಿತ್ತು. ವ್ಯಾಕರಣ ತತ್ವವನ್ನು ಅರಿತುಕೊಂಡರೆ ರೂಪಸಿದ್ಧಿ ತನ್ನಿಂದ ತಾನಾಗಿಯೆ ಅರಿವಿಗೆ ಬರುತ್ತದೆಂಬ ನಂಬಿಕೆ ಪ್ರಾಚೀನರದಾಗಿತ್ತು. ಹಾಗಾಗಿ ರೂಪಸಿದ್ಧಿಯ ಪ್ರಯತ್ನವನ್ನು ಮಹಾಭಾಷ್ಯ ಹಾಗೂ ಅದರ ನಿಕಟವರ್ತಿ ಗ್ರಂಥಗಳಲ್ಲಿ ಕಾಣಲಡೆಯಿಲ್ಲ.

ಅಷ್ಟಾಧ್ಯಾಯಿಯು ಕೆಲವೊಂದು ಮೌಲಿಕ ತತ್ವಗಳ ಮೇಲೆ ಪ್ರತಿಷ್ಠಿತವಾಗಿದ್ದರೂ ಅದರಲ್ಲಿ ಮಧ್ಯೆ ಮಧ್ಯೆ ವಿಷಯಾಂತರ ಗೋಚರಿಸುತ್ತದೆ. ಪಾಣಿನಿಯ ಪ್ರಧಾನ ಉದ್ದೇಶವಾದ ಸಂಕ್ಷಿಪ್ತತೆಯಿಂದಾಗಿ ಒಂದಕ್ಕೊಂದು ಸಂಬಂಧವೇ ಇಲ್ಲದ ಸೂತ್ರಗಳು ಕೂಡ ಒಂದೆಡೆ ಸೇರಿಕೊಂಡದ್ದುಂಟು. ಒಂದೇ ವಿಚಾರ ಹಲವಾರೆಡೆಗಳಲ್ಲಿ ಹಂಚಿ ಹೋದುದೂ ಉಂಟು. ಉದಾಹರಣೆಗಾಗಿ ಸಮಾಸ ವಿಚಾರವನ್ನು ಪರಿಶೀಲಿಸಬಹುದು. ಎರಡನೇ ಅಧ್ಯಾಯದಲ್ಲಿ ಸಮಾಸಗಳ ವಿವರಣೆಯಿದೆ. ಸಮಾಸಾಂತ ಪ್ರತ್ಯಯ ವಿಚಾರ ಪಂಚಮಾಧ್ಯಾಯದಲ್ಲಿದೆ. ಪ್ರಥಮಾಧ್ಯಾಯದ ದ್ವಿತೀಯ ಪಾದ ದ್ವಿತೀಯಾಧ್ಯಾಯದ ಚತುರ್ಥಪಾದ, ಷಷ್ಠಾಧ್ಯಾಯದ ತೃತೀಯ ಪಾದಗಳಲ್ಲೂ ಸಮಾಸದ ವಿವರಣೆ ಬರುತ್ತದೆ. ಎಂದರೆ ಅಷ್ಟಾಧ್ಯಾಯಿಯನ್ನು ಪೂರ್ಣವಾಗಿ ಅಧ್ಯಯನ ಮಾಡದೆ ವ್ಯಾಕರಣದ ಯಾವೊಂದು ವಿಷಯವನ್ನೂ ತಿಳಿಯಲು ಸಾಧ್ಯವಾಗದು ಎಂದಭಿಪ್ರಾಯ. ಹಾಗಾಗಿ ಅಷ್ಟಾಧ್ಯಾಯಿಯ ಅಧ್ಯಯನ ಕಾಲಕ್ರಮೇಣ ಕ್ಲಿಷ್ಟ

ವೆನಿಸಿತು, ಅದನ್ನು ಪರಿಹರಿಸುವ ದಿಸೆಯಲ್ಲಿ ನಡೆದ ಪ್ರಯತ್ನದ ಫಲವಾಗಿ ಪ್ರಕ್ರಿಯಾಗ್ರಂಥಗಳು ಹುಟ್ಟಿಕೊಂಡುವು. ಪ್ರಕ್ರಿಯಾ ಗ್ರಂಥಗಳು ಪ್ರಕ್ರಿಯೆಗನುಸಾರ ವಾಗಿ ರಚಿತವಾಗಿರುವುದರಿಂದ ವಿದ್ಯಾರ್ಥಿ ಅಭ್ಯಾಸ ಮಾಡಿದಷ್ಟು ಭಾಗವನ್ನು ತಿಳಿದುಕೊಳ್ಳಲು ಸಮರ್ಥನಾಗುತ್ತಾನೆ. ಪ್ರಾತಿಶಾಖ್ಯಗಳು, ಕಾತಂತ್ರ ಮೊದಲಾದವು ಪ್ರಕ್ರಿಯಾ ಪದ್ಧತಿಯ ಗ್ರಂಥಗಳು. ಮೂಲದಲ್ಲಿ ಪ್ರಕ್ರಿಯಾ ಗ್ರಂಥಗಳಲ್ಲದ ಗ್ರಂಥ ಗಳ ಸೂತ್ರಗಳನ್ನು ಪ್ರಕ್ರಿಯೆಗನುಸಾರವಾಗಿ ಮರುಹೊಂದಾಣಿಕೆ ಮಾಡುವ ಪ್ರಯತ್ನವೂ ನಡೆಯಿತು. ರೂಪಸಿದ್ಧಿಗಾಗಿ, ಪ್ರತಿಯೊಂದು ಪ್ರಯೋಗದ ಸಾಧುತ್ವಾಸಾಧುತ್ವ ನಿರ್ಣಯಕ್ಕಾಗಿ ಬೇರೆ ಬೇರೆ ಸ್ಥಾನಗಳಿಂದ ಸೂತ್ರಗಳನ್ನೆತ್ತಿಕೊಂಡು ಒಂದೆಡೆ ಕೊಡು ವುದರ ಮೂಲಕ ಪ್ರಕ್ರಿಯಾ ಗ್ರಂಥಗಳು ನಿರ್ಮಾಣಗೊಂಡುವು. ಅಷ್ಟಾಧ್ಯಾಯಿಯನ್ನು ಈ ವಿಧವಾಗಿ ಮಾರ್ಪಡಿಸಿಕೊಂಡ ಪ್ರಯತ್ನದ ಮೊದಲ ಫಲವೇ ರೂಪಾವತಾರ.

**ರೂಪಾವತಾರ**

ರೂಪಾವತಾರದ ಕರ್ತೃ ಬೌದ್ಧ ಪಂಡಿತನಾದ ಧರ್ಮಕೀರ್ತಿ. ಇದರ ರಚನಾ ಕಾಲ ಕ್ರಿ. ಶ. 1090 (ಸಂ. ವ್ಯಾ. ವಿ. ಪು. 11). ಹೊಸತೊಂದು ಮಾರ್ಗವನ್ನು ರೂಪೀ ಕರಿಸುವ ದೃಷ್ಟಿಯಿಂದ ಈ ಗ್ರಂಥಕ್ಕೆ ತನ್ನದೇ ಆದ ಮಹತ್ವವಿದೆ. "It is thus evidently one of the earliest attempts to present the grammatical aphorisms of Panini in their practical application to the various linguistic processes of Phonetic modification, inflexion and word formation as arranged in an intelligible logical order" (Roopavatara : Preface. P. 1.) ಎಂಬ ಅಭಿಪ್ರಾಯ ಸಮರ್ಪಕವಾಗಿದೆ. ಪಾಣಿನಿಯ ಮತವನ್ನು ಪ್ರಕ್ರಿಯಾಕ್ರಮದಲ್ಲಿ ತೋರಿಸಿಕೊಡುವುದು ಅಥವಾ ಪ್ರಕ್ರಿಯೆ ಗಳನ್ನು ಪಾಣಿನಿ ಮತಕ್ಕೆ ಅನುಸಾರವಾಗಿ ಎತ್ತಿ ತೋರಿಸುವುದು ಈ ಪ್ರಯತ್ನದ ಉದ್ದೇಶ.

ರೂಪಾವತಾರದಲ್ಲಿ ವಿಷಯ ವಿಂಗಡಣೆ ಪ್ರತ್ಯೇಕವಾಗಿದೆ. ಅನುಕ್ರಮವಾಗಿ ಸಂಜ್ಞಾ, ಸಂಹಿತೆ, ವಿಭಕ್ತಿ, ಅವ್ಯಯ, ಸ್ತ್ರೀಪ್ರತ್ಯಯ, ಕಾರಕ, ಸಮಾಸ, ತದ್ಧಿತ, ಧಾತು ಪ್ರತ್ಯಯ ಪಂಚಿಕಾ ಎಂಬ ಅವತಾರಗಳು (ಪ್ರಕರಣಗಳು) ಇದರಲ್ಲಿವೆ. ಈ ವಿಷಯ ವಿಂಗಡಣೆಯ ಮೇಲೆ ಕಾತಂತ್ರದ ಪ್ರಭಾವವಿದೆ.

**ರೂಪಮಾಲೆ**

ವಿಮಲ ಸರಸ್ವತಿ ಬರೆದ ರೂಪಮಾಲೆ ರೂಪಾವತಾರದ ಹಾದಿಯಲ್ಲೇ ನಡೆದಿದೆ, ಹಾಗಿದ್ದೂ ಅದಕ್ಕಿಂತ ಹೆಚ್ಚು ಪ್ರಕರಣಗಳನ್ನೂ ಹೊಂದಿದೆ. ಇದು ರೂಪಾವತಾರಕ್ಕಿಂತ ಈಚಿನ ಕೃತಿಯಾಗಿರುವುದರಿಂದ ಅಷ್ಟಾಧ್ಯಾಯಿಯ ಪುನರಾವೃತ್ತಿಗಳಲ್ಲಿ "ಅತ್ಯಂತ

ಮುಂಚಿನದು ವಿಮಲ ಸರಸ್ವತಿಯ ರೂಪಮಾಲಾ" (ಪ್ರಾ.ಕ.ವ್ಯಾ.ಪು. 22) ಎಂಬ ಅಭಿಪ್ರಾಯ ಸಮರ್ಪಕವಾಗದು.

## ಪ್ರಕ್ರಿಯಾ ಕೌಮುದಿ

ಅಷ್ಟಾಧ್ಯಾಯಿಯ ಪ್ರಕ್ರಿಯಾ ಗ್ರಂಥಗಳಲ್ಲಿ ಅತ್ಯಂತ ಪ್ರಧಾನವಾದುದು ಪ್ರಕ್ರಿಯಾ ಕೌಮುದಿ. ಇದರ ಕರ್ತೃ ರಾಮಚಂದ್ರ. ಈತನ ಕಾಲ ಕ್ರಿ.ಶ. 15ನೆಯ ಶತಮಾನದ ಆದಿಭಾಗ. ಅಷ್ಟಾಧ್ಯಾಯಿಯ ಪ್ರಕ್ರಿಯಾತ್ಮಕ ರೂಪಗಳಲ್ಲಿ ಹೆಚ್ಚು ಜನಪ್ರಿಯವಾದ ಸಿದ್ಧಾಂತ ಕೌಮುದಿಗೆ ಸರಿಯಾದ ಅಡಿಪಾಯವನ್ನೊದಗಿಸಿದ ಗ್ರಂಥವೆ ಪ್ರಕ್ರಿಯಾ ಕೌಮುದಿ. ಇದರ ಮೇಲೆ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡಿದ್ದು ಅವುಗಳಲ್ಲಿ ಶೇಷ ಕೃಷ್ಣನ ಪ್ರಕ್ರಿಯಾ ಪ್ರಕಾಶ ಉಲ್ಲೇಖಾರ್ಹವಾಗಿದೆ.

ಭಟ್ಟೋಜಿ ದೀಕ್ಷಿತನ (ಕ್ರಿ.ಶ. 1625) ಸಿದ್ಧಾಂತ ಕೌಮುದಿ, ನಾರಾಯಣ ಭಟ್ಟನ (ಕ್ರಿ.ಶ. 17ನೆಯ ಶತಕದ ಪೂರ್ವಾರ್ಧ) ಪ್ರಕ್ರಿಯಾ ಸರ್ವಸ್ವ ಈ ಕ್ಷೇತ್ರದಲ್ಲಿ ಹೆಸರಿಸತಕ್ಕ ಇತರ ಕೃತಿಗಳು.

ಪ್ರಕ್ರಿಯಾತ್ಮಕ ಗ್ರಂಥಗಳಿಂದ ಲಾಭಹಾನಿಗಳೆರಡೂ ಸಂಭವಿಸಿವೆ. ಇದರಿಂದಾಗಿ ರೂಪಸಿದ್ಧಿಯ ಕೆಲಸ ಅತ್ಯಂತ ಸುಗಮವೆನಿಸಿದೆ. ಆದರೆ ಅಭ್ಯಾಸಿ ವೃತ್ತಿಯ ಕಡೆಗೆ ಹೆಚ್ಚು ಗಮನ ಕೊಡಬೇಕಾಗಿ ಬಂತು. ಯಾವುದೇ ಒಂದು ಸೂತ್ರವನ್ನು ಪೂರ್ಣವಾಗಿ ತಿಳಿದುಕೊಳ್ಳುವುದರ ಬದಲು ಸಂಧಿ, ಸಮಾಸ, ತಿಙಂತ ಪ್ರಕರಣಗಳಿಗೆ ಹೊಂದಿಕೊಂಡು ಎಷ್ಟೋ ಅಷ್ಟು ಅರ್ಥಯಿಸುವ ಅಭ್ಯಾಸ ರೂಢಿಗೆ ಬಂತು. ಇದರಿಂದಾಗಿ ತತ್ತ್ವವನ್ನು ಸಮಗ್ರವಾಗಿ ತಿಳಿದುಕೊಳ್ಳಬೇಕೆಂಬ ದೃಷ್ಟಿಗೆ ಪ್ರಕ್ರಿಯಾತ್ಮಕ ವ್ಯವಸ್ಥೆ ಮಾರಕವೆಂದೇ ವಿದ್ವಾಂಸರ ಅಭಿಪ್ರಾಯ.

## ಪಾಣಿನ್ಯುತ್ತರ ಯುಗ

ಪಾಣಿನ್ಯುತ್ತರ ಯುಗದಲ್ಲಿ ತೋರಿ ಬರುವ ವ್ಯಾಕರಣ ವಿಕಾಸದಲ್ಲಿ ಅತಿ ಸ್ಪಷ್ಟವಾದ ಎರಡು ಪ್ರವೃತ್ತಿಗಳು ಗೋಚರಿಸುತ್ತವೆ. ಅವುಗಳಲ್ಲಿ ಒಂದು ಪಾಣಿನಿ ಪೂರ್ವ ಯುಗಕ್ಕೆ ಸಂಬಂಧಪಟ್ಟುದಾದರೆ ಇನ್ನೊಂದು ಅಷ್ಟಾಧ್ಯಾಯಿಯೊಡನೆ ಸಂಬಂಧವಿರಿಸಿಕೊಂಡಿದೆ. ಕಾತಂತ್ರ, ಸಾರಸ್ವತ ಮೊದಲಾದ ವ್ಯಾಕರಣಗಳು ಮೊದಲನೆಯ ಪ್ರವೃತ್ತಿಯ ಪ್ರತಿನಿಧಿಗಳಾದರೆ ಚಾಂದ್ರ, ಸರಸ್ವತೀಕಂಠಾಭರಣ ಮತ್ತು ಸಿದ್ಧಹೇಮಶಬ್ದಾನುಶಾಸನ ಮತ್ತಿನದಕ್ಕೆ ನಿದರ್ಶನಗಳು.

ಪಾಣಿನಿ ಪೂರ್ವಯುಗದಲ್ಲಿದ್ದ ಸವಿಭಾಗ ಪದ್ಧತಿಯ ಐಂದ್ರ ಮತ್ತು ಮಹೇಶ್ವರ ಸಂಪ್ರದಾಯಗಳನ್ನು ಹಿಂದೆಯೇ ವಿಚಾರಿಸಲಾಗಿದೆಯಷ್ಟೆ. ಐಂದ್ರ ಸಂಪ್ರದಾಯದ ಮುಂದುವರಿಕೆಯನ್ನು ಪಾಣಿನ್ಯುತ್ತರ ಯುಗದಲ್ಲಿ ಕಾಣುತ್ತೇವೆ. ಬಹುಶಃ ಪ್ರಾಚ್ಯದೇಶಗಳಲ್ಲಿ ಕೆಲ ವೈಯಾಕರಣರು ಐಂದ್ರ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರಬೇಕು.

ಜೊತೆಯಲ್ಲಿ ಅಷ್ಟಾಧ್ಯಾಯಿಯಿಂದ ಸಾಕಷ್ಟು ಪ್ರಯೋಜನ ಹೊಂದಿ ಆ ಸಂಪ್ರದಾಯ ವನ್ನು ಪರಿಪುಷ್ಟಗೊಳಿಸುತ್ತಿದ್ದಿರಬೇಕು. ಅದರ ಪರಿಣಾಮವಾಗಿ ಕಾತಂತ್ರ ವ್ಯಾಕರಣದ ಉದಯವಾಗಿರಬೇಕು.

ಅಷ್ಟಾಧ್ಯಾಯಿಯ ಅಭ್ಯಾಸ ಪ್ರಚಲಿತವಿದ್ದ ಕಾಲದಲ್ಲಿ ಇತರ ಕೆಲವು ವ್ಯಾಕರಣ ಗ್ರಂಥಗಳು ಹುಟ್ಟಿಕೊಳ್ಳಲು ಪ್ರಬಲವಾದ ಕೆಲವು ಕಾರಣಗಳಿದ್ದುವು. ವಾರ್ತಿಕ, ಮಹಾಭಾಷ್ಯ, ವೃತ್ತಿಗಳಿಂದಾಗಿ ಅಷ್ಟಾಧ್ಯಾಯಿಯಲ್ಲಿ ಒಂದಲ್ಲ ಒಂದು ವಿಧವಾದ ಕೊರತೆಗಳು ಎದ್ದು ಕಾಣತೊಡಗಿದವು. ಪಾಣಿನಿ ತನ್ನ ಹಿಂದಿನ ವ್ಯಾಪಕವಾದ ಸ್ವೀಕೃತ ತಥ್ಯಗಳನ್ನು ಅವಗಣಿಸಿದ್ದನೆಂದು ಕೆಲವರಿಗೆ ಅನ್ನಿಸಿದರೆ, ಪಾಣಿನಿಯ ವ್ಯಾಕರಣ ವೈದಿಕ ಭಾಷೆ ಮತ್ತು ಛಾಂದಸ ಸಾಹಿತ್ಯವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡಿದೆ ಎಂಬ ಆಕ್ಷೇಪವೂ ಬಂತು. ಪಾಣಿನಿಯ ಮಾರ್ಗ ಅತ್ಯಂತ ಜಟಿಲವೆಂಬ ಅನುಭವವೂ ಕೆಲವರಿಗಾಯಿತು. ಇವೆಲ್ಲವುಗಳ ಪರಿಣಾಮವಾಗಿ ಬೇರೆ ಬೇರೆ ವ್ಯಾಕರಣಗಳು ಮೂಡಿ ಬಂದುವು. ಅಷ್ಟಾಧ್ಯಾಯಿಯ ಕೊರತೆಗಳನ್ನು ನೀಗಲು ಕೈಗೊಂಡ ಪ್ರಯತ್ನದ ಮೊದಲ ಫಲವೆ ಚಾಂದ್ರ ವ್ಯಾಕರಣ. ಸರಸ್ವತೀ ಕಂಠಾಭರಣ ಮತ್ತು ಸಿದ್ಧಹೇಮ ಶಬ್ದಾನುಶಾಸನಗಳಲ್ಲಿ ಈ ಪ್ರಯತ್ನ ಮತ್ತಷ್ಟು ಸಫಲವಾಗಿದೆ. ಸರಸ್ವತೀ ಕಂಠಾಭರಣ ಈ ಪರಂಪರೆಯ ಸರ್ವೋತ್ಕೃಷ್ಟ ಕೃತಿಯಾಗಿದೆ (ಸಂ.ವ್ಯಾ.ವಿ. ಪು. 336).

ಕಾತಂತ್ರ, ಚಾಂದ್ರ, ಜೈನೇಂದ್ರ, ಶಾಕಟಾಯನ, ಸರಸ್ವತೀ ಕಂಠಾಭರಣ, ಸಾರಸ್ವತ, ಸಿದ್ಧಹೇಮಶಬ್ದಾನುಶಾಸನ—ಇವು ಪಾಣಿನ್ಯುತ್ತರ ಯುಗದ ಮಹತ್ವ ಪೂರ್ಣವಾದ ವ್ಯಾಕರಣ ಕೃತಿಗಳು.

## ಕಾತಂತ್ರ

'ತಂತ್ರ' ವೆಂದರೆ ಪ್ರಕ್ರಿಯಾಗ್ರಂಥ (ಅದೇ ಪು. 340) ಎಂಬರ್ಥವಿದ್ದಿರಬೇಕು. ಹಾಗಾದರೆ ಕಾತಂತ್ರವೆಂದರೆ ಲಘು ಪ್ರಕ್ರಿಯಾಗ್ರಂಥ ಎಂದಾಗುತ್ತದೆ. ಕಾತಂತ್ರ ವ್ಯಾಕರಣವು ಒಂದು ಪ್ರಕ್ರಿಯಾತ್ಮಕ ವ್ಯಾಕರಣ. ಇದರ ಕರ್ತೃ ಶರ್ವವರ್ಮನೆಂದು ತಿಳಿಯಲಾಗಿದೆ. ಶಾತವಾಹನ ರಾಜನಿಗೆ ಸುಲಭವಾಗಿ ಸಂಸ್ಕೃತ ವ್ಯಾಕರಣವನ್ನು ಬೋಧಿಸಲು ಶರ್ವವರ್ಮನು ರಚಿಸಿದ ವ್ಯಾಕರಣವೆ ಕಾತಂತ್ರವೆಂದು ಕಥೆಯಿದೆ. ಕಾತಂತ್ರಕ್ಕೆ ಕುಮಾರ ವ್ಯಾಕರಣ ಮತ್ತು ಕಲಾಪ ವ್ಯಾಕರಣ ಎಂಬೆರಡು ಬೇರೆ ಹೆಸರು ಗಳೂ ಇವೆ. ಶರ್ವವರ್ಮನು ಕುಮಾರನ ಅನುಗ್ರಹದಿಂದ ಇದನ್ನು ರಚಿಸಿರುವುದರಿಂದ ಕುಮಾರ ವ್ಯಾಕರಣವೆಂಬ ಹೆಸರು ಬಂದಿತೆಂದೂ ಕುಮಾರಸ್ವಾಮಿ ಶರ್ವವರ್ಮನಿಗೆ ಪ್ರತ್ಯಕ್ಷನಾಗುವಾಗ ಅವನ ಕಣ್ಣಿಗೆ ಮಯೂರದ ಕಲಾಪದ ಮೇಲೆ "ಸಿದ್ಧೋ ವರ್ಣ ಸಮಾಮ್ನಾಯಃ" ಎಂಬ ಕಾತಂತ್ರ ವ್ಯಾಕರಣದ ಮೊದಲ ಸೂತ್ರ ಗೋಚರಿಸಿದುದರಿಂದ ಅದಕ್ಕೆ ಕಲಾಪ ವ್ಯಾಕರಣವೆಂಬ ಹೆಸರು ಬಂದಿತೆಂದೂ ಕಥೆಗಳಿವೆ. ಈ ಕಥೆಗಳನ್ನು ಯಥಾವತ್ತಾಗಿ ಒಪ್ಪಿಕೊಳ್ಳುವುದು ಅಸಾಧ್ಯ. ಆದರೆ ಇಲ್ಲಿ ಗಮನಾರ್ಹ ಅಂಶ

ವೊಂದಿದೆ. ಬಹುಶಃ ಹಿಂದೊಂದು ಬೃಹತ್ ತಂತ್ರವಿದ್ದು ಶರ್ವವರ್ಮನು ಅದನ್ನು ಲಘುವಾಗಿಸಿ ಈಗಿನ ಕಾತಂತ್ರ ರೂಪಕ್ಕೆ ಇಳಿಸಿರಬಹುದು. ಕಥೆಯಲ್ಲಿ ಶಾತವಾಹನ ರಾಜನ ಉಲ್ಲೇಖ ಹಾಗೂ ಶೂದ್ರಕನ ಪದ್ಮಪ್ರಾಭೃತಕ ಭಾಣದಲ್ಲಿ ಕಾತಂತ್ರದ ಪ್ರಸ್ತಾಪವಿರುವುದರಿಂದ ಬಹುಶಃ ಕಾತಂತ್ರವು ಕ್ರಿ. ಪೂ. 150ರ ಹಿಂದೆ ಹುಟ್ಟಿರ ಬಹುದು (ಅದೇ ಪು. 347).

ಕಾತಂತ್ರವನ್ನು ಜೈನವ್ಯಾಕರಣವೆಂದು ಹೇಳುವುದುಂಟು. ಭಾವಸೇನಮುನಿ ತನ್ನ "ರೂಪಮಾಲೆ" ಎಂಬ ಟೀಕೆಯಲ್ಲಿ ಕಾತಂತ್ರದ ಕರ್ತೃವನ್ನು ಜೈನನೆಂದು ಸ್ಥಾಪಿಸಲು ಪ್ರಯತ್ನಿಸಿದ್ದಾನೆ (ಜೈನ ಸಿದ್ಧಾಂತ ಭಾಸ್ಕರ 3-2), ಕೌಮಾರ ಮತ್ತು ಕಾಲಾಪಕ ಶಬ್ದಗಳಿಗೆ ಜೈನಪರವಾಗಿ ಅರ್ಥವನ್ನು ಜೋಡಿಸುವ ಪ್ರಯತ್ನವನ್ನು ಕೈ ಗೊಂಡಿದ್ದಾನೆ. ಆದರೆ ಕಾತಂತ್ರ ಯಾವುದೇ ಧರ್ಮದ ಲೇಪವಿಲ್ಲದ ಕೃತಿಯೆಂಬುದನ್ನು ಮರೆಯಬಾರದು. ಶಾತವಾಹನ ರಾಜನ ಉಲ್ಲೇಖವಿರುವುದರಿಂದ ಶರ್ವವರ್ಮನು ವೈದಿಕ ಮತಾವಲಂಬಿಯಾಗಿದ್ದಿರಬಹುದೆಂದು ಊಹಿಸಬಹುದು. ಕೌಮಾರ ವ್ಯಾಕರಣ ಎಂಬುದಕ್ಕೆ ಬಾಲಕರ ವ್ಯಾಕರಣ ಎಂಬರ್ಥವೂ ಇದೆ. ಒಟ್ಟಿನಲ್ಲಿ ಕಾತಂತ್ರದ ಸಂಬಂಧ ವಾಗಿ ಜನಜನಿತವಾಗಿರುವ ಕಥೆಗಳು ಅಷ್ಟಾಧ್ಯಾಯಿಯ ಇದಿರಿನಲ್ಲಿ ಅದರ ಸಂಕ್ಷಿಪ್ತತೆ ಮತ್ತು ಸರಳತೆಯನ್ನು ಎತ್ತಿತೋರಿಸುವ ಸಲುವಾಗಿ ಹುಟ್ಟಿಕೊಂಡಿರಬೇಕೆಂದು ತೋರುತ್ತದೆ.

ಕಾತಂತ್ರದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿವೆ. ಅಷ್ಟಾಧ್ಯಾಯಿಯಂತೆ ಎಲ್ಲ ಅಧ್ಯಾಯಗಳಲ್ಲೂ ಪಾದಗಳ ಸಂಖ್ಯೆ ಸಮಾನವಾಗಿಲ್ಲ. ಹಾಗಾಗಿ ಅದರಲ್ಲಿ ಒಟ್ಟು 25 ಪಾದಗಳಿವೆ. ಅಧ್ಯಾಯಗಳ ಪಾದಗಳು ವಿಷಯಾನುಸಾರ ಜೋಡಿಸಲ್ಪಟ್ಟಿವೆ. ಇದರಿಂದ ಕೆಲವು ಪಾದಗಳು ದೀರ್ಘವಾಗಿಯೂ ಇನ್ನು ಕೆಲವು ಹ್ರಸ್ವವಾಗಿಯೂ ಇವೆ. ಒಂದು ಪಾದದಲ್ಲಿ ಕಡಿಮೆಯೆಂದರೆ 4 ಸೂತ್ರಗಳು, ಹೆಚ್ಚೆಂದರೆ 116 ಸೂತ್ರಗಳೂ ಇವೆ. ವಿಷಯಗಳ ಜೋಡಣೆ ಪ್ರಕ್ರಿಯಾನುಸಾರವಿದೆ. ಸಂಜ್ಞಾ, ಸಂಧಿ, ನಾಮ, ಕಾರಕ, ಸಮಾಸ, ತದ್ಧಿತ, ಆಖ್ಯಾತ, ಕೃತ್-ಹೀಗೆ ವಿಷಯಗಳನ್ನು ಜೋಡಿಸಲಾಗಿದೆ. ಈ ವಿಷಯ ವಿಭಜನೆಯ ಪ್ರಭಾವ ರೂಪಾವತಾರದ ಮೇಲಾಗಿರುವುದು ಗಮನಾರ್ಹ. ಮೂಲದಲ್ಲೇ ಪ್ರಕ್ರಿಯಾ ಗ್ರಂಥವಾಗಿರುವುದರಿಂದ ಇದು ರೂಪಾವತಾರಕ್ಕಿಂತ ಹೆಚ್ಚು ಸಮರ್ಪಕವಾಗಿದೆ.

ಇದರ ವರ್ಣ ಸಮಾಮ್ನಾಯ ಪ್ರಾತಿಶಾಖ್ಯ ಪದ್ಧತಿಯದಾಗಿದೆ. ಪ್ರತ್ಯಾಹಾರ ಗಳ ಬಳಕೆ ಇದರಲ್ಲಿಲ್ಲ. ಸ್ವರ, ಸಂಧ್ಯಕ್ಷರ, ವ್ಯಂಜನ, ಘೋಷ, ಅಂತಸ್ಥ, ಊಷ್ಮ ಮೊದಲಾದ ಪಾರಿಭಾಷಿಕ ಪದಗಳನ್ನು ಬಳಸಿ ವರ್ಣಮಾಲೆಯನ್ನು ಹೇಳಲಾಗಿದೆ. ಪ್ರತ್ಯಾಹಾರವನ್ನು ಬಳಸದಿದ್ದುದರಿಂದ ಸಂಕ್ಷಿಪ್ತತೆಗೆ ಭಂಗ ಬಂದರೂ ಸರಳತೆಯ ಅಂಶ ಹೆಚ್ಚಾಗಿದೆಯೆನ್ನಬಹುದು.

ಪಾಣಿನಿಯಲ್ಲಿ ಕಾಣದ ಪಾರಿಭಾಷಿಕ ಪದಗಳೂ ಕಾತಂತ್ರದಲ್ಲಿ ಬಳಕೆಗೊಂಡಿವೆ. ಲಿಂಗ (ಪ್ರಾತಿಪದಿಕ), ಅಸಂಖ್ಯ (ಅವ್ಯಯ) ಮೊದಲಾದವು ಅಂತಹ ಪದಗಳು. ಅಷ್ಟಾಧ್ಯಾಯಿಯಲ್ಲಿ ಕಾಣುವ ಪಾರಿಭಾಷಿಕ ಪದಗಳೂ ಇದರಲ್ಲಿವೆ. ವಿಭಕ್ತಿ, ಪ್ರತ್ಯಯ ತದ್ಧಿತ ಇತ್ಯಾದಿ. ವೈದಿಕ ಪ್ರಕ್ರಿಯೆಯನ್ನು ಪೂರ್ಣವಾಗಿ ಕೈಬಿಟ್ಟುದು ಕಾತಂತ್ರದ ಪ್ರತ್ಯೇಕತೆಯಾಗಿದೆ. ಕಾತಂತ್ರದ ಸೂತ್ರಗಳು ಸರಳವೂ ಸ್ಪಷ್ಟವೂ ಆಗಿವೆ. ಸ್ವರೂಪ ದಲ್ಲಿ ಪ್ರಾತಿಶಾಖ್ಯಗಳ ಸೂತ್ರಗಳನ್ನವು ಹೋಲುತ್ತವೆ. ಸಂಕ್ಷಿಪ್ತತೆ ಮತ್ತು ಸರಳತೆ ಕಾತಂತ್ರದ ಪ್ರಧಾನ ವೈಶಿಷ್ಟ್ಯಗಳು. ಸಂಕ್ಷಿಪ್ತತೆಗೆ ವಿಭಕ್ತ್ಯರ್ಥ ಭಾಗವನ್ನು ಉದಾ ಹರಿಸಬಹುದು. ವಿಭಕ್ತಿ ಪ್ರಯೋಗದ ನಿರೂಪಣೆ ಕೇವಲ ಮೂರು ಸೂತ್ರಗಳಲ್ಲಿ ಮುಗಿದು ಬಿಡುತ್ತದೆ. ವಿಭಕ್ತಿಗಳ ಅನಿಯಮಿತ ಪ್ರಯೋಗವನ್ನು 18 ಸೂತ್ರಗಳಲ್ಲಿ ಮುಗಿಸಲಾಗಿದೆ.

ಕಾತಂತ್ರದ ಕರ್ತೃತ್ವದ ಬಗ್ಗೆ ವಿಚಾರಣೀಯವಾದ ಕೆಲವು ಅಂಶಗಳಿವೆ. ದುರ್ಗ ಸಿಂಹನ ವೃತ್ತಿಯ ಆದಿಯಲ್ಲಿ

> "ದೇವ ದೇವಂ ಪ್ರಣಮ್ಯಾದೌ ಸರ್ವಜ್ಞಂ ಸರ್ವದರ್ಶಿನಮ್
> ಕಾತಂತ್ರಸ್ಯ ಪ್ರವಕ್ಷ್ಯಾಮಿ ವ್ಯಾಖ್ಯಾನಂ ಶಾರ್ವವರ್ಮಿಕಮ್"

ಎಂಬ ಶ್ಲೋಕವಿದೆ. ಇಲ್ಲಿನ "ಶಾರ್ವವರ್ಮಿಕಂ" ಎಂಬ ಪ್ರಯೋಗದಿಂದಾಗಿ ಕಾತಂತ್ರದ ಮೂಲ ಕರ್ತೃ ಆತನಿಗಿಂತ ಭಿನ್ನ ವ್ಯಕ್ತಿಯೆಂಬುದು ಸ್ಪಷ್ಟವಾಗುತ್ತದೆ. ಈ ದಿಸೆಯಲ್ಲಿ ವಿಚಾರಿಸಿದ ವಿದ್ವಾಂಸರು ಕೆಳಗಿನ ನಿರ್ಣಯಕ್ಕೆ ತಲುಪಿದ್ದಾರೆ (ಸಂ. ವ್ಯಾ. ವಿ. ಪು. 345).

1. ಈ ವ್ಯಾಕರಣ ಯಾವುದೋ ಬೃಹತ್ ತಂತ್ರದ ಸಂಕ್ಷಿಪ್ತ ರೂಪ.
2. ಇದು ಒಂದಲ್ಲ ಒಂದು ರೂಪದಲ್ಲಿ ಪಾಣಿನಿಗಿಂತ ಹಿಂದೆ ಇದ್ದಿರಬೇಕು.
3. ಇದರ ಈಗಿನ ರೂಪ ಪಾಣಿನಿಗಿಂತ ಈಚೆಗಿನದು ಮತ್ತು ಅಷ್ಟಾಧ್ಯಾಯಿಯ ವಿಸ್ತಾರವನ್ನು ನೋಡಿ ಸಂಕ್ಷಿಪ್ತವಾದುದು.
4. ಶರ್ವವರ್ಮ ಇದರ ಆದ್ಯ ಕರ್ತೃವಲ್ಲ. ಬಹುಶಃ ಅವನು ಇದರ ಸಂಕ್ಷೇಪಕಾರನಿರಬೇಕು.
5. ಸರಳತೆ ಇದರ ಮುಖ್ಯ ಲಕ್ಷ್ಯ.

ಕಾತಂತ್ರದಲ್ಲಿ ಕೃತ್ಪ್ರಕರಣ ಮೊದಲು ಇರಲಿಲ್ಲವೆಂದೂ ಅದನ್ನು ಕಾತ್ಯಾಯನನು ಸೇರಿಸಿದನೆಂದೂ ದುರ್ಗಸಿಂಹನು ಹೇಳುತ್ತಾನೆ. ಬಹುಶಃ ಆ ಕಾತ್ಯಾಯನ ಎಂಬ ಹೆಸರು ಶರ್ವವರ್ಮನ ಇನ್ನೊಂದು ಹೆಸರಾಗಿದ್ದಿರಬೇಕೆಂದೂ ಊಹೆ ಹುಟ್ಟಿ ಕೊಂಡದ್ದಿದೆ.

ಕಾತಂತ್ರಕ್ಕೆ ಧಾರಾಳವಾಗಿ ವೃತ್ತಿ ಟೀಕೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಅತ್ಯಂತ ಪ್ರಾಚೀನವಾದುದು ಕ್ರಿ. ಶ. ಸುಮಾರು 7ನೆಯ ಶತಮಾನದವನಾದ ದುರ್ಗ ಸಿಂಹನ ವೃತ್ತಿಯಾಗಿದೆ. ಕ್ರಿ. ಶ. 9ನೆಯ ಶತಮಾನದ ಇನ್ನೊಬ್ಬ ದುರ್ಗಸಿಂಹನು ದೌರ್ಗಸಿಂಹ ವೃತ್ತಿಟೀಕೆಯನ್ನೂ ಬರೆದಿದ್ದಾನೆ. ದುರ್ಗಸಿಂಹನ ವೃತ್ತಿಯ ಮೇಲೆ ತ್ರಿಲೋಚನ ದಾಸನ (ಕ್ರಿ. ಶ. 11ನೆಯ ಶತಕದ ಕೊನೆ) 'ಪಂಜೀ' ಎಂಬ ಟೀಕೆಯೂ ಹುಟ್ಟಿಕೊಂಡಿದೆ. ಕಾತಂತ್ರದ ಟೀಕಾಕಾರರಲ್ಲಿ ಹೆಚ್ಚಿನವರು ಬೌದ್ಧರಾಗಿರುವುದು ಗಮನಾರ್ಹ.

ಕಾತಂತ್ರ ಅಲ್ಪಮತಿಗಳಿಗಾಗಿ ಹುಟ್ಟಿಕೊಂಡ ವ್ಯಾಕರಣವಾಗಿದೆ. "ಕೃತಿಯ ಗುಣ ಬಾಹುಳ್ಯ, ಇದು ಸಂಪಾದಿಸಿಕೊಂಡ ಅಸಂಖ್ಯಾತ ವ್ಯಾಖ್ಯಾನಗಳು, ಇದರಲ್ಲಿ ನಡೆದಿರುವ ಪ್ರಕ್ಷೇಪಗಳು, ಇದರ ಸರಳ ನಿರೂಪಣೆ—ಇವನ್ನೆಲ್ಲಾ ಗಮನಿಸಿದರೆ ಈ ವ್ಯಾಕರಣ ಕೆಲವು ಕಾಲದ ಮಟ್ಟಿಗಾದರೂ ಅತ್ಯಂತ ಜನಪ್ರಿಯವಾಗಿದ್ದು, ಅದರ ಉದ್ದೇಶ ತಕ್ಕಮಟ್ಟಿಗೆ ನೆರವೇರಿದಂತೆ ಕಂಡುಬರುತ್ತದೆ" (ಪ್ರಾ. ಕ. ವ್ಯಾ. ಪು. 35). ಬಹಳ ಕಾಲದವರೆಗೆ ಟಿಬೆಟ್, ಕಾಶ್ಮೀರ, ಬಂಗಾಳಗಳಲ್ಲಿ ಇದು ಪ್ರಚಾರದಲ್ಲಿತ್ತು. ಉತ್ಕಲ, ರಾಜಸ್ಥಾನ, ಬಂಗಾಲಗಳಲ್ಲಿ ಕಾತಂತ್ರ ಸಾಹಿತ್ಯ ಧಾರಾಳವಾಗಿ ಲಭ್ಯವಿದೆ. ದಕ್ಷಿಣ ಭಾರತದಲ್ಲಿಯೂ ಕಾತಂತ್ರ ಬಹಳಷ್ಟು ಪ್ರಚಾರದಲ್ಲಿತ್ತು. "ಅದು ಒಂದು ವಿಶಿಷ್ಟ ಸಂಸ್ಕೃತ ವ್ಯಾಕರಣ ಪದ್ಧತಿಯನ್ನು ರೂಪಿಸಿದ್ದಲ್ಲದೆ ಸಾಹಿತ್ಯವನ್ನು ಬೆಳೆಸಿಕೊಂಡ ಕೆಲವು ದ್ರಾವಿಡ ಭಾಷೆಗಳ ವ್ಯಾಕರಣಗಳಿಗೆ ಮಾದರಿಯಾಯಿತು" (Karnataka through the Ages : P : 110) ಎಂಬ ವಿದ್ವಾಂಸರ ಹೇಳಿಕೆ ತೀರ ಸಮಂಜಸ ವಾದುದು. ಕನ್ನಡ ವೈಯಾಕರಣರು ಹೇಗೆ ಕಾತಂತ್ರಕ್ಕೆ ಋಣಿಗಳೆಂಬುದನ್ನು ಮುಂದೆ ಪರಿಶೀಲಿಸಬಹುದು.

## ಚಾಂದ್ರ ವ್ಯಾಕರಣ

ಚಾಂದ್ರ ವ್ಯಾಕರಣದ ಕರ್ತೃ ಚಂದ್ರಗೋಮಿ. ಈತನು ಬಂಗಾಳದವನು. ಇವನ ಕಾಲದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯವಿದ್ದರೂ ಸುಮಾರು ಕ್ರಿ. ಶ. ಮೊದಲನೆಯ ಶತಮಾನದಲ್ಲಿ ಈತನು ಜೀವಿಸಿದ್ದಿರಬೇಕೆಂದು ಊಹಿಸಲು ಆಧಾರಗಳಿವೆ (ಸಂ. ವ್ಯಾ. ವಿ. ಪು. 357). ಚಂದ್ರಗೋಮಿ ಬೌದ್ಧಮತಾವಲಂಬಿಯಾದರೂ ಇವನ ಗ್ರಂಥದ ಮೇಲೆ ಧರ್ಮದ ಛಾಯೆಯಿಲ್ಲ. ಭರ್ತೃಹರಿ ಈತನನ್ನು ಮಹಾಭಾಷ್ಯಾ ಭ್ಯಾಸದ ಪುನರುಜ್ಜೀವಕನೆಂದು ಹೊಗಳಿದ್ದಾನೆ.

ಚಾಂದ್ರ ವ್ಯಾಕರಣದಲ್ಲಿ ಆರು ಅಧ್ಯಾಯಗಳಿವೆ. ವೈದಿಕ ಮತ್ತು ಸ್ವರ ಪ್ರಕ್ರಿಯೆಗಳ ಕುರಿತಾಗಿರುವ ಕೊನೆಯ ಎರಡು ಅಧ್ಯಾಯಗಳನ್ನು ಚಂದ್ರಗೋಮಿ ಬರೆ ದಿದ್ದನೆಂದೂ ಈಗ ಆ ಭಾಗ ನಷ್ಟವಾಗಿ ಹೋಗಿದೆಯೆಂದೂ ತಿಳಿಯಲಾಗಿದೆ. ಕಾತಂತ್ರ ದಂತೆ ವ್ಯಾಕರಣದ ಲೌಕಿಕತೆಯು ಕಡೆಗೇ ಇದರಲ್ಲಿ ಹೆಚ್ಚು ಗಮನವೀಯಲಾಗಿದೆ.

ಕಾಶಿಕಾ ವೃತ್ತಿಯ ಮೇಲೆ ಚಾಂದ್ರದ ಪ್ರಭಾವವಿದ್ದರೆ ಚಾಂದ್ರದ ಮೇಲೆ ಕಾತಂತ್ರದ ದಟ್ಟವಾದ ಪ್ರಭಾವವಿದೆ. ಪ್ರಕ್ರಿಯೆಗನುಸಾರವಾಗಿ ವ್ಯಾಕರಣ ನಿರೂಪಣೆಯಲ್ಲಿ ಇದು ಸ್ಪಷ್ಟವಾಗಿ ಗೋಚರಿಸುತ್ತದೆ. ಮೊದಲ ಅಧ್ಯಾಯದಲ್ಲಿ ಧಾತುಪ್ರಕ್ರಿಯೆ ಅಥವಾ ಕ್ರಿಯೆಯ ವಿವರಣೆಯಿದ್ದರೆ ಎರಡನೆಯ ಮತ್ತು ಮೂರನೆಯ ಅಧ್ಯಾಯಗಳಲ್ಲಿ ನಾಮ, ವಿಭಕ್ತಿ, ಕಾರಕ, ಸಮಾಸ, ತದ್ಧಿತ ಮೊದಲಾದವುಗಳ ವಿವರಣೆಯಿದೆ. ವ್ಯಾಕರಣದ ತತ್ವದಲ್ಲಿ ಅಷ್ಟಾಧ್ಯಾಯಿಯನ್ನೂ ವಿಷಯಾನುಕ್ರಮದಲ್ಲಿ ಕಾತಂತ್ರವನ್ನೂ ಅನುಸರಿಸುವುದರಿಂದ ಚಾಂದ್ರವು ಒಂದು ವಿಶಿಷ್ಟ ವ್ಯಾಕರಣ ಗ್ರಂಥವಾಗಿದೆ.

ಚಂದ್ರಗೋಮಿ ತನ್ನೀ ವ್ಯಾಕರಣದ ರಚನೆಯ ಮೂಲೋದ್ದೇಶವನ್ನು ಪ್ರಾರ್ಥನಾ ಶ್ಲೋಕದಲ್ಲಿ ಸ್ಪಷ್ಟೀಕರಿಸಿದ್ದಾನೆ—

"ಸಿದ್ಧಂ ಪ್ರಣಮ್ಯ ಸರ್ವಜ್ಞಂ ಸರ್ವೀಯಂ ಜಗತೋ ಗುರುಮ್
ಲಘುವಿಸ್ಪಷ್ಟ ಸಂಪೂರ್ಣಮುಚ್ಯತೇ ಶಬ್ದಲಕ್ಷಣಮ್"

ಸ್ಪಷ್ಟತೆ, ಲಘುತ್ವ ಮತ್ತು ಪೂರ್ಣತೆ– ಈ ಮೂರು ಗುಣಗಳನ್ನು ಚಂದ್ರಗೋಮಿ ಕಣ್ಣೆದಿರಿನಲ್ಲಿರಿಸಿಕೊಂಡಿದ್ದನು. ಇದೇ ಚಾಂದ್ರ ವ್ಯಾಕರಣದ ವೈಶಿಷ್ಟ್ಯ. ಚಾಂದ್ರದಲ್ಲಿ ಪಾರಿಭಾಷಿಕ ಪದಗಳನ್ನು ಬಳಸಿಕೊಂಡಿರುವುದರಿಂದ ಸ್ಪಷ್ಟತೆ ಮತ್ತು ಸರಳತೆಗೆ ಅವಕಾಶವಿರುವುದು ನಿಜ. ಮಹಾಭಾಷ್ಯಕ್ಕೆ ಹೊಂದಿಕೊಂಡು ಅಷ್ಟಾಧ್ಯಾಯಿಯ ಪರಿವರ್ತನೆ ಮತ್ತು ವಿಸ್ತಾರ ಇದರಲ್ಲಾಗಿರುವುದರಿಂದ ಲಘುತ್ವ ಎಂಬ ಗುಣ ಸರಿಯಾಗಿ ಬಂದಿಲ್ಲ.

ಚಾಂದ್ರ ವ್ಯಾಕರಣವು ಕಾಶ್ಮೀರ, ನೇಪಾಳ, ಟಿಬೇಟ್‌ಗಳಿಂದ ಹಿಡಿದು ಸಿಲೋನ್ ವರೆಗೆ ಬೌದ್ಧದೇಶಗಳಲ್ಲೆಲ್ಲ ಪ್ರಚಾರದಲ್ಲಿರುವ ಸಂಸ್ಕೃತ ವ್ಯಾಕರಣವಾಗಿದೆ.

## ಜೈನೇಂದ್ರ ವ್ಯಾಕರಣ

ದೇವನಂದಿಯ ಕೃತಿ ಜೈನೇಂದ್ರ ವ್ಯಾಕರಣ. ಪೂಜ್ಯಪಾದ ಮತ್ತು ಸಿದ್ಧನಂದಿ ಎಂಬೆರಡು ಬೇರೆ ಹೆಸರುಗಳೂ ದೇವನಂದಿಗಿದ್ದಂತೆ ತಿಳಿಯುತ್ತದೆ. ಗಂಗದೊರೆ ದುರ್ವಿನೀತನು ಈತನ ಶಿಷ್ಯನೆಂದು ಹೇಳಲಾಗಿದೆ. ಕ್ರಿ. ಶ. ಸುಮಾರು 470 ಈತನ ಕಾಲವೆಂದೂ ಅಷ್ಟಾಧ್ಯಾಯಿಯನ್ನು ಕರತಲಾಮಲಕಗೊಳಿಸಿದ ಬಹುದೊಡ್ಡ ವಿದ್ವಾಂಸನೆಂದೂ ಈತನನ್ನು ಹೊಗಳಲಾಗಿದೆ. ಚಾವುಂಡರಾಯ, ವೃತ್ತವಿಲಾಸ, ನೇಮಿಚಂದ್ರ, ಪಾರ್ಶ್ವಪಂಡಿತ ಮೊದಲಾದ ಕನ್ನಡ ಕವಿಗಳು ಈತನ ವ್ಯಾಕರಣ ಪಾಂಡಿತ್ಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ.

ಜೈನೇಂದ್ರವು ಚಾಂದ್ರ, ಹಾಗೂ ಕಾತಂತ್ರಕ್ಕಿಂತ ಭಿನ್ನವಾಗಿದೆ. ಕಾತಂತ್ರ ಹೇಗೂ ಅಪಾಣಿನೀಯ. ಚಾಂದ್ರ ಪಾಣಿನೀಯವಾದರೂ ಮಹಾಭಾಷ್ಯ ಹಾಗೂ ಕಾತಂತ್ರದ ಪ್ರಭಾವದಿಂದ ಅದರ ಕ್ರಮ ಮತ್ತು ವಸ್ತುವಿನಲ್ಲಿ ಸಾಕಷ್ಟು ಅಂತರ ಹಾಗೂ

ವಿಸ್ತಾರವುಂಟಾಗಿದೆ. ಆದರೆ ಜೈನೇಂದ್ರವು ಅಷ್ಟಾಧ್ಯಾಯಿಯನ್ನೇ ಪೂರ್ಣವಾಗಿ ಆದರ್ಶವಾಗಿಟ್ಟುಕೊಂಡು ಅದರ ಕ್ರಮ ಮತ್ತು ತತ್ವವನ್ನು ಸ್ವೀಕರಿಸುತ್ತ ಅದನ್ನು ಪರಿಷ್ಕರಿಸುವ ಕೆಲಸವನ್ನು ಮಾಡಿದೆ. ದೇವನಂದಿ ದಿಗಂಬರ ಸಂಪ್ರದಾಯದ ಜೈನ. ಅವನ ಕೃತಿಯ ಮೇಲೆ ಆ ಧರ್ಮದ ಪ್ರಭಾವವಿದೆ. ಪಾಣಿನಿಯ ವ್ಯಾಕರಣವನ್ನು ಸಂಕ್ಷಿಪ್ತಗೊಳಿಸುವುದು ಮತ್ತು ತನ್ನ ಧರ್ಮ ಸಂಬಂಧವಾದ ತತ್ವಗಳನ್ನು ಆ ಮಾಧ್ಯಮದಿಂದ ಸ್ಪಷ್ಟೀಕರಿಸುವುದು ದೇವನಂದಿಯ ಮುಖ್ಯ ಗುರಿಯಾಗಿದೆ.

ಜೈನೇಂದ್ರದಲ್ಲಿ ಒಟ್ಟು ಐದು ಪಾದಗಳಿವೆ. ಅಷ್ಟಾಧ್ಯಾಯಿಯಲ್ಲಿರುವ ವೈದಿಕ ಮತ್ತು ಸ್ವರಪ್ರಕ್ರಿಯೆಗಳು ಇದರಲ್ಲಿಲ್ಲ. ಇದರ ಪಾರಿಭಾಷಿಕ ಪದಗಳು ಅಷ್ಟಾಧ್ಯಾಯಿಗಿಂತ ಭಿನ್ನವಾಗಿದ್ದು ಜಟಿಲವಾಗಿವೆ. ಹೆಚ್ಚಿನವು ಏಕಾಕ್ಷರಿಗಳಾಗಿವೆ. ಮಹಾಭಾಷ್ಯ ಹೇಳುವ ಮಹತೀ ಸಂಜ್ಞೆಗಳಂತೆ ಇಲ್ಲಿನವು ಅರ್ಥವತ್ತಾಗಿಲ್ಲ. ಜೈನೇಂದ್ರದ ಹೆಚ್ಚಿನ ಪಾರಿಭಾಷಿಕ ಪದಗಳು ಅಷ್ಟಾಧ್ಯಾಯಿಯದಕ್ಕೆ ಸಂವಾದಿಗಳಾಗಿವೆ. ಉದಾ :

| ಅಷ್ಟಾಧ್ಯಾಯಿ | ಜೈನೇಂದ್ರ |
|---|---|
| ಸವರ್ಣ | ಸ್ವ |
| ಷಷ್ಠೀ | ತಾ |
| ಪ್ರತ್ಯಯ | ತ್ಯ |
| ಸಮಾಸ | ಸ |
| ಬಹುವ್ರೀಹಿ | ವ |

ಅಷ್ಟಾಧ್ಯಾಯಿಯ ಅಧಿಕಾಂಶ ಸೂತ್ರಗಳನ್ನು ಮೊಟಕುಗೊಳಿಸಿ ಜೈನೇಂದ್ರದಲ್ಲಿ ಬಳಸಿಕೊಳ್ಳಲಾಗಿದೆ. ಉದಾ ;

| ಅಷ್ಟಾಧ್ಯಾಯಿ | ಜೈನೇಂದ್ರ |
|---|---|
| ವಿಭಾಷಾ ದಿಕ್ಸಮಾಸೇ ಬಹುವ್ರೀಹೌ | ವಾದಿಕ್ಸವೇ |
| ನ ಬಹುವ್ರೀಹೌ | ನವೇ |
| ಉರಣ್‌ರಪರಃ | ರಂತೋರಲುಃ |

ಈ ವಿಧವಾಗಿ ಸೂತ್ರಗಳನ್ನು ಪರಿವರ್ತಿಸಿಗೊಂಡುದರಿಂದ ಅಸ್ಪಷ್ಟತೆ ತುಂಬಿಹೋಗಿದೆ. ಪ್ರತ್ಯಾಹಾರಗಳನ್ನು ಬಳಸಿಕೊಂಡರೂ ಶಿವಸೂತ್ರಗಳನ್ನು ಕೈ ಬಿಟ್ಟುದು ಜೈನೇಂದ್ರದ ಪ್ರತ್ಯೇಕತೆಯಾಗಿದೆ.

ಜೈನೇಂದ್ರ ವ್ಯಾಕರಣಕ್ಕೆ ಎರಡು ಪಾಠಗಳು ಪ್ರಚಾರದಲ್ಲಿವೆ. 2000 ಸೂತ್ರಗಳಿರುವ ಔದೀಚ್ಯ ಪಾಠವೊಂದು, 2700 ಸೂತ್ರಗಳಿರುವ ದಾಕ್ಷಿಣಾತ್ಯ ಪಾಠ

ಇನ್ನೊಂದು. ಮೊದಲಿನದಕ್ಕೆ ಅಭಯನಂದಿಯು (ಕ್ರಿ. ಶ. 8ನೆಯ ಶತಮಾನ) 'ಮಹಾವೃತ್ತಿ' ಯನ್ನು ಬರೆದಿದ್ದಾನೆ. ಗುಣನಂದಿಯ 'ಶಬ್ದಾರ್ಣವ' (ಕ್ರಿ. ಶ. 850) ಜೈನೇಂದ್ರದ ಭಾಷ್ಯವಾಗಿದೆ. ಇದರಲ್ಲಿ 700 ಸೂತ್ರಗಳು ಅಧಿಕವಿದ್ದು ಜೈನೇಂದ್ರದ ಸಂಶೋಧಿತ ರೂಪವೆಂದಿದನ್ನು ಹೇಳಲಾಗುತ್ತಿದೆ. ಒಟ್ಟಿನಲ್ಲಿ ಜೈನೇಂದ್ರವು ಸಂಸ್ಕೃತದ ವ್ಯಾಕರಣ ವಾಙ್ಮಯಕ್ಕೆ ಕನ್ನಡ ನಾಡಿನ ಅಪೂರ್ವ ಕೊಡುಗೆಯೆಂಬುದರಲ್ಲಿ ಎರಡು ಮಾತಿಲ್ಲ.

## ಶಾಕಟಾಯನ ವ್ಯಾಕರಣ

ಸಂಸ್ಕೃತದಲ್ಲಿ ಶಾಕಟಾಯನ ಎಂಬ ಹೆಸರಿನ ಇಬ್ಬರು ವೈಯಾಕರಣರಿದ್ದಂತೆ ತಿಳಿದು ಬರುತ್ತದೆ, ಯಾಸ್ಕನ ನಿರುಕ್ತ ಮತ್ತು ಅಷ್ಟಾಧ್ಯಾಯಿಯಲ್ಲಿ ಉಲ್ಲೇಖಗೊಂಡ ಶಾಕಟಾಯನನು ಒಬ್ಬ. ಅವನ ಕೃತಿ ಯಾವುದೋ ತಿಳಿಯದು. ಪಾಣಿನಿ, ಕಾತ್ಯಾಯನ ಪತಂಜಲಿ, ಚಂದ್ರಗೋಮಿ, ಪೂಜ್ಯಪಾದ—ಇವರೆಲ್ಲರ ಕೃತಿಗಳನ್ನೂ ಉಪಯೋಗಿಸಿ ಕೊಂಡು "ಶಬ್ದಾನುಶಾಸನ"ವೆಂಬ ವ್ಯಾಕರಣವನ್ನು ಬರೆದವನು ಇನ್ನೊಬ್ಬ. ಈತನ ಕೃತಿ ಶಾಕಟಾಯನ ವ್ಯಾಕರಣವೆಂದೇ ಪ್ರಸಿದ್ಧವಾಗಿದೆ. ಪಾಲ್ಯಕೀರ್ತಿ ಎಂಬುದು ಈ ಶಾಕಟಾಯನನ ಇನ್ನೊಂದು ಹೆಸರು. ತನ್ನ ಗ್ರಂಥಕ್ಕೆ ತಾನೇ ಬರೆದಿರುವ ಅಮೋಘಾವೃತ್ತಿಯಲ್ಲಿ ಶಾಕಟಾಯನನು 'ಅಮೋಘವರ್ಷ'ನನ್ನು ಹೆಸರಿಸಿರುವುದರಿಂದ ಈತನು ರಾಷ್ಟ್ರಕೂಟ ದೊರೆ ನೃಪತುಂಗ 'ಅಮೋಘವರ್ಷ'ನ (ಕ್ರಿ. ಶ. 814–877) ಸಮಕಾಲೀನನಾಗುತ್ತಾನೆ. ಶಾಕಟಾಯನ ವ್ಯಾಕರಣದಲ್ಲಿ ಸಿದ್ಧನಂದಿಯ ಉಲ್ಲೇಖವಿರು ವುದರಿಂದ ಪೂಜ್ಯಪಾದನಿಗಿಂತ ಈಚೆಗಿನವನು ಶಾಕಟಾಯನ ಎಂಬುದು ನಿಸ್ಸಂದೇಹ.

ಶಾಕಟಾಯನನು ಜೈನರಲ್ಲಿ ಶ್ವೇತಾಂಬರ ಸಂಪ್ರದಾಯಕ್ಕೆ ಸೇರಿದವನೆಂದು ಕೆಲವರ ಮತ. ಇನ್ನು ಕೆಲವು ವಿದ್ವಾಂಸರ ಪ್ರಕಾರ ಶಾಕಟಾಯನನು ಶ್ವೇತಾಂಬರ ಮತ್ತು ದಿಗಂಬರ ಸಂಪ್ರದಾಯಗಳನ್ನು ಜೋಡಿಸುವ ಸಂಕಲೆಯಾದ ಯಾಪನೀಯ ಸಂಪ್ರದಾಯಕ್ಕೆ ಸೇರುತ್ತಾನೆ (ಜೈನ ಸಿದ್ಧಾಂತ ಭಾಸ್ಕರ : 9–1).

ಶಾಕಟಾಯನ ವ್ಯಾಕರಣದಲ್ಲಿ ನಾಲ್ಕು ಅಧ್ಯಾಯಗಳಿವೆ. ಅಷ್ಟಾಧ್ಯಾಯಿಯಂತೆ ಪ್ರತಿಯೊಂದು ಅಧ್ಯಾಯದಲ್ಲೂ ನಾಲ್ಕು ನಾಲ್ಕು ಪಾದಗಳಿವೆ. ಇದರಲ್ಲಿರುವ ಒಟ್ಟು ಸೂತ್ರಗಳು 2230. ಎಂದರೆ ಅಷ್ಟಾಧ್ಯಾಯಿಗಿಂತ 549 ಸೂತ್ರಗಳು ಕಡಿಮೆ. ವ್ಯಾಕರಣಾಂಶಗಳ ನಿರೂಪಣೆಯಲ್ಲಿ ಇದರ ಮೇಲೆ ಚಾಂದ್ರದ ಪ್ರಭಾವ ದಟ್ಟವಾಗಿದೆ. ಒಂದು ವಿಷಯಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಒಂದೆಡೆ ಹೇಳುವ ಹಾಗೂ ಒಂದೊಂದು ಪಾದದಲ್ಲಿ ಒಂದೊಂದು ವ್ಯಾಕರಣ ವಿಚಾರವನ್ನು ನಿರೂಪಿಸುವ ವಿಧಾನ ದಲ್ಲಿದು ಸ್ಪಷ್ಟವಾಗಿ ಗೋಚರಿಸುತ್ತದೆ. ಸುಬಂತ, ತಿಬಂತ, ಸಮಾಸ, ತದ್ಧಿತ, ಕೃದಂತ–ಹೀಗೆ ವಿಷಯಾನುಕ್ರಮದಲ್ಲಿ ಪಾದಗಳನ್ನು ಜೋಡಿಸಲಾಗಿದೆ. ಚಾಂದ್ರ ಮತ್ತು ಜೈನೇಂದ್ರಗಳಂತೆ ಅಷ್ಟಾಧ್ಯಾಯಿಯಲ್ಲಿ ಸುಧಾರಣೆಯನ್ನು ತರುವುದೇ ಈ

ವ್ಯಾಕರಣ ರಚನೆಯಂ ಗುರಿಯಾಗಿದೆ. ಸರಳತೆ, ಸ್ಪಷ್ಟತೆ, ಸಂಪೂರ್ಣತೆ ವಂತ್ತು ಸಂಕ್ಷೇಪ ಇದನ್ನು ವ್ಯಾಕರಣದಲ್ಲಿ ಸಾಧಿಸುವುದೇ ಶಾಕಟಾಯಂನನ ಪ್ರಧಾನ ಲಕ್ಷ್ಯ. ಅಷ್ಟಾಧ್ಯಾಯಿಂಯಲ್ಲಿ 14 ಶಿವಸೂತ್ರಗಳಿದ್ದರೆ ಇದರಲ್ಲಿ 13 ಮಾತ್ರ ಗೋಚರಿಸುತ್ತದೆ. ಚಾಂದ್ರ ಜೈನೇಂದ್ರಗಳಂತೆ ಇದರಲ್ಲೂ ವೈದಿಕ ವಂತ್ತು ಸ್ವರಪ್ರಕ್ರಿಯೆಂಗಳಂ ಸೇರ್ಪಡೆಗೊಂಡಿಲ್ಲ.

ಶಾಕಟಾಯಂನ ವ್ಯಾಕರಣ ಜೈನೇಂದ್ರಕ್ಕೂ ಋಣಿಯಾಗಿದ್ದು ಅಲ್ಲಿಂದಲೂ ಪಾರಿಭಾಷಿಕ ಪದಗಳನ್ನು ಸ್ವೀಕರಿಸಿದೆ. ಜೈನೇಂದ್ರದಲ್ಲಿ ಅಷ್ಟಾಧ್ಯಾಯಿಂಯ ಅಧಿಕಾಂಶ ಪಾರಿಭಾಷಿಕ ಪದಗಳು ಬದಲಾವಣೆಗೊಂಡಿದ್ದರೆ ಇದರಲ್ಲಿ ಸಂಮಾರಂ ಅರ್ಧಾಂಶಕ್ಕಿಂತಲೂ ಕಡಿಮೆ ಪಾರಿಭಾಷಿಕ ಪದಗಳಂ ಮಾತ್ರ ಬದಲಾಗಿವೆ. ಅಲ್ಲಿನ ಸಂಕ್ಷಿಪ್ತತೆಯನ್ನು ಸ್ವೀಕರಿಸಲಾಗಿದೆ. ಒಟ್ಟಿನಲ್ಲಿ ಶಾಕಟಾಯಂನ ವ್ಯಾಕರಣವು ಯಾವುದೇ ಒಂದಂ ವ್ಯಾಕರಣವನ್ನು ಪೂರ್ಣವಾಗಿ ಅನಂಕರಣೆ ಮಾಡದೆ ಹಿಂದಿನ ಎಲ್ಲ ವ್ಯಾಕರಣಗಳ ಅನಂಕರಣೀಯಾಂಶಗಳನ್ನು ಸ್ವೀಕರಿಸಿ ತನ್ನದೇ ಆದ ವಿಶಿಷ್ಟ ವಿಧಾನದಲ್ಲಿ ರೂಪುಗೊಂಡಿದೆ. ಹೇಮಚಂದ್ರನ ಸಿದ್ಧಹೇಮಶಬ್ದಾನುಶಾಸನದ ಮೇಲೆ ಇದರ ಪ್ರಭಾವ ಧಾರಾಳವಾಗಿದೆ.

ಶಾಕಟಾಯಂನ ವ್ಯಾಕರಣಕ್ಕೆ ಅಮೋಘಾವೃತ್ತಿಯಲ್ಲದೆ ಯಕ್ಷವರ್ಮನು ಬರೆದ ಚಿಂತಾಮಣಿ ಎಂಬ ವೃತ್ತಿಯಂೂ ಲಭ್ಯವಿದೆ.

ಶಾಕಟಾಯಂನ ವ್ಯಾಕರಣದ ಪ್ರಕ್ರಿಯಾತ್ಮಕ ಗ್ರಂಥವೊಂದಂ **'ಪ್ರಕ್ರಿಯಾ ಸಂಗ್ರಹ'** ಎಂಬ ಹೆಸರಿನಿಂದ ಉಪಲಬ್ಧವಾಗಿದೆ. ಇದರ ಕರ್ತೃ ಅಭಯಂ ಚಂದ್ರಾಚಾರ್ಯ. ಈತನ ಕಾಲ ಕ್ರಿ. ಶ. 11ನೆಯಂ ಇಲ್ಲವೆ 12ನೆಯಂ ಶತಮಾನವಾಗಿರಬೇಕಂ (ಸಂ. ವ್ಯಾ. ವಿ. ಪು. 248-49), ಇದರಲ್ಲಿ ಅಧ್ಯಾಯಂದ ಹೆಸರು 'ಸಂಗ್ರಹ' ಎಂಬ ಶಬ್ದದಿಂದ ಕೊನೆಗೊಳ್ಳುವುದಿದ್ದು ಸಂಜ್ಞಾ ಸಂಗ್ರಹ, ಸಂಧಿ ಸಂಗ್ರಹ, ಸಂಬಂತ ಸಂಗ್ರಹ, ವಿಭಕ್ತ್ಯರ್ಥ ಸಂಗ್ರಹ, ಸಮಾಸ ಸಂಗ್ರಹ, ತದ್ಧಿತ ಸಂಗ್ರಹ, ತಿಙಂತ ಸಂಗ್ರಹ, ಕೃತ್ಸಂಗ್ರಹ ಎಂಬಂದಾಗಿ ಒಟ್ಟು 8 ಅಧ್ಯಾಯಂಗಳಿವೆ. ಬಹಂಶಃ ಇದು ರೂಪಾವತಾರಕ್ಕಿಂತ ಮೊದಲೇ ಹಂಟ್ಟಿರಬೇಕೆಂಬ ಅಭಿಪ್ರಾಯಂವಿದೆ (ಅದೇ). ಅದಂ ನಿಜವಾದಲ್ಲಿ ಅಷ್ಟಾಧ್ಯಾಯಿಗಿಂತ ಮೊದಲೇ ಶಾಕಟಾಯಂನ ವ್ಯಾಕರಣವನ್ನು ಪ್ರಕ್ರಿಯಾತ್ಮಕ ವ್ಯವಸ್ಥೆಗೆ ಅಳವಡಿಸಿಕೊಂಡಂತಾಗುತ್ತದೆ.

### ಸರಸ್ವತೀ ಕಂಠಾಭರಣ

ಧಾರಾನಗರಿಯ ಭೋಜರಾಜನಂ (ಕ್ರಿ. ಶ. 1005-1062) ಅಸಾಮಾನ್ಯ ವಿದ್ವಾಂಸನಾಗಿದ್ದು ಸಾಹಿತ್ಯ, ಕಾವ್ಯಮೀಮಾಂಸೆ, ಆಯಂರ್ವೇದ, ವಾಸ್ತುಶಿಲ್ಪ, ಶೈವ ದರ್ಶನ, ಸಂಗೀತ ಶಾಸ್ತ್ರ ಮೊದಲಾದ ಕ್ಷೇತ್ರಗಳಲ್ಲಿ ಮೌಲಿಕ ಕೃತಿಗಳನ್ನು ರಚಿಸಿದ ಅದ್ಭುತ ಪ್ರತಿಭಾವಂತ. ಸರಸ್ವತೀ ಕಂಠಾಭರಣ ಈತನ ವ್ಯಾಕರಣ ಗ್ರಂಥ. ಪಾಣಿನ್ಯುತ್ತರ ಯುಗದಲ್ಲಿ ಅಷ್ಟಾಧ್ಯಾಯಿಯಂಲ್ಲು, ಸಂಧಾರಣೆಯನ್ನು ತರಬಯಸಿದ

ಕೃತಿಗಳಲ್ಲಿ ಇದು ಪರಮೋತ್ಕೃಷ್ಟಕೃತಿಯೆಂಬುದನ್ನು ಹಿಂದೆಯೇ ಹೇಳಲಾಗಿದೆ. ಇದರ ಮೇಲೆ ಚಾಂದ್ರ, ಜೈನೇಂದ್ರ, ಶಾಕಟಾಯನ, ಕಾತಂತ್ರ ವ್ಯಾಕರಣಗಳ ಪ್ರಭಾವ ಧಾರಳವಾಗಿದೆ.

ಸರಸ್ವತೀ ಕಂಠಾಭರಣದಲ್ಲಿ 8 ಅಧ್ಯಾಯಗಳಿದ್ದು ಪ್ರತಿಯೊಂದರಲ್ಲೂ ನಾಲ್ಕು-ನಾಲ್ಕು ಪಾದಗಳಿವೆ. ಇದರಲ್ಲಿ ವ್ಯಾಕರಣ ವಿಷಯಗಳ ಅನುಕ್ರಮದಲ್ಲಿ ಬದಲಾವಣೆಯಾಗಲಿ ಪಾರಿಭಾಷಿಕ ಪದಗಳಲ್ಲಿ ವಿಕಾರವಾಗಲಿ ತರುವ ಪ್ರಯತ್ನ ಮಾಡಿಲ್ಲ. ಉಣಾದಿ, ಗಣಪಾಠ ಇತ್ಯಾದಿಗಳ ಪ್ರತ್ಯೇಕ ಪ್ರತ್ಯೇಕವಾದ ಪರಿಗಣನೆ ಇದರಲ್ಲಿಲ್ಲ. ಅಷ್ಟಾಧ್ಯಾಯಿಯ ಯಾವುದೇ ಒಂದು ಅಂಶವನ್ನು ಬಿಡದೆ, ಅಭ್ಯಾಸಿಗೆ ಪಾಣಿನಿಯ ಕ್ರಮದಲ್ಲಿ ಹುಟ್ಟುವ ಅನೇಕ ಸಂದೇಹಗಳಿಗೆ ತನ್ನಿಂದ ತಾನಾಗಿ ಸಮಾಧಾನ ದೊರೆಯುವಂತೆ ಇದನ್ನು ರಚಿಸಲಾಗಿದೆ.

ಅಷ್ಟಾಧ್ಯಾಯಿಯ ಸೂತ್ರಗಳನ್ನೇ ಮುಖ್ಯ ಆಧಾರವಾಗಿಟ್ಟುಕೊಂಡು ಈ ವ್ಯಾಕರಣ ರಚಿತವಾಗಿದೆ. ಅಗತ್ಯವಿದ್ದಲ್ಲಿ ಅಲ್ಲಿನ ಸೂತ್ರಗಳನ್ನು ಪರಿವರ್ತಿಸಲಾಗಿದೆ. ಉಳಿದೆಡೆಗಳಲ್ಲಿ ಯಥಾವತ್ತಾಗಿ ಎತ್ತಿಕೊಳ್ಳಲಾಗಿದೆ. ಮುಖ್ಯವಾಗಿ ಸತರ್ಕ ದೃಷ್ಟಿಯನ್ನು ಇಟ್ಟುಕೊಳ್ಳಲಾಗಿದೆ. ಭೋಜನಿಗೆ ಹಿಂದಿನ ಎಲ್ಲ ವ್ಯಾಕರಣಗಳ ಗಾಢವಾದ ಪರಿಚಯವಿತ್ತು. ಹಾಗಾಗಿ ಎಲ್ಲ ವ್ಯಾಕರಣಗಳ ಉತ್ತಮಾಂಶಗಳನ್ನು ಕ್ರೋಢೀಕರಿಸಿ ಈ ಕೃತಿಯನ್ನು ನಿರ್ಮಾಣ ಮಾಡಿರುವುದರಿಂದ ಭೋಜನ ಪ್ರಯತ್ನ ಬೆಲೆಯುಳ್ಳುದಾಗಿದೆ.

## ಸಿದ್ಧಹೇಮ ಶಬ್ದಾನುಶಾಸನ

ಜೈನ ವೈಯಾಕರಣರಲ್ಲಿ ಅತ್ಯಂತ ಪ್ರಸಿದ್ಧನಾದವನು ಹೇಮಚಂದ್ರಸೂರಿ. ಈತನು ಜೈನಮುನಿಯಾಗಿದ್ದು 'ಕಲಿಕಾಲ ಸರ್ವಜ್ಞ' ಎಂಬ ಹೊಗಳಿಕೆಗೆ ಪಾತ್ರನಾದವನು. ಇವನ ಜೀವಿತಾವಧಿ ಕ್ರಿ. ಶ. 1089-1173. ಗುಜರಾತಿನ ಸಿದ್ಧರಾಜ ಜಯಸಿಂಹ ಮತ್ತು ಅವನ ಮಗ ಕುಮಾರಪಾಲನ ಆಶ್ರಯದಲ್ಲಿ ಈತನಿದ್ದಂತೆ ತಿಳಿದು ಬರುತ್ತದೆ. ಭೋಜರಾಜನಂತೆ ಈತನೂ ಅಸಾಮಾನ್ಯ ವಿದ್ವಾಂಸನಾಗಿದ್ದು ವ್ಯಾಕರಣ, ನ್ಯಾಯ, ಛಂದಸ್ಸು, ಕಾವ್ಯ, ಧರ್ಮ—ಇವೆಲ್ಲವುಗಳ ಕುರಿತು ಕೃತಿರಚನೆ ಮಾಡಿದ್ದಾನೆ.

'ಸಿದ್ಧಹೇಮ ಶಬ್ದಾನುಶಾಸನ'ವೆಂದು ಹೇಮಚಂದ್ರನ ವ್ಯಾಕರಣ ಕೃತಿಗೆ ಹೆಸರು. ಇದಕ್ಕೂ ಮೂಲ ಆಧಾರ ಅಷ್ಟಾಧ್ಯಾಯಿ. ಅದರ ಸುಧಾರಣೆ ಮತ್ತು ಅದರಲ್ಲಿ ಪೂರ್ಣತೆಯನ್ನು ಸಾಧಿಸುವುದೇ ಈ ಕೃತಿರಚನೆಯ ಮೂಲೋದ್ದೇಶ. ಸಿದ್ಧಹೇಮ ಶಬ್ದಾನುಶಾಸನದಲ್ಲಿ 8 ಅಧ್ಯಾಯಗಳಿವೆ. ಪ್ರತಿಯೊಂದರಲ್ಲೂ ನಾಲ್ಕು ನಾಲ್ಕು ಪಾದಗಳಿವೆ. ಮೊದಲನೆ ಏಳು ಅಧ್ಯಾಯಗಳು ಸಂಸ್ಕೃತಭಾಷೆಯನ್ನು ವಿವೇಚಿಸಿದರೆ ಕೊನೆಯ ಅಧ್ಯಾಯ ಪ್ರಾಕೃತದ ವ್ಯಾಕರಣವನ್ನು ಹೇಳುತ್ತದೆ.[5]

ಸಿದ್ಧಹೇಮ ಶಬ್ದಾನುಶಾಸನ ಪ್ರಕ್ರಿಯಾ ಶೈಲಿಯಲ್ಲಿದೆ. ಸಂಜ್ಞಾ, ಸ್ವರಸಂಧಿ ವ್ಯಂಜನಸಂಧಿ, ನಾಮ, ಕಾರಕ, ಷತ್ವ–ಣತ್ವ–ಪ್ರಕರಣ, ಸ್ತ್ರೀ ಪ್ರತ್ಯಯ, ಸಮಾಸ, ಆಖ್ಯಾತ, ಕೃದಂತ, ತದ್ಧಿತ–ಹೀಗೆ ವಿಷಯಾನುಕ್ರಮ ಪ್ರಕ್ರಿಯಾನುಸಾರವಾಗಿದೆ. ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಇದು ಅತ್ಯಂತ ಪರಿಪೂರ್ಣವಾದ ಗ್ರಂಥವಾಗಿದೆ. ಇದರ ಮೇಲೆ ಹಿಂದಿನ ಹಲವಾರು ವ್ಯಾಕರಣಗಳ ಪ್ರಭಾವ ನಿಚ್ಚಳವಾಗಿದೆ. ಪಾರಿಭಾಷಿಕ ಪದಗಳ ಸಂಕ್ಷಿಪ್ತತೆಯಲ್ಲಿ ಜೈನೇಂದ್ರದ ಹಾಗೂ ವಿಷಯಾನುಕ್ರಮದಲ್ಲಿ ಕಾತಂತ್ರದ ಪ್ರಭಾವವಿದೆ. ಮಹಾಭಾಷ್ಯದಲ್ಲಿ ಎತ್ತಿದ ಸಂದೇಹ ಮತ್ತು ಸಮಾಧಾನಗಳಿಗೆ ಗಮನವಿತ್ತಿರುವಲ್ಲಿ ಚಾಂದ್ರದ ಪ್ರಭಾವವನ್ನು ಗುರುತಿಸಬಹುದು. ಶಾಕಟಾಯನ ವ್ಯಾಕರಣದ ಅಮೋಘಾ ವೃತ್ತಿಯ ಪ್ರಭಾವವೂ ಕೆಲವೆಡೆಗಳಲ್ಲಿ ಗೋಚರಿಸುತ್ತದೆ.

ಸಿದ್ಧಹೇಮ ಶಬ್ದಾನುಶಾಸನಕ್ಕೆ ಸಂಬಂಧಿಸಿದಂತೆ ಸ್ವೋಪಜ್ಞಾಲಘುವೃತ್ತಿ, ಸ್ವೋಪಜ್ಞಾಬೃಹತ್ ವೃತ್ತಿ, ಅದರ ಬೃಹತ್‌ನ್ಯಾಸ, ಧಾತುಪಾಠ ಮತ್ತು ಧಾತು ಪಾರಾಯಣ ವ್ಯಾಖ್ಯೆ, ಸವೃತ್ತಿ ಉಣಾದಿ ಸೂತ್ರ, ಲಿಂಗಾನು ಶಾಸನ ಮತ್ತದರ ವೃತ್ತಿ–ಇವೆಲ್ಲವುಗಳನ್ನು ರಚಿಸಿರುವುದು ಅವನ ವ್ಯಾಕರಣ ವೈದುಷ್ಯಕ್ಕೆ ಸಾಕ್ಷಿಯಾಗಿದೆ.

ಹೇಮಚಂದ್ರನು ಕುಮಾರಪಾಲನ ಆಶ್ರಯದಲ್ಲಿದ್ದುಕೊಂಡು ರಚಿಸಿದ 'ಕುಮಾರಪಾಲಚರಿತ' ಒಂದು ವಿಶಿಷ್ಟವಾದ ಕಾವ್ಯವಾಗಿದೆ. ಒಂದೆಡೆ ಇದು ಕುಮಾರಪಾಲನ ಚರಿತೆಯ ವರ್ಣನೆ ಮಾಡಿದರೆ ಇನ್ನೊಂದೆಡೆ ಸಿದ್ಧಹೇಮ ಶಬ್ದಾನುಶಾಸನದ ಎಂಟೂ ಅಧ್ಯಾಯಗಳಲ್ಲಿ ಪ್ರತಿಪಾದಿತ ವ್ಯಾಕರಣಾಂಶಗಳಿಗೆ ಪ್ರಯೋಗಗಳನ್ನು ಕೊಡುತ್ತದೆ. ಹಾಗಾಗಿ ಇದಕ್ಕೆ 'ದ್ವ್ಯಾಶ್ರಯ ಕಾವ್ಯ' ಎಂಬುದು ಅನ್ವರ್ಥವಾಗಿದೆ. ಇದರ ಎಂಟನೇ ಅಧ್ಯಾಯ ಪೂರ್ಣವಾಗಿ ಪ್ರಾಕೃತದಲ್ಲಿರುವುದು ಇದರ ಇನ್ನೊಂದು ವೈಶಿಷ್ಟ್ಯ.

ಸಿದ್ಧಹೇಮ ಶಬ್ದಾನುಶಾಸನದ ಎಂಟನೇ ಅಧ್ಯಾಯ ಪ್ರಾಕೃತ ಮತ್ತು ಅಪಭ್ರಂಶ ಭಾಷೆಗಳ ವ್ಯಾಕರಣವನ್ನು ಹೇಳುತ್ತದೆಯಷ್ಟೆ. ಈ ವಿಧವಾಗಿ ಸಂಸ್ಕೃತ ಭಾಷೆಯ ವ್ಯಾಕರಣದೊಂದಿಗೆ ಪ್ರಾಕೃತ ಹಾಗೂ ಅಪಭ್ರಂಶ ಭಾಷೆಗಳ ವ್ಯಾಕರಣವನ್ನು ಹೇಳುವ ದಿಸೆಯಲ್ಲಿ ಹೇಮಚಂದ್ರನದೇ ದಿಟ್ಟ ಹಾಗೂ ಮೊದಲ ಹೆಜ್ಜೆ. ಈ ಅಧ್ಯಾಯದ ನಾಲ್ಕನೇ ಪಾದದಲ್ಲಿ ಶೌರಸೇನೀ, ಮಾಗಧೀ, ಪೈಶಾಚೀ, ಚೂಲಿಕಾ ಪೈಶಾಚೀ, ಅಪಭ್ರಂಶ—ಹೀಗೆ ಐದು ಭಾಷೆಗಳ ವ್ಯಾಕರಣಾಂಶಗಳ ವಿಚಾರ ಬರುತ್ತದೆ. ಸಂಸ್ಕೃತ ಮತ್ತು ಪ್ರಾಕೃತಗಳ ಜತೆಯಲ್ಲಿ ಅಪಭ್ರಂಶವನ್ನು ಸೇರಿಸಿಕೊಂಡು ಒಂದು ಚಿಂತನೆಯ ಹೊಸಮುಖಕ್ಕೆ ಜನ್ಮಕೊಟ್ಟುದು ಹೇಮಚಂದ್ರನ ಹಿರಿಮೆಗಳಲ್ಲಿ ಒಂದಾಗಿದೆ. ''ಹಾಗೆ ನೋಡಿದರೆ ಜೈನ ವೈಯಾಕರಣರು ಮತ್ತು ವಿದ್ವಾಂಸರು ಲೋಕ ಮತ್ತು ವಿದ್ವತ್ತಿನ ಮಧ್ಯೆ ಒಂದು ಸೇತುವೆ ನಿರ್ಮಿಸುವ ಪ್ರಯತ್ನ ಮಾಡಿದರು'' (ಸಂ.ವ್ಯಾ.ವಿ.ಪು.397) ಎಂದೇ ಹೇಳಬೇಕು. ಪ್ರಾಕೃತ ವ್ಯಾಕರಣಗಳಲ್ಲಿ ಪಶ್ಚಿಮ ಶಾಖೆಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಉಪಲಬ್ಧ ವ್ಯಾಕರಣವೆಂದರೆ ಸಿದ್ಧಹೇಮ ಶಬ್ದಾನುಶಾಸನದ ಎಂಟನೆಯ ಅಧ್ಯಾಯ (AGPL Introduction p. 3) ವೆಂಬುದು ಗಮನಾರ್ಹ.

ಸಿದ್ಧಹೇಮ ಶಬ್ದಾನುಶಾಸನ ಪ್ರಕ್ರಿಯಾತ್ಮಕ ವ್ಯಾಕರಣವಾಗಿದ್ದರೂ ಅದನ್ನು ಮತ್ತಷ್ಟು ಶುದ್ಧ ಪ್ರಕ್ರಿಯಾತ್ಮಕ ಗ್ರಂಥವನ್ನಾಗಿ ಮಾಡಲು 'ಉಪಾಧ್ಯಾಯಮಿನಯ ವಿಜಯಗಣೀ' (ಕ್ರಿ. ಶ. 17ನೆಯ ಶತಕ) ಎಂಬಾತನು ಪ್ರಯತ್ನಿಸಿದ್ದಾನೆ. ಹೈಮ ಪ್ರಕಾಶ ಮಹಾ ವ್ಯಾಕರಣವು ಆ ಪ್ರಯತ್ನದ ಫಲಶ್ರುತಿ.

ಪಾಣಿನ್ಯುತ್ತರ ಯುಗದ ವ್ಯಾಕರಣಗಳಲ್ಲಿ ಸಿದ್ಧಹೇಮ ಶಬ್ದಾನುಶಾಸನವು ಪಶ್ಚಿಮ ಭಾರತದಲ್ಲಿ ಹೆಚ್ಚು ಪ್ರಚಾರವನ್ನು ಹೊಂದಿದ ಕೃತಿಯಾಗಿದೆ.

## ಸಾರಸ್ವತ ವ್ಯಾಕರಣ

ವ್ಯಾಕರಣದ ಪ್ರಾಚ್ಯ ಮತ್ತು ಔದೀಚ್ಯ ಶಾಖೆಗಳೆರಡರ ತತ್ವಗಳನ್ನೂ ಒಟ್ಟಿಗೆ ಮೈಗೂಡಿಸಿಕೊಂಡು ಬಂದ ವ್ಯಾಕರಣವೇ ಸಾರಸ್ವತ ವ್ಯಾಕರಣ. ಈ ವ್ಯಾಕರಣ ಸಂಪ್ರದಾಯ ಸುಮಾರು ಕ್ರಿ. ಶ. 10ನೇ ಶತಮಾನದಲ್ಲಿ ತೊಡಗಿರಬೇಕೆಂದು ಊಹಿಸ ಲಾಗಿದೆ (ಸಂ. ವ್ಯಾ. ವಿ. ಪು. 391). ಮೂಲ ಸಾರಸ್ವತ ವ್ಯಾಕರಣ ಈಗ ಅಲಭ್ಯ 'ಸಾರಸ್ವತ ಪ್ರಕ್ರಿಯಾ' ಎಂಬ ಹೆಸರಿನಲ್ಲಿ ಪ್ರಚಾರದಲ್ಲಿರುವ ಸಾರಸ್ವತ ವ್ಯಾಕರಣ ಕ್ರಿ.ಶ. 13–14 ನೇ ಶತಕಗಳ ನಡುವೆ ಹುಟ್ಟಿಕೊಂಡಿರಬೇಕೆಂಬ ಅಭಿಪ್ರಾಯವಿದೆ (ಅದೇ). ಈ ಗ್ರಂಥದ ಕರ್ತೃ ಅನುಭೂತಿ ಸ್ವರೂಪಾಚಾರ್ಯ.

ಸಾರಸ್ವತ ಪ್ರಕ್ರಿಯೆಯಲ್ಲಿ ಸಂಜ್ಞಾ, ಪರಿಭಾಷಾ, ಸ್ವರಸಂಧಿ, ಪ್ರಕೃತಿಭಾವ, ವ್ಯಂಜನಸಂಧಿ ಮೊದಲಾಗಿ ಪ್ರಕ್ರಿಯೆಗನುಸಾರ ವಿಷಯಗಳ ನಿರೂಪಣೆಯಿದೆ. ವರ್ಣ ಸಮಾಮ್ನಾಯ, ವರ್ಣವಿಭಾಗ, ಸಂಧಿ ಪ್ರಕರಣ, ಇವುಗಳೆಲ್ಲ ಪ್ರಾಚ್ಯ ಪರಂಪರೆಗೆ ಅನುಸಾರವಾಗಿವೆ. ಪಾಣಿನಿಯ ಪ್ರತ್ಯಾಹಾರ ಪದ್ಧತಿಯನ್ನೂ ಅಲ್ಲಿನ ಕೆಲವು ಪರಿಭಾಷೆ ಗಳನ್ನೂ ಇದರಲ್ಲಿ ಸೇರ್ಪಡೆಗೊಳಿಸಲಾಗಿದೆ. ಹಾಗಾಗಿ ಸಾರಸ್ವತ ವ್ಯಾಕರಣವು ಐಂದ್ರ ಮತ್ತು ಪಾಣಿನಿ ಸಂಪ್ರದಾಯಗಳ ಮಧ್ಯವರ್ತಿಯಾಗಿದೆ.

ಸಾರಸ್ವತ ವ್ಯಾಕರಣವೂ ಅಷ್ಟಾಧ್ಯಾಯಿಯನ್ನು ಸರಲ ಹಾಗೂ ಸಂಗ್ರಹಗೊಳಿಸುವ ದೃಷ್ಟಿಯಿಂದ ಹುಟ್ಟಿಕೊಂಡಿದೆ. ಇವೆರಡರಲ್ಲೂ ಇದು ಯಶಸ್ವಿಯಾಗಿದೆ. ವೈದಿಕೀಯ ಪ್ರಕ್ರಿಯೆಗಳನ್ನೂ ಉಣಾದಿ ವಿವರಣೆಗಳನ್ನೂ ಇದರಲ್ಲಿ ಪೂರ್ಣವಾಗಿ ಬಿಟ್ಟುಬಿಡಲಾಗಿದೆ. "ಒಟ್ಟಿನಲ್ಲಿ ಈ ವ್ಯಾಕರಣದ ಮುಖ್ಯೋದ್ದೇಶ ವ್ಯಾಕರಣಕ್ಕಾಗಿ ವ್ಯಾಕರಣವಲ್ಲ; ಸಾಹಿತ್ಯಾಭ್ಯಾಸಕ್ಕಾಗಿ ವ್ಯಾಕರಣ" (ಪ್ರಾ. ಕ. ವ್ಯಾ. ಪು. 38) ಎಂಬುದಾಗಿದೆ. ಬಿಹಾರ ಮತ್ತು ವಾರಣಾಸಿಯಲ್ಲಿ ಇದು ಹೆಚ್ಚು ಪ್ರಚಾರದಲ್ಲಿದೆ.

## ಇತರ ವ್ಯಾಕರಣಗಳು

ಬೋಪದೇವನ (ಕ್ರಿ. ಶ. 13ನೆಯ ಶತಮಾನ) ಮುಗ್ಧಬೋಧ, ಕ್ರಮದೀಶ್ವರನ ಸಂಕ್ಷಿಪ್ತಸಾರ, ಪದ್ಮನಾಭ ಭಟ್ಟನ ಸೌಪದ್ಮ ವ್ಯಾಕರಣ (ಕ್ರಿ. ಶ. 1375)— ಇವೇ

ಮೊದಲಾದುವು ಇತರ ಮುಖ್ಯ ವ್ಯಾಕರಣಗಳು. ಆದರೆ ಇವು ಹೆಚ್ಚಿನ ಪ್ರಚಾರವನ್ನು ಪಡೆದಿಲ್ಲ.

**ವ್ಯಾಕರಣದ ಉಳಿದ ಅಂಗಗಳು**

ಸೂತ್ರಪಾಠ (ಶಬ್ದಾನುಶಾಸನ ಅಥವಾ ಸೂತ್ರಾತ್ಮಕ ವ್ಯಾಕರಣ), ಧಾತುಪಾಠ ಉಣಾದಿಪಾಠ, ಗಣಪಾಠ (ಪ್ರಾತಿಪಾದಿಕ ಪಾಠ) ಮತ್ತು ಲಿಂಗಾನುಶಾಸನ-ಇವನ್ನು ಒಟ್ಟಿಗೆ ಪಂಚಾಂಗ ವ್ಯಾಕರಣವೆಂದು ಹೇಳುವುದು ಕ್ರಮ. ಸಾಧಾರಣವಾಗಿ ವ್ಯಾಕರಣವೆಂದೊಡನೆ ಸೂತ್ರಪಾಠ ಮಾತ್ರ ಕಣ್ಣೆದುರು ಸುಳಿಯುತ್ತದೆ. ನಿಜವಾಗಿ ಉಳಿದ ನಾಲ್ಕು ಅಂಗಗಳೂ ಸೂತ್ರಪಾಠಕ್ಕೆ ಪೂರಕವಾಗಿವೆ. ವ್ಯಾಕರಣವು ಪರಿಪೂರ್ಣವೆನಿಸಬೇಕಾದರೆ ಅವುಗಳನ್ನು ವಿಚಾರಿಸಲೇಬೇಕು. ಪಾಣಿನಿಪೂರ್ವಯುಗದಲ್ಲೇ ವ್ಯಾಕರಣದ ಪಂಚಾಂಗಗಳು ಕ್ರಮಬದ್ಧವಾಗಿ ವಿಕಾಸಗೊಂಡಿದ್ದುವು ಎಂದು ನಂಬಲು ಆಧಾರಗಳಿವೆ.

ಧಾತುಪಾಠವೆಂದರೆ ಧಾತು ಮತ್ತು ಅದರ ಅರ್ಥ ನಿರ್ದೇಶ. ಹೆಚ್ಚಿನ ಎಲ್ಲ ವ್ಯಾಕರಣಗಳಿಗೂ ಹೊಂದಿಕೊಂಡು ಧಾತುಪಾಠಗಳ ರಚನೆಯಾಗಿದೆ.

ಉಣಾದಿ ಪಾಠ ಕೃದಂತಕ್ಕೆ ಸಂಬಂಧಿಸಿದುದಾಗಿದೆ. " 'ಉ' ಪ್ರತ್ಯಯದಿಂದ (ಉಣ್) ಆರಂಭವಾಗುವ ವಿಶಿಷ್ಟ ಜಾತಿಯ ಪ್ರತ್ಯಯಗಳ ಮೂಲಕ, ಸಂಸ್ಕೃತ ಧಾತುಗಳಿಂದ ನಾಮಪದಗಳನ್ನು ನಿವೃತ್ತಿ ಮಾಡುವ ಬಗ್ಗೆ ಇರತಕ್ಕ ನಿಯಮಗಳನ್ನು" (ಭಾ ಸಾ. ಚ. ಪು. 27) ಉಣಾದಿ ಸೂತ್ರಗಳು ಹೇಳುತ್ತವೆ. ಸರಸ್ವತೀ ಕಂಠಾಭರಣದಲ್ಲಿ ಪ್ರತ್ಯೇಕವಾದ ಉಣಾದಿ ಪಾಠವಿಲ್ಲ. ಪಾಲ್ಯಕೀರ್ತಿಯ ಉಣಾದಿಪಾಠ ಅನುಪಲಬ್ಧವಾಗಿದೆ. ಉಳಿದೆಲ್ಲ ಮುಖ್ಯವಾದ ವ್ಯಾಕರಣಗಳ ಉಣಾದಿಪಾಠಗಳು ದೊರಕಿವೆ.

ಸೂತ್ರ ನಿರ್ದಿಷ್ಟವಾದ ಪ್ರಾತಿಪದಿಕಗಳನ್ನು ಒಂದೆಡೆ ಒಟ್ಟಿಗೆ ಕೊಡುವ ಪಾಠವೆ ಗಣಪಾಠ. ಸಮಾನ ವ್ಯಾಕರಣ ಪ್ರಕ್ರಿಯೆಗಳಿಗೆ ಒಳಪಡುವ ಪದಗಳನ್ನು ಒಂದೊಂದು ಗುಂಪಾಗಿ ಮಾಡಲಾಗುತ್ತದೆ. ತ್ಯದಾದಿ, ಯುವಾದಿ, ಸ್ವರ್ಗಾದಿ ಮೊದಲಾದುವು ಅಂತಹ ಗಣಗಳು. ಭೋಜನ ಹೊರತಾದ ಹೆಚ್ಚಿನ ವೈಯಾಕರಣರು ಗಣಪಾಠವನ್ನು ರಚಿಸಿದ್ದಾರೆ.

ಪುಂ, ಸ್ತ್ರೀ, ನಪುಂಸಕ ಲಿಂಗ ನಿರ್ದೇಶವನ್ನು ಮಾಡುವ ವ್ಯಾಕರಣಾಂಗಕ್ಕೆ ಲಿಂಗಾನುಶಾಸನವೆಂದು ಹೆಸರು. ಪಾಣಿನಿ, ಪಾಲ್ಯಕೀರ್ತಿ, ಹೇಮಚಂದ್ರ ಮೊದಲಾದವರು ರಚಿಸಿದ ಲಿಂಗಾನುಶಾಸನಗಳು ಉಪಲಬ್ಧವಾಗಿವೆ. ಶಾಕಟಾಯನ ವ್ಯಾಕರಣದ ಪ್ರಥಮಾಧ್ಯಾಯದ ದ್ವಿತೀಯ ಪಾದದ ಮೊದಲ ಸೂತ್ರದ ವ್ಯಾಖ್ಯೆಯಲ್ಲಿ 69 ಕಾರಿಕೆಗಳಿವೆ. ಅಲ್ಲಿ ನಪುಂಸಕ ಲಿಂಗ, ಪುಲ್ಲಿಂಗ, ಸ್ತ್ರೀಲಿಂಗ, ಉಭಯಲಿಂಗ, ತ್ರಿಲಿಂಗ ಮತ್ತು ಅಲಿಂಗ—ಈ ಕ್ರಮದಲ್ಲಿ ಲಿಂಗ ನಿರ್ದೇಶವಿದೆ.

## ಕನ್ನಡ ನಾಡಿನಲ್ಲಿ ಸಂಸ್ಕೃತ ವ್ಯಾಕರಣಗಳು

ಕನ್ನಡ ನಾಡಿನಲ್ಲಿ ಸಂಸ್ಕೃತದ ಅಧ್ಯಯನಕ್ಕೆ ವಿಶೇಷವಾದ ಪ್ರಾಶಸ್ತ್ಯವಿತ್ತು ಎಂದು ಹೇಳಲು ತಕ್ಕಷ್ಟು ಆಧಾರಗಳಿವೆ. ಪ್ರಾಚೀನ ಕಾಲದಲ್ಲಿ ಭಾಷಾಧ್ಯಯನವು ವ್ಯಾಕರಣಾಧ್ಯಯನದ ಮೂಲಕವೇ ನಡೆಯುತ್ತಿದ್ದುದರಿಂದ ಸಂಸ್ಕೃತದ ವಿಭಿನ್ನ ವ್ಯಾಕರಣ ಪದ್ಧತಿಗಳು ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದ್ದುವು. ಈ ಬಗ್ಗೆ ಕನ್ನಡ ನಾಡಿನ ಶಾಸನಗಳು ಸಾಕ್ಷಿ ಹೇಳುತ್ತವೆ. ಅಂದು ಸಂಸ್ಕೃತ ವ್ಯಾಕರಣಗಳ ಅಧ್ಯಯನ, ಅಧ್ಯಾಪನಗಳು ಧಾರಾಳವಾಗಿ ನಡೆಯುತ್ತಿದ್ದುವು. ಒಬ್ಬನೇ ವ್ಯಕ್ತಿ ಹಲವಾರು ವ್ಯಾಕರಣ ಪದ್ಧತಿಗಳಲ್ಲಿ ನಿಷ್ಣಾತನಾಗುವುದೂ ಆ ಕಾಲದಲ್ಲಿ ರೂಢಿಯಲ್ಲಿತ್ತು. ಮುಳುಗುಂದ ಶಾಸನದಲ್ಲಿ (ಕ್ರಿ. ಶ. 1053) ಹೊಗಳಿರುವ ನಯಸೇನ ಪಂಡಿತ ಅಂತಹ ಒಬ್ಬ ವ್ಯಾಕರಣ ಪಂಡಿತ.

> "ಚಾಂದ್ರಂ ಕಾತಂತ್ರಂ ಜೈ
> ನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮು
> ತ್ತ್ಯೆಂದ್ರಂ ನರೇಂದ್ರಸೇನ ಮು
> ನೀಂದ್ರಂಗೇಕಾಕ್ಷರಂ ಪೆಜಂಗಿವು ಮೊಗ್ಗೇ
>
> ನಿನಗೇನೆಂಬೆನೊ ಶಾಕಟಾಯನ ಮುನೀಶಂ ತಾನೆ ಶಬ್ದಾನು ಶಾ
> ಸನದೊಳ್ ಪಾಣಿನಿ ಪಾಣಿನೀಯದೊಳ್ ಚಂದ್ರಂ ಚಾಂದ್ರದೊಳ್ ತಜ್ಞನೇ
> ನ್ದ್ರನೆ ಜೈನೇಂದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪೋಲ್ವರೆ
> ನ್ತೆನೆ ಪೋಲನ್ನಯಸೇನ ಪಂಡಿತರೊಳನ್ಯರ್ವ್ವಾರ್ಥ್ಧಿ ವೀತೋರ್ವ್ವಿಯೊಳ್"

(ಕನ್ನಡ ಶಾಸನ ಸಂಪದ ಪು. 33-34)

ಸಂಸ್ಕೃತದಲ್ಲಿ ಪ್ರಸಿದ್ಧವಾದ ಆರು ವ್ಯಾಕರಣ ಸಂಪ್ರದಾಯಗಳು ಈ ಶಾಸನದಲ್ಲಿ ಉಲ್ಲೇಖಿತವಾಗಿರುವುದನ್ನು ನೋಡಿದರೆ ಅಂದು ಕರ್ಣಾಟಕದಲ್ಲಿ ಸಂಸ್ಕೃತ ವ್ಯಾಕರಣಾಭ್ಯಾಸದತ್ತ ಎಂತಹ ಗಾಢವಾದ ಆಸಕ್ತಿಯಿತ್ತೆಂಬುದು ಸ್ಫುಟವಾಗುತ್ತದೆ.

ನಾಗಾವಿ ಶಾಸನದಲ್ಲಿ (ಕ್ರಿ. ಶ. 1058) "....ನ್ಯಾಸವ್ಯಾಖ್ಯಾತೃಗೆ ಮತ್ತರು 30" (ಕನ್ನಡ ಶಾಸನ ಸಂಪದ) ಎಂದು ಬಣ್ಣಿಸಿರುವಲ್ಲಿ ಬಹುಶಃ ಜಿನೇಂದ್ರ ಬುದ್ಧಿಯ (ಕ್ರಿ. ಶ. 750) 'ನ್ಯಾಸ'ವನ್ನು (ಕಾಶಿಕಾ ವಿವರಣ ಪಂಜಿಕಾ) ಹೇಳಿರಬೇಕೆಂದು ತೋರುತ್ತದೆ.

ಕೋಡಿಯ ಮಠವನ್ನು ಬಣ್ಣಿಸುವ ಶಿಕಾರಿಪುರ ಶಾಸನದಲ್ಲಿ "....ಕೌಮಾರ ಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನಸ್ಥಾನಮುಂ... ಆಗಿ ಕೋಡಿಯ ಮಠವಿರ್ಪುದು" (ಪ್ರಾ. ಕ. ವ್ಯಾ. ಪು. 11ರ ಅಡಿಟಿಪ್ಪಣಿ) ಎಂದು ಹೇಳಿರುವುದೂ ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಒಟ್ಟಿನಲ್ಲಿ ಸಂಸ್ಕೃತದ ಹೆಚ್ಚಿನ ವ್ಯಾಕರಣ ಸಂಪ್ರದಾಯಗಳನ್ನು ಕರ್ನಾಟಕದಲ್ಲಿ ಅಭ್ಯಾಸ ಮಾಡುತ್ತಿದ್ದುದಲ್ಲದೆ ಅವುಗಳಲ್ಲಿ ವಿಶೇಷವಾದ ಪಾಂಡಿತ್ಯವನ್ನು ಪ್ರಾಚೀನರು ಗಳಿಸಿಕೊಳ್ಳುತ್ತಿದ್ದರೆಂಬುದು ನಿಸ್ಸಂದೇಹ.

ಸಂಸ್ಕೃತ ವ್ಯಾಕರಣಗಳ ಅಧ್ಯಯನ—ಅಧ್ಯಾಪನ ಮಾತ್ರವಲ್ಲ; ವಿಶಿಷ್ಟವಾದ ವ್ಯಾಕರಣ ಸಂಪ್ರದಾಯಗಳ ನಿರ್ಮಾಣದಲ್ಲೂ ಕನ್ನಡಿಗರ ಪಾತ್ರ ಹಿರಿದಾಗಿದೆ. ವಿಭಿನ್ನ ವ್ಯಾಕರಣ ಪದ್ಧತಿಗಳ ಅಧ್ಯಯನ ಸೌಲಭ್ಯಕ್ಕಾಗಿ ಟೀಕಾಗ್ರಂಥಗಳನ್ನು ಪ್ರಾಚೀನ ಕನ್ನಡಿಗರು ನಿರ್ಮಿಸಿ ಯಶಸ್ವಿಯಾಗಿದ್ದಾರೆ. ಬೋಪದೇವ ಹೇಳುವ ಎಂಟು ಜನ 'ಆದಿ ಶಾಬ್ದಿಕ'ದಲ್ಲಿ ಪೂಜ್ಯಪಾದ ಮತ್ತು ಶಾಕಟಾಯನರ ಹೆಸರು ಸೇರಿರುವುದರಿಂದ ಈ ಕನ್ನಡಿಗರು ಅಖಿಲಭಾರತ ಮಟ್ಟದಲ್ಲಿ ಕೀರ್ತಿಶಾಲಿಗಳಾಗಿರುವುದು ಸುಸ್ಪಷ್ಟ. ಜೈನೇಂದ್ರ ಮತ್ತು ಶಾಕಟಾಯನ ವ್ಯಾಕರಣಗಳ ಬಗ್ಗೆ ಹಿಂದೆಯೇ ವಿಚಾರಿಸಲಾಗಿದೆಯಷ್ಟೆ.

ದೇವಚಂದ್ರನ ರಾಜಾವಳೀಕಥೆ ಮತ್ತು ಚಂದ್ರಯ್ಯನ ಪೂಜ್ಯಪಾದಚರಿತದಿಂದ ತಿಳಿದು ಬರುವ ಹಾಗೆ ಪೂಜ್ಯಪಾದನು ಕರ್ನಾಟಕದವನು. ಈತನು ಜೈನೇಂದ್ರ ವ್ಯಾಕರಣ ವೆಂಬ ಪ್ರತ್ಯೇಕವಾದ ಒಂದು ವ್ಯಾಕರಣ ಪದ್ಧತಿಗೆ ಮೂಲಪುರುಷನು. ಪೂಜ್ಯಪಾದನು ಪಾಣಿನಿಯ ವ್ಯಾಕರಣಕ್ಕೆ ಶಬ್ದಾವತಾರ ವೆಂಬ ನ್ಯಾಸವನ್ನು ಬರೆದಿದ್ದನೆಂದು ನಗರ ತಾಲ್ಲೂಕಿನ 46ನೇ ಶಾಸನದಲ್ಲಿ ಬರೆದಿದೆ. ವೃತ್ತವಿಲಾಸನ "ಬರೆದಂ ಪಾಣಿನೀಯಕ್ಕೆ ಟೀಕಂ" ಎಂಬ ಉಕ್ತಿಯಲ್ಲಿ ಕಾಣುವ ಗ್ರಂಥ ಇದೇ ಇರಬಹುದು (ಕ. ಕ. ಸಂ. 1. ಅನುಬಂಧ. 2. ಪು. 28). 'ಶಬ್ದಾವತಾರ'ದ ಕರ್ತೃವಾದ ಪೂಜ್ಯಪಾದ ಜೈನೇಂದ್ರ ವ್ಯಾಕರಣದ ಕರ್ತೃವಿಗಿಂತ ಭಿನ್ನನೂ ಅರ್ವಾಚೀನನೂ ಎನ್ನುವ ಇನ್ನೊಂದು ಹೇಳಿಕೆ ಯಿದೆ (ಸಂ. ವ್ಯಾ. ವಿ. ಪು. 361). ಯಾವುದನ್ನೂ ಖಚಿತವಾಗಿ ಹೇಳಲು ಆಧಾರ ಸಾಮಗ್ರಿ ಸಾಲದು.

## ದುರ್ವಿನೀತ

ಗಂಗಪ್ರಭು ದುರ್ವಿನೀತನ ಕಾಲ ಕ್ರಿ. ಶ. 495–535 ಎಂದು ಡಾ. ಎಸ್. ಶ್ರೀಕಂಠ ಶಾಸ್ತ್ರಿಗಳು ನಿಶ್ಚಯಿಸಿದ್ದಾರೆ. ಗುಮ್ಮರೆಡ್ಡಿಪುರ ಶಾಸನದಲ್ಲಿ "ಶಬ್ದಾವತಾರ ಕಾರೇಣ ದೇವಭಾರತೀ ನಿಬದ್ಧವದ್ಧಕಥೇನ ಕಿರಾತಾರ್ಜುನೀಯೇ ಪಂಚದಶಸರ್ಗ ಟೀಕಾಕಾರೇಣ" (ದುರ್ವಿನೀತ: ಪು. 54) ಎಂದು ದುರ್ವಿನೀತನನ್ನು ಹೊಗಳಿರುವುದ ರಿಂದ ಈತನು ಉದ್ದಾಮ ವಿದ್ವಾಂಸನೆಂದೂ ಶಬ್ದಾವತಾರವೆಂಬ ವ್ಯಾಕರಣ ಗ್ರಂಥ ವನ್ನು ಈತನು ಬರೆದಿರಬೇಕೆಂದೂ ತಿಳಿಯಬೇಕಾಗುತ್ತದೆ. ಪೂಜ್ಯಪಾದನ 'ಶಬ್ದಾವತಾರ' ದಂತೆ ಇದೂ ಇಂದು ಅಲಭ್ಯ. ಇಬ್ಬರ ಕೃತಿಗಳ ಹೆಸರೂ ಒಂದೇ ಆಗಿರುವುದನ್ನು ಗಮನಿಸಿದ ಡಾ. ಸಾಲೆತೊರೆಯವರು "ದುರ್ವಿನೀತನು ತನ್ನ ಗುರುವಾದ ಪೂಜ್ಯಪಾದರ ಮೇಲಿನ ಗೌರವ ಭಾವದಿಂದ ಅವರ ಗ್ರಂಥವಾದ ಶಬ್ದಾವತಾರವನ್ನು ಕನ್ನಡಕ್ಕೆ ಅನು ವಾದಿಸಿರಲೂ ಬಹುದೆಂದು ಅಭಿಪ್ರಾಯಪಟ್ಟರು."[7] ಆದರೆ ಪೂಜ್ಯಪಾದರ ಶಿಷ್ಯ ದುರ್ವಿನೀತ ಎಂಬ ಅಭಿಪ್ರಾಯಕ್ಕೂ ಪುಷ್ಟಿ ದೊರಕದೆ, ದುರ್ವಿನೀತನ ಕೃತಿ ಕನ್ನಡ ಅನುವಾದ ಎಂಬುದಕ್ಕೆ ಆಧಾರ ಸಾಲದೆ ಮೇಲಿನ ಅಭಿಪ್ರಾಯ ಬಿದ್ದುಹೋಗುವಂತಾ ಗಿದೆ. ಆರ್. ನರಸಿಂಹಾಚಾರ್ಯರು ದುರ್ವಿನೀತನ ಶಬ್ದಾವತಾರವು ಪಾಣಿನೀಯಕ್ಕೆ

ಸಂಸ್ಕೃತದಲ್ಲಿ ಬರೆದ ಟೀಕೆಯೆಂದೇ ನಂಬಿದ್ದಾರೆ. ಹಾಗಾದಲ್ಲಿ ಕನ್ನಡ ನಾಡಿನಲ್ಲಿ ಪಾಣಿನೀಯ ವ್ಯಾಕರಣಕ್ಕೆ ಟೀಕೆ ಬರೆದವರಲ್ಲಿ ದುರ್ವಿನೀತನೂ ಒಬ್ಬನಾಗುತ್ತಾನೆ.

ಶಬ್ದಾನುಶಾಸನ ವೆಂಬ ಸಂಸ್ಕೃತ ವ್ಯಾಕರಣ ಕರ್ತೃವಾದ ಶಾಕಟಾಯನನು ರಾಷ್ಟ್ರಕೂಟ ದೊರೆ ನೃಪತುಂಗ ಅಮೋಘವರ್ಷನ ಸಭಾಸದನೆಂಬುದನ್ನು ಹಿಂದೆಯೇ ವಿವರಿಸಲಾಗಿದೆ. ಕರ್ನಾಟಕವು ನೀಡಿದ ಎರಡನೆಯ ವ್ಯಾಕರಣ ಸಂಪ್ರದಾಯವೆ ಈ ಶಾಕಟಾಯನ ವ್ಯಾಕರಣ.

## ಗುಣನಂದಿ

ಈ ಹೆಸರಿನ ಹಲವಾರು ವ್ಯಕ್ತಿಗಳಿದ್ದಂತೆ ಶ್ರವಣಬೆಳಗೊಳದ ಶಾಸನಗಳಿಂದ ತಿಳಿದುಬರುತ್ತದೆ (ಶಾಸನ ಸಂ, 66, 117, 127) ಮಲ್ಲಿಕಾರ್ಜುನನ **ಸೂಕ್ತಿ ಸುಧಾರ್ಣವ** (1-26), ಕೇಶಿರಾಜನ **ಶಬ್ದಮಣಿದರ್ಪಣ** (ಸೂ. 5), ನಂಜುಂಡನ **ರಾಮನಾಥ ಚರಿತೆ** (1-33), ಭಟ್ಟಾಕಳಂಕನ **ಶಬ್ದಾನುಶಾಸನ**ಗಳಲ್ಲಿ ಗುಣನಂದಿಯ ಉಲ್ಲೇಖವಿದೆ. ಮೊದಲೆರಡು ಗ್ರಂಥಗಳಿಂದ ಆತ ಕವಿಯೆಂದೂ, ಮೂರನೆಯ ಗ್ರಂಥ ದಿಂದ ಕವಿ ಮತ್ತು ವಾದಿಯೆಂದೂ ಕೊನೆಯ ಗ್ರಂಥದಿಂದ ಯತಿಯೆಂದೂ ತಿಳಿದು ಬರುತ್ತದೆ (ಕ. ಪ. ಕ. ಸಾ. ಪು. 221). ಒಬ್ಬನೇ ಒಬ್ಬ ಗುಣನಂದಿಯನ್ನು ಕುರಿತಾಗಿ ಮೇಲಿನ ಗ್ರಂಥಗಳು ಹೇಳಿವೆಯೆಂದು ನಂಬಿದ ಕವಿಚರಿತೆಕಾರರು ಶ್ರವಣಬೆಳ್ಗೊಳದ ಶಾಸನ 66, 117, 127ರಲ್ಲಿ ಬರುವ ಗುಣನಂದಿಯೂ ಈತನೇ ಆಗಿರಬೇಕೆಂದು ಊಹಿಸಿದ್ದಾರೆ. ಅಲ್ಲಿ ಗುಣನಂದಿಯನ್ನು "ತರ್ಕ ವ್ಯಾಕರಣಾದಿ ಶಾಸ್ತ್ರ, ನಿಪುಣಃ ಸಾಹಿತ್ಯ ವಿದ್ಯಾಪತಿಃ" ಎಂದು ಹೊಗಳಿರುವುದನ್ನು ನೋಡಿದರೆ ಆತನು ಕವಿಯೂ ವೈಯಾಕರಣನೂ ಆಗಿದ್ದನೆಂದು ಒಪ್ಪಬೇಕಾಗುತ್ತದೆ. ಸೂಕ್ತಿ ಸುಧಾರ್ಣವದಲ್ಲಿ ಉಲ್ಲೇಖಿತನಾದ ಗುಣನಂದಿಯು ರಾಷ್ಟ್ರಕೂಟರ ಕಾಲದವನೆಂದು ಎ. ಸೀತಾರಾಮಯ್ಯ ನವರು ಹೇಳುತ್ತಾರೆ (Karnataka Through the Ages. p. 250).

ಗುಣನಂದಿ ಎಂಬ ವೈಯಾಕರಣನು ಜೈನೇಂದ್ರ ವ್ಯಾಕರಣಕ್ಕೆ ಭಾಷ್ಯರೂಪದಲ್ಲಿ ಗ್ರಂಥವೊಂದನ್ನು ಬರೆದಿರುವಂತೆ ತಿಳಿದುಬರುತ್ತದೆ. ಜೈನೇಂದ್ರ ವ್ಯಾಕರಣದ ದಾಕ್ಷಿಣಾತ್ಯ ಪಾಠಕ್ಕೆ '**ಶಬ್ದಾರ್ಣವ ಚಂದ್ರಿಕಾ**' ಎಂಬ ಟೀಕೆಯನ್ನು ಬರೆದ ಸೋಮದೇವಸೂರಿ ತನ್ನ ಟೀಕೆಯ ಕೊನೆಯಲ್ಲಿ "ಶ್ರೀ ಸೋಮದೇವಯತಿ ನಿರ್ಮಿತಮಾದಧಾತಿಯಾ ನೌಃ ಪ್ರತೀತ ಗುಣನಂದಿತ ಶಬ್ದವಾರ್ಧೌ" ಎಂದು ಹೇಳುತ್ತಾನೆ. ಇದರಿಂದ ಗುಣನಂದಿಯ ಕೃತಿಯ ಹೆಸರು '**ಶಬ್ದಾರ್ಣವ**' ಎಂದಾಗುತ್ತದೆ. ಇವನ ಕಾಲ ಹೆಚ್ಚು ಕಡಮೆ ಕ್ರಿ. ಶ. ಹತ್ತನೆಯ ಶತಮಾನ (ಸಂ. ವ್ಯಾ ವಿ. ಪು. 361). ಕವಿಚರಿತೆಕಾರರೂ ಗುಣನಂದಿಯ ಕಾಲವನ್ನು ಕ್ರಿ.ಶ. 900 ಎಂದು ನಿಶ್ಚೈಸಿರುವರಲ್ಲದೆ ಆತ ಜೈನೇಂದ್ರ ವ್ಯಾಕರಣಕ್ಕೆ ಪ್ರಕ್ರಿಯಾವತಾರ ವೆಂಬ ವ್ಯಾಖ್ಯಾನವನ್ನೂ ಬರೆದಿರುವುದಾಗಿ ಹೇಳುತ್ತಾರೆ. ಇವೆಲ್ಲವನ್ನೂ ಪರಾಂಬರಿಸಿದರೆ

ಗುಣನಂದಿ ಕನ್ನಡ ಕವಿಯಾಗಿರುವುದರ ಜೊತೆಯಲ್ಲಿ ಒಬ್ಬ ಸಂಸ್ಕೃತ ವೈಯಾಕರಣನೂ ಆಗಿದ್ದನೆಂದು ನಿರ್ಣಯಿಸಬಹುದು.

## ದಯಾಪಾಲ

ದಯಾಪಾಲ ಎಂಬ ವೈಯಾಕರಣನು (ಕ್ರಿ. ಶ. 1040) ರೂಪಸಿದ್ಧಿ ಎಂಬ ವ್ಯಾಕರಣ ಗ್ರಂಥವನ್ನು ರಚಿಸಿರುವಂತೆ ತಿಳಿದು ಬರುತ್ತದೆ. ಅದು ಶಾಕಟಾಯನ ವ್ಯಾಕರಣ ಪ್ರಕ್ರಿಯಾ ಗ್ರಂಥ. ಕೆಲವು ಕನ್ನಡ ಶಾಸನಗಳಲ್ಲಿ ರೂಪಸಿದ್ಧಿಯ ಹೊಗಳಿಕೆ ಯಿದೆ (Karnataka through the ages; p. 376). ದಯಾಪಾಲನು ಕರ್ನಾಟಕ ದವನೇ ಆಗಿದ್ದಲ್ಲಿ ಕರ್ನಾಟಕದ ಸಂಸ್ಕೃತ ವೈಯಾಕರಣರ ಸಾಲಿನಲ್ಲಿ ಆತನೂ ಸೇರಿ ಕೊಳ್ಳುತ್ತಾನೆ.

ಹೀಗೆ ಸಂಸ್ಕೃತ ವ್ಯಾಕರಣ ವಾಙ್ಮಯಕ್ಕೆ ಕನ್ನಡಿಗರ ಕೊಡುಗೆ ಅಪಾರವಾಗಿದೆ.

## ಪ್ರಾಕೃತ ವ್ಯಾಕರಣ ಪರಂಪರೆ

ಸಂಸ್ಕೃತ ವ್ಯಾಕರಣಗಳ ಮಾದರಿಯಲ್ಲಿ ಪ್ರಾಕೃತ ವ್ಯಾಕರಣಗಳೂ ರಚಿತವಾಗಿವೆ: "ವಾಸ್ತವವಾಗಿ ಪ್ರಾಕೃತ ವ್ಯಾಕರಣಗಳು ಒಂದಿಲ್ಲೊಂದು ಸಂಸ್ಕೃತ ವ್ಯಾಕರಣದ ಅನುಕರಣ ಹಾಗೂ ಅನುಬಂಧಗಳಾಗಿ ತೋರುತ್ತವೆ" (ಭಾ. ಸಾ. ಪ. ಪು. 37). ಸಂಸ್ಕೃತದಿಂದ ಶಬ್ದಗಳ ನಿರ್ವಚನ ನಿಯಮಗಳನ್ನೇ ಹೆಚ್ಚಾಗಿ ಪ್ರಾಕೃತ ವ್ಯಾಕರಣಗಳು ತಿಳಿಸುವುದಾಗಿದೆ; ಪ್ರಾಕೃತವು ಸಂಸ್ಕೃತದಿಂದ ನಿಷ್ಪನ್ನವಾದ ಸಾಹಿತ್ಯಭಾಷೆಯೆಂಬ ನಂಬಿಕೆಯೇ ಇದಕ್ಕೆ ಕಾರಣ, ಪ್ರಾಕೃತ ವೈಯಾಕರಣರೂ ಮಹಾರಾಷ್ಟ್ರೀ ಪ್ರಾಕೃತವನ್ನು ಸಂಸ್ಕೃತಕ್ಕೆ ಅತ್ಯಂತ ನಿಕಟವರ್ತಿಯೆಂದು ಭಾವಿಸಿದ್ದಾರೆ. ಹಾಗಾಗಿ ಅದನ್ನವರು ಪ್ರಾತಿನಿಧಿಕವಾಗಿ ಎತ್ತಿಕೊಳ್ಳುತ್ತಾರೆ (ನೋ.ಪ್ರಾ.ಪ್ರ. (ಬ) ಪು. 47–48).

ಪ್ರಾಕೃತದ ವ್ಯಾಕರಣಗಳನ್ನು ಪರಾಂಬರಿಸಿದಾಗ ಅದರಲ್ಲಿ ಸ್ಪಷ್ಟವಾದ ಎರಡು ಪಂಥಗಳು ಗೋಚರಿಸುತ್ತವೆ. ಒಂದು ಪಾಶ್ಚಾತ್ಯ (Western School) ಮತ್ತೊಂದು ಪೌರಸ್ತ್ಯ (Eastern School). ಮೊದಲನೆಯದಕ್ಕೆ ವಾಲ್ಮೀಕಿ ಸಂಪ್ರದಾಯವೆಂದೂ ಎರಡನೆಯದಕ್ಕೆ ವರರುಚಿ ಸಂಪ್ರದಾಯವೆಂದೂ ಹೆಸರು. ಹೇಮಚಂದ್ರನ ಸಿದ್ಧಹೇಮ ಶಬ್ದಾನುಶಾಸನದ 8ನೇ ಅಧ್ಯಾಯ ವಾಲ್ಮೀಕಿ ಸಂಪ್ರದಾಯದ ಅತ್ಯಂತ ಪ್ರಾಚೀನ ಉಪಲಬ್ಧ ಕೃತಿ. ವರರುಚಿಯ ಪ್ರಾಕೃತ ಪ್ರಕಾಶ ಪೌರಸ್ತ್ಯ ಸಂಪ್ರದಾಯದ ಪ್ರಾಚೀನ ಕೃತಿ.

ಪ್ರಧಾನವಾದ ಕೆಲವು ಪ್ರಾಕೃತ ವ್ಯಾಕರಣಗಳ ಸ್ಥೂಲವಾದ ಪರಿಚಯ ಕೆಳಗೆ ಕೊಡಲಾಗಿದೆ.

## ಪ್ರಾಕೃತ ಪ್ರಕಾಶ

ಇದರ ಕರ್ತೃ ವರರುಚಿ. ಈತನ ಕಾಲವನ್ನು ಖಚಿತವಾಗಿ ಹೇಳಲು ಪ್ರಮಾಣಗಳಿಲ್ಲ. ಭಾಮಹನಿಗಿಂತ ಪ್ರಾಚೀನ ಎಂಬುದು ಮಾತ್ರ ಸ್ಪಷ್ಟ. ವರರುಚಿಯ ಕಾಲ ಪ್ರಾಕೃತ ವ್ಯಾಕರಣದ ಆರಂಭ ಕಾಲವೆಂದು ತಿಳಿಯಲಾಗಿದೆ (ನೋ: ಪ್ರಾ. ಪ್ರ(ಬ) ಪು. 74).

ಪ್ರಾಕೃತ ಪ್ರಕಾಶದಲ್ಲಿ ಮಹಾರಾಷ್ಟ್ರೀ, ಪೈಶಾಚೀ, ಮಾಗಧೀ ಮತ್ತು ಶೌರಸೇನೀ ಎಂಬ ನಾಲ್ಕು ಪ್ರಾಕೃತ ಪ್ರಭೇದಗಳನ್ನು ಪ್ರತಿಪಾದಿಸಲಾಗಿದೆ. ಮಹಾರಾಷ್ಟ್ರೀ ಪ್ರಾಕೃತದ ನಿರೂಪಣೆ ಮೊದಲ ಒಂಭತ್ತು ಪರಿಚ್ಛೇದಗಳನ್ನು ಆವರಿಸಿಕೊಂಡಿದೆ. ಅಜ್ವಿಧಿ, ಅಯುಕ್ತ ವರ್ಣವಿಧಿ, ಸಂಯುಕ್ತ ವರ್ಣವಿಧಿ, ಸಂಕೀರ್ಣವಿಧಿ, ಲಿಂಗ ವಿಭಕ್ತ್ಯಾದೇಶ ವಿಧಿ, ಸರ್ವನಾಮ ವಿಧಿ, ತಿಙ್‌ವಿಧಿ, ಧಾತ್ವಾದೇಶ, ನಿಪಾತ–ಇವು ಆ ಒಂಭತ್ತು ಪರಿಚ್ಛೇದಗಳಲ್ಲಿ ನಿರೂಪಿತವಾದ ವ್ಯಾಕರಣ ವಿಷಯಗಳು. ಮತ್ತಿನ ಮೂರು ಅಧ್ಯಾಯಗಳಲ್ಲಿ ಅನುಕ್ರಮವಾಗಿ ಪೈಶಾಚೀ, ಮಾಗಧೀ ಮತ್ತು ಶೌರಸೇನೀ ಪ್ರಾಕೃತಗಳನ್ನು ವಿವರಿಸಲಾಗಿದೆ. ಇಲ್ಲೆಲ್ಲ ಪ್ರತಿಪಾದಿತ ವ್ಯಾಕರಣ ವಿಚಾರಗಳು ಮತ್ತು ಪಾರಿಭಾಷಿಕ ಪದಗಳು ಸಂಸ್ಕೃತ ವ್ಯಾಕರಣಗಳನ್ನು ಅದರಲ್ಲೂ ಪಾಣಿನಿ ಸಂಪ್ರದಾಯವನ್ನು ಆಧರಿಸಿಕೊಂಡಿವೆಯೆಂಬುದು ಗಮನಾರ್ಹ.

## ಪ್ರಾಕೃತ ಲಕ್ಷಣ

ಚಂಡ ಎಂಬ ವೈಯಾಕರಣನ ಕೃತಿ ಪ್ರಾಕೃತ ಲಕ್ಷಣ. ಈತನ ಕಾಲವೂ ಅಜ್ಞಾತವಾಗಿದೆ. ಆದರೂ ಹೇಮಚಂದ್ರನಿಗಿಂತ ಪ್ರಾಚೀನ ಎಂಬುದು ಸತ್ಯ. ಪ್ರಾಕೃತ ಲಕ್ಷಣದ ವಿಭಕ್ತಿ ವಿಧಾನ, ಸ್ವರವಿಧಾನ, ವ್ಯಂಜನ ವಿಧಾನ ಭಾಷಾಂತರ ವಿಧಾನ ಎಂಬ ಅಧ್ಯಾಯಗಳು ದೊರಕಿವೆ (ಪ್ರಾ. ಪ್ರ. (ಬ) ಪು. 77). ದೊರಕಿರುವ ಪಾಠ ತುಂಬಾ ಕೆಟ್ಟ ಸ್ಥಿತಿಯಲ್ಲಿದೆ.

## ಸಿದ್ಧಹೇಮ ಶಬ್ದಾನುಶಾಸನ

ಈ ಸಂಸ್ಕೃತ ವ್ಯಾಕರಣದ 8ನೇ ಅಧ್ಯಾಯ ಪ್ರಾಕೃತ ವ್ಯಾಕರಣ ನಿರೂಪಣೆಗೆ ಮೀಸಲಾಗಿದೆ. ಇಲ್ಲಿಯವರೆಗೆ ಪ್ರಕಾಶಿತವಾದ ಎಲ್ಲ ಪ್ರಾಕೃತ ವ್ಯಾಕರಣಗಳಲ್ಲಿ ಇದು ಸರ್ವೋತ್ತಮ ಮತ್ತು ಮಹತ್ವಪೂರ್ಣವಾದದ್ದು (ಪ್ರಾ. ಪ್ರ. (ಬ) ಪು. 78). ಈ 8ನೇ ಅಧ್ಯಾಯಕ್ಕೆ ನಾಲ್ಕು ಪಾದಗಳಿದ್ದು ಮೊದಲೆರಡು ಪಾದಗಳಲ್ಲಿ ಧ್ವನಿಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳೂ, ಮೂರನೇ ಪಾದದಲ್ಲಿ ಶಬ್ದರೂಪ ಮತ್ತು ನಾಲ್ಕನೇ ಪಾದದಲ್ಲಿ ಧಾತ್ವಾದೇಶದ ವಿಚಾರಗಳೂ ವರ್ಣಿತವಾಗಿವೆ. ನಾಲ್ಕನೇ ಪಾದದ ಕೊನೆಯಲ್ಲಿ ಶೌರಸೇನೀ, ಮಾಗಧೀ, ಪೈಶಾಚೀ, ಚೂಲಿಕಾ ಪೈಶಾಚೀ, ಪ್ರಾಕೃತಗಳ ವಿವರಣೆಯಲ್ಲದೆ ಅಪಭ್ರಂಶದ ವರ್ಣನೆಯೂ ಬರುತ್ತದೆ. ಹಾಗಾಗಿ

ಹೇಮಚಂದ್ರನ ಪ್ರಾಕೃತ ವ್ಯಾಕರಣ ಅತ್ಯಂತ ಶ್ರೀಮಂತವೂ ಸಮಗ್ರವೂ ಆಗಿದೆ. ಮಹಾರಾಷ್ಟ್ರಿಯನ್ನು ಹೇಳುವಾಗ ಜೈನ ಮಹಾರಾಷ್ಟ್ರಿಯನ್ನೂ ಗಮನಿಸಿರುವುದು ಮುಖ್ಯ. ಮಹಾರಾಷ್ಟ್ರಿಗೆ 'ಸತ್ತಸಈ' ಮತ್ತು 'ಸೇತುಬಂಧ'ದಿಂದಲೂ ಪೈಶಾಚಿಗೆ ಗುಣಾಢ್ಯನ ಬೃಹತ್ಕಥೆಯಿಂದಲೂ ಶೌರಸೇನಿ ಹಾಗೂ ಮಾಗಧಿಗಳಿಗೆ ನಾಟಕಗಳಿಂದಲೂ ಲಕ್ಷ್ಯಗಳನ್ನು ಕೊಡಲಾಗಿದೆ.

ಪ್ರಾಕೃತ ವೈಯಾಕರಣರು ಸಂಸ್ಕೃತದ ವರ್ಣಮಾಲೆಯನ್ನು ಆಧಾರವಾಗಿಟ್ಟು ಕೊಂಡು ಪ್ರಾಕೃತದ ವರ್ಣಗಳನ್ನು ನಿಶ್ಚಯಿಸುತ್ತಿದ್ದುದಕ್ಕೆ ಹೇಮಚಂದ್ರನ ಮಾತು ಆಧಾರವಾಗಿದೆ. ಆತನ ಪ್ರಾಕೃತ ವ್ಯಾಕರಣದ ಮೊದಲ ಸೂತ್ರದ ವೃತ್ತಿಯಲ್ಲಿ "ಋೠ ಲೃ ಲೄ, ಐ, ಔ, ಙ, ಞ, ಶ, ಷ, ವಿಸರ್ಜನೀಯ ಪ್ಲುತವರ್ಜೋ ವರ್ಣ ಸಮಾಮ್ನಾಯೋ ಲೋಕಾದವಗಂತವ್ಯಃ" (8–1–1ರ ವೃತ್ತಿ) ಎಂದು ಹೇಳಿರುವುದು ನಮ್ಮ ಗಮನವನ್ನು ಸೆಳೆಯುತ್ತದೆ. ಬಹುಶಃ ಕನ್ನಡ ವೈಯಾಕರಣರು ಇಲ್ಲಿಂದ ಪ್ರೇರಣೆ ಹೊಂದಿರಬೇಕು.

ಕ್ರಮದೀಶ್ವರನ ಸಂಕ್ಷಿಪ್ತಸಾರ ತ್ರಿವಿಕ್ರಮದೇವನ ಪ್ರಾಕೃತ ವ್ಯಾಕರಣ, ಲಕ್ಷ್ಮೀಧರನ ಷಡ್ಭಾಷಾ ಚಂದ್ರಿಕೆ ಹಾಗೂ ಮಾರ್ಕಂಡೇಯನ ಪ್ರಾಕೃತ ಸರ್ವಸ್ವ ಇತರ ಉಲ್ಲೇಖಾರ್ಹ ಪ್ರಾಕೃತ ವ್ಯಾಕರಣಗಳು.

## ಕನ್ನಡ ನಾಡಿನಲ್ಲಿ ಪ್ರಾಕೃತ ವ್ಯಾಕರಣಗಳು

ಆರ್ಯ ದ್ರಾವಿಡ ಸಂಪರ್ಕದೊಂದಿಗೆ ಪ್ರಾಕೃತ ಭಾಷೆಗಳು ಕರ್ನಾಟಕಕ್ಕೆ ಬಂದಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಹೊಂದಿದ್ದಾರೆ. ಮೌರ್ಯ ಚಕ್ರವರ್ತಿ ಚಂದ್ರಗುಪ್ತನೊಡನೆ ಭದ್ರಬಾಹು ಶ್ರುತಕೇವಲಿಯು ಉತ್ತರಾಪಥದಿಂದ ಬಂದು ಕರ್ನಾಟಕದಲ್ಲಿ ನೆಲೆಸಿದಾಗ ಜೈನಧರ್ಮದೊಡನೆ ಪ್ರಾಕೃತವೂ ಇಲ್ಲಿ ಬೇರೂರುವಂತಾಯಿತು. ಅಶೋಕನ ಪ್ರಾಕೃತ ಶಾಸನಗಳು ಕರ್ನಾಟಕದಲ್ಲಿ ದೊರಕಿವೆ. ಶಾತವಾಹನರ ಕೆಲವು ಪ್ರಾಕೃತ ಶಾಸನಗಳೂ ಇಲ್ಲಿ ಲಭ್ಯವಾಗಿವೆ. ಅವರ ಕಾಲದಲ್ಲಿ ಕೆಲಮಟ್ಟಿಗೆ ಕರ್ನಾಟಕದಲ್ಲಿ ಪ್ರಾಕೃತವು ವ್ಯಾವಹಾರಿಕ ಭಾಷೆಯಾಗಿದ್ದಿರಬೇಕೆಂದು ಊಹಿಸಲಾಗಿದೆ.

ಪ್ರಾಕೃತವು ಜೈನರ ಪವಿತ್ರ ಭಾಷೆ. ಧವಲಾ, ಜಯಧವಲಾ ಮೊದಲಾದ ಅವರ ಧರ್ಮ ಗ್ರಂಥಗಳು ಪ್ರಾಕೃತ ಭಾಷೆಯಲ್ಲಿವೆ. ಹಾಗೆ ಕರ್ನಾಟಕದಲ್ಲಿ ಜೈನಧರ್ಮವು ಉನ್ನತ ಸ್ಥಿತಿಯಲ್ಲಿದ್ದಾಗ ಪ್ರಾಕೃತ ಭಾಷಾ ಸಾಹಿತ್ಯಗಳಿಗೆ ವಿಶೇಷ ಪ್ರೋತ್ಸಾಹ ದೊರಕಿದೆ. ಕನ್ನಡಿಗರು ಪ್ರಾಕೃತದಲ್ಲಿಯೂ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಗುಣಾಢ್ಯನ ಬೃಹತ್ಕಥೆ, ಹಾಲರಾಜನ ಗಾಥಾಸಪ್ತಶತೀ ಮುಂತಾದವು ಇದಕ್ಕೆ ನಿದರ್ಶನ. ಕನ್ನಡ ಜೈನ ಕವಿಗಳಿಗೆ ಸಂಸ್ಕೃತ ಮತ್ತು ಪ್ರಾಕೃತದಲ್ಲಿ ವಿಶೇಷವಾದ ಪರಿಣತಿಯಿತ್ತು. ನೇಮಿಚಂದ್ರನಂತಹ ಕವಿಗಳ 'ಚತುರ್ಭಾಷಾ ಚಕ್ರವರ್ತಿ' ಎಂಬ ಬಿರುದಿನಲ್ಲಿರುವ ನಾಲ್ಕು ಭಾಷೆಗಳಲ್ಲಿ ಬಹುಶಃ ಪ್ರಾಕೃತ ಭಾಷೆಯೂ ಸೇರಿಕೊಂಡಿರಬೇಕೆಂದು ತೋರುತ್ತದೆ

ಕನ್ನಡ ಕವಿಗಳಿಗೆ ಪ್ರಾಕೃತ ಸಾಹಿತ್ಯ ಆಕರವನ್ನೊದಗಿಸಿದ್ದೂ ಇದೆ. ವಿಮಲಸೂರಿಯ 'ಪಉಮಚರಿಯ'ಕ್ಕೆ ನಾಗಚಂದ್ರನು ಬಹಳವಾಗಿ ಋಣಿಯಾದುದನ್ನು ಗಮನಿಸಬಹುದು. ಹೀಗೆ ಒಂದು ಕಾಲದಲ್ಲಿ ಪ್ರಾಕೃತವು ಕರ್ನಾಟಕದಲ್ಲಿ ವ್ಯಾವಹಾರಿಕ ಭಾಷೆಯಾಗಿ, ಧಾರ್ಮಿಕ ಹಾಗೂ ಲೌಕಿಕ ಸಾಹಿತ್ಯ ಭಾಷೆಯಾಗಿದ್ದುದರಿಂದ ಅದನ್ನು ಇಲ್ಲಿ ಅಧ್ಯಯನ ಹಾಗೂ ಅಧ್ಯಾಪನಮಾಡುತ್ತಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಆಗ ಪ್ರಾಕೃತ ವ್ಯಾಕರಣ ಗಳ ಅಭ್ಯಾಸವೂ ಇದ್ದಿರಲೇಬೇಕು. ಕೆಲವು ಪ್ರಾಕೃತ ವ್ಯಾಕರಣ ಕೃತಿಗಳೂ ಹುಟ್ಟಿ ಕೊಂಡು ಪ್ರಾಕೃತದ ವ್ಯಾಕರಣ ಸಾಹಿತ್ಯದ ಸಂಪತ್ತನ್ನು ವೃದ್ಧಿಗೊಳಿಸಿರಬೇಕು. ಈಗ ಉಪಲಬ್ಧವಿರುವಂತೆ ತ್ರಿವಿಕ್ರಮನ (ಕ್ರಿ. ಶ. 1236) ಪ್ರಾಕೃತ ವ್ಯಾಕರಣ ಕರ್ನಾಟಕದ ಕೊಡುಗೆ. ಇದು ''ದಾಕ್ಷಿಣಾತ್ಯ ಸಂಪ್ರದಾಯದ ಪ್ರಾಕೃತ ವ್ಯಾಕರಣಗಳಲ್ಲಿ ಆದ್ಯಕೃತಿ'' (ಅ. ಕ. ಸಾ. ಚ. 1. ಪು. 676) ಮಾತ್ರವಲ್ಲ, ಇದು ವರರುಚಿಯ ಪ್ರಾಕೃತ ಪ್ರಕಾಶದ ಕೂಡ ಇಡೀ ದಕ್ಷಿಣದಲ್ಲಿ ಪ್ರಮಾಣಭೂತವಾದ ವ್ಯಾಕರಣವಾಗಿದೆ (ಪಾಲಿ ಮತ್ತು ಪ್ರಾಕೃತ ಪು. 44).

ಈ ತೆರನಾಗಿ ಪ್ರಾಕೃತ ವ್ಯಾಕರಣ ಲೋಕಕ್ಕೆ ಕನ್ನಡಿಗರ ಸೇವೆ ಹಿರಿದಾಗಿದೆ.

## ಪಾಲೀ ವ್ಯಾಕರಣ ಪರಂಪರೆ

ಪ್ರಾಕೃತದಂತೆ ಪಾಲೀಭಾಷೆಗೂ ವ್ಯಾಕರಣಗಳು ರಚಿತವಾಗಿವೆ. ಭಾರತದಲ್ಲಿ ಮಾತ್ರವಲ್ಲ, ಸಿಲೋನು ಹಾಗೂ ಬರ್ಮಾದಲ್ಲೂ ಪಾಲೀ ಭಾಷೆಯ ವ್ಯಾಕರಣಗಳು ನಿರ್ಮಿತವಾಗಿವೆ. ಪಾಲೀ ವೈಯಾಕರಣರು ಸಂಸ್ಕೃತ ವ್ಯಾಕರಣಗಳ ಮಾದರಿಯಲ್ಲಿ ತಮ್ಮ ವ್ಯಾಕರಣಗಳನ್ನು ನಿರೂಪಿಸಿದ್ದಾರೆ. ಪ್ರಾಕೃತ ವ್ಯಾಕರಣಗಳೆಲ್ಲ ಸಂಸ್ಕೃತದಲ್ಲಿ ರಚಿತವಾಗಿದ್ದರೆ ಪಾಲೀ ವ್ಯಾಕರಣಗಳೆಲ್ಲ ಪಾಲೀ ಭಾಷೆಯಲ್ಲೇ ರಚಿತವಾಗಿರುವುದು ಅವು ಗಳ ವೈಶಿಷ್ಟ್ಯ.

ಪಾಲಿಯಲ್ಲಿ ಬೋಧಿಸತ್ತ ವ್ಯಾಕರಣ, ಕಚ್ಚಾಯನ ವ್ಯಾಕರಣ, ಸಬ್ಬಗುಣಾಕರ ವ್ಯಾಕರಣ, ಮೊಗ್ಗಲ್ಲಾನ್ ವ್ಯಾಕರಣ, ಸದ್ದನೀತಿ ವ್ಯಾಕರಣ ಎಂಬುದಾಗಿ ಐದು ವ್ಯಾಕರಣ ಸಂಪ್ರದಾಯಗಳಿದ್ದಂತೆ ತಿಳಿದುಬಂದಿದೆ (ಕಚ್ಚಾಯನ ವ್ಯಾಕರಣ, ಭೂಮಿಕೆ, ಪುಟ 52). ಇವುಗಳಲ್ಲಿ ಒಂದನೆಯ ಮತ್ತು ಮೂರನೆಯ ಸಂಪ್ರದಾಯದ ವ್ಯಾಕರಣ ಗಳು ಈಗ ಉಪಲಬ್ಧವಿಲ್ಲ.

## ಕಚ್ಚಾಯನ ವ್ಯಾಕರಣ

ಈಗ ಉಪಲಬ್ಧವಿರುವ ಪಾಲೀ ವ್ಯಾಕರಣಗಳಲ್ಲಿ ಕಚ್ಚಾಯನನ ವ್ಯಾಕರಣವು ಅತ್ಯಂತ ಪ್ರಾಚೀನವಾದುದು. ಇದಕ್ಕೆ **ಕಚ್ಚಾಯನ ಗ್ರಂಥ** ಅಥವಾ **ಸುಸಂಧಿಕಪ್ಪ** ಎಂಬ ಹೆಸರುಗಳೂ ಇವೆ. ಕಚ್ಚಾಯನನ ಕಾಲದ ಬಗ್ಗೆ ಖಚಿತವಾಗಿ ಹೇಳಲು ಆಧಾರ ಸಾಲದು. ಗ್ರಂಥದ ಮೇಲಿರುವ ಇತರ ವ್ಯಾಕರಣಗಳ ಪ್ರಭಾವವನ್ನು ಪರಾಂಬರಿಸಿ

ಇದು "ಕ್ರಿ.ಶ. ಐದನೆಯ ಶತಮಾನದ ಅನಂತರ ರಚಿತವಾಗಿರಬೇಕು, ಪ್ರಾಯಶಃ 11ನೆಯ ಶತಮಾನದಲ್ಲಿ (ಭಾ.ಸಾ.ಚ. ಪು. 42-43) ಎಂಬ ಅಭಿಪ್ರಾಯ ಹುಟ್ಟಿ ಕೊಂಡಿದೆ. ಇದರ ಮೇಲಿರುವ ಕಾಶಿಕಾ ವೃತ್ತಿಯ ಪ್ರಭಾವ ಈ ದೃಷ್ಟಿಯಿಂದ ವಿಚಾರಣೀಯ.

ಕಚ್ಚಾಯನನ ವ್ಯಾಕರಣವು ಪ್ರಕ್ರಿಯಾ ಶೈಲಿಯ ವ್ಯಾಕರಣವಾಗಿದೆ. ಕಾತಂತ್ರಕ್ಕೆ ಇದು ಧಾರಾಳವಾಗಿ ಋಣಿ. ಅಷ್ಟಾಧ್ಯಾಯಿಯ ಪ್ರಭಾವವೂ ಇದರ ಮೇಲಿದೆ. ಸಂಧಿ ಕಪ್ಪ, ನಾಮಕಪ್ಪ, ಅಖ್ಯಾತಕಪ್ಪ ಮತ್ತು ಕಿಬ್ಬಿಧಾನಕಪ್ಪ ಎಂಬುದಾಗಿ ನಾಲ್ಕು ಕಪ್ಪಗಳು (ಅಧ್ಯಾಯ) ಇದರಲ್ಲಿವೆ. ವಿಭಕ್ತಿ, ಕಾರಕ, ಸಮಾಸ, ತದ್ಧಿತಗಳು ನಾಮ ಕಪ್ಪದಲ್ಲಿ ಒಳಗೊಂಡಿವೆ. ವ್ಯಾಕರಣ ವಿಷಯಗಳ ಅನುಪೂರ್ವಿ, ವರ್ಣಸಮಾಮ್ನಾಯ, ಪಾರಿ ಭಾಷಿಕ ಪದಗಳು, ಪ್ರಕ್ರಿಯಾತ್ಮಕವ್ಯವಸ್ಥೆ ಇವೆಲ್ಲವನ್ನೂ ಪರಿಶೀಲಿಸಿ ಡಾ. ಬರ್ನೆಲ್ ಕಚ್ಚಾಯನ ವ್ಯಾಕರಣವನ್ನು ಐಂದ್ರ ಸಂಪ್ರದಾಯದ್ದೆಂದು ಹೇಳಿದ್ದಾರೆ (OASGP19) ಒಟ್ಟಿನಲ್ಲಿ ಪ್ರಾಕೃತ ವ್ಯಾಕರಣಗಳು ಪಾಣಿನಿಗೆ ಹೆಚ್ಚು ಋಣಿಯಾಗಿದ್ದರೆ ಕಚ್ಚಾಯನ ವ್ಯಾಕರಣ ಕಾತಂತ್ರಕ್ಕೆ ಹೆಚ್ಚು ಋಣಿಯಾಗಿದೆಯೆಂದು ಹೇಳಬಹುದು.

ಕಚ್ಚಾಯನ ನ್ಯಾಸ ಅಥವಾ ಮುಖಮತ್ತದೀಪೀನಿ, ಸುತ್ತನಿದ್ದೇಸ, ರೂಪಸಿದ್ಧಿ, ಬಾಲಾವತಾರ ಮೊದಲಾದುವು ಕಚ್ಚಾಯನ ಸಂಪ್ರದಾಯದ ಇತರ ವ್ಯಾಕರಣಗಳು.

## ಮೊಗ್ಗಲ್ಲಾನ ವ್ಯಾಕರಣ

ಥೇರ ಮೊಗ್ಗಲ್ಲಾನ ಎಂಬ ವೈಯಾಕರಣನ ಕೃತಿ ಮೊಗ್ಗಲ್ಲಾನ ವ್ಯಾಕರಣ. ಇದು ಕ್ರಿ.ಶ. 1153-1186ರ ನಡುವಿನಲ್ಲಿ ರಚಿತವಾಗಿರಬೇಕು. ಕಚ್ಚಾಯನ ವ್ಯಾಕರಣದಂತೆ ಇದೂ ಅತ್ಯಂತ ಪ್ರೌಢವಾಗಿದೆ. ಇದರ ಮೇಲೆ ಅಷ್ಟಾಧ್ಯಾಯಿ ಕಾತಂತ್ರ ಹಾಗೂ ಚಾಂದ್ರ ವ್ಯಾಕರಣದ ಪ್ರಭಾವವಿದೆ.

ಪದಸಾಧನ, ಪಯೋಗ ಸಿದ್ಧಿ ಮೊದಲಾದುವು ಈ ಸಂಪ್ರದಾಯದ ಇತರ ಪ್ರಮುಖ ವ್ಯಾಕರಣಗಳು.

## ಸದ್ದನೀತಿ ವ್ಯಾಕರಣ

ಇದರ ಕರ್ತೃ ಭಿಕ್ಷು ಅಗ್ಗವಂಸ. ಇದು ಕ್ರಿ.ಶ. 1154ರಲ್ಲಿ ರಚಿತವಾಗಿದೆ. ಕಚ್ಚಾಯನ ವ್ಯಾಕರಣದ ಮೇಲೆ ಆಧರಿತವಾಗಿದ್ದು ಸ್ವತಂತ್ರ ಕೃತಿಯ ಹಿರಿಮೆಯನ್ನು ಹೊಂದಿದೆ. ಇದರಲ್ಲಿ ಪದಮಾಲಾ, ಧಾತುಮಾಲಾ ಮತ್ತು ಸುತ್ತಮಾಲಾ ಎಂದು ಮೂರು ಭಾಗಗಳಿವೆ. ಉಳಿದೆರಡು ವ್ಯಾಕರಣಗಳಿಗಿಂತ ಇದು ದೊಡ್ಡದಾಗಿದ್ದು 27 ಪರಿಚ್ಛೇದಗಳನ್ನು ಹೊಂದಿದೆ. ಬರ್ಮಾ ದೇಶದಲ್ಲಿ ರಚಿತವಾಗಿರುವುದು ಇದರ ಪ್ರತ್ಯೇಕತೆಯಾಗಿದೆ.

ಪ್ರಾಕೃತ ಹಾಗೂ ಪಾಲೀ ವ್ಯಾಕರಣಗಳಲ್ಲಿ ಪ್ರಮುಖವಾದ ಅಂತರವೊಂದಿದೆ. ಪ್ರಾಕೃತ ವ್ಯಾಕರಣಗಳು ಪ್ರಾಕೃತವನ್ನು ಸಂಸ್ಕೃತದಿಂದ ನಿಷ್ಪನ್ನಮಾಡಿ ಹೇಳುವುದಿದ್ದರೆ ಪಾಲೀ ವ್ಯಾಕರಣಗಳು ಪಾಲಿಯನ್ನೊಂದು ಸ್ವತಂತ್ರ ಭಾಷೆಯೆಂದು ವಿವರಿಸುತ್ತದೆ.

## ಕನ್ನಡನಾಡಿನಲ್ಲಿ ಪಾಲಿ ವ್ಯಾಕರಣಗಳು

ಪ್ರಾಚೀನ ಕರ್ನಾಟಕದಲ್ಲಿ ಬೌದ್ಧಧರ್ಮ ಪ್ರಚಾರದಲ್ಲಿದ್ದಿತೆಂದು ಹೇಳಲು ಪುರಾವೆ ಗಳಿವೆ. ಅಶೋಕನ ಶಾಸನಗಳು, ಅಂತೆಯೆ ಚಂದ್ರವಳ್ಳಿಯ ಶಾಸನಗಳು ಕ್ರಿಸ್ತಪೂರ್ವ ದಲ್ಲಿ ಬೌದ್ಧಧರ್ಮವು ಕರ್ನಾಟಕದಲ್ಲಿ ಹರಡಿದ್ದುದಕ್ಕೆ ಸಾಕ್ಷಿಯಾಗಿವೆ. ಶಾತವಾಹನರ ಕಾಲದಲ್ಲಿ ಬೌದ್ಧಧರ್ಮವು ಪ್ರಾಶಸ್ತ್ಯವನ್ನು ಹೊಂದಿತ್ತು. ಒಂದು ಕಾಲದಲ್ಲಿ ಕೊಪ್ಪಳ, ಬಳ್ಳಿಗಾವಿ ಮುಂತಾದುವು ಬೌದ್ಧಮತದ ದೊಡ್ಡ ಕೇಂದ್ರಗಳಾಗಿದ್ದುವು ಎಂದು ಹೇಳು ವುದಕ್ಕೆ ಅಲ್ಲಿ ದೊರೆತಿರುವ ಬೌದ್ಧ ಅವಶೇಷಗಳೇ ಆಧಾರವಾಗಿವೆ. ಒಟ್ಟಿನಲ್ಲಿ ಕ್ರಿ.ಶ. 16ನೆಯ ಶತಮಾನದ ವರೆಗೆ ಕರ್ನಾಟಕದಲ್ಲಿ ಬೌದ್ಧಮತ ಪ್ರಚಲಿತವಾಗಿದ್ದಿತು ಎಂದು ಹೇಳಬಹುದು.

ಬೌದ್ಧಮತದ ಪವಿತ್ರ ಗ್ರಂಥ ತಿಪಿಟಕ. ಅದು ಗೌತಮ ಬುದ್ಧನ ಉಪದೇಶಗಳ ಸಂಗ್ರಹವಾಗಿದ್ದು ಪಾಲೀ ಭಾಷೆಯಲ್ಲಿದೆ. ಹಾಗಾಗಿ ಕರ್ನಾಟಕದಲ್ಲಿ ಪಾಲಿ ಭಾಷೆಯ ಅಧ್ಯಯನ ಪ್ರಚಲಿತವಿದ್ದಿರಬೇಕು ಎಂದರೆ ಪಾಲೀ ವ್ಯಾಕರಣದ ಅಧ್ಯಯನ ಅನಿವಾರ್ಯ ವಾಗಿ ನಡೆಯುತ್ತಿದ್ದಿರಬೇಕು ಎಂದಂತಾಯಿತು. ಕಚ್ಚಾಯನನ ಪಾಲಿ ವ್ಯಾಕರಣವು ದಕ್ಷಿಣ ಭಾರತದಲ್ಲಿ ಪ್ರಚಾರದಲ್ಲಿದ್ದಿರಬಹುದೆಂದು ಹೇಳಲು ಆಧಾರಗಳಿವೆ. ತಮಿಳು ನಾಡಿನ ಬುದ್ಧಪ್ಪಿಯ ದೀಪಂಕರನ ರೂಪಸಿದ್ಧಿ (ಕ್ರಿ.ಶ. 13ನೆಯ ಶತಮಾನದ ಕೊನೆ) ಕಚ್ಚಾಯನನ ವ್ಯಾಕರಣ ಪರಂಪರೆಯ ಪ್ರಸಿದ್ಧವಾದ ಗ್ರಂಥ. ಬಹುಶಃ ಅಂತಹ ರಚನೆ ಗಳು ಕರ್ನಾಟಕದಲ್ಲಿಯೂ ಹುಟ್ಟಿಕೊಂಡಿರಬಹುದು. ಆದರೆ ಪಾಲಿ ವ್ಯಾಕರಣ ವಾಙ್ಮಯಕ್ಕೆ ಕನ್ನಡಿಗರ ಕೊಡುಗೆಯನ್ನು ಎತ್ತಿತೋರಿಸಲು ಯಾವುದೇ ಆಧಾರಗಳು ದೊರಕುವುದಿಲ್ಲ. ಕಚ್ಚಾಯನನ ವ್ಯಾಕರಣದೊಂದಿಗೆ ಕನ್ನಡ ವ್ಯಾಕರಣಗಳಿಗೆ ಕೆಲವು ವಿಷಯಗಳಲ್ಲಿ ಹೋಲಿಕೆಯಿರುವುದರಿಂದ ಬಹುಶಃ ಅದರ ಅಧ್ಯಯನ ಇಲ್ಲಿ ಪ್ರಚಾರ ದಲ್ಲಿದ್ದಿರಬೇಕು ಎಂದು ಮಾತ್ರ ಹೇಳಬಹುದು.

## ಅಡಿಟಿಪ್ಪಣಿಗಳು

1. *Systems of Sanskrit Grammar*. P. 1—"It would be hardly an exaggeration to say that in no other country has the science of grammar been studied with such a zeal carried to such a perfection as it has been in India. Even a bare catalogue of the names of grammarians ancient and modren and of such of their works as are still preserved to us can amply bear out the truth of this assertion."

2. 'ಶಾಖಾಯಾಂ ಶಾಖಾಯಾಂ ಪ್ರತಿಶಾಖಂ, ಪ್ರತಿಶಾಖಂ ಭವಂ ಪ್ರಾತಿಶಾಖ್ಯಂ' ಎಂದು ಸಂಸ್ಕೃತದಲ್ಲಿ ವಿವರಣೆ.

3. See : *Critical studies on Katyayana's Suklayajurvedapratisakhya*. P. 10. "......for the history of grammatical study in India, which, as far as we know, commences with these Pratisakhyas. Though they are not actually grammatical works themselves, they treat of subjects pertaining to grammar, and the quotations from so many grammarians prove that the study of grammar was already flourishing at their time."

4. ಭಾರತೀಯ ಶಬ್ದವ್ಯುತ್ಪತ್ತಿಯಲ್ಲಿ ಸ್ಫೋಟದ ಸ್ಥಾನ : ಪು. 3-4.
"ಮೊದಮೊದಲು ಮಾತು ಅವ್ಯಕ್ತವಾಗಿದ್ದು ಅವಿಭಕ್ತವಾಗಿತ್ತು. ಆಮೇಲೆ ದೇವತೆಗಳು ಇಂದ್ರನಿಗೆ ಹೇಳಿದರು : 'ಮಾತನ್ನು ಬೇರೆ ಬೇರೆ ಅಂಗಗಳಲ್ಲಿ ಹಂಚಿ ಹಾಕು' ಎಂದು....... ಇಂದ್ರ ಅವರ ನಡುವೆ ಹೋಗಿ ಅದನ್ನು ವಿಶ್ಲೇಷಿಸಿದ."

5. ಕ್ರಮದೀಶ್ವರನ 'ಸಂಕ್ಷಿಪ್ತ ಪ್ರಸಾರ'ದ ಎಂಟನೆಯ ಅಧ್ಯಾಯದಲ್ಲಿ ಪ್ರಾಕೃತ ವ್ಯಾಕರಣವನ್ನು ನಿರೂಪಿಸಲಾಗಿದೆ.

6. ನೋ : ಮುಗ್ಧಬೋಧ, ಇಂದ್ರಶ್ಚಂದ್ರ : ಕಾಶಕೃತ್ಸ್ನಾಪಿಶಲೀ ಶಾಕಟಾಯನ : ಪಾಣಿನ್ಯಮರ ಜೈನೇಂದ್ರ ಜಯಂತ್ಯಷ್ಟಾದಿ ಶಾಬ್ದಿಕಾಃ

7. ನೋ. ಕ. ಪ. ಕ. ಸಾ. ಪು. 81 "It may not be too much to suppose that he put into Kannada the original sabdavatara of Pujyapad obviously as a mark of respect for his great Guru".

# ಅಧ್ಯಾಯ 3

# ಕನ್ನಡ ವ್ಯಾಕರಣ ಪರಂಪರೆ

ಹಳೆಗನ್ನಡದ ಸ್ವರೂಪವನ್ನು ವಿವರಿಸುವ ನಾಲ್ಕು ವ್ಯಾಕರಣ ಗ್ರಂಥಗಳು ಮಾತ್ರ ಉಪಲಬ್ಧವಾಗಿವೆ. ಕಾವ್ಯಾವಲೋಕನದ ಮೊದಲ ಅಧಿಕರಣವಾದ ಶಬ್ದಸ್ಮೃತಿ, ಕರ್ಣಾಟಕ ಭಾಷಾಭೂಷಣ, ಶಬ್ದಮಣಿದರ್ಪಣ ಮತ್ತು ಕರ್ಣಾಟಕ ಶಬ್ದಾನುಶಾಸನ. ಕವಿರಾಜಮಾರ್ಗದಲ್ಲಿಯೂ ಕೆಲವೊಂದು ವ್ಯಾಕರಣ ವಿಚಾರಗಳು ಪ್ರಸ್ತಾವಿತವಾಗಿವೆ. ಆದರೆ ಕನ್ನಡ ವ್ಯಾಕರಣದ ಉಗಮವೆಂದಾಯಿತು ? ಅದರ ವಿಕಾಸದ ಸ್ವರೂಪವೇನು ? ಎಂಬುದು ಮಾತ್ರ ತೀರ ಅಜ್ಞಾತವಾಗಿದೆ.

ವಿದ್ವಾಂಸರ ಒಮ್ಮತದ ಅಭಿಮತದಂತೆ ಪಾಣಿನಿಗಿಂತ ಹಿಂದೆಯೇ ಸಂಸ್ಕೃತ ವ್ಯಾಕರಣ ಸಕ್ರಮವಾಗಿ ರೂಪುಗೊಂಡಿತ್ತಷ್ಟೆ. ಹಾಗೆ "ಒಂದು ವ್ಯಾಕರಣ ಮಾರ್ಗದ ವಿಕಾಸಕ್ರಮ ಕನ್ನಡ ಭಾಷೆಯ ಬೆಳವಣಿಗೆಯಲ್ಲೂ ಇದ್ದಿರಬೇಕು. ಅದನ್ನು ಗುರುತಿಸಿ ಕಂಡುಕೊಳ್ಳಬೇಕು. ಇದಕ್ಕೆ ಸದ್ಯದಲ್ಲಿ ಆಧಾರಗಳು ದೊರೆತಿಲ್ಲ" (ಪ್ರಾ.ಕ.ವ್ಯಾ:ಪು. 4) ಎಂಬುದು ಮಾತ್ರ ಕಟು ಸತ್ಯ.

ಕವಿರಾಜಮಾರ್ಗದ ಪೂರ್ವದಲ್ಲಿ ಕನ್ನಡ ವ್ಯಾಕರಣ ಮಾರ್ಗ—ಅದು ಸಂಸ್ಕೃತ ವ್ಯಾಕರಣದ ಪಡಿನೆಳಲಾಗಿದೆಯಾದರೂ ಸರಿ–ವ್ಯವಸ್ಥಿತವಾಗಿ ರೂಪುಗೊಂಡಿರಬೇಕೆಂದು ಊಹಿಸಲೆಡೆಯಿದೆ. ಕನ್ನಡದಲ್ಲಿ 'ಗದ್ಯಾಶ್ರಮ ಪದಗುರುತಾಪ್ರತೀತಿಯುಂ ಕೆಯ್ಕೊಂಡ ವಿಮಲೋದಯ ಮೊದಲಾದ ಗದ್ಯಕವಿಗಳೂ ನಿರತಿಶಯ ವಸ್ತುವಿಸ್ತರವಿರಚನೆಯುಳ್ಳ ಪದ್ಯಕಾವ್ಯಗಳನ್ನು ರಚಿಸಿದ ಪರಮಶ್ರೀವಿಜಯ ಮೊದಲಾದ ಪದ್ಯಕವಿಗಳೂ ಇದ್ದರೆಂದು ಮಾರ್ಗಕಾರ ಹೇಳುತ್ತಾನೆ (ಕ.ಮಾ. 1-25. 29, 32). ಮಾತ್ರವಲ್ಲ, ಗದ್ಯಕಾವ್ಯಗಳು' ಸಂಸ್ಕೃತದ ಹರ್ಷಚರಿತ ಕಾದಂಬರಿಗಳಿಗೆ ಸರಿಸಮವೆಂದೂ ಶ್ರೀವಿಜಯ ಮೊದಲಾದವರು ಗುಣಸೂರಿನಾರಾಯಣ ಭಾರವಿ ಮೊದಲಾದವರಿಗೆ ಹೆಗಲೆಣೆಯೆಂದೂ ಧ್ವನಿಯಿಸುತ್ತಾನೆ (ಕ.ಮಾ. 1-26, 29. 31, 32). ಎಂದರೆ ಕವಿರಾಜಮಾರ್ಗಕ್ಕಿಂತ ಮೊದಲೇ ಕನ್ನಡ ಸಾಹಿತ್ಯದಲ್ಲಿ ಚಿರಂತನ ಕೃತಿಗಳು ನಿರ್ಮಾಣಗೊಂಡಿದ್ದುವೆಂಬುದನ್ನು ಒತ್ತಿಹೇಳಿದಂತಾಯಿತು. ಪ್ರಾಚೀನಾಲಂಕಾರಿಕರ ಪ್ರಕಾರ ಕವಿ ವ್ಯುತ್ಪನ್ನನೆನಿಸಿಕೊಳ್ಳಲು ಕಾವ್ಯಶಾಸ್ತ್ರದ ಜೊತೆಗೆ ವ್ಯಾಕರಣ ಶಾಸ್ತ್ರವನ್ನು ತಿಳಿದಿರಬೇಕು.[1] ರಾಘವಾಂಕನ ಕೆಳಗಿನ ಮಾತಿನಲ್ಲಿ ಪ್ರಾಚೀನರ ಆ ದೃಷ್ಟಿ ಮಾರ್ದೊಳೆದಿದೆ.

"ವ್ಯಾಕರಣ ಪರಿಣತನಲಂಕಾರ ಪರಿಚಿತನ
ನೇಕರಸನಿಪುಣನಭಿದಾನ ಪ್ರವೀಣನೆ
ಲ್ಲಾ ಕಲಾಕುಶಲನೆನಿಪಾತಂ ಕವೀಶಂ...."

—ಸೋಮನಾಥ ಚರಿತ್ರೆ 1-16

ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ ಕವಿರಾಜಮಾರ್ಗಕಾರನು ಬೊಟ್ಟೆತ್ತಿ ತೋರಿಸಿದ ಕವಿಗಳು ಪರಿಣತಿ ಹೊಂದಿದ ವ್ಯಾಕರಣ ಕನ್ನಡವಾಗಿರಬೇಕಷ್ಟೆ. ಎಂದರೆ ಆ ಕಾಲದಲ್ಲಿ ಕನ್ನಡ ವ್ಯಾಕರಣ ಮಾರ್ಗ ದೃಢವಾಗಿತ್ತು ಎಂದಂತಾಯಿತು. ಮಾತ್ರವಲ್ಲ, ಅಂದು "ಸಂಸ್ಕೃತ ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಒಳಗಾದ ಕನ್ನಡ ಭಾಷೆಯ ವ್ಯಾಕರಣ ನಿಯಮಗಳ ಅರಿವಿಲ್ಲದೆಯೇ ಖಚಿತಸ್ವರೂಪವುಳ್ಳ ಸಾಹಿತ್ಯ ಸೃಷ್ಟಿ ಸಾಧ್ಯವಿಲ್ಲ" (ಪ್ರಾ. ಕ. ವ್ಯಾ. ಪು. 6) ಎಂಬುದೂ ಸ್ಫಟಿಕಸತ್ಯ.

ಕವಿರಾಜಮಾರ್ಗವೊಂದು ಅಲಂಕಾರ ಗ್ರಂಥ. ಆದರಲ್ಲಿ ವ್ಯಾಕರಣ ವಿಚಾರಗಳು ಭೋಜನ (ಕ್ರಿ. ಶ. 11ನೆಯ ಶತಕದ ಪೂರ್ವಭಾಗ) ಶೃಂಗಾರ ಪ್ರಕಾಶದಂತಾಗಲೀ ಅಥವಾ ಕಾವ್ಯಾವಲೋಕನದಂತಾಗಲೀ ಕೃತಿಯ ಆರಂಭದಲ್ಲಿ ಪ್ರತಿಪಾದಿತವಾದುದಲ್ಲ. ದುಷ್ಟ ಮತ್ತು ನಿರ್ದುಷ್ಟ ವ್ಯಾಕರಣ ಪ್ರಯೋಗಗಳನ್ನು, ಅದೂ ಕಾವ್ಯದೋಷಗಳನ್ನು ಹೇಳುವ ಸಂದರ್ಭದಲ್ಲಿ, ಎತ್ತಿತೋರಿಸುವುದಷ್ಟೇ ಗ್ರಂಥಕಾರನ ಉದ್ದೇಶ. ಅಲ್ಲಿ ಬಳಸಲಾದ ಪಾರಿಭಾಷಿಕ ಪದಗಳ—ವಿಭಕ್ತಿ, ಕಾರಕ, ಕರ್ಮ, ಕರಣ, ಸಂಬೋಧನೆ, ವಿಶೇಷ್ಯ ಮೊದಲಾದವುಗಳ—ವಿವರಣೆಯಿಲ್ಲ. ಕನ್ನಡಕ್ಕೆ ತೀರ ಒಗ್ಗದ 'ಅತ್ತಣಿಂ' ಎಂಬ ಪಂಚಮೀ ಪ್ರತ್ಯಯದ ಬಗ್ಗೆ ಗ್ರಂಥಕರ್ತನಿಗೆ ಯಾವ ಸಂದೇಹವೂ ಇಲ್ಲ. ಗ್ರಂಥದ "ಅನೇಕ ಕಡೆಗಳಲ್ಲಿ ಬರುವ 'ಪೂರ್ವಾಚಾರ್ಯರ' ಎಂಬ ಮಾತು ಸಂಸ್ಕೃತ ಮಾತ್ರವಲ್ಲದೆ ನ್ನಡಕ್ಕೂ ಸಂಬಂಧಪಟ್ಟಂತೆ ಅಲಂಕಾರ, ಛಂದಸ್ಸು ಮತ್ತು ವ್ಯಾಕರಣ ಶಾಸ್ತ್ರಗಳಲ್ಲಿ ಪ್ರಮಾಣ ಪುರುಷರನ್ನು ಸೂಚಿಸುತ್ತದೆ ಎಂದು ತಿಳಿಯಬಹುದು (ಪ್ರಾ. ಕ. ವ್ಯಾ. ಪು. 7). ಹಾಗೆ ಗದ್ಯಕವಿಗಳಲ್ಲೊಬ್ಬನಾದ ದುರ್ವಿನೀತನೇ ಶಬ್ದಾವತಾರದ ಕರ್ತೃವೆಂದು ನಿರ್ಣಯಿಸಿ "ಗ್ರಾಂಥಿಕ ಭಾಷೆಯಾಗಿ ಬೆಳೆಯತೊಡಗಿದ್ದ ಕನ್ನಡನುಡಿಗೆ ಅಗತ್ಯವಾದ ಒಂದು ವ್ಯಾಕರಣ ಗ್ರಂಥವೆಂದು ಕನ್ನಡದಲ್ಲಿ ಅದನ್ನವನು ಬರೆದಿರಬಹುದೇ ಎಂದು ಪ್ರಶ್ನೆ" (ಕ. ಸಾ. ಚ. ಪು. 18) ಕೇಳಿದ್ದಿದೆ. ಈ ಪ್ರಶ್ನೆಗೆ ಉತ್ತರ ಅನುಕೂಲವಾದರೆ ಶಬ್ದಾವತಾರ ಕವಿರಾಜಮಾರ್ಗಪೂರ್ವದ ಕನ್ನಡ ವ್ಯಾಕರಣವಾಗುತ್ತದೆ. ಹೀಗೆ ಈ ನಿಟ್ಟಿನಲ್ಲಿ ವಿಚಾರಿಸಿದಾಗ ಮೇಲಿನ ಎಲ್ಲ ಕಾರಣಗಳಿಂದ ಕವಿರಾಜಮಾರ್ಗಕ್ಕಿಂತ ಹಿಂದೆ "ಕನ್ನಡ ವ್ಯಾಕರಣ ಸಂಪ್ರದಾಯವೊಂದು ನೆಲೆನಿಂತಿತ್ತು, ವ್ಯಾಕರಣದ ಚೌಕಟ್ಟು ಮತ್ತು ಪರಿಭಾಷೆಯ ವಿಷಯದಲ್ಲಿ ಅದು ಸಂಸ್ಕೃತ (ಮತ್ತು ಪ್ರಾಕೃತ) ವ್ಯಾಕರಣದ ಮಾದರಿಯಲ್ಲಿಯೇ ರೂಪುಗೊಳ್ಳುತ್ತಿತ್ತು ಎಂದು ಧಾರಾಳವಾಗಿ ಊಹಿಸಬಹುದು" (ಪ್ರಾ. ಕ. ವ್ಯಾ. ಪು. 7). ವ್ಯಾಕರಣ ಮಾರ್ಗ ರೂಪುಗೊಳ್ಳುತ್ತಿತ್ತು ಎಂದರೆ ಗ್ರಂಥಗಳೂ

ಹುಟ್ಟಿರಬೇಕೆಂದು ಹೇಳಿದಂತೆಯೇ ಸರಿ. ಆದರೆ ಅಂಥ ವ್ಯಾಕರಣ ಗ್ರಂಥದ ಸ್ವರೂಪ ವನ್ನು ಊಹಿಸಿಕೊಳ್ಳಲು ಆಧಾರಸಾಮಗ್ರಿ ಮಾತ್ರ ಸಾಲದು.

### ಕವಿರಾಜ ಮಾರ್ಗದಲ್ಲಿ ವ್ಯಾಕರಣ ವಿಚಾರ

ಕವಿರಾಜಮಾರ್ಗದಲ್ಲಿ ಬಂದಿರುವ ವ್ಯಾಕರಣಾಂಶಗಳು ಹೀಗಿವೆ :

ಪ್ರಥಮ ಪರಿಚ್ಛೇದ : ಸಮಸಂಸ್ಕೃತ ಅರಿಸಮಾಸ-ಶ್ರುತಿದುಷ್ಟ-ಶ್ರುತಿಕಷ್ಟ-ವಿಸಂಧಿ ವಿರೂಪ ಸಂಧಿ-ನೇಯಾರ್ಥ-ಕಾರಕ-ವಚನ-ಸಮುಚ್ಚಯ ವಿಶಂಕಾದಿ ದೋಷಗಳು.

ದ್ವಿತೀಯ ಪರಿಚ್ಛೇದ : ಕ್ರಿಯಾವಿಶೇಷಣ ಮತ್ತು ಅವ್ಯಯಗಳ ಪ್ರಯೋಗದೋಷ, ದ್ವಿತೀಯಾ, ಷಷ್ಠೀ, ಸಂಬೋಧನಾ ವಿಭಕ್ತಿಗಳ ದೀರ್ಘ, ಬಹುವಿಶೇಷಣಗಳ ಪ್ರಯೋಗ ವಿಚಾರ, ದಕ್ಷಿಣೋತ್ತರ ಮಾರ್ಗಗಳಲ್ಲಿ ಕೆಲವು ಕ್ರಿಯಾಪದಗಳ ವಿಚಾರ.

ಮೇಲಿನ ವ್ಯಾಕರಣಾಂಶಗಳು ಹಾಗೂ ಪಾರಿಭಾಷಿಕ ಪದಗಳು ಮುಂದಿನ ವ್ಯಾಕರಣ ಗ್ರಂಥಗಳಲ್ಲಿ ಹೆಚ್ಚು ಕಡಿಮೆ ಯಥಾವತ್ತಾಗಿ ಮುಂದುವರಿದಿವೆ. ಸ್ಮೃತಿ ಭೂಷಣಗಳಲ್ಲಿ ಸಮಸಂಸ್ಕೃತದ ಕಲ್ಪನೆಯಲ್ಲಿ ಬದಲಾವಣೆ ಉಂಟಾದರೂ ದರ್ಪಣ ಕವಿರಾಜಮಾರ್ಗದ ಕಲ್ಪನೆಯನ್ನೇ ಸ್ವೀಕರಿಸಿದೆ. ವಚನಗಳೆರಡೆಂಬ ವಿಚಾರ ಮಾತ್ರ ಪರಿವರ್ತಿತವಾಗಿ 'ವಚನತ್ರಯ'ವೆನಿಸಿ ಸ್ಮೃತಿ ಮೊದಲ್ಗೊಂಡು ವ್ಯಾಕರಣ ಗ್ರಂಥಗಳಲ್ಲಿ ಪ್ರಚುರವಾಗಿದೆ.

ಕವಿರಾಜಮಾರ್ಗ ಮತ್ತು ಸ್ಮೃತಿಯ ನಡುವಿನ ಕಾಲಾವಧಿಯಲ್ಲಿ ಕೆಲವು ವ್ಯಾಕರಣ ಗ್ರಂಥಗಳು ಹುಟ್ಟಿಕೊಂಡಿರಬಹುದು. ಪಂಪನು ಹೇಳುವ ಸುದ್ದಗೆ(2-34) ಒಂದು ಪಾರಿಭಾಷಿಕ ಪದವೆಂಬುದು ಗಮನಾರ್ಹ. ಕೆಲವು ಶಾಸನಗಳಲ್ಲಿ, ಹಾಗೆಯೆ ಕೆಲವು ಕಾವ್ಯಗಳಲ್ಲಿ ವ್ಯಾಕರಣ ಕೋವಿದರೆಂದು ಹೊಗಳಿಸಿಕೊಂಡವರು ಸಂಸ್ಕೃತ ವೈಯಾಕರಣರೇ ? ಅಲ್ಲ, ಕನ್ನಡ ವೈಯಾಕರಣರೇ ? ಅವರು ವ್ಯಾಕರಣ ಗ್ರಂಥಗಳ ನಿರ್ಮಾತೃಗಳೇ ? ಎಂಬುದನ್ನು ನಿರ್ಣಯಿಸುವಂತಿಲ್ಲ. ಉದಾಹರಣೆಗಾಗಿ ಅಬ್ಬಲೂರಿನ ಶಾಸನವೊಂದನ್ನು ಮತ್ತು ಸುಕುಮಾರ ಚರಿತದ ಪದ್ಯವೊಂದನ್ನು ಗಮನಿಸಬಹುದು. ಮೊದಲನೆಯದರಲ್ಲಿ 'ಸೋಮೇಶ್ವರ ಸೂರಿ' ಎಂಬಾತನನ್ನು ತರ್ಕ, ನಾಟಕ, ವ್ಯಾಕರಣ ಮೊದಲಾದವುಗಳಲ್ಲಿ ಕೋವಿದನೆನ್ನಲಾಗಿದೆ (ಅ. ಕ. ಸಾ. ಚ. ಸಂ. 3. ಪು. 24). ಸುಕುಮಾರ ಚರಿತದ ಪದ್ಯದಲ್ಲಿ (1-28)—ಅದು ಶ್ರವಣಬೆಳಗೊಳದ 117ನೆಯ ಶಾಸನದಲ್ಲೂ ಗೋಚರಿಸುತ್ತದೆ—ದಿವಾಕರಣಂದಿಯೆಂಬ ಸೈದ್ಧಾಂತಿಯನ್ನು ವ್ಯಾಕರಣ ವಿದನೆಂದು ಹೊಗಳಲಾಗಿದೆ (ಅದೇ. ಪು. 745). ಈತನು ತತ್ವಾರ್ಥ ಸೂತ್ರಾನುಗತ ಕರ್ಣಾಟ ಲಘುವೃತ್ತಿಯೆಂಬ ಕನ್ನಡ ವ್ಯಾಖ್ಯಾನದ ಕರ್ತೃ. ಇವರಿಬ್ಬರು ಸಂಸ್ಕೃತ

ಅಥವಾ ಕನ್ನಡ ವ್ಯಾಕರಣವನ್ನು ಕುರಿತು ಬರೆದುದಕ್ಕೆ ಆಧಾರವಿಲ್ಲ. ಆದ್ದರಿಂದ ಯಾವುದೇ ತೀರ್ಮಾನಕ್ಕೆಡೆಯಿಲ್ಲ.

ಕವಿರಾಜಮಾರ್ಗದ ಬಳಿಕ ವಿಕಾಸಗೊಳ್ಳುತ್ತಾ ಬಂದ ಕನ್ನಡ ವ್ಯಾಕರಣ ವಾಙ್ಮಯವನ್ನು ಅನುಪಲಬ್ಧ ಮತ್ತು ಉಪಲಬ್ಧವೆಂದು ಎರಡು ಗುಂಪಾಗಿ ಮಾಡಬಹುದು.

## ಅನುಪಲಬ್ಧ ವ್ಯಾಕರಣಗಳು

ಕೆಲವು ಕಾವ್ಯೋಲ್ಲೇಖಗಳಿಂದ, ಉಪಲಬ್ಧ ವ್ಯಾಕರಣ ಗ್ರಂಥಗಳಲ್ಲಿ ದೊರಕುವ ಸೂಚನೆಗಳಿಂದ ಅನುಪಲಬ್ಧ ವ್ಯಾಕರಣಗಳನ್ನು ಊಹಿಸಿಕೊಳ್ಳಬಹುದು. ಇಲ್ಲಿ ವ್ಯಾಕರಣಗಳಿಗಿಂತ ಹೆಚ್ಚಾಗಿ ವ್ಯಾಕರಣಕರ್ತರ ಬಗ್ಗೆ ಊಹೆ ಕಾರ್ಯವೆಸಗುತ್ತದೆ.

### ರನ್ನ

ಕವಿ ರನ್ನನು ತನ್ನನ್ನು 'ಶಬ್ದಾನುಶಾಸನಪ್ರಭವವಚೋವಿಭವ'ನೆಂದೂ 'ಉಭಯ ವ್ಯಾಕರಣ ಪಂಡಿತ'ನೆಂದೂ (ಅಜಿತ ಪುರಾಣ 12-43) ವಿಶೇಷಿಸಿಕೊಂಡಿದ್ದಾನೆ. ಈ ಮಾತುಗಳಿಂದ ಆತನೊಬ್ಬ ಕನ್ನಡ ವ್ಯಾಕರಣವನ್ನು ಚೆನ್ನಾಗಿ ಬಲ್ಲವನೆಂದು ಹೇಳಬಹುದಲ್ಲದೆ ವ್ಯಾಕರಣ ಗ್ರಂಥದ ನಿರ್ಮಾಪಕನೆನ್ನಲು ಬರುವುದಿಲ್ಲ. ಆದರೆ ಜನ್ನನು 'ರನ್ನಂ ವೈಯಾಕರಣಂ' ಎಂದು ಹೊಗಳಿರುವುದನ್ನು ನೋಡಿದರೆ (ಅನಂತನಾಥ ಪುರಾಣ 14-77) ರನ್ನನಿಂದ ವ್ಯಾಕರಣ ಗ್ರಂಥವೊಂದು ರಚಿತವಾಗಿರಬೇಕೆಂದು ಊಹಿಸಲೆಡೆಯಿದೆ.

### ನಯಸೇನ

ಭೂಷಣದಲ್ಲಿ 'ದೀರ್ಘೋಕ್ತಿರ್ನಯಸೇನಸ್ಯ' (ಸೂ, 73) ಎಂಬ ಸೂತ್ರದ ಆಧಾರದಿಂದ ನಯಸೇನನೆಂಬ ವೈಯಾಕರಣನನ್ನು ಊಹಿಸಿಕೊಳ್ಳಲೆಡೆಯಿದೆ. ಈ ನಯಸೇನನು ಒಬ್ಬ ಮುನಿಯೆಂಬುದನ್ನು ವೃತ್ತಿ ಸ್ಪಷ್ಟೀಕರಿಸುತ್ತದೆ. ಹಿಂದಿನ ಅಧ್ಯಾಯದಲ್ಲಿ ವಿಶದೀಕರಿಸಿದ ಮುಳಗುಂದ ಶಾಸನೋಕ್ತ ನಯಸೇನನೂ ಒಬ್ಬ ವೈಯಾಕರಣನಷ್ಟೆ. ಭೂಷಣದಲ್ಲಿ ಉಲ್ಲೇಖಿತನಾದ ನಯಸೇನನೂ ಮುಳಗುಂದ ಶಾಸನೋಕ್ತ ನಯಸೇನನೂ ಒಬ್ಬನೇ ? ಅಲ್ಲ, ಅವರಿಬ್ಬರು ಭಿನ್ನ ವ್ಯಕ್ತಿಗಳೇ ? ಧರ್ಮಾಮೃತದ ಕರ್ತೃವಾದ ನಯಸೇನನು ವ್ಯಾಕರಣೋಕ್ತ ನಯಸೇನನಿಗಿಂತ ಅಭಿನ್ನ ವ್ಯಕ್ತಿಯೇ? ಅಲ್ಲ ಅವರಿಬ್ಬರು ಭಿನ್ನ ವ್ಯಕ್ತಿಗಳೇ ? ಈ ಬಗ್ಗೆ ಚರ್ಚೆ ನಡೆದಿದೆ. ಕವಿಚರಿತೆಕಾರರು ಧರ್ಮಾಮೃತದ ಕರ್ತೃವಾದ ನಯಸೇನನೇ ವ್ಯಾಕರಣೋಕ್ತ ನಯಸೇನನೆಂದು ನಿರ್ಣಯಿಸಿ "ಈತನು ಕನ್ನಡ ವ್ಯಾಕರಣವನ್ನು ಸಹ ಬರೆದಿರುವಂತೆ ತೋರುತ್ತದೆ" (ಕ.ಕ. ಪು.139) ಎಂದಭಿಪ್ರಾಯಿಸಿದ್ದಾರೆ. ಭೂಷಣೋಕ್ತ ನಯಸೇನನು ಧರ್ಮಾಮೃತದ ನಯಸೇನನಿಗಿಂತ ಭಿನ್ನನೆಂದೂ ಈತನು ಬಹುಶಃ ಶಾಸನೋಕ್ತ ನಯಸೇನನೇ ಆಗಿರಬೇಕೆಂದೂ

ಎ. ವೆಂಕಟಸುಬ್ಬಯ್ಯನವರು ಹೇಳಿದ್ದಾರೆ (ಕೆ.ಕ.ಕಾ.ವಿ. ಪು. 181), ಗೋವಿಂದ ಪೈಗಳು ಕವಿಚರಿತೆಕಾರರ ಅಭಿಪ್ರಾಯಕ್ಕೆ ಒತ್ತುಕೊಟ್ಟಿದ್ದಾರೆ. ಅವರ ವಿವರಣೆ ಹೀಗಿದೆ :

"....ಸೂತ್ರದಲ್ಲಿಯ 'ಉಕ್ತಿ' ಎಂದರೆ ಆ ನಯಸೇನನು ತನ್ನ ಗ್ರಂಥದಲ್ಲಿ ನುಡಿದ ಮಾತು, ಆತನೆಸಗಿದ ಪ್ರಯೋಗವೆಂದೂ ತಿಳಿಯುವುದರಿಂದ, ಕನ್ನಡದಲ್ಲಿಯ ಪ್ರಯೋಗ ವನ್ನು ಹೇಳುವ ಈ ಸೂತ್ರದಲ್ಲಿ ಆಧಾರವಾಗಿ ಹೇಳಲ್ಪಟ್ಟಿರುವ ನಯಸೇನನು ಕವಿಯೇ ಆಗಿರಬೇಕು. ಅತ ಏವ ಈ ನಯಸೇನನು ಧರ್ಮಾಮೃತದ ರಚಕನಾದ ನಯಸೇನ ನೆಂಬ ಆ ಕನ್ನಡ ಕವಿಯೇ ಹೊರತು ಮುಳುಗುಂದದ ಶಾಸನದಲ್ಲಿ ಹೇಳಿರುವ ನಯಸೇನ ಪಂಡಿತನೆಂಬ ಸಂಸ್ಕೃತ ವ್ಯಾಕರಣಕಾರನಲ್ಲ" (ಕ.ಸಾ.ಪ. 20-2, ಪು. 144).

ಕವಿಚರಿತೆಕಾರರ ಅಭಿಮತವಾಗಲೀ ಗೋವಿಂದ ಪೈಗಳ ಹೇಳಿಕೆಯಾಗಲೀ ಸಮರ್ಥ ನೀಯವಲ್ಲ. ಮೊದಲನೆಯದಾಗಿ ಧರ್ಮಾಮೃತದ ಕರ್ತೃವಿನಿಂದ ಒಂದು ಕನ್ನಡ ವ್ಯಾಕರಣಗ್ರಂಥ ರಚಿತವಾಗಿದೆಯೆಂದು ತಿಳಿಯಲು ಆಧಾರಗಳಿಲ್ಲ. ಎರಡನೆಯದಾಗಿ ಭೂಷಣದ ಉಪರ್ಯುಕ್ತ ಸೂತ್ರದಲ್ಲಿನ 'ಉಕ್ತಿ'ಗೆ ಪೈಗಳು ಹೇಳಿದ ಅರ್ಥ ಸಮರ್ಪಕ ವಲ್ಲ. 'ಆತನೆಸಗಿದ ಪ್ರಯೋಗ'ವೆಂಬರ್ಥ ಬರುವಲ್ಲಿ ಭೂಷಣದಲ್ಲಿ ಕೆಳಗಿನಂತೆ ನಿರೂಪಿಸುವುದನ್ನು ಕಾಣಬಹುದು.

| | |
|---|---|
| ಹರಿಪಾಲ ಪ್ರಯೋಗ :<br>ತಥಾ ಗುಣವರ್ಮಕವಿಪ್ರಯೋಗ : | ಸೂ. 68ರ ವಿವರಣೆ |
| ತಥಾ ಪ್ರಯೋಗೊ ಗುಣವರ್ಮಣ : | —ಸೂ. 175ರ ವಿವರಣೆ |
| ತಥಾ ಚ ಭಾರತೇ ಹಂಪಸ್ಯ ಪ್ರಯೋಗ : | —ಸೂ. 187ರ ವಿವರಣ |

ಮೇಲಿನಂತೆ 'ನಯಸೇನಸ್ಯ ಪ್ರಯೋಗ :, ಎಂದಿರುತ್ತಿದ್ದರೆ ಸಮಸ್ಯೆಯಿಲ್ಲ. ಇಲ್ಲಿ ನಿರ್ಣಯಕ್ಕೆ ಬರುವುದರ ಮೊದಲು ಸಂಸ್ಕೃತ ವ್ಯಾಕರಣಗಳು ಹಿಂದಿನ ವೈಯಾಕರಣ ರನ್ನು ಉಲ್ಲೇಖಿಸುವ ವಿಧಾನವನ್ನು ಗಮನಿಸಬೇಕು. ಪೂರ್ವದಲ್ಲಿ ಆಗಿಹೋದ ಕೆಲವು ವೈಯಾಕರಣರನ್ನು ಅಷ್ಟಾಧ್ಯಾಯಿಯಲ್ಲಿ ಕೆಳಗಿನಂತೆ ಉಲ್ಲೇಖಿಸಲಾಗಿದೆ :

| | |
|---|---|
| ವಾಸುಪ್ಯಾಪಿಶಲೇ : | —6-1-92 |
| ಅವಜ್ ಸ್ಫೋಟಾಯನಸ್ಯ | —6-1-123 |
| ಲೋಪಃ ಶಾಕಲ್ಯಸ್ಯ | —8-3-19 |

ಇಲ್ಲಿ ಆಪಿಶಲಿ, ಸ್ಫೋಟಾಯನ, ಶಾಕಲ್ಯರು ಪಾಣಿನಿಪೂರ್ವದ ವೈಯಾಕರಣರೆಂಬುದು ನಿರ್ವಿವಾದ. ಮೇಲಿನ ಸೂತ್ರಗಳ ವೃತ್ತಿಯಲ್ಲಿ "....ಆಪಿಶಲೇರಾಚಾರ್ಯಸ್ಯಮತೇನ; ....ಸ್ಫೋಟಾಯನಸ್ಯಾಚಾರ್ಯಸ್ಯ ಮತೇನ....ಶಾಕಲ್ಯಸ್ಯಾಚಾರ್ಯಸ್ಯ ಮತೇನ" (ಕಾಶಿಕಾ ವೃತ್ತಿ) ಎಂಬ ವಿವರಣೆ ಗಮನಾರ್ಹ. ಭೂಷಣದಲ್ಲೂ ಮೇಲಿನ ಸೂತ್ರದ ವೃತ್ತಿಯಲ್ಲಿ "ನಯಸೇನಮುನೇರ್ಮತೇ ದೀರ್ಘೋಕ್ತಿರ್ಭವತಿ" ಎಂದೇ ಇದೆ.

ಹಾಗಾಗಿ ಈ ನಯಸೇನನೊಬ್ಬ ಕನ್ನಡ ವೈಯಾಕರಣನೆಂದು ತೀರ್ಮಾನಿಸಬಹುದು. ಆದರೆ ಈ ನಯಸೇನನಾರು ಎಂಬುದು ಮಾತ್ರ ಜಟಿಲ ಪ್ರಶ್ನೆ.

ಶಾಸನೋಕ್ತ ನಯಸೇನನು ಸಂಸ್ಕೃತದ ಭಿನ್ನ ವ್ಯಾಕರಣ ಸಂಪ್ರದಾಯಗಳನ್ನು ಬಲ್ಲವನಾದರೂ, ಗೋವಿಂದ ಪೈಗಳು ಹೇಳುವಂತೆ (ಅದೇ.) ಆತನೊಬ್ಬ ಸಂಸ್ಕೃತ ವ್ಯಾಕರಣ ಕರ್ತನೆನ್ನಲು ಸಾಧಕ ಸಾಮಗ್ರಿಗಳಿಲ್ಲ. ಒಂದು ವೇಳೆ ಆತನು "ಸಂಸ್ಕೃತ ವ್ಯಾಕರಣಕಾರನಾಗಿದ್ದರೆ, ಅನೇಕ ದಾಕ್ಷಿಣಾತ್ಯ, ವ್ಯಾಕರಣಕಾರರ ಪರಂಪರೆಯಲ್ಲಿ ನಯಸೇನನ ಹೆಸರು ಎಲ್ಲಿಯೂ ಯಾವಂದೂ ಕಂಡುಬಾರದಿರುತ್ತಿರಲಿಲ್ಲ. ಆದ್ದರಿಂದ ಅವನು ಕನ್ನಡ ವೈಯಾಕರಣನೇ ಆಗಿದ್ದಿರಬೇಕೆಂಬ" (ಪ್ರಾ. ಕ. ವ್ಯಾ. ಪು. 55) ನಿರ್ಣಯವನ್ನು ಕೈಗೊಳ್ಳಬಹುದು. ಹಾಗೆ ಮುಂದುವರಿದಾಗ ಕನ್ನಡ ವೈಯಾಕರಣ ನಯಸೇನನೂ ಶಾಸನೋಕ್ತ ನಯಸೇನನೂ ಏಕವ್ಯಕ್ತಿಯಾಗಿರುವಂತೆ ಭಾಸವಾಗುತ್ತದೆ. ಸಂಸ್ಕೃತದ ಹಲವು ವ್ಯಾಕರಣ ಸಂಪ್ರದಾಯಗಳನ್ನು ಕರತಲಾಮಲಕಗೊಳಿಸಿಕೊಂಡ ಈತನು ಆ ಮಾದರಿಯಲ್ಲಿ ಕನ್ನಡ ವ್ಯಾಕರಣವನ್ನು ರಚಿಸಿರಬೇಕೆಂಬುದರಲ್ಲಿ ಸಂಭಾವ್ಯತೆಯಿರುವುದೇ ಈ ಊಹೆಗೆ ಕಾರಣ. ಧರ್ಮಾಮೃತದ ಕರ್ತೃವಾದ ನಯಸೇನನು ಒಂದು ಕನ್ನಡವ್ಯಾಕರಣ ಗ್ರಂಥವನ್ನು ರಚಿಸಿರುವಂತೆ ಊಹಿಸಿಕೊಳ್ಳಲು ಆಧಾರಗಳಿಲ್ಲದುದರಿಂದ ಕನ್ನಡ ವೈಯಾಕರಣನಾದ ನಯಸೇನನು ಅವನಿಗಿಂತ ಭಿನ್ನನೆಂದೂ ಬಹುಶಃ ಮುಳುಗುಂದ ಶಾಸನೋಕ್ತ ನಯಸೇನನೇ ಆತನಾಗಿರಬೇಕೆಂದೂ ಸದ್ಯಕ್ಕೆ ಊಹಿಸಿಕೊಳ್ಳಬಹುದು. ನಯಸೇನ ಮುನಿಕೃತ ವ್ಯಾಕರಣವು "ಭಾಷಾಭೂಷಣದಂತೆ ಸಂಸ್ಕೃತದಲ್ಲಿ ರಚಿತವಾಗಿದ್ದಿರುವಂತೆ ಕಾಣುತ್ತದೆ" (ಅದೇ. ಪು. 56) ಎಂಬ ನಿಲುವಿಗೆ ಯಾವುದೇ ಬುನಾದಿಯಿಲ್ಲ. ಅದು ಸಂಸ್ಕೃತ ಯಾ ಕನ್ನಡ ಯಾವುದೇ ಭಾಷೆಯಲ್ಲಿದ್ದಿರಲೆಡೆಯಿದೆ.

**ಸುಮನೋಬಾಣ**

ಜನ್ನನು ತನ್ನ ಅನಂತನಾಥ ಪುರಾಣದಲ್ಲಿ (1-34) 'ಕವಿಶ್ರೇಷ್ಠರೊಳ್ ಸೂಕ್ತಿ ನವೀನೋಜ್ವಳಬಾಣನಪ್ಪ ಸುಮನೋಬಾಣನು' ನೃಸಿಂಹ ಕ್ಷಿತಿನಾಥನಲ್ಲಿ ಕಟಕೋಪಾಧ್ಯಾಯನೆಂದು ಹೇಳುತ್ತಾನೆ. ಎಂದರೆ ಕವಿಸುಮನೋಬಾಣನು 'ಯಾದವ ಕಟಕಾಚಾರ್ಯ'ನೆಂದಂತಾಯಿತು. ದರ್ಪಣಕಾರನು ತಾನು ಯಾದವ ಕಟಕಾಚಾರ್ಯನಾದ ಕವಿ ಸುಮನೋಬಾಣನ ದೌಹಿತ್ರನೆಂದು ಹೇಳಿಕೊಂಡಿರುವುದಲ್ಲದೆ (ಸೂ. 2) ತಾನೂ ಯಾದವ ಕಟಕಾಚಾರ್ಯನೆಂದು ಘೋಷಿಸಿಕೊಂಡಿದ್ದಾನೆ (ಸೂ. 264, 341). ಇದರಿಂದ ಜನ್ನ ಕೇಶಿರಾಜರು ಹೇಳುವ ಸುಮನೋಬಾಣ ಒಬ್ಬನೇ ವ್ಯಕ್ತಿಯಾಗಿರಬೇಕೆಂದು ನಿರ್ಣಯಿಸಬಹುದು. 'ಕಟಕಾಚಾರ್ಯ'ದ ಸರಿಯಾದ ಅರ್ಥವನ್ನು ಗ್ರಹಿಸಲು ಇಂದು ಅಸಾಧ್ಯವಾಗಿದೆ. 'ಕರ್ಣಾಟಕ ಲಕ್ಷಣ ಶಿಕ್ಷಾಚಾರ್ಯ-ಕಟಕಾಚಾರ್ಯ ಇವೆರಡೂ ಸಮಾನಾರ್ಥಕವಾಗಿದ್ದಿರಬಹುದೇ ಎಂಬುದು ಪ್ರಶ್ನೆ (ದರ್ಪಣ (ಮ) ಅವತರಣಿಕೆ.ಪು. 5ರ ಅಡಿಟಿಪ್ಪಣಿ). ಜನ್ನನ ಉಪರ್ಯುಕ್ತ ಪದ್ಯದಲ್ಲಿ ಬರುವಂತೆ ಜಗದೇಕನಲ್ಲಿ ಕಟಕೋ

ಪಾಧ್ಯಾಯನಾದ ನಾಗವರ್ಮ, ಹಾಗೂ ಯಾದವಕಟಕಾಚಾರ್ಯನಾದ ಕೇಶಿರಾಜ ಇವರಿಬ್ಬರೂ ಕನ್ನಡ ವ್ಯಾಕರಣ ಗ್ರಂಥಗಳ ರಚಕರಾಗಿರುವುದೇ ಈ ಪ್ರಶ್ನೆಗೆ ಕಾರಣ. ಅದು ಹೌದಾದಲ್ಲಿ ಕವಿಸುಮನೋಬಾಣನೂ ಒಬ್ಬ ಕನ್ನಡ ವ್ಯಾಕರಣ ಗ್ರಂಥದ ಕರ್ತೃವಾಗಿರಬೇಕೆಂದು ಊಹಿಸಬಹುದು.

ಕವಿ ಸುಮನೋಬಾಣನು ಒಬ್ಬ ವೈಯಾಕರಣನೆಂದು ಜನ್ನನ ಪದ್ಯದಿಂದ ಭಾಸವಾಗುವುದಾಗಿ ಸಂಶೋಧಕರು ಹೇಳಿದ್ದುಂಟು. ಎ. ವೆಂಕಟಸುಬ್ಬಯ್ಯ, ಎಂ. ಎಂ. ಕಲ್ಬುರ್ಗಿ, ಎಂ. ವಿ. ಸೀತಾರಾಮಯ್ಯ ಮೊದಲಾದ ವಿದ್ವಾಂಸರು ಅನಂತನಾಥ ಪುರಾಣದ ಮೇಲಿನ ಪದ್ಯದಲ್ಲಿ ಬರುವ 'ಇದಾನೀಂತನ ಶರ್ವವರ್ಮ' ಎಂಬ ಬಿರುದನ್ನು ಕವಿ ಸುಮನೋಬಾಣನದೆಂದು ಹೇಳುತ್ತಾರೆ (ಅಧ್ಯಯನ ಪು. 552). ಆದರೆ ಆರ್. ನರಸಿಂಹಾಚಾರ್ (ಕ. ಕ. ಪು. 155) ಗೋವಿಂದ ಪೈ (ಕ. ಸಾ. ಪ. 20-2. ಪು. ಮಹಿಷವಾಡಿ (ಅನಂತನಾಥಪುರಾಣ : ಪ್ರಸ್ತಾವನೆ) ಗರ್ಗೇಶ್ವರಿ ವೆಂಕಟಸುಬ್ಬಯ್ಯ (ಅಧ್ಯಯನ. ಪು. 553) ಮೊದಲಾದ ವಿದ್ವಾಂಸರ ಪ್ರಕಾರ ಅದು ನಾಗವರ್ಮನ ಬಿರುದು. ಇಲ್ಲಿ ಇದರ ಚರ್ಚೆ ಅಪ್ರಕೃತ. ಆದರೆ ಎರಡನೆಯ ಗುಂಪಿನವರ ಹೇಳಿಕೆಯೇ ಈ ವಿಚಾರದಲ್ಲಿ ಸಾಧುವೆಂದು ಹೇಳಬಹುದು (ಇದರ ಸ್ಪಷ್ಟೀಕರಣ ಮುಂದಿದೆ). ಆ ಬಿರುದು ಸುಮನೋಬಾಣನದಲ್ಲ ಎಂದ ಮಾತ್ರಕ್ಕೆ ಆತ ವೈಯಾಕರಣನಾಗಿರುವ ಸಾಧ್ಯತೆ ಇಲ್ಲದಾಗುವುದಿಲ್ಲ. ಕೇಶಿರಾಜನು ಕವಿ ಸುಮನೋಬಾಣನೆಂದಿದ್ದಾನೆಯೇ ಹೊರತು, ವೈಯಾಕರಣನೆಂದು ಹೇಳಿಲ್ಲವೆಂಬುದನ್ನು ಗಮನಿಸಿ ಆತನು ವ್ಯಾಕರಣ ಗ್ರಂಥವೊಂದರ ನಿರ್ಮಾಪಕನಲ್ಲವೆಂದು ಹೇಳುವುದೂ ತರವಲ್ಲ (ಅಧ್ಯಯನ. ಪು. 553). ಕಾವ್ಯಾವಲೋಕನಕಾರನು ತನ್ನನ್ನು 'ಕವಿನಾಗವರ್ಮ' ನೆಂದು ಹೇಳಿಕೊಂಡುದುಂಟು (ಕಾವ್ಯಾವಲೋಕನ ಪದ್ಯ 962) ಶಬ್ದಸ್ಮೃತ್ಯಧಿಕರಣದ ಕೊನೆಯ ಗದ್ಯದಲ್ಲಿ ಕವಿಯೆಂಬ ಸ್ಪಷ್ಟವಾದ ಹೇಳಿಕೆಯಲ್ಲದೆ ವೈಯಾಕರಣನೆಂಬ ಸೂಚನೆಯಿಲ್ಲ. ದರ್ಪಣಕಾರನು ತನ್ನನ್ನು 'ಕವಿಕೇಶವ' (ಸೂ. 2, 264), ಕೇಶರಾಜ ಕವಿ (ಸೂ. 339) ಎಂದೇ ಹೇಳಿಕೊಳ್ಳುತ್ತಾನೆ. ಪ್ರಕರಣಾಂತ ಗದ್ಯದಲ್ಲಿ 'ಸುಕವಿ ಕೇಶಿರಾಜ' ನೆಂದು ಹೇಳುವುದನ್ನು ಅವಲೋಕಿಸಬಹುದು.[2] ಇವೆಲ್ಲವನ್ನು ಪರಾಂಬರಿಸಿದಾಗ ಕವಿಸುಮನೋಬಾಣನು ಒಬ್ಬ ವ್ಯಾಕರಣ ಗ್ರಂಥದ ನಿರ್ಮಾಪಕನಾಗಿರಬಹುದೆಂಬ ಬಲವಾದ ಊಹೆ ಸ್ಥಿರವಾಗುತ್ತದೆ. ಆ ಗ್ರಂಥದ ಸ್ವರೂಪ ಮಾತ್ರ ಊಹೆಗೂ ನಿಲುಕದ್ದಾಗಿದೆ.

## ಜನ್ನ

ಯಶೋಧರ ಚರಿತೆಯಲ್ಲಿ 'ನವವೈಯಾಕರಣಂ' (1-19) ಎಂದೂ ಅನಂತನಾಥ ಪುರಾಣದಲ್ಲಿ 'ರನ್ನಂ, ವೈಯಾಕರಣಂ ಜನ್ನಂ ಪೇಳ್ ಕವಿಗಳೊಳಗೆ ವೈಯಾಕರಣಂ' (14-77) ಎಂದೂ ಜನ್ನನು ತನ್ನ ಕುರಿತು ವರ್ಣಿಸಿಕೊಂಡಿರುವುದರಿಂದ ಆತನೂ ಒಂದು ವ್ಯಾಕರಣ ಗ್ರಂಥವನ್ನು ರಚಿಸಿರಬೇಕೆಂದು ಊಹಿಸಬಹುದು. ಅದು ಹೆಚ್ಚು ಕಡಿಮೆ

ಕನ್ನಡದ ವ್ಯಾಕರಣ ಗ್ರಂಥವೇ ಆಗಿದ್ದು ಗುರುಪಾದ ನಾಗವರ್ಮ ಇಲ್ಲವೆ ಸುಮನೋ ಬಾಣನ ಮಾದರಿಯಲ್ಲವೆನು ಮುಂದುವರಿದಿರಬಹುದು. ಆತನು ಒಂದು ವೇಳೆ ಸಂಸ್ಕೃತ ವ್ಯಾಕರಣವನ್ನೇ ಬರೆದಿರುತ್ತಿದ್ದರೆ ಸಂಸ್ಕೃತ ವೈಯಾಕರಣರಲ್ಲಿ ಎಲ್ಲಾದರೂ ಒಂದೆಡೆ ಅವನ ಹೆಸರು ಸೇರದಿರುತ್ತಿರಲಿಲ್ಲ. ಹಾಗೆ ಎಲ್ಲಿಯೂ ಸೇರಿಕೊಂಡು ಗೋಚರಿಸದಿರು ವುದರಿಂದ ಆತನು ಬರೆದ ವ್ಯಾಕರಣ ಕನ್ನಡದ್ದೇ ಇರಬೇಕೆಂದು ಊಹಿಸಬಹುದು. ಆ ಗ್ರಂಥದ ಸ್ವರೂಪ ಅನಿಶ್ಚಿತವೇ ಸರಿ.

ಸ್ಮೃತಿ ಭೂಷಣ ದರ್ಪಣಗಳ ಕೆಳಗಿನ ನಿರೂಪಣೆಯಿಂದಲೂ ಬೇರೆ ಕೆಲವು ವ್ಯಾಕರಣ ಗ್ರಂಥಗಳಿದ್ದಂತೆ ಊಹಿಸಿಕೊಳ್ಳಬಹುದು.

ಸ್ಮೃತಿ-'ಆರಬರ್ ತದೇಕ ವಚನಾಂ

ತರಂ ನಪುಂಸಕದೊಳಾಗೆ ತುತ್ವನ್ಮತರಂ

ದೊರೆಕೊಳ್ಗುಮೆಂಬರ್.... ಸೂ. 90

ಪ್ರತಿಷೇಧದೊಳಂ ಕೆಲಬರ

ಮತದಿಂದಲ್ ವರ್ತಿಕುಂ.... ಸೂ. 95

ಭೂಷಣ— "ತದೇಕ ವಚನಸ್ಯ ತುತ್ವಾನ್ಯೇಷಾಂ" ಸೂ. 207

ದರ್ಪಣ—"ಕವಿಗಳ ಸ್ವರದಿಂ....ತಿಳಿವರ್ ಶುದ್ಧಗೆಯಂ" ಸೂ. 41

ದೊರೆಕೊಳ್ವುದು ಅಖಿಳ ವೈಯಾ

ಕರಣರಿನೊಂದೆಂಬುದುರ್ಕೊರೆಂಬಾದೇಶಂ.... ಸೂ. 198

ಮೇಲಿನ ಮಾತುಗಳಲ್ಲಿ ಸ್ಮೃತಿಯು ಸ್ಪಷ್ಟವಾಗಿ ಹಿಂದಿನ ವೈಯಾಕರಣರನ್ನು ಸೂಚಿಸು ತ್ತದೆ. ಭೂಷಣದ್ದಾದರೂ ಸ್ಮೃತಿಯ ಸೂತ್ರದ ಅನುವಾದವೆನ್ನಬಹುದು. ಪಂಚವಿಧ ಗಳಾಗಿ ಶುದ್ಧಗೆಗಳನ್ನು ವರ್ಗೀಕರಿಸುವ ವಿಚಾರ ಸ್ಮೃತಿ ಭೂಷಣಗಳಲ್ಲಿಲ್ಲ. ದರ್ಪಣ ಕಾರನ ಮಾತಿನಂತೆ ಹಾಗೆ ವಿಭಜನೆ ಹಿಂದೆಯೇ ಇದ್ದುದು ಸತ್ಯ, ಎಂದರೆ ಇದು ಮಾಯವಾಗಿರಬಹುದಾದ ವ್ಯಾಕರಣಗಳಲ್ಲಿ ಅಂಥ ವಿಭಜನೆಯಿದ್ದಿರಬೇಕು ಎಂದಾ ಯಿತು. 'ಅಖಿಳ ವೈಯಾಕರಣರಿಂ' ಎಂಬ ದರ್ಪಣೋಕ್ತಿ ಕೇವಲ ಪಾದಪೂರಣಕ್ಕಾಗಿ ಬಂದಿರದೆ ವೈಯಾಕರಣರ ಸಂಖ್ಯಾಬಾಹುಳ್ಯವನ್ನು ಸೂಚಿಸುತ್ತದೆಯೆನ್ನಬಹುದು.

ಸ್ಮೃತಿಯಲ್ಲಿ ಕೆಲವು ಲಕ್ಷ್ಯಪದ್ಯಗಳನ್ನು ಪಂಪ ಪೊನ್ನ ರನ್ನ ಮೊದಲಾದ ಪೂರ್ವ ಕವಿಗಳ ಕೃತಿಗಳಿಂದ ಎತ್ತಿಕೊಂಡುದಾದರೆ ಇನ್ನು ಕೆಲವು ಲಕ್ಷ್ಯಪದ್ಯಗಳ ಆಕರವಾವು ದೆಂದು ತಿಳಿದುಬಂದಿಲ್ಲ. ಕೆಲವು ಪದ್ಯಗಳು ಗ್ರಂಥಕರ್ತನವೇ ಆಗಿರಬಹುದಾದರೂ ಎಲ್ಲ ಲಕ್ಷ್ಯಗಳಿಗೂ ಹಾಗೆ ಸಮಾಧಾನ ಹೇಳಲು ಸಾಧ್ಯವಿಲ್ಲ. ಕೆಲವು ಲಕ್ಷ್ಯಗಳನ್ನು ಹಿಂದಿನ ವ್ಯಾಕರಣ ಗ್ರಂಥಗಳಿಂದ ಎತ್ತಿಕೊಂಡಿರಲೂಬಹುದು. ಹಾಗೆ ವೈಯಾಕರಣರು ಪೂರ್ವ ಗ್ರಂಥಗಳ ಸೂತ್ರಗಳನ್ನು ಪ್ರಯೋಗವಾಗಿ ಕೊಡುವುದಕ್ಕೆ ದರ್ಪಣದ "ಸವನಿ

ಕುಮಾಕಾರಂ...." (ಸೂ. 239ರ ಪ್ರಯೋಗ) ಎಂಬ ಸ್ಮೃತಿ ಸೂತ್ರ ನಿರ್ದಶನವಾಗಿದೆ. ಈ ನಿಟ್ಟಿನಲ್ಲಿ ವಿಚಾರಿಸುವಾಗ ಸ್ಮೃತಿಯ ಪದ್ಯಸಂಖ್ಯೆ 8, 9, 13, 14 ಮತ್ತು 16 ನಮ್ಮ ಗಮನವನ್ನಾಕರ್ಷಿಸುತ್ತವೆ. ಸ್ವರ, ವ್ಯಂಜನ, ನಾಮ, ಸಂಧ್ಯಕ್ಷರ ಮತ್ತು ವರ್ಗಾಕ್ಷರಗಳನ್ನು ನಿರವಿಸುವ ಈ ಅನುಕ್ರಮ ಪದ್ಯಗಳಲ್ಲಿ ಕೆಲವಾದರೂ ಪೂರ್ವ ವ್ಯಾಕರಣ ಗ್ರಂಥಗಳಿಂದ ಎತ್ತಿಕೊಂಡುದಾಗಿರಬೇಕು. ಆ ವ್ಯಾಕರಣಗಳು ಕಂದ ಪದ್ಯದಲ್ಲಿ ರಚಿತವಾಗಿರುವ ಸೂತ್ರಗಳುಳ್ಳ ಗ್ರಂಥಗಳಾಗಿರಬಹುದು.

ಭೂಷಣದ ಟೀಕು ಬಹುಶಃ ಕ್ರಿ. ಶ. 17ನೆಯ ಶತಮಾನದ್ದೆಂದು ಸಂಪಾದಕರ ಅಭಿಪ್ರಾಯ. ಅದರಲ್ಲಿ ಕೆಲವೆಡೆ 'ಅನ್ಯ ವ್ಯಾಕರಣ ಸೂತ್ರಂ' ಎಂಬುದಾಗಿ ಕವಿರಾಜಮಾರ್ಗ, ಸ್ಮೃತಿ.ದರ್ಪಣಗಳ ಸೂತ್ರಗಳು ಉದ್ಧೃತವಾಗಿವೆ. ಈ ಗ್ರಂಥಗಳಲ್ಲಿ ದೊರಕದ ಎರಡು ಸೂತ್ರಗಳನ್ನು ಟೀಕುವಿನಲ್ಲಿ ಕೊಡಲಾಗಿದೆ.

1. ಲೋಪ : ಕ : ?

ಸೂ. "ಭರದಿಂ ವರ್ಣವಿನಾಶಾಂ
ತರಮಾಗಿಯುಮಿಕ್ಷಿಸಲ್ಕೆ ಕೇಳಲ್ಕಿರದು
ಚ್ಚರಿಸಲ್ಕೆ ಬಾರದಿರ್ದೊಡೆ
ನಿರತಂ ತಾಂ ಲೋಪಮೆಂಬ ಪೆಸರಂ ಪಡೆಗುಂ' ಸೂ. 21ರ ಟೀಕು

2. 'ಕಾವ್ಯಾವಲೋಕನದ ಸೂತ್ರಂ—'

"ನಿರುತಂ ಗಾಜಿ ಪ್ರತ್ಯಯ
ಮುರುಮುದದಿಂ ಕುಂಭಕರ್ಮ ಶಬ್ದಕ್ಕೆಂದುಂ
ಪರಮಾಗಿರೆ ಗತ್ವಕ್ಕಂ
ತರಲೋಪಂ ಬಹುಳವಿಧಿಯಿದು ದೊರೆಕೊಳ್ಗುಂ" ಸೂ. 187ರ ಟೀಕು

ಈ ಸೂತ್ರಗಳು ಕನ್ನಡದ ಉಪಲಬ್ಧ ವ್ಯಾಕರಣಗಳಲ್ಲಿಲ್ಲ. ಮೊದಲನೆಯದು ಕಾಶಿಕಾ ವೃತ್ತಿಯ ಅನುವಾದವಾಗಿದೆ :

"ಅದರ್ಶನಮಶ್ರವಣಮನುಚ್ಚಾರಣಮನುಪಲಬ್ಧಾರಭಾವೋ ವರ್ಣವಿನಾಶ ಇತ್ಯನರ್ಥಾಂತರಮೇತೈ : ಶಬ್ದೈರ್ಯೋರ್ಥೋಭಿಧೀಯಂತೇ ತಸ್ಯ ಲೋಪ ಇತೀಯಂ ಸಂಜ್ಞಾಭವತಿ" (ಕಾಶಿಕಾ 1-1-60). ಇಲ್ಲಿ ಸಂಸ್ಕೃತದ ಅನುಸರಣೆ ಅತ್ಯಂತ ಸ್ಪಷ್ಟವಾಗಿದೆ. ಈ ಸೂತ್ರವಿರುವ ವ್ಯಾಕರಣ ಗ್ರಂಥದ ಕಾಲವನ್ನು ಊಹಿಸಲು ಆಧಾರಗಳಿಲ್ಲ.

ಎರಡನೆಯದು ಕಾವ್ಯಾವಲೋಕನದ ಸೂತ್ರವೆಂದು ಹೇಳಲಾಗಿದ್ದರೂ ಈಗ ಲಭ್ಯವಿರುವ ಕಾವ್ಯಾವಲೋಕನದ ಯಾವ ಪ್ರತಿಯಲ್ಲೂ ಇದಿಲ್ಲದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಒಟ್ಟಿನಲ್ಲಿ ಈ ಸೂತ್ರಗಳೆರಡು ಕಂದ ಪದ್ಯದಲ್ಲಿ ರಚಿತ

ವಾಗಿರುವ ಬೇರೆ ಕನ್ನಡ ವ್ಯಾಕರಣ ಗ್ರಂಥಗಳು ಅಸ್ತಿತ್ವದಲ್ಲಿದ್ದಿರಬಹುದಾದ ಸಾಧ್ಯತೆಗೆ ಸಾಕ್ಷ್ಯಗಳಾಗಿವೆ.

ಪ್ರಾಚೀನರಿಗೆ ವ್ಯಾಕರಣ ಶಾಸ್ತ್ರದಲ್ಲಿದ್ದ ಶ್ರದ್ಧೆ, ಕವಿಯಾದವನಿಗೆ ವ್ಯಾಕರಣಾಭ್ಯಾಸದ ಅವಶ್ಯಕತೆ, ಭಾರತದಲ್ಲಿ ವ್ಯಾಕರಣ ಕೃತಿಗಳ ಧಾರಾಳವಾದ ನಿರ್ಮಾಣ—ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ ಕನ್ನಡದಲ್ಲೂ ಗಣನೀಯ ಪ್ರಮಾಣದಲ್ಲಿ ವ್ಯಾಕರಣ ಗ್ರಂಥಗಳು ಹುಟ್ಟಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಅಂತೆ ಹುಟ್ಟಿಕೊಂಡ ಕೃತಿಗಳಲ್ಲಿ ನಾಲ್ಕು ಗ್ರಂಥಗಳು ಮಾತ್ರ ನಮ್ಮ ಕೈಗೆಟುಕಿ ಉಳಿದವು ಕಾಲಪುರುಷನ ಕರಾಳ ಗರ್ಭದಲ್ಲಿ ಮರೆಯಾಗಿರಬೇಕು. ಹಾಗೆ ಮರೆಯಾದ ಕನ್ನಡ ವ್ಯಾಕರಣ ವಾಙ್ಮಯವನ್ನು ಮೇಲಿನಂತೆ ಊಹಿಸಿ ತಿಳಿದುಕೊಳ್ಳುವಷ್ಟರಲ್ಲೇ ಇಂದು ತೃಪ್ತಿಪಟ್ಟುಕೊಳ್ಳಬೇಕಾಗಿದೆ.

## ಉಪಲಬ್ಧ ವ್ಯಾಕರಣಗಳು

ಹಳಗನ್ನಡದ ನಾಲ್ಕು ಪರಂಪರಾಗತ ವ್ಯಾಕರಣಗಳಲ್ಲಿ ಶಬ್ದಸ್ಮೃತಿ, ಶಬ್ದಮಣಿದರ್ಪಣಗಳು ಕನ್ನಡದಲ್ಲೂ ಕರ್ನಾಟಕ ಭಾಷಾಭೂಷಣ, ಕರ್ನಾಟಕ ಶಬ್ದಾನುಶಾಸನಗಳು ಸಂಸ್ಕೃತದಲ್ಲೂ ಬರೆದವುಗಳು. ಕಂದದಲ್ಲಿ ಸೂತ್ರರಚನೆ, ಪ್ರಯೋಗಗಳಿಗೆ ಲಕ್ಷ್ಯಗಳಾಗಿ ಪದ್ಯಗಳನ್ನು ಉದಾಹರಿಸುವುದು, ಪ್ರಕರಣಗಳ ಹೆಸರು ಮತ್ತು ಅವುಗಳ ಅನುಕ್ರಮ—ಇವುಗಳ ಮಟ್ಟಿಗೆ ಸ್ಮೃತಿ ದರ್ಪಣಗಳು ಸಹಮತವಾಗಿವೆ. ಸ್ಮೃತಿಯಲ್ಲಿಲ್ಲದ ಅಂಶವಾದ ವೃತ್ತಿ, ಲಕ್ಷ್ಯಗಳಾಗಿ ಕೆಲವೊಮ್ಮೆ ಗದ್ಯದ ತುಣುಕುಗಳು, ದರ್ಪಣದ ಪ್ರತ್ಯೇಕತೆಯಾಗಿದೆ. ಭೂಷಣ ಶಾಸನಗಳಲ್ಲಿ ವ್ಯಾಕರಣಾಂಶಗಳು ಸೂತ್ರ, ವೃತ್ತಿ, ಪ್ರಯೋಗಗಳ ಮೂಲಕ ಪ್ರತಿಪಾದಿತವಾಗಿವೆ. ಇವುಗಳಲ್ಲಿ ಸೂತ್ರವೃತ್ತಿಗಳು ಗದ್ಯದಲ್ಲಿದ್ದು ಸಂಸ್ಕೃತದ ವೃತ್ತಿ ಟೀಕೆ ಹಾಗೂ ಪ್ರಕ್ರಿಯಾ ಗ್ರಂಥಗಳಂತೆ ಕೆಲವು ತುಣುಕುಗಳನ್ನಷ್ಟೇ ಪ್ರಯೋಗವಾಗಿ ಕೊಡಲಾಗಿದೆ. ಪೂರ್ವ ಕವಿಗಳ ಕೃತಿಗಳಿಂದ ಪದ್ಯಗಳನ್ನೆತ್ತಿ ಲಕ್ಷ್ಯಗಳಾಗಿ ಕೊಡುವುದು ಈಯೆರಡು ಗ್ರಂಥಗಳಲ್ಲೂ ಅತಿವಿರಳ. ಪ್ರಕರಣಗಳ ಮಟ್ಟಿಗೆ ಭೂಷಣ ಸಂಸ್ಕೃತದ ಪ್ರಕ್ರಿಯಾ ಗ್ರಂಥಗಳನ್ನು ಅನುಸರಿಸಿದರೆ ಶಾಸನವು ಸಂಸ್ಕೃತದ (ಸೂತ್ರಾತ್ಮಕ) ಶಬ್ದಾನುಶಾಸನಗಳಂತೆ ಪಾದವ್ಯವಸ್ಥೆಯನ್ನು ಹೊಂದಿದೆ.

## ಸ್ಮೃತಿ ಭೂಷಣಗಳ ಕರ್ತೃವಿಚಾರ

ಸ್ಮೃತಿಯ ಕರ್ತೃ ನಾಗವರ್ಮನೆಂಬ ವಿಚಾರ ಕಾವ್ಯಾವಲೋಕನದ ಪ್ರತಿಯೊಂದು ಅಧಿಕರಣದ ಕೊನೆಯ ಪದ್ಯ ಮತ್ತು ಗದ್ಯಗಳಿಂದ ವಿಶದವಾಗುತ್ತದೆ. ಅಭಿಧಾನ ವಸ್ತುಕೋಶ ಮತ್ತು ವರ್ಧಮಾನ ಪುರಾಣ—ಇವೆರಡು ಈತನ ಉಳಿದ ಕೃತಿಗಳೆಂಬುದೀಗ ನಿರ್ವಿವಾದ. ಗ್ರಂಥಾರಂಭದ ವರ್ಧಮಾನಸ್ತುತಿ, ಮೂರು ಗ್ರಂಥಗಳ ಆಶ್ವಾಸ ಯಾ ಕಾಂಡಾಂತದ ಗದ್ಯ, ಕವಿಯ ಬಿರುದುಗಳು—ಇವು ಗ್ರಂಥಗಳ ಅಂತರ ಪ್ರಮಾಣಗಳಾಗಿದ್ದು ಈ ನಿರ್ಣಯಕ್ಕೆ ಸಾಕ್ಷಿಯಾಗಿವೆ. ಉಳಿದ ಗ್ರಂಥಗಳಲ್ಲಿ ಕಾಲದ ಕುರಿತು ಚಕಾರವೆತ್ತ

ದಿದ್ದರೂ ವರ್ಧಮಾನಪುರಾಣದಲ್ಲಿ ಗ್ರಂಥಪರಿಸಮಾಪ್ತಿಯ ಕಾಲವನ್ನು ಹೇಳಲಾಗಿದೆ (16-47). ಆ ಪದ್ಯವನ್ನು ಅರ್ಥೈಸುವಲ್ಲಿ ಮೊದಲಿಗೆ ಭಿನ್ನಾಭಿಪ್ರಾಯಗಳು ತೋರಿ ಬಂದರೂ ಇತ್ತೀಚಿಗೆ ಆ ಭಾಗದಲ್ಲಿ ಹೇಳುವ ಕಾಲ ಕ್ರಿ. ಶ. 1042ಕ್ಕೆ ಮಾತ್ರ ಹೊಂದಿ ಕೊಳ್ಳುತ್ತದೆಯೆಂದು ತೀರ್ಮಾನಿಸಲಾಗಿದೆ (ಅಧ್ಯಯನ. ಪ್ರ. 553). ಹಾಗಾಗಿ ಅದೇ ಈ ನಾಗವರ್ಮನ ಕಾಲವೆಂಬುದೀಗ ಖಚಿತ.

ಭೂಷಣದ ಕೊನೆಯಲ್ಲಿ "ರಚಿತಾನಿ ಸ್ಫುಟಾರ್ಥಾನಿ ಕೃತಿನಾ ನಾಗವರ್ಮಣಾ" ಎಂದು ಹೇಳಿರುವುದರಿಂದ ಇದರ ಕರ್ತೃವಿನ ಹೆಸರು ನಾಗವರ್ಮನೆಂಬುದು ಸ್ಪಷ್ಟ. ಭಟ್ಟಾಕಳಂಕನೂ ಭೂಷಣದ ಕರ್ತೃ ನಾಗವರ್ಮ ಎಂದೇ ಹೇಳಿದ್ದಾನೆ (ಶಾಸನ ಸೂತ್ರ 1ರ ವ್ಯಾಖ್ಯಾನ). ಈಗ ಈ ಸ್ಮೃತಿ, ಭೂಷಣಕರ್ತರಾದ ನಾಗವರ್ಮರು ಭಿನ್ನವ್ಯಕ್ತಿಗಳೆ? ಅಲ್ಲ ಏಕೈಕ ನಾಗವರ್ಮನಿಂದ ಈಯೆರಡು ವ್ಯಾಕರಣ ಗ್ರಂಥಗಳೂ ರಚಿತವಾದುವೆ? ಎಂಬುದು ವಿಚಾರಾರ್ಹವಾದ ಪ್ರಶ್ನೆ. ಕೇವಲ ನಾಮಸಾದೃಶ್ಯದಿಂದ ಒಬ್ಬ ನಾಗವರ್ಮ ಎರಡು ಕೃತಿಗಳನ್ನು ರಚಿಸಿದನೆಂದು ಹೇಳುವುದು ಸಮರ್ಪಕವೇ ಎಂಬುದೂ ವಿಚಾರ ಣೀಯ.

ಸ್ಮೃತಿ ಭೂಷಣಗಳ ಕರ್ತೃ ಒಬ್ಬನೇ ಒಬ್ಬ ನಾಗವರ್ಮನೆಂದೂ ಅವನೇ ಎರಡ ನೆಯ ನಾಗವರ್ಮನೆಂದೂ ಮೊದಲಿಗೆ ಸಾರಿದವರು ಆರ್. ನರಸಿಂಹಾಚಾರ್ಯರು (ಕಾವ್ಯಾವಲೋಕನ, ಪೀಠಿಕೆ : ಪು. 16). ಈ ನಿರ್ಣಯಕ್ಕೆ ಅವರು ಆಧಾರಗಳೆಂದು ಎತ್ತಿಹೇಳಿದ್ದು ಎರಡು ವಿಚಾರಗಳನ್ನು (ಅದೇ : ಪು. 18).

1. ಗ್ರಂಥಾರಂಭದ ಜಿನಸ್ತುತಿ ಮತ್ತು ಕೊನೆಯಲ್ಲಿರುವ ನಾಮನಿರ್ದೇಶ.

2. ಭೂಷಣದಲ್ಲಿ ಪ್ರತಿಪಾದಿತ ವ್ಯಾಕರಣ ವಿಷಯಗಳು ಮತ್ತು ಅವುಗಳ ಅನು ಕ್ರಮದಲ್ಲಿ ಸ್ಮೃತಿಯ ಅನುಸರಣೆ.

ಕಾವ್ಯಾವಲೋಕನದ ಕೊನೆಯಲ್ಲಿ (ಪದ್ಯ 965) ಇತರ ಕೃತಿಗಳ ಜೊತೆಯಲ್ಲಿ ಭೂಷಣವನ್ನು ಹೆಸರಿಸಿಲ್ಲವಾದ್ದರಿಂದ ಇದು ಆಮೇಲೆ ರಚಿತವಾದುದೆಂಬ ತೀರ್ಮಾನ ಅವರದು.

ಸ್ಮೃತಿ ಭೂಷಣಗಳ ಏಕಕರ್ತೃಕ ವಿಚಾರಕ್ಕೆ ಇದಕ್ಕಿಂತ ಹೊರತಾದ ಯಾವ ಆಧಾರಗಳೂ ಈವರೆಗೆ ದೊರಕಿಲ್ಲ. ಸಾಧಾರಣವಾಗಿ ಆಂತರ ಪ್ರಮಾಣಗಳೆಂದು ಎತ್ತಿ ಕೊಳ್ಳುವ ದೇವತಾಸ್ತುತಿ, ಪ್ರಕರಣಾಂತ ಗದ್ಯ, ಸ್ವರಚಿತಗ್ರಂಥಗಳ ಉಲ್ಲೇಖ-ಇವುಗಳಲ್ಲಿ ಯಾವುದೊಂದೂ ಸ್ಮೃತಿ ಭೂಷಣಗಳನ್ನು ಒಬ್ಬ ವ್ಯಕ್ತಿ ಬರೆದನೆಂದು ಹೇಳುವಲ್ಲಿ ಸಾಧಕಗಳಾಗುವುದಿಲ್ಲ. ಭೂಷಣದ ಪ್ರಾರ್ಥನಾ ಶ್ಲೋಕದಲ್ಲಿ ಜಿನಸ್ತುತಿಯಿರುವುದು ಹೌದಾದರೂ ಅದು ಇತರ ಕೃತಿಗಳಲ್ಲಿರುವಂತೆ ವರ್ಧಮಾನ ತೀರ್ಥಂಕರನದೇ ಸ್ತುತಿಯಲ್ಲ. ಕೇವಲ ಗ್ರಂಥಕರ್ತನ ನಾಮನಿರ್ದೇಶ ಮಾತ್ರದಿಂದ ನಿರ್ಣಯ ಕೈಗೊಳ್ಳುವುದು ಸಮಂ ಚಿತವಲ್ಲ. ಹಾಗಾಗಿ ಮೊದಲನೆಯ ಕಾರಣವನ್ನು ಕೈಬಿಡಬಹುದು. ಎರಡನೆಯ

ಆಧಾರ ಪರಿಶೀಲಿಸತಕ್ಕುದಾಗಿದೆ. ತುಲನಾತ್ಮಕ ಅಧ್ಯಯನದ ಪರಿಣಾಮವಾಗಿ ಭೂಷಣದ ಕರ್ತೃ ಸ್ಮೃತಿಯ ಕರ್ತೃವಿಗಿಂತ ಭಿನ್ನನೂ ಅರ್ವಾಚೀನನೂ ಎಂಬ ಅಭಿಪ್ರಾಯ 1976 ರಲ್ಲಿ ಪ್ರಕಟವಾಗಿದೆ (ಕ. ಭಾ. 8-4). 1902ರಲ್ಲಿ ಆರ್. ನರಸಿಂಹಚಾರ್ಯರು ಮಂಡಿಸಿದ ಹೇಳಿಕೆಗಳು ಇವರಿಂದ ಪುನರ್ವಿಮರ್ಶೆಗೆಡೆಯಾಗಿವೆ. ಭಿನ್ನಕರ್ತೃಕತ್ವದ ಅಭಿಪ್ರಾಯವನ್ನು ವಿರೋಧಿಸಿ "ಭಾಷಾಭೂಷಣಕಾರನೇ ಬೇರೆ, ಇನ್ನೊಬ್ಬ ನಾಗವರ್ಮ ಎನ್ನುವ ಪ್ರಶ್ನೆಯನ್ನು ಎತ್ತುವ ಅಗತ್ಯವೇ ಇಲ್ಲ" (ಪ್ರಾ. ಕ. ವ್ಯಾ : ಪು.62) ಎಂದು ಚರ್ಚೆಗೆ ಪೂರ್ಣವಿರಾಮ ಹಾಕುವ ಹೇಳಿಕೆ ಬಂದುದುಂಟು. ಇತ್ತೀಚೆಗೆ ಸ್ಮೃತಿ ಭೂಷಣ ಗಳ ಕರ್ತೃಗಳು ಅನ್ಯಾನ್ಯರಾದ ಇಬ್ಬರು ನಾಗವರ್ಮರು ಎಂಬುದನ್ನು ಹಲವು ಆಧಾರ ಗಳೊಡನೆ ತೋರಿಸಿಕೊಡಲಾಗಿದೆ (ಅಧ್ಯಯನ. ಪು. 522–554).

ಸ್ಮೃತಿ ಭೂಷಣಗಳ ಭಿನ್ನ ಕರ್ತೃಕತ್ವವನ್ನು ಎತ್ತಿಹೇಳಲು ಬಾಹ್ಯಪ್ರಮಾಣಗಳು ಸದ್ಯಕ್ಕಂತೂ ತೀರ ಅಲಭ್ಯ. ಅಂಥ ಸ್ಥಿತಿಯಲ್ಲಿ ಆಂತರಿಕ ಪ್ರಮಾಣಗಳನ್ನೇ ಅವಲಂಬಿಸಿ ಕೊಂಡು ಈ ಕೃತಿಗಳ ಅಂತರಂಗವನ್ನು ಕೆದಕಿ ಬೆದಕಿ ನಿರ್ಣಯಕ್ಕೆ ಬರುವುದು ಅವಶ್ಯವೂ ಸಮುಚಿತವೂ ಆಗಿದೆ.

ಮೊದಲನೆಯದಾಗಿ ಸ್ಮೃತಿಭೂಷಣಗಳೆರಡೂ ಹಳೆಗನ್ನಡದ ವ್ಯಾಕರಣವನ್ನು ಪ್ರತಿಪಾದಿಸುತ್ತವೆಯೆಂಬುದು ಗಮನಾರ್ಹ. ಎರಡನೆಯದಾಗಿ ಪ್ರಾಚೀನರ ಗ್ರಂಥಗಳಿಗೆ ಅರ್ವಾಚೀನರು ಋಣಿಗಳಾಗುವುದು ಅಷ್ಟೇ ಸತ್ಯ. ಇದರಿಂದ ಲಕ್ಷಣ ಗ್ರಂಥಗಳಲ್ಲಿ ಒಂದೇ ವಿಧವಾದ ನಿರೂಪಣೆ ಒಂದೇ ಅನುಕ್ರಮದಲ್ಲಿ ಗೋಚರಿಸುವುದು ಸಹಜ. ಕೆಲವೊಮ್ಮೆ ಯಥಾವತ್ತಾದ ನಕಲುಗಳೂ ನಡೆದು ಹೋಗುವುದುಂಟು. ಸಂಸ್ಕೃತ ವ್ಯಾಕರಣ ಪರಂಪರೆಯ ಇತಿಹಾಸದಲ್ಲಿ ಹೀಗಾಗುವುದಕ್ಕೆ ಧಾರಾಳ ಪುರಾವೆಗಳಿವೆ. ಇಂಥ ಪ್ರವೃತ್ತಿಗೆ ಕನ್ನಡ ವ್ಯಾಕರಣ ಅಪವಾದವಾಗಲಾರದಷ್ಟೆ. ಹಾಗಾಗಿ ಸ್ಮೃತಿ ಭೂಷಣಗಳಲ್ಲಿ ಸಮಾನವಾದ ನಿರೂಪಣೆಯಿದೆಯೆಂದ ಮಾತ್ರಕ್ಕೆ, ಭಿನ್ನಕರ್ತೃಕತ್ವವನ್ನು ತೋರಿಸಿ ಕೊಡುವ ಉಳಿದೆಲ್ಲ ಪ್ರಮಾಣಗಳನ್ನು ಅಲ್ಲಗಳೆದು, ಅವುಗಳನ್ನು ಒಬ್ಬನೇ ಒಬ್ಬ ವೈಯಾಕರಣ ಬರೆದನೆಂದು ಹೇಳುವುದು ಸರ್ವಥಾ ಸರಿಯಲ್ಲ. ಮೂರನೆಯದಾಗಿ, ಒಬ್ಬನ ಅನುಸರಣೆಯಲ್ಲಿ ಅಲ್ಪವಾದರೂ ಭಿನ್ನವಾದ ಹೇಳಿಕೆಗಳು ಬರದಿರಲೆಡೆಯಿಲ್ಲ. ಹಾಗೆಯೆ ಗ್ರಂಥಕಾರನ ಕಾಲವೂ ಕೃತಿಯಲ್ಲಿ ತಲೆದೋರದಿರದು. ಆದ್ದರಿಂದ ಅಂಥ ಭಿನ್ನವಾದ ಹೇಳಿಕೆಗಳಲ್ಲಿ, ಅಲ್ಲಿ ವ್ಯಕ್ತವಾಗುವ ಗ್ರಂಥಕಾರನ ಭಿನ್ನ ದೃಷ್ಟಿಕೋನದಲ್ಲಿ, ಆ ಕಾಲಕ್ಕಾದ ಭಾಷಾ ವ್ಯತ್ಯಾಸದಲ್ಲಿ, ಗ್ರಂಥದ ಮೇಲೆ ಇತರ ಕೃತಿಗಳು ಬೀರಿದ ಪ್ರಭಾವ ದಲ್ಲಿ ಭಿನ್ನ ಕರ್ತೃಕತ್ವದ ಅಂಶ ಗೋಚರಿಸುತ್ತದೆಯೇ ಎಂಬುದನ್ನು ಪರಿಶೀಲಿಸಬೇಕು. ಹೀಗೆ ಈ ಮೂರು ಮುಖ್ಯವಾದ ಹಿನ್ನೆಲೆಯನ್ನಿಟ್ಟುಕೊಂಡು ಸ್ಮೃತಿಭೂಷಣಗಳನ್ನು ಗಮನಿಸಿದರೆ ಸತ್ಯಾಂಶ ಹೊರಬೀಳುವುದರಲ್ಲಿ ಅನುಮಾನವಿಲ್ಲ.

ಸ್ಮೃತಿ ಭೂಷಣಗಳ ಭಿನ್ನ ಕರ್ತೃಕತ್ವವನ್ನು ಹೇಳುವಲ್ಲಿ ಸಾಧಕಗಳಾದ ಅಂಶ ಗಳಿವು :

1. ಪ್ರಕರಣಗಳ ಹೆಸರುಂ ಮತ್ತು ಸಂಖ್ಯೆಗಳಲ್ಲಿ ಅಂತರ
2. ವ್ಯಾಕರಣಾಂಶಗಳ ಪ್ರತಿಪಾದನೆಯಲ್ಲಿ ವ್ಯತ್ಯಾಸ
3. ಕೆಲವು ವ್ಯಾಕರಣ ವಿಚಾರಗಳ ನಿರೂಪಣೆಯಲ್ಲಿ ಒಂದಕ್ಕೊಂದು ವಿರೋಧವುಳ್ಳ ಹೇಳಿಕೆಗಳು
4. ಭಾಷಾ ವ್ಯತ್ಯಾಸದ ಹೊಳಹು
5. ವ್ಯಾಕರಣ ವಿಚಾರಗಳ ಆನುಪೂರ್ವಿಯಲ್ಲಿ ಅಂತರ

ಇವುಗಳಲ್ಲಿ ಪ್ರತಿಯೊಂದನ್ನೂ ಸ್ಥೂಲವಾಗಿಯಾದರೂ ವಿಚಾರಿಸಬೇಕು.

1. ಸ್ಮೃತಿಯಲ್ಲಿ ಪರಿಚ್ಛೇದಗಳು (Chapters) 'ಪ್ರಕರಣ'ಗಳೆನಿಸಿದ್ದು ಸಂಧಿ, ನಾಮ, ಸಮಾಸ, ತದ್ಧಿತ ಮತ್ತು ಆಖ್ಯಾತಗಳೆಂಬ ಐದು ಪ್ರಕರಣಗಳಿವೆ. ಭೂಷಣದಲ್ಲಿ ಪ್ರಕರಣದ ಸ್ಥಾನದಲ್ಲಿ 'ವಿಧಾನ'ವಿದ್ದು ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಯುಷ್ಮದಾದಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ ಮತ್ತು ನಿಪಾತಗಳೆಂಬ ಹತ್ತು ವಿಧಾನಗಳಿವೆ. ಮೇಲುನೋಟಕ್ಕೇ ಸ್ಮೃತಿ ಕಾತಂತ್ರಕ್ಕೂ, ಭೂಷಣ ಇನ್ನಾವುದೋ ಗ್ರಂಥಕ್ಕೂ ಋಣಿಯಾಗಿರುವುದು ಖಚಿತವಾಗುತ್ತದೆ (ಆ ಗ್ರಂಥದ ಕುರಿತು ಮುಂದೆ ಹೇಳಲಾಗುವುದು).

2. (ಅ) ವರ್ಣಮಾಲೆಯ ನಿರೂಪಣೆಯಲ್ಲಿ ಖಚಿತವಾದ ಅಂತರ ಸ್ಮೃತಿ ಭೂಷಣಗಳಲ್ಲಿ ವ್ಯಕ್ತವಾಗುತ್ತದೆ. ಸಮಾನ ಮತ್ತು ಭಿನ್ನಾಂಶಗಳ ಪರಿಶೀಲನೆಯಿಂದ ಇದನ್ನು ವಿಶದೀಕರಿಸಬಹುದು.

**ಸಮಾನಾಂಶಗಳು**

1. ವರ್ಣಮಾಲೆಯ ನಿರೂಪಣೆಯಲ್ಲಿ ಸಂಸ್ಕೃತ ವರ್ಣಮಾಲೆಯ ಆದರ್ಶ.
2. ಮೊದಲ ಹದಿನಾಲ್ಕು ವರ್ಣಗಳು 'ಸ್ವರ'ಗಳು.
3. ಒಂದೆರಡು ಮೂರು ಮಾತ್ರೆಗಳ ಸ್ವರಗಳು ಕ್ರಮವಾಗಿ ಹ್ರಸ್ವ ದೀರ್ಘ ಪ್ಲುತಗಳು.
4. ಕಕಾರಾದಿ ಮಕಾರ ಪರ್ಯವಸಾನ ವರ್ಣಗಳಿಗೆ 'ವರ್ಗ' ಸಂಜ್ಞೆ, ಐದೈದರ ವರ್ಗಗಳೈದು.
5. ಙ ಞ ಣ ನ ಮ ಗಳು ಅನುನಾಸಿಕಗಳು.
6. ಯ ವ ಲ ಗಳು ವಿಕಲ್ಪದಿಂದ ಅನುನಾಸಿಕಗಳು.
7. ಲ ರ ಡ ಗಳು ಪ್ರಯತ್ನಾಶಯದಿಂದ ಳ ೞಗಳಾಗುತ್ತವೆ.

8. ಮಹಾಪ್ರಾಣಗಳು ಸಂಖ್ಯೆಯಲ್ಲೂ ಅನುಕರಣದಲ್ಲೂ ಬರುತ್ತವೆ.

## ಭಿನ್ನಾಂಶಗಳು

ವ್ಯಂಜನಗಳು ಅರೆಮಾತ್ರಿಕೆಗಳು, ಅವರ್ಣರಹಿತ ಸ್ವರಗಳು ನಾಮಿಂಗಳು, ಮಕಾರದ ಮುಂದಿನ ವರ್ಣಗಳಿಗೆ ಅವರ್ಗ ಸಂಜ್ಞೆ–ಈ ವಿಚಾರಗಳು ಸ್ಮೃತಿಯಲ್ಲಿ ಮಾತ್ರ ಉಕ್ತವಾಗಿವೆ. ಭೂಷಣವು ಎ ಒ ಕಾರಗಳ ಹ್ರಸ್ವರೂಪಗಳು ಕನ್ನಡದಲ್ಲಿವೆ ಯೆಂದೂ ಋ, ಳ್ಞ ವರ್ಣ, ವಿಸರ್ಗ, ಶ ಷ ಕಾರಗಳು ಕನ್ನಡದಲ್ಲಿಲ್ಲವೆಂದೂ ಹೇಳುತ್ತದೆ. ಅನುಸ್ವಾರ ವಿಸರ್ಗಗಳ ಲಿಪಿರೂಪವನ್ನೂ ತಿಳಿಸುತ್ತದೆ. ಕನ್ನಡದಲ್ಲಿ ಸಾಮಾನ್ಯವಾಗಿ ಮಹಾಪ್ರಾಣಗಳಿಲ್ಲವೆಂಬುದೇ ಆದರ ನಿಲವು. ಈ ಯಾವ ವಿಚಾರಗಳೂ ಸ್ಮೃತಿಯಲ್ಲಿಲ್ಲ. ಎಂದರೆ ಸ್ಮೃತಿಯಲ್ಲಿ ಪ್ರತ್ಯೇಕವಾಗಿ ಉಕ್ತವಾಗಿರುವವುಗಳಲ್ಲಿ ಕೊನೆಯದೊಂದನ್ನು ಬಿಟ್ಟರೆ ಉಳಿದುವೆಲ್ಲ ಸಂಸ್ಕೃತ ವ್ಯಾಕರಣಗಳಲ್ಲಿ ನಿರೂಪಿತವಾದ ವಿಚಾರಗಳು. ಆದರೆ ಭೂಷಣಕ್ಕೆ ವಿಶಿಷ್ಟವಾದ ಹೇಳಿಕೆಗಳಲ್ಲಿ ಹೆಚ್ಚಿನವು ಕನ್ನಡಕ್ಕೆ ಮಾತ್ರ ಸಂಬಂಧಿಸಿದ ವಾಗಿವೆ. ಸ್ಮೃತಿಯು "ಸೂತ್ರಗಳು ವರ್ಣಮಾಲೆಯ ವಿವರಣೆಯಲ್ಲಿ ಸ್ವಯಂ ಸ್ಪಷ್ಟ ವಾಗಿಲ್ಲ"(ಪ್ರಾ.ಕ.ವ್ಯಾ. ಪು.116) ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. 'ಸ್ಮೃತಿ ಯಲ್ಲಿ ಸಂಕ್ಷೇಪ – ಭೂಷಣದಲ್ಲಿ ವಿಸ್ತಾರ' ಎಂಬ ಸಮಾಧಾನವಿಲ್ಲಿ ಸಮಂಜಸವಲ್ಲ. ಏಕೆಂದರೆ, ಸಂಕ್ಷೇಪವೆಂದರೆ ಅಸ್ಪಷ್ಟತೆಯಾಗಲೀ, ಸಹಜವಾದ್ದನ್ನು ಹೇಳದಿರುವು ದಾಗಲೀ ಅಲ್ಲ. ನಿಜವಾಗಿ ಇಲ್ಲಿ ಗ್ರಂಥಕರ್ತರ ದೃಷ್ಟಿಯನ್ನರಿಯಬೇಕಾಗಿದೆ.

ಸ್ಮೃತಿಕರ್ತನಿಗೆ ಸಂಸ್ಕೃತದಲ್ಲಿಲ್ಲದ ವರ್ಣಗಳನ್ನು ಎತ್ತಿಹೇಳುವ ಹಾಗೂ ಕನ್ನಡಕ್ಕೆ ಸಲ್ಲದ ಸಂಸ್ಕೃತ ವರ್ಣಗಳನ್ನು ಕಳೆದು ಹಾಕುವ ದೃಷ್ಟಿಯಿದ್ದಂತೆ ಬಾಸವಾಗುವುದಿಲ್ಲ. ಳ, ಱ, ೞಕಾರಗಳನ್ನು ಸಂಪ್ರದಾಯದ ಬಲದಿಂದ ಹೇಳಿದರೂ ಭೂಷಣದಂತೆ (ಸೂ. 10ರ ವೃತ್ತಿ) ಸಂಸ್ಕೃತದೊಡನೆ ಹೋಲಿಸಿ ಹೇಳುವ ದೃಷ್ಟಿಯಿಲ್ಲ. ಹೆಚ್ಚೇಕೆ, ಎ, ಒ ಕಾರಗಳ ಬಗ್ಗೆಯೇ ಮೌನವನ್ನು ತಾಳಲಾಗಿದೆ. ಅವಧಾರಣಾರ್ಥದಲ್ಲಿ ಬರುವ ಏತ್ ಓತ್‌ಗಳಿಗೆ ಹ್ರಸ್ವ ದೀರ್ಘಗಳನ್ನು ಹೇಳುವಲ್ಲಿ ಅವನ ಗಮನಕ್ಕೆ ಎ ಒ ಕಾರಗಳು ಬಂದಿವೆಯೆಂಬುದು ಸ್ಫುಟವಾಗುವುದಾದರೂ ವರ್ಣಮಾಲೆಯಲ್ಲಿ ಆ ವರ್ಣಗಳನ್ನು ಹೇಳದೆ ಹೋಗುವುದು ನ್ಯಾಯವಲ್ಲ. ಕನ್ನಡಕ್ಕೆ ಏನೇನೂ ಅಗತ್ಯವಿಲ್ಲದ ನಾಮಿಂಯ ಪ್ರಸ್ತಾಪವನ್ನು ಮಾಡಿರುವುದರಿಂದ ಅತ್ಯಗತ್ಯವಾದ ಎ ಒ ಕಾರಗಳನ್ನು ಸಂಕ್ಷಿಪ್ತತೆಯ ದೃಷ್ಟಿಯಿಂದ ಬಿಟ್ಟಿದ್ದಾನೆಂದು ಹೇಳಲು ದಾರಿಯಿಲ್ಲ. ಸ್ಮೃತಿ ಭೂಷಣಗಳು ಏಕ ಕರ್ತೃಕವೆಂದು ಹೇಳುವ ವಿದ್ವಾಂಸರು ಕೂಡಾ ಎ ಒ ಕಾರಗಳನ್ನು ವರ್ಣಮಾಲೆಯಲ್ಲಿ ಪ್ರಸ್ತಾಪಿಸದೆ ಹೋಗುವುದು ಒಂದು ಸಣ್ಣ ಲೋಪವೆಂದು ಒಪ್ಪಿಕೊಳ್ಳುತ್ತಾರೆ. (ಪ್ರಾ.ಕ.ವ್ಯಾ. ಪು.61).

ಭೂಷಣಕರ್ತ ಸ್ಪಷ್ಟವಾಗಿ ಎ ಒ ಕಾರಗಳನ್ನು ಹೇಳುವುದಲ್ಲದೆ ಕನ್ನಡದಲ್ಲಿಲ್ಲದ ವರ್ಣಗಳನ್ನು ಕಳೆದುಹಾಕಿದ್ದಾನೆ. ಇದು ಅವನಿಟ್ಟಿರುವ ಹೊಸ ಹಾಗೂ ದಿಟ್ಟ ಹೆಜ್ಜೆ.

ಒಂದು ವೇಳೆ ಎಂ. ವಿ. ಸೀತಾರಾಮಯ್ಯನವರು ಹೊಸತಾಗಿ ಊಹಿಸಿರುವಂತೆ ಭೂಷಣವನ್ನು ಬರೆದ ಬಳಿಕ ಸ್ಮೃತಿಯನ್ನು ಬರೆದುದು ಹೌದಾದರೆ ಗ್ರಂಥಕರ್ತ ಒಮ್ಮೆ ಮುಂದಿಟ್ಟ ಹೆಜ್ಜೆಯನ್ನು ಖಂಡಿತವಾಗಿ ಹಿಂದಿಡುತ್ತಿರಲಿಲ್ಲ. ಸಂಸ್ಕೃತ ವರ್ಣಮಾಲೆ ಯಿಂದ ಅನಗತ್ಯ ವರ್ಣಗಳನ್ನು ಕಳೆದು ಹಾಕುವ ರೀತಿಗೆ ಪಂಡಿತರ ಬೆಂಬಲವಿದ್ದುದ ರಿಂದಲೇ ಮುಂದೆ ದರ್ಪಣದಲ್ಲೂ ಈ ಕ್ರಮ ಮುಂದುವರಿದಿದೆ. ಹಾಗಾಗಿ ಇಲ್ಲಿ ನಾವು ಗ್ರಂಥಕರ್ತರಿಬ್ಬರ ಭಿನ್ನದೃಷ್ಟಿಯೆಂದೇ ವರ್ಣಮಾಲೆಯ ನಿರೂಪಣೆಯ ಮಟ್ಟಿಗೆ ಹೇಳ ಬೇಕಾಗುತ್ತದೆ,

(ಆ) ಲೋಪ ಸಂಧಿಯ ಕುರಿತು ಸ್ಮೃತಿ ಭೂಷಣಗಳಲ್ಲಿ ಭಿನ್ನ ದೃಷ್ಟಿ ಗೋಚರಿ ಸುತ್ತದೆ. ಪದಾಂತ (ಕೃತವಿಭಕ್ತಿ) ಸ್ವರದ ಮುಂದೆ ಸ್ವರ ಬಂದಾಗ ಲೋಪನಿತ್ಯವೆಂದೂ ಪ್ರಕೃತಿಯ ಕೊನೆಯ ಉ ಎ ಕಾರಗಳಿಗೆ ಸ್ವರಪರವಾದಾಗ ಅವಿನಷ್ಟನಾಮಭಾಗಸ್ಥಿತಿ ಯಲ್ಲಿ ಮಾತ್ರವೇ ಲೋಪವೆಂದೂ ಸ್ಮೃತಿ ಹೇಳುತ್ತದೆ (ಸೂ. 8). ಉಳಿದ ಪ್ರಕೃತಿ ಸ್ವರಗಳಿಗೆ ಸ್ವರ ಪರವಾದಾಗ ಸಂಧಿಕಾರ್ಯ ಹೇಗೆ ಎಂಬುದರ ಬಗ್ಗೆ ಸ್ಮೃತಿ ಮೌನ ತಾಳಿದೆ. ಭೂಷಣದಲ್ಲಿ 'ಪದಾಂತ ಸ್ವರ'ವೆಂದು ಪ್ರತ್ಯೇಕಿಸಿ ಹೇಳದೆ ಕೇವಲ ಸ್ವರದ ಮುಂದೆ ಸ್ವರ ಬರಲು ಪೂರ್ವಸ್ವರ ಲೋಪಗೊಳ್ಳುವುದಾಗಿ ಹೇಳಲಾಗಿದೆ (ಸೂ. 19). ಪ್ರಕೃತಿಯ ಕೊನೆಯ ಉ ಎ ಕಾರಗಳ ಮುಂದೆ ಸ್ವರವಿರಲು ನಾಮಭಾಗಪ್ರಧ್ವಂಸವಿಲ್ಲ ವಾದರೆ ಲೋಪಹೊಂದುವುದೆಂದೂ ಭೂಷಣ ಹೇಳುತ್ತದೆ (ಸೂ. 20, 21). ವೃತ್ತಿ ಯಿಂದ ಪ್ರಕೃತಿಯ ಕೊನೆಯ ಆಕಾರ ಇಕಾರಗಳು ಲೋಪಹೊಂದುವುದಿಲ್ಲವೆಂಬುದೂ ಸ್ಪಷ್ಟವಾಗುತ್ತದೆ. ಹೀಗೆ ಮೇಲುನೋಟಕ್ಕೆ ಸಮಾನವಾಗಿ ತೋರಿದರೂ ಒಳಹೊಕ್ಕಾಗ ಲೋಪಸಂಧಿಯ ನಿರೂಪಣೆಯಲ್ಲಿರುವ ಅಂತರ ಕಣ್ಣೊತ್ತಾಗುತ್ತದೆ.

(ಇ) ಲಿಂಗದ(stem) ಕಲ್ಪನೆಯಲ್ಲಿ ಸ್ಮೃತಿ ಭೂಷಣಗಳು ಸ್ಪಷ್ಟವಾದ ಅಂತರ ವನ್ನು ತಾಳಿವೆ. 'ಧಾತುವಿವರ್ಜಿತಮರ್ಥೋಪೇತಂ ಲಿಂಗಂ' ಎಂಬ ಸ್ಮೃತಿಯ (ಸೂ.15) ಹೇಳಿಕೆ ಕಾತಂತ್ರ ದ 'ಧಾತುವಿಭಕ್ತಿವರ್ಜಮರ್ಥವಲ್ಲಿಂಗಂ (2-1-1) ಎಂಬ ಸೂತ್ರಕ್ಕೆ ಋಣಿಯಾಗಿದೆ. ಆದರೆ ಭೂಷಣದಲ್ಲಿ ಲಿಂಗದ ವಿವರಣೆ "ಅರ್ಥವದಕ್ರಿಯಾಮಾಚಿಕೃ ದಂತಂಚ ಲಿಂಗಂ" (ಸೂ. 37) ಎಂದು ಇದಕ್ಕಿಂತ ಪೂರ್ಣವಾಗಿ ಭಿನ್ನವಾಗಿದೆ.

(ಈ) ಸ್ಮೃತಿಯ ಪ್ರಕಾರ ಪ್ರಕೃತಿಗೆ ಪ್ರತ್ಯಯ ಸೇರಿದರೆ ಪದ (ಸೂ. 7). ಆದರೆ ಭೂಷಣದ ಪ್ರಕಾರ ವಿಭಕ್ತ್ಯಂತವಾದದ್ದು ಪದ (ಸೂ. 16). ಅರ್ಥ ಎರಡ ರದ್ದೂ ಒಂದೇ ಆದರೂ ಈ ಹೇಳಿಕೆಗಳು ಸಂಸ್ಕೃತದ ಭಿನ್ನ ವ್ಯಾಕರಣ ಸಂಪ್ರದಾಯ ಗಳಿಗೆ ಸಂಬಂಧಿಸಿದವೆಂಬುದು ಗಮನಾರ್ಹ.

(ಉ) ಸ್ಮೃತಿ ಹೇಳುವಂತೆ ಪುಲ್ಲಿಂಗದಲ್ಲಿ ಅವನ್, ಆತನ್ : ಸ್ತ್ರೀಲಿಂಗದಲ್ಲಿ ಅವಳ್, ಆಕೆ, ನಪುಂಸಕ ಲಿಂಗದಲ್ಲಿ ಅದು–ಈ ತೆರನಾದ ಪ್ರಯೋಗವಿದೆ (ಸೂ. 37). ಆದರೆ ಭೂಷಣ ಹೀಗೆ ಹೇಳದೆ ಅದು ಇದು ಉದುಗಳ ಕೊನೆಯಲ್ಲಿ 'ವ'. 'ತ' ಕಾರಗಳು ಬರುವುದರಿಂದ ಪುಲ್ಲಿಂಗ ರೂಪಗಳೂ (ಅವು. ಆತು ಇತ್ಯಾದಿ) ವಳ್, ಕೆ ಕರಾಗಳು ಬರುವುದರಿಂದ ಸ್ತ್ರೀಲಿಂಗ ರೂಪಗಳೂ (ಅವಳ್, ಆಕೆ ಇತ್ಯಾದಿ) ಸಿದ್ಧಿಸುತ್ತವೆ (ಸೂ. 95, 96. 97) ಎಂದು ಹೇಳಿದೆ.

(ಊ) ಸ್ಮೃತಿಯ ಪ್ರಕಾರ 'ಶ್ರೇಯಾಂಸ', 'ವಿದ್ವಾಂಸ' ಮೊದಲಾದ ಶಬ್ದಗಳ ಕೊನೆಯಲ್ಲಿರುವ ಪ್ರತ್ಯಯ 'ಅನ್ಸ್' (ಸೂ. 42). ಭೂಷಣದ ಪ್ರಕಾರ 'ವಿದ್ವಾಂಸ' ಶಬ್ದದ ಕೊನೆಯಲ್ಲಿರುವುದು 'ವನ್ಸ್' ಪ್ರತ್ಯಯ. 'ಕನಿಯಾಂಸದ'ದ ಕೊನೆಯಲ್ಲಿರುವುದು 'ಯನ್ಸ್' ಪ್ರತ್ಯಯ (ಸೂ. 108, 109).

ಮೇಲಿನ ಅಂತರಗಳಲ್ಲಿ ಸಂಕ್ಷಿಪ್ತವಾದ್ದನ್ನು ವಿಸ್ತರಿಸುವುದರಿಂದಾಗಲೀ, ವಿಸ್ತಾರವನ್ನು ಸಂಕ್ಷೇಪಿಸಿದುದರಿಂದಾಗಲೀ ಹುಟ್ಟಿಕೊಂಡವುಗಳಲ್ಲವೆಂಬುದು ಸಕೃದ್ದರ್ಶನಕ್ಕೆ ಗೋಚರಿಸದಿಲಾರದು.

3. ಪರಸ್ಪರ ವಿರುದ್ಧವಾದ ಕೆಲವು ಹೇಳಿಕೆಗಳು (ಅಧ್ಯಯನ : ಪು 547-549).

(ಅ) ಸ್ಮೃತಿಯ ಪ್ರಕಾರ ಅಕರಾಂತ ಶಬ್ದದ ಮುಂದೆ ಗಳ್ ಬಂದಾಗ ಮಾಗಮವಾಗುತ್ತದೆ (ಸೂ. 20), ಭೂಷಣದ ಪ್ರಕಾರ ನಾಗಮವಾಗುತ್ತದೆ (ಸೂ. 49).

(ಆ) ಸ್ಮೃತಿ ಹೇಳುವಂತೆ ಭಾವಾರ್ಥದಲ್ಲಿ ಏಕವಚನವೇ ಇರಬೇಕು (ಸೂ. 35). ಆದರೆ ಭೂಷಣ ಯಾವುದೇ ವಚನವನ್ನು ಸಂದರ್ಭಾನುಸಾರ ಉಪಯೋಗಿಸಬಹುದೆಂದು ಹೇಳುತ್ತದೆ (ಸೂ. 91, 206).

4. ಭಾಷೆಯಲ್ಲಿ ಕಾಲಕಾಲಕ್ಕೆ ತಲೆದೋರುವ ಬದಲಾವಣೆಯನ್ನು ಆದರ ಮೊಳಕೆಯ ಹಂತದಲ್ಲಿ ಅವಗಣಿಸಿದರೂ ಬಲವಾಗಿ ಬೇರೂರಿದ ಬಳಿಕ ಅದನ್ನು ವೈಯಾಕರಣರು ಅವಗಣಿಸುವಂತಿಲ್ಲ. ಕನ್ನಡದಲ್ಲಾದ ಪ>ಹ ಪರಿವರ್ತನೆ ಇದಕ್ಕೆ ನಿದರ್ಶನ. ಅಚ್ಚಗನ್ನಡ ಪಕಾರವು ಕೆಲವು ನಿರ್ದಿಷ್ಟ ಪರಿಸರಗಳನ್ನುಳಿದು ಎಂಕ್ಕೆಡೆಗಳಲ್ಲಿ ಹಕಾರವಾಗಿ ಬದಲಾವಣೆಗೊಂಡುದು ಹಳಗನ್ನಡ ಗ್ರಾಂಥಿಕ ಭಾಷೆಯ ಮಟ್ಟಿಗೆ ಕ್ರಿ. ಶ. 12ನೆಯ ಶತಕದಿಂದೀಚೆಗೆ. ದುರ್ಗಸಿಂಹನ (ಕ್ರಿ. ಶ. 1031) ಪಂಚತಂತ್ರದಲ್ಲಾಗಲೀ, ಎರಡನೆಯ ನಾಗವರ್ಮನ (ಕ್ರಿ. ಶ. 1042) ವರ್ಧಮಾನ ಪುರಾಣದಲ್ಲಾಗಲೀ ಅಚ್ಚಗನ್ನಡದ ಪಕಾರ ಹಕಾರವಾಗಿಲ್ಲ. ಆದ್ದರಿಂದಲೇ ಸ್ಮೃತಿಯಲ್ಲಿ ಪ>ಹ ಪ್ರಸ್ತಾಪವಿಲ್ಲ. ಆದರೆ ಭೂಷಣದಲ್ಲಿ ಮೇಹೋವಾ (ಸೂ. 115) ಎಂಬ ಸೂತ್ರದ ಮೂಲಕ-ಪಕಾರಕ್ಕೆ ವೈಕಲ್ಪಿಕ ಹ ಕಾರವನ್ನು ಎತ್ತಿಹಿಡಿಯಲಾಗಿದೆ. ಇದು ಭಿನ್ನ ಕರ್ತೃಕಕ್ಕೆ ಒಂದು ಬಲವಾದ ಆಧಾರ. ಕಾವ್ಯಾವಲೋಕನದಲ್ಲಿ ಯಮಕದಲ್ಲಿ ಪಕಾರ ಹಕಾರಗಳನ್ನು ಏಕರೂಪವಾಗಿ ಪ್ರಯೋಗಿಸಬಹುದೆಂದು ಕೊಡುವ ಲಕ್ಷ್ಯಪದ್ಯದಲ್ಲಿ (553) 'ದನಂಗಾಹಿತನಂ' ಎಂಬ ಪ್ರಯೋಗವಿದೆ. 'ಕಾಪಿ ಕಾಹಿ'ಯಾಗಿ ಪರಿವರ್ತಿತವಾಗಿರುವ ಈ ಉದಾಹರಣೆ

ಯನ್ನು ಬದಲಾವಣೆಯ ಸೂಚನೆಯೆಂದು ಗ್ರಹಿಸಬೇಕಲ್ಲದೆ 'ಪ>ಹ' ಎಂಬ ವ್ಯಾಕರಣ ಪ್ರಕ್ರಿಯೆಯೆಂದು ಹೇಳಲು ಸಾಧ್ಯವಿಲ್ಲ. ಸೂತ್ರದಲ್ಲಿ (551) ಪ>ಹ ಕಾರವಾಗುವು ದಾಗಿ ಹೇಳಿದ್ದೂ ಇಲ್ಲ. ಭಾಷಾ ಪ್ರಯೋಗ ಬೇರೆ : ವ್ಯಾಕರಣ ಪ್ರಕ್ರಿಯೆಯಾಗಿ ಅದನ್ನು ಪ್ರತಿಪಾದಿಸುವುದು ಬೇರೆ.

ವೈಯಾಕರಣರು ತಮ್ಮ ಭಾಷೆಯಲ್ಲಿ ಬಳಸಿದರೂ ಕೆಲವು ಪ್ರಯೋಗಗಳನ್ನು ವ್ಯಾಕರಣ ಪ್ರಕ್ರಿಯೆಯಾಗಿ ಗಮನಿಸದೆ ಹೋಗುವುದುಂಟು. ಕನ್ನಡದ ಕರ್ಮಣಿ ಪ್ರಯೋಗ ಇಂಥದ್ದಕ್ಕೆ ಒಂದು ನಿದರ್ಶನ. ಸ್ಮೃತಿ ದರ್ಪಣಗಳ ಮೊದಲ ಪದ್ಯಗಳಲ್ಲೇ ಕರ್ಮಣಿ ಪ್ರಯೋಗವಿದೆ. ಆದರೆ ಆಯೆರಡು ಗ್ರಂಥಗಳೂ ಕರ್ಮಣಿ ಪ್ರಯೋಗದ ಬಗ್ಗೆ ಪ್ರಸ್ತಾವಿಸುವುದಿಲ್ಲ. ಅದನ್ನು ಪ್ರತ್ಯೇಕ ವ್ಯಾಕರಣ ಪ್ರಕ್ರಿಯೆಯಾಗಿ ಗ್ರಂಥ ಕರ್ತರು ಗಮನಿಸಿಲ್ಲವೆಂದೇ ಹೇಳಬೇಕಾಗುತ್ತದೆ. ಹಾಗೆಯೆ ಸ್ಮೃತಿಕಾರನು ಪ>ಹ ಪರಿ ವರ್ತನೆಯನ್ನು ಗಮನಿಸಿದ್ದರೂ ಆ ಕಾಲದಲ್ಲಿ ಅದೊಂದು ವ್ಯಾಕರಣ ಪ್ರಕ್ರಿಯೆಯೆಂದು ಹೇಳುವಷ್ಟರ ಮಟ್ಟಿಗೆ ಅದು ಗ್ರಾಂಥಿಕ ಭಾಷೆಯಲ್ಲಿ ತಲೆದೋರಿರಲಿಲ್ಲವೆಂದೇ ತಿಳಿಯ ಬೇಕಾಗುತ್ತದೆ. ಭೂಷಣಕಾರನ ಕಾಲಕ್ಕೆ ಈ ಪರಿವರ್ತನೆ ಸರ್ವ ಸಾಧಾರಣವಾದುದ ರಿಂದ, ಅದನ್ನು ಎತ್ತಿ ಹೇಳದೆ ಹೋಗಲು ವೈಯಾಕರಣನಿಗೆ ಸಾಧ್ಯವಲ್ಲದ್ದರಿಂದ, ಭೂಷಣದಲ್ಲಿ ಮೇಲೆ ಹೇಳಿದ ಸೂತ್ರ ಬಂದಿರಬೇಕೆಂದೂ, ಭೂಷಣದ ಕರ್ತೃ ಸ್ಮೃತಿ ಕಾರನಿಗಿಂತ ಭಿನ್ನನಾಗಿದ್ದು ಈಚೆಗಿನವನೆಂದೂ ನಿರ್ಣಯಿಸಬೇಕಾಗುತ್ತದೆ.

5. ವ್ಯಾಕರಣ ವಿಚಾರಗಳನ್ನು ಸ್ಮೃತಿಯಂದೇ ಅನುಕ್ರಮದಲ್ಲಿ ಭೂಷಣದಲ್ಲೂ ಪ್ರತಿಪಾದಿ ಸಲಾಗಿದೆಯೆನ್ನುವುದರಲ್ಲಿ ಹುರುಳಿಲ್ಲ. ಆರ್. ನರಸಿಂಹಾಚಾರ್ಯರು ಸಂಪಾದಿಸಿದ ಕಾವ್ಯಾವಲೋಕನದ 'ಪರಿಶಿಷ್ಟ 3' ಅಥವಾ ಭೂಷಣದ 'ಪರಿಶಿಷ್ಟ 2'ರ ಮೇಲುನೋಟ ದಿಂದಲೇ ಇದು ಸ್ಪಷ್ಟವಾಗುತ್ತದೆ. ನಿದರ್ಶನಕ್ಕಾಗಿ ಒಂದೆರಡನ್ನು ಪರಿಶೀಲಿಸಬಹುದು, ಸ್ಮೃತಿಯ ಸಮಾಸಪ್ರಕರಣದಲ್ಲಿ ಬರುವ ವಿಚಾರ (ಸೂ. 64) ಭೂಷಣದ ತದ್ಧಿತ ಪ್ರಕರಣದಲ್ಲಿ (ಸೂ. 192) ಬಂದಿದೆ. ಸ್ಮೃತಿಯ ಅದೇ ಪ್ರಕರಣದ ಬೇರೆ ಕೆಲವನ್ನೂ (ಸೂ. 65, 66) ಭೂಷಣದ ಯುಷ್ಮದಾದಿ ಪ್ರಕರಣದಲ್ಲಿ (ಸೂ. 119, 121, 114 123) ನಿರೂಪಿಸಲಾಗಿದೆ. ಸ್ಮೃತಿಯಲ್ಲಿ ಬಂದಿರುವಂತೆ ನ್ಯಾಯವಾಗಿ ಇವೆಲ್ಲ (ಸೂ. 123ರ ಹೊರತು) ಸಮಾಸ ಪ್ರಕರಣದಲ್ಲಿ ಬರಬೇಕಾದವುಗಳು.

ಪ್ರಯೋಗಗಳ ದೃಷ್ಟಿಯಿಂದಲೂ ಸ್ಮೃತಿ ಭೂಷಣಗಳನ್ನು ಹೋಲಿಸಬೇಕು. ಮೇಲುನೋಟಕ್ಕೆ ಸ್ಮೃತಿಯ ಲಕ್ಷ್ಯಪದ್ಯಗಳಿಂದಲೇ ಭೂಷಣವು ಉದಾಹರಣೆಗಳನ್ನು ಎತ್ತಿಕೊಂಡಂತೆ ಭಾಸವಾಗುವುದು ನಿಜ. ಆದರೆ ಭೂಷಣದ ಪ್ರಯೋಗರಾಶಿಯಲ್ಲಿ ಸ್ಮೃತಿಯ ಯಥಾವತ್ತಾದ ಪ್ರಯೋಗಗಳು ಕಡಮೆಯೆಂದೇ ಹೇಳಬೇಕು. ಸಮಾನ ಪ್ರಯೋಗಗಳು ಹೆಚ್ಚಾಗಿ ಬಿಡಿಪದಗಳಿಗಷ್ಟೆ ಸೀಮಿತವಾಗಿವೆ. ಎಂದರೆ ಸ್ಮೃತಿಯನ್ನು ಆಕರವಾಗಿಟ್ಟುಕೊಂಡು ಇನ್ನೊಬ್ಬ ವೈಯಾಕರಣನು ಗ್ರಂಥರಚನೆ ಮಾಡುವಾಗ ಯಾವ ರೀತಿಯ ಕೊಳ್ಳುವಿಕೆ ನಡೆಯಬಹುದೋ ಅದನ್ನೇ ನಾವು ಭೂಷಣದಲ್ಲಿ ಕಾಣಬಹು

ದಾಗಿದೆ. ಸ್ಮೃತಿಯ ಕೆಲವು ಪ್ರಯೋಗ ವಾಕ್ಯಗಳನ್ನು ಬೇಕಾದಂತೆ ಭೂಷಣದಲ್ಲಿ ಪರಿವರ್ತಿಸಿಕೊಂಡದ್ದುಂಟು :

| ಸ್ಮೃತಿ | ಭೂಷಣ |
|---|---|
| ನಾಲಗುಂಳ್ಳರ ಬಾಯ್ಗಳ್ (ಪದ್ಯ 35) | ನಾಲಗುಳ್ಳನೆ ಬಾಯ್ಗಂ (ಸೂ. 20ರ ಪ್ರಯೋಗ |
| ವಿಧುವಿಲ್ಲದಿರುಳ್ ಕೆಲದೊಳ್ ವಧು ವಿಲ್ಲದ ಲೀಲೆ........ (ಪ. 41) | ವಿಧುವಿಲ್ಲದಿರುಳ್ ಪೂವಿಲ್ಲದ ಕೊಳನಂತೆಸೆಯುದು (ಸೂ. 24ರ ಪ್ರಯೋಗ) |
| ವುಂಳ್ಳೆಲ್ಲಂ ಕೇದಗೆ (ಪ. 81) | ವುಳ್ಳುಳ್ಳುವೆ ಕೇದಗೆಗಳ್ (ಸೂ. 34ರ ಪ್ರಯೋಗ) |
| ಗಿರಿವೋಲ್ ನಿಷ್ಕಂಪ ಚಿತ್ತಂ (ಪ.339) | ಗಿರಿವೋಲ್ ಸಂಸ್ಥಿರಂ (ಸೂ. 177ರ ಪ್ರಯೋಗ) |
| ನಿಗಳಂಬೋಲ್ ತೊಡರ್ದಿರ್ದ........ (ಪ. 342) | ನಿಗಳಂಬೋಲ್ ತೊಡರ್ದುದಂ (ಸೂ. 175ರ ಪ್ರಯೋಗ) |

ಸ್ಮೃತಿಯ ಉದಾಹರಣೆಗಳು ಪದ್ಯರೂಪದಲ್ಲಿರುವುದರಿಂದ ಅವನ್ನು ಮೂಲವೆಂದಿಟ್ಟುಕೊಂಡು ಭೂಷಣದ್ದನ್ನು ಪರಿವರ್ತಿತರೂಪವೆನ್ನಬಹುದು.

ಸ್ಮೃತಿಯಲ್ಲಿ ಒಂದು ವ್ಯಾಕರಣ ಪ್ರಕ್ರಿಯೆಗೆ ಕೊಟ್ಟ ಉದಾಹರಣೆ ಭೂಷಣದಲ್ಲಿ ಇನ್ನೊಂದೆಡೆ ಪ್ರಯುಕ್ತವಾದದ್ದಿದೆ. ಸ್ಮೃತಿಯಲ್ಲಿ 'ಕು ಕೂ ಕೂ ಎಂದು ಕೋಟಿ ಕೂಗಿದುವಾಗಳ್' (ಪದ್ಯ 11) ಎಂಬ ಪ್ರಯೋಗ ಒಂದೆರಡು ಮೂರು ಮಾತ್ರೆಗಳ ಹ್ರಸ್ವ ದೀರ್ಘಪ್ಲುತಕ್ಕೆ ಉದಾಹರಣೆ. ಇದೇ ಪ್ರಯೋಗ ಭೂಷಣದಲ್ಲಿ ಪ್ಲುತದ ಮುಂದೆ ಸ್ವರ ಬಂದಾಗ ಸಂಧಿಯಾಗದಿರುವುದಕ್ಕೆ ಲಕ್ಷ್ಯವಾಗಿದೆ (ಸೂತ್ರ 27ರ ಪ್ರಯೋಗ).

ಸ್ಮೃತಿಯ ಪ್ರಯೋಗಗಳಲ್ಲಿ ಎಷ್ಟಕ್ಕೆ ಭೂಷಣ ಋಣಿಯೆಂಬುದನ್ನು ಇನ್ನೂ ಒಂದು ರೀತಿಯಲ್ಲಿ ತುಲನಾತ್ಮಕವಾಗಿ ವಿಚಾರಿಸಬಹುದು. ಸ್ಮೃತಿ ಭೂಷಣಗಳಲ್ಲಿ ಸಮಾನವಾಗಿರುವ ಸಂಧಿಪ್ರಕರಣ ತುಲನೆಗೆ ಸಮರ್ಪಕ. ಭೂಷಣದ ಸಂಧಿವಿಧಾನದಲ್ಲಿ ವಾಕ್ಯಗಳಾಗಿ, ಬಿಡಿ ಬಿಡಿ ಪದಗಳಾಗಿ ಒಟ್ಟು ಸು. 112 ಪ್ರಯೋಗಗಳಿವೆ. ಅವುಗಳಲ್ಲಿ ಸುಮಾರು 19 ಪ್ರಯೋಗಗಳನ್ನು ಮಾತ್ರ ಸ್ಮೃತಿಯಿಂದ ಎತ್ತಿಕೊಳ್ಳಲಾಗಿದೆ. ಹಾಗಾಗಿ ಭೂಷಣವು ಪ್ರಯೋಗಗಳ ಮಟ್ಟಿಗೆ ಪೂರ್ಣವಾಗಿ ಸ್ಮೃತಿಗೆ ಋಣಿಯಾಗಿ ತೋರುವುದು ಆಭಾಸ ಮಾತ್ರ.

ಭೂಷಣದ ಪ್ರಯೋಗಗಳಲ್ಲಿ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದು ಮತ್ಸ್ಯಾವತಾರಕ್ಕೆ" (ಸೂ. 88ರ ಪ್ರಯೋಗ) ಎಂಬುದು ನಾಗಚಂದ್ರನ ಪಂಪರಾಮಾ

ಯಣದ ಪದ್ಯವೊಂದರ ಭಾಗ (7–98). ನಾಗಚಂದ್ರ ಸ್ಮೃತಿಕಾರನಿಗಿಂತ ಅರ್ವಾಚೀನನೆಂಬುದು ನಿರ್ವಿವಾದ. ಇಲ್ಲವಾದರೆ ಅವನ ಒಂದೇ ಒಂದು ಪದ್ಯವಾದರೂ ಕಾವ್ಯಾವಲೋಕನದಲ್ಲಿ ಸ್ಥಾನ ಗಳಿಸುತ್ತಿತ್ತು. ಮೇಲಿನ ಪ್ರಯೋಗದ ಪರಿಣಾಮವಾಗಿ, ಅದು ಬೇರಾವುದೋ ಪೂರ್ವಗ್ರಂಥದಿಂದ ಎತ್ತಿಕೊಂಡುದು ಎಂಬುದು ತೀರ್ಮಾನವಾಗುವವರೆಗೆ ಭೂಷಣದ ಕರ್ತೃ ನಾಗಚಂದ್ರನಿಗಿಂತ ಈಚಿನವನೆಂಬುದು ಖಚಿತ. ಈ ದೃಷ್ಟಿಯಿಂದಲೂ ಸ್ಮೃತಿ ಭೂಷಣಗಳ ಭಿನ್ನ ಕರ್ತೃತ್ವ ಸಾಧಿತವಾಗುತ್ತದೆ.

ಸ್ಮೃತಿಗಿಂತ ಅರ್ವಾಚೀನವಾಗಿರುವ ಕೆಲವು ಸಂಸ್ಕೃತ ವ್ಯಾಕರಣದ ಪ್ರಭಾವವೂ ಭೂಷಣದ ಮೇಲೆ ಬಿದ್ದಿರುವುದು ನಿಶ್ಚಯ. ಇವುಗಳಲ್ಲಿ ಪ್ರಧಾನವಾಗಿರುವುದು ಧರ್ಮಕೀರ್ತಿಯ ರೂಪಾವತಾರ ಮತ್ತು ಹೇಮಚಂದ್ರನ ಸಿದ್ಧಹೇಮಶಬ್ದಾನುಶಾಸನ.

ಅಷ್ಟಾಧ್ಯಾಯಿಯ ಪ್ರಕ್ರಿಯಾತ್ಮಕ ರೂಪಗಳಲ್ಲಿ ಮೊದಲನೆಯದಾದ ರೂಪಾವತಾರದ ಕಾಲ ಸು. ಕ್ರಿ. ಶ. 1090 ಎಂಬುದು ನಿಶ್ಚಿತ. ಅದರ ಪೂರ್ವಾರ್ಧದ ಪ್ರಭಾವ ಭೂಷಣದ ಪ್ರಕರಣವಿಭಜನೆಯ ಮೇಲೆ ಬಿದ್ದಿರುವುದು ಸ್ಪಷ್ಟ (ಅದನ್ನು ಪ್ರಕರಣ ವಿಭಜನೆಯ ಅಧ್ಯಾಯದಲ್ಲಿ ತುಲನಾತ್ಮಕವಾಗಿ ಸಮೀಕ್ಷಿಸಲಾಗುವುದು). ಸ್ಮೃತಿಯ ಮೇಲೆ ಕಾಲದ ದೃಷ್ಟಿಯಿಂದ ರೂಪಾವತಾರದ ಪ್ರಭಾವಕ್ಕೆಡೆಯಿಲ್ಲ.

ಸಂಸ್ಕೃತ ವರ್ಣಮಾಲೆಯಿಂದ ಪ್ರಾಕೃತಕ್ಕೆ ಅನಗತ್ಯವೆನಿಸಿದ ವರ್ಣಗಳನ್ನು ಕಳೆದು ಹಾಕಿ, ಪ್ರಾಕೃತ ವರ್ಣಮಾಲೆಯನ್ನು ಮೊತ್ತಮೊದಲಿಗೆ ಕೊಟ್ಟವನು ಹೇಮಚಂದ್ರ. ಭೂಷಣಕಾರನು ಋ ಌ ವರ್ಣ ಶ ಷ ಕಾರಗಳನ್ನು ಕಳೆದುಹಾಕಿ ಕನ್ನಡ ವರ್ಣಮಾಲೆಯನ್ನು ಹೇಳುವಲ್ಲಿ ಹೇಮಚಂದ್ರನಿಗೆ ಋಣಿಯಾಗಿರುವನು. ಹೇಮಚಂದ್ರನ ಕಾಲ ಕ್ರಿ. ಶ. 1089–1173. ಈ ದೃಷ್ಟಿಯಿಂದಲೂ ಭೂಷಣವು ಸ್ಮೃತಿಗಿಂತ ಭಿನ್ನವೂ ಅರ್ವಾಚೀನವೂ ಆಗುತ್ತದೆ.

ಮೇಲಿನಂತೆ ಹಲವಾರು ನಿಟ್ಟುಗಳಿಂದ ವಿಚಾರಿಸಿದಾಗ ಭೂಷಣಕರ್ತನಾದ ನಾಗವರ್ಮ ಸ್ಮೃತಿಕಾರನಿಗಿಂತ ಬೇರೆಯವನಾಗಿ ತೋರುವುದಲ್ಲದೆ ಈತನು ಅವನಿಗಿಂತ ಈಚೆಯವನೆಂಬುದೂ ಖಚಿತವಾಗುತ್ತದೆ. ಈ ನಾಗವರ್ಮನಾರು ಎಂಬುದನ್ನು ಮುಂದೆ ಕಂಡುಕೊಳ್ಳಬೇಕಾಗಿದೆ.

## ನಾಗವರ್ಮ ಸಮಸ್ಯೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಿಡಿಸಲಾರದ ಕಗ್ಗಂಟಾಗಿ ಉಳಿದಿರುವ ಸಮಸ್ಯೆಗಳಲ್ಲಿ ಇದೂ ಒಂದು. ಆಯಾ ಗ್ರಂಥಸ್ಥ ಆಧಾರಗಳಿಂದ ಕೆಳಗಣ ಪ್ರತಿಯೊಂದು ಗ್ರಂಥದ ಕರ್ತೃ ನಾಗವರ್ಮನೆಂಬುದು ಸ್ಪಷ್ಟ.

1. **ಕರ್ನಾಟಕ ಕಾದಂಬರಿ**
2. **ಛಂದೋಂಬುಧಿ**

3. ಕಾವ್ಯಾವಲೋಕನ
4. ಕರ್ನಾಟಕ ಭಾಷಾಭೂಷಣ
5. ಅಭಿದಾನ ವಸ್ತುಕೋಶ

ನಾಲ್ಕನೆಯುದನ್ನು ಮೊದಲ ಬಾರಿಗೆ ಸಂಪಾದಿಸಿ ಪ್ರಕಟಿಸಿದ ಬಿ. ಎಲ್. ರೈಸ್. ಈಯೆಲ್ಲ ಗ್ರಂಥಗಳ ಕರ್ತೃ ಏಕೈಕ ನಾಗವರ್ಮನೆಂದು ಭಾವಿಸಿದ್ದಾರೆ (ಭೂಷಣ (ರೈಸ್)ಪೀಠಿಕೆ). ರೆ. ಕಿಟೆಲ್ (ಛಂದೋಂಬುಧಿ (ಕಿಟ್ಟೆಲ್) ಪೀಠಿಕೆ) ಮತ್ತು ಬಿ. ಮಲ್ಲಪ್ಪ ಇವರಿಬ್ಬರೂ ಈ ಅಭಿಪ್ರಾಯಕ್ಕೆ ದನಿಗೂಡಿಸಿದ್ದಾರೆ. ಆದರೆ ಆರ್. ನರಸಿಂಹಾಚಾರ್ಯರು ನಾಗ ವರ್ಮರು ಎಷ್ಟು ಮಂದಿ ಎಂಬ ವಿಷಯುವನ್ನು ಚರ್ಚಿಸುತ್ತಾ ಮೊದಲೆರಡು ಗ್ರಂಥಗಳ ಕರ್ತೃವನ್ನು ಮೊದಲನೆಯ ನಾಗವರ್ಮನೆಂದು ನಿರ್ದೇಶಿಸಿ ಉಳಿದೆಲ್ಲ ಗ್ರಂಥಗಳನ್ನು ಎರಡನೆಯ ನಾಗವರ್ಮನು ಬರೆದನೆಂದು ನಿರ್ಣಯಿಸಿದ್ದಾರೆ(ಕಾವ್ಯಾವಲೋಕನ. ಪೀಠಿಕೆ. ಪು. 16). ಅವರ ಪ್ರಕಾರ ಮೊದಲನೆಯ ನಾಗವರ್ಮನು ಕ್ರಿ.ಶ.ಹತ್ತನೆಯ ಶತಮಾನದ ಕೊನೆಯವನಾದರೆ (ಕ್ರಿ. ಶ. 990) ಎರಡನೆಯವನು ಕ್ರಿ. ಶ. ಸು. 1145ರಲ್ಲಿ ಜೀವಿಸಿದವನು. ಕವಿಚರಿತೆಕಾರರ ಈ ತೀರ್ಮಾನ ಮೊದಲುಗೊಂಡು ಕನ್ನಡದಲ್ಲಿ ನಾಗ ವರ್ಮರು ಎಷ್ಟು ಮಂದಿ ? ಒಬ್ಬನೇ ಅಲ್ಲ ಅನೇಕರೇ ? ಅನೇಕರಾದರೆ ಅವರ ಕಾಲ, ಮತ ಯಾವುದು ? ಮೇಲಿನ ಕೃತಿಗಳಲ್ಲಿ ಯಾವುದನ್ನು ಯಾವ ನಾಗವರ್ಮನು ಬರೆದನು ? ಎಂಬುದರ ಬಗ್ಗೆ ವಿಪುಲವಾದ ಚರ್ಚೆ ನಡೆದಿದೆ. 'ಇದು ಹೀಗೆಯೇ' ಎಂದು ಖಚಿತವಾದ ನಿರ್ಣಯಕ್ಕೆ ಸಾಧಕಗಳಾದ ಆಧಾರ ಸಾಮಗ್ರಿಗಳು ಅಪೂರ್ಣವಾಗಿ ರುವುದರಿಂದ ಈ ಸಮಸ್ಯೆ ಇನ್ನೂ ಬಗೆಹರಿಯಲಾರದೆ ಉಳಿದುಕೊಂಡಿದೆ. ಈ ಸಂಬಂಧವಾಗಿ ನಡೆದ ಚರ್ಚೆಯಲ್ಲಿ ಪ್ರಧಾನವಾದ ಎರಡು ಘಟ್ಟಗಳಿವೆ. ನಾಗವರ್ಮ ಕೃತ ವರ್ಧಮಾನ ಪುರಾಣ ಉಪಲಬ್ಧವಾಗುವಲ್ಲಿಯವರೆಗಿನದು(1974) ಮೊದಲನೆಯ ಘಟ್ಟವಾದರೆ ಆ ಮೇಲಿನದು ಎರಡನೆಯದು. ಚರ್ಚೆಯನ್ನು ವಿಸ್ತಾರವಾಗಿ ಇಲ್ಲಿ ವಿವೇಚಿಸಲು ಸಾಧ್ಯವಿಲ್ಲ. ಆದರ ಸಾರವನ್ನಷ್ಟೇ ಸಮೀಕ್ಷಿಸಬಹುದು. ಚರ್ಚೆಯ ಮೊದಲನೆಯ ಘಟ್ಟದ ಸಾರ ಹೀಗಿದೆ :

ಎ. ವೆಂಕಟಸುಬ್ಬಯ್ಯನವರು ಕವಿಚರಿತೆಕಾರರ ಉಪರ್ಯುಕ್ತ ನಿಲುವನ್ನು ಅಲ್ಲ ಗಳೆದು ಮೇಲಿನ ಎಲ್ಲ ಗ್ರಂಥಗಳು ಒಬ್ಬನೇ ಒಬ್ಬ ನಾಗವರ್ಮನವೆಂಬ ಸಿದ್ಧಾಂತವನ್ನು ಸ್ಥಾಪಿಸಿ ಆತನ ಕಾಲವನ್ನು ಕ್ರಿ. ಶ. 11ನೆಯ ಶತಮಾನದ ಪೂರ್ವಾರ್ಧವೆಂದು ಸಾರಿ ದ್ದಾರೆ (ಕೆ. ಕ. ಕಾ. ವಿ : ಪು. 152–181). ಕವಿಚರಿತಕಾರರು ಈ ಅಭಿಪ್ರಾಯುವನ್ನು ಒಪ್ಪದೆ ಕವಿಚರಿತೆಯ ಮೂರನೆಯ ಸಂಪುಟದ ಅವತರಣಿಕೆಯಲ್ಲಿ ತಮ್ಮ ಹಿಂದಿನ ನಿಲುವನ್ನೇ ಎತ್ತಿಹಿಡಿದುದಲ್ಲದೆ ಅದೇ ಗ್ರಂಥದ 'ಗ್ರಂಥ ಶುದ್ಧಿ'ಯಲ್ಲಿ ಕಾದಂಬರಿಯನ್ನು ಬರೆದ ನಾಗವರ್ಮನು ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬ ನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ ಎಂದೂ

ಹೇಳಿದ್ದಾರೆ. ಕಾದಂಬರಿಯನ್ನು ಬರೆದ ನಾಗವರ್ಮ ಛಂದೋಂಬುಧಿಯ ನಾಗವರ್ಮನಿಗಿಂತ ಭಿನ್ನನೆಂಬುದು ಎಚ್. ಚೆನ್ನಕೇಶವಯ್ಯಂಗಾರರ ಅಭಿಪ್ರಾಯ. ಗೋವಿಂದ ಪೈ (ಕ. ಸಾ. ಪ. 20–12) ಟಿ. ಎಸ್. ವೆಂಕಣ್ಣಯ್ಯ (ಕರ್ನಾಟಕ ಕಾದಂಬರಿ ಸಂ. ಪೀಠಿಕೆ). ರಂ. ಶ್ರೀ ಮುಗಳಿ (ಕ. ಸಾ. ಚ. ಪು 81–82) ಮೊದಲಾದ ವಿದ್ವಾಂಸರು ಹೆಚ್ಚು ಕಡಿಮೆ ಕವಿಚರಿತೆಕಾರರನ್ನು ಅನುಮೋದಿಸಿ ಇಬ್ಬರು ನಾಗವರ್ಮರನ್ನೂ ಒಪ್ಪಿಕೊಂಡಿದ್ದಾರೆ. ಹಾಗೆ ನಾಗವರ್ಮರಿಬ್ಬರೆಂದೇ ಸಾಹಿತ್ಯ ಚರಿತ್ರೆಯಲ್ಲಿ ಪ್ರಚುರವಾಗಿದೆ.

1974ರಲ್ಲಿ ಎಲ್. ಬಸವರಾಜು ಅವರು ಹೊಸತೊಂದು ಅಭಿಪ್ರಾಯವನ್ನು ಮಂಡಿಸಿದ್ದಾರೆ. ಛಂದೋಂಬುಧಿಯ ಮೇಲೆ ಜಯಕೀರ್ತಿ (ಕ್ರಿ. ಶ. 1099), ಕೇದಾರ ಭಟ್ಟ (ಕ್ರಿ. ಶ. 11–12ನೆಯ ಶತಮಾನ) ಹಾಗೂ ಹೇಮಚಂದ್ರನ (ಕ್ರಿ. ಶ. 1089–1173) ಪ್ರಭಾವವನ್ನು ಗುರುತಿಸಿ ಅದು ಕ್ರಿ. ಶ. 1173ರ ಬಳಿಕ ಹುಟ್ಟಿದುದೆಂದು ತೀರ್ಮಾನಿಸಿದ್ದಾರೆ (ಕನ್ನಡ ಛಂದಸ್ಸಂಪುಟ ಪೀಠಿಕೆ ಪು. 51). ಅವರ ಪ್ರಕಾರ ಮೂವರು ನಾಗವರ್ಮರು :

1. ಕರ್ನಾಟಕ ಕಾದಂಬರಿಯನ್ನು ಬರೆದ ಬ್ರಾಹ್ಮಣ ನಾಗವರ್ಮ
2. ಕಾವ್ಯಾವಲೋಕನ ಮುಂತಾದುವನ್ನು ಬರೆದ ಜೈನ ನಾಗವರ್ಮ
3. ಛಂದೋಂಬುಧಿಯನ್ನು ಬರೆದ ಶೈವ ನಾಗವರ್ಮ

ಚರ್ಚೆಯ ಮೊದಲನೆಯ ಘಟ್ಟ ಇಲ್ಲಿಗೆ ಮುಗಿದು ಹೋಗುತ್ತದೆ. ನಮಗಿಲ್ಲಿ ಕಾವ್ಯಾವಲೋಕನಾದಿಗಳ ನಾಗವರ್ಮನ ಕುರಿತಾದ ಚರ್ಚೆ ವಿವಕ್ಷಿತ. ಹಾಗಾಗಿ ಅದನ್ನು ಮಾತ್ರ ಗಮನಿಸಲಾಗುವುದು.

ಆರ್. ನರಸಿಂಹಾಚಾರ್ಯರು ಮೊದಲುಗೊಂಡು ಎಲ್ಲ ವಿದ್ವಾಂಸರು ಎರಡನೆಯ ನಾಗವರ್ಮನ ಕಾಲನಿರ್ಣಯಕ್ಕೆ ಭೂಷಣ ಮತ್ತು ಅನಂತನಾಥಪುರಾಣದ "ಜನನಾಥು ಜಗದೇಕನಲ್ಲಿ....(1–34) ಎಂಬ ಪದ್ಯವನ್ನು ಪ್ರಮಾಣವಾಗಿ ಎತ್ತಿಕೊಂಡಿದ್ದಾರೆ. ಕವಿಚರಿತೆಕಾರರು ಭೂಷಣ ಸೂತ್ರ 73ರಲ್ಲಿ ಉಕ್ತನಾದ ನಯಸೇನನು ಧರ್ಮಾಮೃತದ ಕರ್ತೃವಾದ ನಯಸೇನನಿಗಿಂತ ಅಭಿನ್ನನೆಂದು ನಿರ್ಣಯಿಸಿ, ವಿಭಕ್ತಿ ಪ್ರತ್ಯಯಕ್ಕೆ (ಸೂ. 88) ಬಂದಿರುವ ಪ್ರಯೋಗಗಳಲ್ಲಿ ಒಂದಾದ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದು ಮತ್ಸ್ಯಾವತಾರಕ್ಕೆ" ಎಂಬ ಪಂಪರಾಮಾಯಣದ ಪದ್ಯಭಾಗವನ್ನು (7-98) ಗಮನಿಸಿ, ನಾಗಚಂದ್ರ, (ಕ್ರಿ. ಶ. 1100), ನಯಸೇನ (ಕ್ರಿ. ಶ. 1112) ರಿಗಿಂತ ಈಚೆಗಿನವನು ಎರಡನೆಯ ನಾಗವರ್ಮನೆಂದು ಅಭಿಪ್ರಾಯಪಟ್ಟಿದ್ದಾರೆ. ಮೇಲೆ ಹೇಳಿದ ಅನಂತನಾಥ ಪುರಾಣದ ಪದ್ಯದ ಆಧಾರದಲ್ಲಿ ಈ ನಾಗವರ್ಮನು ಜನ್ನನ ಗುರುವೆಂದೂ, ಚಾಲುಕ್ಯ ದೊರೆ ಜಗದೇಕಮಲ್ಲನಲ್ಲಿ (ಕ್ರಿ. ಶ. 1138–1150) ಈತನು ಕಟಕೋಪಾಧ್ಯಾಯನಾಗಿದ್ದನೆಂದೂ ತೀರ್ಮಾನಿಸಿದ್ದಾರೆ. ಕವಿಸುಮನೋಬಾಣನು ಜನ್ನನ ತಂದೆಯೆಂದೂ ನಿರ್ಣಯಿಸಿದ್ದಾರೆ. ಎ. ವೆಂಕಟಸುಬ್ಬಯ್ಯನವರು ನಾಗಚಂದ್ರನು

ಕ್ರಿ. ಶ. 1040 ಕ್ಕಿಂತಲೂ ಹಿಂದಿನವನೆಂದು ಹೇಳಿ ಭೂಷಣೋಕ್ತನಯಸೇನನೂ ಮುಳಗುಂದ ಶಾಸನೋಕ್ತ ನಯಸೇನ ಪಂಡಿತನೂ ಏಕವ್ಯಕ್ತಿಯಾಗಿರಬೇಕೆಂದು ನಿರ್ಣಯಿಸಿ, ನಾಗವರ್ಮನ ಕಾಲದ ಹಿಂದಿನ ಗಡುವನ್ನು ಮತ್ತಷ್ಟು ಹಿಂದೆಳೆದಿದ್ದಾರೆ. ಅನಂತನಾಥ ಪುರಾಣದ ಪದ್ಯವನ್ನು ಇನ್ನೊಂದು ತೆರನಾಗಿ ಅರ್ಥಯಿಸಿ ಜನ್ನನ ಗುರು ಸುಮನೋಬಾಣ, ನಾಗವರ್ಮ ಕಟಕೋಪಾಧ್ಯಾಯನಾಗಿದ್ದುದು ಕ್ರಿ.ಶ.1015–42ರಲ್ಲಿ ಆಳಿದ ಜಯಸಿಂಹ ಜಗದೇಕಮಲ್ಲನೆಂಬ ಚಾಳುಕ್ಯ ದೊರೆಯಲ್ಲಿ, ಜನ್ನ ಸುಮನೋಬಾಣನ ಮಗನಲ್ಲ, ಶಿಷ್ಯ ಎಂದು ನಿಶ್ಚಯಿಸಿದ್ದಾರೆ. ಹಾಗಾಗಿ ಅವರ ಪ್ರಕಾರ ನಾಗವರ್ಮನ ಕಾಲ ಕ್ರಿ. ಶ. 11ನೆಯ ಶತಮಾನದ ಪೂರ್ವಾರ್ಧ.

ಕ್ರಿ. ಶ. 1974ರಲ್ಲಿ ನಾಗವರ್ಮಕೃತ ವರ್ಧಮಾನ ಪುರಾಣ ಪ್ರಕಟಗೊಂಡಾಗ ಚರ್ಚೆಯ ಎರಡನೆಯ ಘಟ್ಟದ ಆರಂಭವಾಗುತ್ತದೆ. ಗ್ರಂಥಸ್ಥ ಪ್ರಮಾಣಗಳಿಂದ ಕಾವ್ಯಾವಲೋಕನ, ಅಭಿಧಾನ ವಸ್ತು ಕೋಶಗಳ ಕರ್ತೃವೇ ವರ್ಧಮಾನ ಪುರಾಣಕಾರ ನಾದ ನಾಗವರ್ಮನೆಂದೂ ಆತನ ಕಾಲ ಕ್ರಿ. ಶ. 1042 ಎಂಬುದು ಖಚಿತವೆಂದೂ ಹಿಂದೆಯೇ ಹೇಳಲಾಗಿದೆ. ಹೀಗೆ ಎರಡನೆಯ ನಾಗವರ್ಮನ ಕಾಲ ಸುಮಾರು ನೂರು ವರ್ಷಗಳಷ್ಟು ಹಿಂದಕ್ಕೆ ಸರಿದಾಗ ಇದುವರೆಗೆ ಆತನ ಕಾಲನಿರ್ಣಯಕ್ಕೆ ಸಾಧಕಗಳಾದ ಅಂಶಗಳು ಕುಸಿದುಬಿದ್ದು ಪುನರ್ವಿಮರ್ಶೆಯನ್ನಪೇಕ್ಷಿಸುತ್ತವೆ. ಪರಿಣಾಮವಾಗಿ ಕೆಳಗಿನ ಹೊಸ ವಾದಗಳು ಹುಟ್ಟಿಕೊಂಡಿವೆ.

1. ನಾಗವರ್ಮ ಜನ್ನನ ಗುರುವಲ್ಲ (ಕ. ಭಾ. 7–1).

2. ನಾಗವರ್ಮನು ನಿಶ್ಚಯವಾಗಿಯೂ ಜನ್ನನಿಗೆ ಉಪಾಧ್ಯಾಯನು. ಕ್ರಿ. ಶ. ಸು. 1173ರ ತರುವಾಯದ ಛಂದೋಂಬುಧಿಯ ನಾಗವರ್ಮನನ್ನು ಮೂರನೆಯ ನಾಗವರ್ಮನೆಂದು ಕರೆಯಬಹುದೋ ಏನೋ. ಈ ನಾಗವರ್ಮನೇ ಜನ್ನನ ಗುರು ಯಾಕಾಗಿರಬಾರದು (ಅನಂತನಾಥಪುರಾಣ ಪ್ರಸ್ತಾವನೆ. ಪು. 18).

3. ನಾಗವರ್ಮ ಜನ್ನನ ಗುರು. ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ ವನೂ ಈತನೆ. ಕಾವ್ಯಾವಲೋಕನಕಾರನಾದ ಎರಡನೆಯ ನಾಗವರ್ಮನಿ ಗಿಂತ ಭಿನ್ನನಾದ ಈತನು ಮೂರನೆಯ ನಾಗವರ್ಮ. ಭಾಷಾಭೂಷಣ ಇವನ ಕೃತಿ (ಕ. ಭಾ. 8–4 ಪು.23).

4. ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ ನಾಗವರ್ಮನೆಂಬ ವೈಯಾಕರಣ ನೊಬ್ಬನು ಜನ್ನನಿಗೆ ಗುರುವಾಗಿದ್ದನು. ಆತನೆ ಭಾಷಾಭೂಷಣಕಾರ ನಾಗವರ್ಮ. ಭಾಷಾಭೂಷಣ ಕ್ರಿ. ಶ. 1120ರಿಂದೀಚೆಗೆ ರಚಿತವಾಗಿರ ಬಹುದು (ಅಧ್ಯಯನ. ಪು. 554).

ನಾವಿಲ್ಲಿ ಭೂಷಣಕಾರ ನಾಗವರ್ಮ ಕಾವ್ಯಾವಲೋಕನಕಾರನಿಗಿಂತ ಭಿನ್ನನೇ ಎಂಬುದನ್ನು ಮತ್ತು ಆತನು ಜನ್ನನ ಗುರು ಹೌದೇ ಎಂಬುದನ್ನು ಮಾತ್ರ ವಿವೇಚಿಸಿದರೆ ಸಾಕು. ಜನ್ನನ ಅನಂತನಾಥ ಪುರಾಣದ ಪೂರ್ವೋಕ್ತಪದ್ಯದ (1-34) ಹಿನ್ನೆಲೆಯಲ್ಲಿ ಮೇಲಿನ ಹೇಳಿಕೆಗಳನ್ನು ಪರಿಶೀಲಿಸಬೇಕು. ಜನ್ನನ ಪದ್ಯದಿಂದ ಒಬ್ಬ ನಾಗವರ್ಮ ಜಗದೇಕನೆಂಬ ದೊರೆಯಲ್ಲಿ ಕಟಕೋಪಾಧ್ಯಾಯನಾಗಿದ್ದನೆಂಬುದು ಮತ್ತು ಸುಮನೋಬಾಣನು ಜನ್ನನ ಕಾಲದಲ್ಲಿ ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾಗಿರುವನೆಂಬುದು ನಿಸ್ಸಂದೇಹವಾಗಿ ತಿಳಿದು ಬರುವ ವಿಷಯ. ಆದರೆ ಕೆಳಗಿನ ವಿಚಾರಗಳು ಮಾತ್ರ ವಾದಕ್ಕೆಡೆಯಾಗಿವೆ.

1. ಜನ್ನನ ಗುರು ಯಾರು ? ನಾಗವರ್ಮನೆ ? ಅಲ್ಲ ಸುಮನೋಬಾಣನೆ ?
2. 'ಇದಾನೀಂತನಶರ್ವವರ್ಮ' ಎಂಬ ಬಿರುದು ಯಾರದು ? ನಾಗವರ್ಮನದೇ ಅಲ್ಲ ಸುಮನೋಬಾಣನದೇ ?

ಬಿ. ಎಸ್. ಸಣ್ಣಯ್ಯ, ಎಂ. ಎಂ. ಕಲ್ಬುರ್ಗಿ ಮೊದಲಾದ ವಿದ್ವಾಂಸರು ಕಾವ್ಯಾವಲೋಕನಾದಿಗಳ ಕರ್ತೃವಾದ ನಾಗವರ್ಮ ಜನ್ನನ ಗುರುವಲ್ಲವೆಂದು ಹೇಳಿದುದು ಸಮಂಜಸ. ಈ ನಾಗವರ್ಮ ತಾನು ಕಟಕೋಪಾಧ್ಯಾಯನೆಂದು ಎಲ್ಲೂ ಹೇಳಿಕೊಳ್ಳದಿರುವುದರಿಂದ, ಅವನ ಬಿರುದುಗಳ ಸಾಲಿನಲ್ಲಿ "ಇದಾನೀಂತನ ಶರ್ವವರ್ಮ" ಎಂಬುದೂ ಸೇರಿಕೊಳ್ಳದಿರುವುದರಿಂದ, ಜಗದೇಕನಲ್ಲಿ ನಾಗವರ್ಮ ಎಂಬವನೊಬ್ಬ ಕಟಕೋಪಾಧ್ಯಾಯನಾಗಿದ್ದುದು ಅಷ್ಟೇ ಸತ್ಯವೂ ಆಗಿರುವುದರಿಂದ ಇವನಿಗಿಂತ ಬೇರೆಯಾದ ಕಟಕೋಪಾಧ್ಯಾಯ ನಾಗವರ್ಮನೊಬ್ಬನನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಜನ್ನನ ಪದ್ಯವನ್ನು ನೋಡಿದರೆ ನಾಗವರ್ಮನೆಂಬವನು ಜನ್ನನ ಗುರುವೆಂಬುದು ನಿಜವೆನಿಸುತ್ತದೆ. "ಸುಮಾರು 200 ವರ್ಷಗಳ ಹಿಂದೆ ಚಾಳುಕ್ಯ ಒಂದನೆಯ ಜಗದೇಕಮಲ್ಲನ ಆಸ್ಥಾನದಲ್ಲಿ ಕಟಕೋಪಾಧ್ಯಾಯನಾಗಿದ್ದನೆನ್ನುವ ಮತ್ತು ತನಗೆ ಯಾವ ಸಂಬಂಧವೂ ಇಲ್ಲದಿದ್ದ (ಎರಡನೆಯ) ನಾಗವರ್ಮನಿಗೆ ತನ್ನ ಸಮಕಾಲೀನನಾದ ಕಟಕೋಪಾಧ್ಯಾಯ ಸುಮನೋಬಾಣನನ್ನು ಜನ್ನನು ಹೋಲಿಸುವುದು ತೀರ ಅಸಂಭವ" (ಅಧ್ಯಯನ. ಪು. 552) ವಾದ್ದರಿಂದ ಮತ್ತು ತನಗೆ ಗುರುವಾದವನನ್ನು ಹೇಳಿಕೊಳ್ಳುವುದು ಸಹಜವೂ ಆಗಿರುವುದರಿಂದ ಹೀಗೆ ನಿರ್ಣಯಿಸಬೇಕಾಗುತ್ತದೆ. ಆಗ ಜನ್ನನ ಗುರುವಾದ ನಾಗವರ್ಮನು ಕಟಕೋಪಾಧ್ಯಾಯನಾಗಿದ್ದುದು ಯಾವ ಜಗದೇಕನಲ್ಲಿ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆರ್. ನರಸಿಂಹಾಚಾರ್, ಎ. ವೆಂಕಟಸುಬ್ಬಯ್ಯ, ಗೋವಿಂದ ಪೈ ಮೊದಲಾದ ವಿದ್ವಾಂಸರು 'ಜಗದೇಕ'ನೆಂಬ ಬಿರುದನ್ನು ಚಾಲುಕ್ಯರಾಜರಲ್ಲೇ ಕಂಡುಕೊಂಡುದರಿಂದ ತಪ್ಪು ನಿರ್ಣಯಕ್ಕೆ ಅವಕಾಶವಾಗಿದೆ. ಆದರೆ ಈಗ ಶಾಸನಗಳಿಂದ ತಿಳಿದುಬರುವಂತೆ ಹೊಯ್ಸಳ ಒಂದನೆಯ ನರಸಿಂಹನಿಗೆ 'ಜಗದೇಕಮಲ್ಲ'

ನೆಂಬ ಬಿರುದಿದೆ (ಅಧ್ಯಯನ. ಪು. 561 ಟಿಪ್ಪಣಿ. 71). ಈ ಜಗದೇಕನಲ್ಲಿ ನಾಗವರ್ಮ ಕಟಕೋಪಾಧ್ಯಾಯನಾಗಿದ್ದಿರಬೇಕು. ಗೋವಿಂದ ಪೈಗಳು ಹೇಳುವಂತೆ ಜನ್ನನು 'ಆ ನಾಗವರ್ಮನ್' ಎಂದು ದೂರೀಭಾವವನ್ನು ಸೂಚಿಸಿರುವುದರಿಂದ ಅನಂತನಾಥಪುರಾಣದ ರಚನೆಯ ಕಾಲಕ್ಕೆ (ಕ್ರಿ. ಶ. 1230) ಆತನು ಮೃತಿ ಹೊಂದಿರಬೇಕು.

ನಾಗವರ್ಮನಂತೆ ಸುಮನೋಬಾಣನೂ ಜನ್ನನ ಗುರುವೆಂಬುದರಲ್ಲಿ ಸಂದೇಹವಿಲ್ಲ. ಎ. ವೆಂಕಟಸುಬ್ಬಯ್ಯನವರು ಹೇಳುವಂತೆ "ಕವಿಭಾಳಲೋಚನಂ ಕವಿಸುಮನೋಬಾಣನ ಮಗನೆಂದಖಿಳಕ್ಷೋಣಿಗೆ ಪೆಸರಾಯ್ತು" ಎಂಬ ಯಶೋಧರ ಚರಿತೆಯ ಪದ್ಯದಲ್ಲಿ (1-23) ಬಂದಿರುವ 'ಮಗ' ಎಂಬುದಕ್ಕೆ 'ಶಿಷ್ಯ' ಎಂಬ ಅರ್ಥ ಸಮಂಜಸವಾಗಿದೆ. ಒಂದು ವೇಳೆ ಆರ್. ನರಸಿಂಹಾಚಾರ್ಯರು ಹೇಳುವಂತೆ ಜನ್ನನು ಸುಮನೋಬಾಣನ ಔರಸ ಪುತ್ರನಾಗಿದ್ದರೆ ಅವನನ್ನು ಕವಿಸುಮನೋಬಾಣನ ಮಗನಾಗಿಸುವುದರಲ್ಲಿ ವಾಣೀ ಪಾರ್ವತಿ ಮಾಡಿದ ಜಾಣ್ ಯಾವುದು ? 'ಅಖಿಳ ಕ್ಷೋಣಿಗೆ ಪೆಸರಾಯ್ತು' ಮತ್ತು 'ಕೂರ್ಮೆಗಿದು ಕೌತುಕಮೇ' ಎಂಬ ಮಾತುಗಳ ಅರ್ಥವೇನು ? ಎಂಬುದನ್ನು ಯೋಚಿಸ ಬೇಕಾಗುತ್ತದೆ. ಮಗನಲ್ಲದವನು- ಶಿಷ್ಯನಾಗಿ ಪರಿಗ್ರಹಿಸಲ್ಪಟ್ಟವನು-ಮಗನೆನಿಸಿದನು ಎಂದರ್ಥಯಿಸಿದಾಗ ಈ ಮಾತುಗಳು ಸಾರ್ಥಕಗಳಾಗಿ ಅವರ ಗುರು ಶಿಷ್ಯ ಸಂಬಂಧ, ಕೂರ್ಮೆ ಎಂಥವೆಂಬುದನ್ನು ತೋರಿಸಿ ಕೊಡುತ್ತವೆ. ಆದುದರಿಂದ ಜನ್ನ ಸುಮನೋ ಬಾಣನ ಮಗನಲ್ಲ, ಶಿಷ್ಯ ಎಂಬುದೇ ಸಮರ್ಥನೀಯ.

'ಇದಾನೀಂತನ ಶರ್ವವರ್ಮ' ಎಂಬ ಬಿರುದು ಕವಿಸುಮನೋಬಾಣನಿಗಿದ್ದಂತೆ ತಿಳಿಯಲು ಯಾವುದೇ ಸಾಕ್ಷ್ಯಗಳಿಲ್ಲ. ಒಂದು ವೇಳೆ ಆ ಬಿರುದಾತನಿಗೆ ಇದ್ದುದು ಹೌದಾದರೆ ನಿಶ್ಚಯವಾಗಿಯೂ ದರ್ಪಣಕಾರ ಅದನ್ನೂ ಹೇಳದಿರುತ್ತಿರಲಿಲ್ಲ. ಆದ್ದ ರಿಂದ ಆ ಬಿರುದು ನಾಗವರ್ಮನದೆಂದೇ ತಿಳಿಯಬೇಕು.

ಈಗ ಜನ್ನನ ಪದ್ಯಕ್ಕೆ ತಾತ್ಪರ್ಯ ಹೀಗೆ ಹೇಳಬಹುದು :

1. ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ ಇದಾನೀಂತನ ಶರ್ವವರ್ಮನೆಂಬ ಬಿರುದು ಹೊಂದಿದ್ದ ಆ ನಾಗವರ್ಮ ಜನ್ನನಿಗೆ ಉಪಾಧ್ಯಾಯ.
2. ನೃಸಿಂಹಕ್ಷಿತಿಪಾಲನಲ್ಲಿ ಈಗ ಕಟಕೋಪಾಧ್ಯಾಯನಾಗಿರುವ ಕವಿಶ್ರೇಷ್ಠರಲ್ಲಿ ಸೂಕ್ತಿ ನವೀನೋಜ್ವಳಬಾಣನೆಂದು ಹೆಸರಾದ ಸುಮನೋಬಾಣ ಜನ್ನನಿಗೆ ಉಪಾಧ್ಯಾಯನು.

ಅಂತೂ ಒಟ್ಟಿನಲ್ಲಿ ಜನ್ನನಿಗೆ ನಾಗವರ್ಮ ಮತ್ತು ಸುಮನೋಬಾಣ, ಇವರಿಬ್ಬರೂ ಉಪಾಧ್ಯಾಯರು. ಹಾಗಾಗಿ "ಕ್ರಿ. ಶ. 1190ರ ಚನ್ನರಾಯಪಟ್ಟಣ 179ನೆಯ ಶಾಸನವನ್ನು ಬರೆದಾಗ ಜನ್ನನ ವಯಸ್ಸು ಸುಮಾರು 25 ವರ್ಷಗಳೆಂದು ಭಾವಿಸಿದರೆ, ಒಂದನೆಯ ನರಸಿಂಹನ ಆಸ್ಥಾನದಲ್ಲಿದ್ದ ನಾಗವರ್ಮನು ಬಾಲ್ಯದಲ್ಲಿಯೂ, 1230ರಲ್ಲಿ

ಅನಂತನಾಥಪುರಾಣ ರಚಿತವಾದಾಗ ಜೀವಂತನಾಗಿದ್ದ ಸುಮನೋಬಾಣನು ನಾಗವರ್ಮನ ಅನಂತರವೂ ಜನ್ನನ ಉಪಾಧ್ಯಾಯರಾಗಿರುವುದು ಸಾಧ್ಯ'' (ಅಧ್ಯಯನ. ಪು. 554) ಎಂಬ ಅಭಿಪ್ರಾಯ ಒಪ್ಪತಕ್ಕದಾಗಿದೆ.

'ಇದಾನೀಂತನ ಶರ್ವವರ್ಮ' ಎಂಬ ಬಿರುದಿನ ಹಿನ್ನೆಲೆಯಲ್ಲಿ, ಜನ್ನನ ಗುರುವಾದ ನಾಗವರ್ಮನೇ ಭೂಷಣಕಾರನೆಂದು ತೀರ್ಮಾನಿಸಬಹುದು. ಈತನು ಹೊಯ್ಸಳ ಒಂದನೆಯ ನರಸಿಂಹನಲ್ಲಿ (ಕ್ರಿ. ಶ. 1152-1173) ಕಟಕೋಪಾಧ್ಯಾಯನಾಗಿದ್ದನು. ಶಬ್ದಸ್ಮೃತಿಯನ್ನು ಬರೆದು ಕಾವ್ಯಾವಲೋಕನಕಾರನು ಅಭಿನವ ಶರ್ವವರ್ಮನಾದಂತೆ ಈತನು ಭೂಷಣವನ್ನು ಬರೆದು ''ಇದಾನೀಂತನ ಶರ್ವವರ್ಮ'' ನೆನಿಸಿದನು. ಇಬ್ಬರೂ ಶರ್ವವರ್ಮನ ಕಾತಂತ್ರ ವ್ಯಾಕರಣವನ್ನೇ ಹೆಚ್ಚು ಅನುಸರಿಸಿರುವುದರಿಂದ, ಆಯಾ ಕಾಲದ ರಾಜರು, ವಿದ್ವಾಂಸರು ಇವರಿಬ್ಬರನ್ನೂ ಈ ಬಿರುದುಗಳಿಂದ ಗೌರವಿಸಿರಬೇಕು. ಭೂಷಣವನ್ನು ಬರೆದಾದ ಬಳಿಕ ಈ ಬಿರುದು ಬಂದಿರುವುದರಿಂದ ಗ್ರಂಥದಲ್ಲಿ 'ಇದಾನೀಂತನ ಶರ್ವವರ್ಮ' ಉಲ್ಲೇಖಗೊಂಡಿಲ್ಲವೆಂದು ಭಾವಿಸಬಹುದು. ಜಗದೇಕಮಲ್ಲನ ಅಧಿಕಾರಾವಧಿ ಕ್ರಿ. ಶ. 1152-73 ಆಗಿರುವುದರಿಂದ ನಾಗವರ್ಮ ಕಟಕೋಪಾಧ್ಯಾಯನಾಗಿದ್ದ ಕಾಲವೂ ಖಚಿತವಾಗಿದೆ. ಹೇಮಚಂದ್ರನು ಕ್ರಿ. ಶ. 1143ರ ಹೊತ್ತಿಗೆ ಸಿದ್ಧ ಹೇಮ ಶಬ್ದಾನುಶಾಸನವನ್ನು ಬರೆದು ಮುಗಿಸಿದ್ದನೆಂದು ತಿಳಿದು ಬಂದಿದೆ (ಸಂಶೋಧನೆ ಪಂಚದಶಿ. ಪು. 129). ಈ ಗ್ರಂಥ ಕ್ಷಿಪ್ರವಾಗಿ ಭಾರತವನ್ನಿಡೀ ವ್ಯಾಪಿಸಿದಂತೆಯೂ ಉಲ್ಲೇಖಗಳಿವೆ (ಅದೇ. ಪು. 139). ಇದರಿಂದ ಈ ನಾಗವರ್ಮನಿಗೆ ಹೇಮಚಂದ್ರನ ಗ್ರಂಥ ಕಾಣಸಿಕ್ಕಿರುವುದರಲ್ಲಿ ಅನುಮಾನವಿಲ್ಲ. ಯಶೋಧರ ಚರಿತ್ರೆಯಲ್ಲಿ (ಕ್ರಿ. ಶ. 1209) ಸುಮನೋಬಾಣನ ಹೊಗಳಿಕೆಯಿದೆಯಾದರೂ ನಾಗವರ್ಮನ ಪ್ರಸ್ತಾಪವಿಲ್ಲ. ಎಂದರೆ ಆ ಹೊತ್ತಿಗೆ ನಾಗವರ್ಮನು ಇಹಲೋಕ ತ್ಯಜಿಸಿರಬಹುದೆಂದು ಹೇಳಬಹುದು. ಈಚೆಯ ಗಡು ಪಂಪರಾಮಾಯಣ ಮತ್ತು ಆಚೆಯ ಗಡು ಯಶೋಧರ ಚರಿತೆಯೆಂದಿಟ್ಟು ಕೊಂಡು ಸುಮಾರು ಕ್ರಿ. ಶ. 1150 – 1200ರ ಮಧ್ಯಾವಧಿಯಲ್ಲಿ ಭೂಷಣದ ರಚನೆಯಾಗಿರಬೇಕೆಂದು ನಿರ್ಣಯಿಸಬಹುದು.

ಎಲ್. ಬಸವರಾಜು ಮತ್ತು ಬಿ. ಬಿ. ಮಹೀಷವಾಡಿ—ಇವರಿಬ್ಬರು ವಿದ್ವಾಂಸರು ಛಂದೋಂಬುಧಿಯ ನಾಗವರ್ಮನನ್ನು ಮೂರನೆಯ ನಾಗವರ್ಮನೆಂದು ಹೇಳಿದ್ದರೂ ಆತನ ಕಾಲದ ಬಗ್ಗೆ ಇನ್ನೂ ಸಂದೇಹವುಳಿದಿದೆ (ಛಂದೋಂಬುಧಿ (ಕೃ) ಪೀಠಿಕೆ. ಪು. 62). ಆತನು ಭೂಷಣಕಾರನಿಗಿಂತ ಈಚೆಯವನೋ ಆಚೆಯವನೋ ಎಂಬುದನ್ನು ನಿರ್ಣಯಿಸಲು ಪ್ರಮಾಣಗಳಿಲ್ಲ. ಹಾಗಾಗಿ ಭೂಷಣಕಾರನನ್ನು ಮೂರನೆಯ ಯಾ ನಾಲ್ಕನೆಯ ನಾಗವರ್ಮನೆನ್ನದೆ ಸದ್ಯಕ್ಕೆ ಭೂಷಣಕಾರ ನಾಗವರ್ಮನೆಂದು ನಿರ್ದೇಶಿಸಿದರೆ ಸಾಕು. ಸ್ಮೃತಿಕಾರನಂತೂ ಎರಡನೆಯ ನಾಗವರ್ಮನೆಂಬುದು ನಿಸ್ಸಂದೇಹ.

ಒಟ್ಟಿನಲ್ಲಿ ಈ ವಿವೇಚನೆಯಲ್ಲಿ ನಮಗೆ ಪ್ರಸ್ತುತವಾದುದಿಷ್ಟು :

1. ಸ್ಮೃತಿ ಭೂಷಣಗಳ ಕರ್ತೃಗಳು ಅನ್ಯಾನ್ಯರಾದ ಇಬ್ಬರು ನಾಗವರ್ಮರು. ಸ್ಮೃತಿಕಾರ ನಾಗವರ್ಮನ ಕಾಲ ಕ್ರಿ. ಶ. 1042 ಎಂಬುದು ಖಚಿತ. ಭೂಷಣಕಾರ ನಾಗವರ್ಮ ಅವನಿಗಿಂತ ಅರ್ವಾಚೀನನಾಗಿದ್ದು ಸು. ಕ್ರಿ. ಶ. 1150–1200ರ ಕಾಲಾವಧಿಯಲ್ಲಿ ಕೃತಿರಚನೆ ಮಾಡಿರಬೇಕು.
2. ಸ್ಮೃತಿಯ ಗಾಢವಾದ ಅನುಸರಣೆ ಭೂಷಣದಲ್ಲಿದೆ.

## ಶಬ್ದಸ್ಮೃತಿ

ಸ್ಮೃತಿಯಲ್ಲಿ ಕಂದಪದ್ಯದಲ್ಲಿರುವ ಒಟ್ಟು 96 ಸೂತ್ರಗಳಲ್ಲಿ ಸಂಕ್ಷಿಪ್ತವಾಗಿ ಕನ್ನಡ ವ್ಯಾಕರಣ ಪ್ರಕ್ರಿಯೆಗಳು ನಿರೂಪಿತವಾಗಿವೆ. ಸಂಜ್ಞಾ, ಸಂಧಿ, ನಾಮ, ಸಮಾಸ, ತದ್ಧಿತ ಮತ್ತು ಆಖ್ಯಾತವೆಂಬ ಪ್ರಕರಣಗಳಲ್ಲಿ ಆ ವಿಷಯಗಳನ್ನು ವಿವರಿಸಿದ್ದು ಲಕ್ಷ್ಯಗಳಾಗಿ ಸುಮಾರು 327 ಪದ್ಯಗಳನ್ನು ಕೊಡಲಾಗಿದೆ. ಸೂತ್ರಗಳಿಗೆ 'ವೃತ್ತಿ' ಬರೆಯುವ ಗೋಜಿಗೆ ಸ್ಮೃತಿಕಾರ ಕೈಹಾಕಿಲ್ಲ. "ಅಭಿಮತ ಶಬ್ದ ಸಂಸ್ಮರಣದಿಂ ಜನಮುಂ ತಿಳಿಮಂತು" (ಪದ್ಯ 423) ಮಾಡುವುದು ಮತ್ತು ಶಬ್ದಸಿದ್ಧಿಯನ್ನು ವಿವರಿಸುವುದು (ಪದ್ಯ : 6) ಸ್ಮೃತಿಕಾರನ ಉದ್ದೇಶ.

'ಶಬ್ದಸ್ಮೃತಿ' ಎಂಬ ಹೆಸರನ್ನಿಡುವಲ್ಲಿ ವಾಮನನ ಕಾವ್ಯಾಲಂಕಾರಕ್ಕೆ (1-3-1, 2) ಸ್ಮೃತಿಕರ್ತ ಋಣಿ.[4] ಸಂಸ್ಕೃತ ವೈಯಾಕರಣರು ವ್ಯಾಕರಣವನ್ನು 'ಸ್ಮೃತಿ'ಯೆಂದು ಪರಿಗಣಿಸಿದುದಾಗಿ ವಾಕ್ಯಪದೀಯದಿಂದ ('ವ್ಯಾಕರಣ ಸ್ಮೃತಿ' : 1–142) ತಿಳಿದು ಬರುತ್ತದೆ.

## ಕರ್ನಾಟಕ ಭಾಷಾ ಭೂಷಣ

ಇದು ಸಂಸ್ಕೃತದಲ್ಲಿರುವ ಕನ್ನಡದ ಮೊದಲ ವ್ಯಾಕರಣ. ಇದರಲ್ಲಿ ಒಟ್ಟು 269 ಸೂತ್ರಗಳಿವೆ. ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಯುಷ್ಮದಾದಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ ಮತ್ತು ನಿಪಾತ ಎಂಬ ಹತ್ತು ಪ್ರಕರಣಗಳಲ್ಲಿ (ವಿಧಾನ) ಕನ್ನಡ ವ್ಯಾಕರಣ ವಿಚಾರಗಳು ಸ್ಮೃತಿಗಿಂತ ಹೆಚ್ಚು ವಿಸ್ತಾರವಾಗಿ ಪ್ರತಿಪಾದಿತವಾಗಿವೆ. ಭೂಷಣಕಾರ ತನ್ನ ಸೂತ್ರಗಳಿಗೆ ತಾನೇ ವೃತ್ತಿ ಬರೆದಿರುವುದು ಇದರ ವೈಶಿಷ್ಟ್ಯ. ಪ್ರಯೋಗಗಳಿಗೆ ಲಕ್ಷ್ಯಗಳಾಗಿ ಪೂರ್ಣ ಪದ್ಯಗಳನ್ನು ಕೊಡದೆ ಮಾತಿನ ತುಣುಕುಗಳನ್ನೇ ಹೆಚ್ಚಾಗಿ ಕೊಡುವಲ್ಲಿ ಸಂಸ್ಕೃತದ ವೃತ್ತಿಗ್ರಂಥಗಳ ಪ್ರಭಾವ ನಿಚ್ಚಳವಾಗಿ ಗೋಚರಿಸುತ್ತದೆ "ಲೋಕವ್ಯುತ್ಪತ್ತಿಹೇತವೇ" (ಭೂಷಣದ ಕೊನೆಯ ಶ್ಲೋಕ) ಎಂಬುದಾಗಿರುವ ಕೃತಿರಚನೆಯ ಉದ್ದೇಶ ಸ್ಮೃತಿಕಾರನ ಉದ್ದೇಶದೊಂದಿಗೆ ದನಿಗೂಡಿಸುತ್ತದೆ.

'ಭಾಷಾಭೂಷಣ' ಎಂಬ ಹೆಸರು ವಿಶಿಷ್ಟವಾಗಿದ್ದು ಸಂಸ್ಕೃತದ ವಿಪುಲವಾದ ವ್ಯಾಕರಣ ಗ್ರಂಥಗಳ ಸಮುದಾಯದಲ್ಲಿ ಈ ಹೆಸರಿನ ಒಂದೇ ಒಂದು ಕೃತಿಯೂ ಲಭ್ಯವಿಲ್ಲದಿರುವುದು ಗಮನಾರ್ಹವಾಗಿದೆ. ತೆಲುಗು ವ್ಯಾಕರಣವಾದ 'ಆಂಧ್ರಭಾಷಾ

ಭೂಷಣ'ದ (ಕ್ರಿ. ಶ. 13ನೇ ಶತಮಾನ) ಹೆಸರಿನ ಮೇಲೆ ಭೂಷಣದ ಹೆಸರಿನ ಪ್ರಭಾವ ನಿಚ್ಚಳವಾಗಿ ಗೋಚರಿಸುತ್ತದೆ.[5]

**ಶಬ್ದ ಮಣಿದರ್ಪಣ**

ಕೇಶಿರಾಜಕೃತ 'ಶಬ್ದಮಣಿದರ್ಪಣ' ಹಳಗನ್ನಡ ವ್ಯಾಕರಣಗಳಲ್ಲಿ ಅಗ್ರಸ್ಥಾನವನ್ನು ಅಲಂಕರಿಸಿದೆ. ವ್ಯಾಕರಣ ವಿಷಯಗಳ ಪ್ರತಿಪಾದನೆಯಲ್ಲಿರುವ ಖಚಿತತೆ, ವಿಪುಲವಾದ ಪ್ರಯೋಗ ಸಂಪತ್ತಿಯಲ್ಲಿರುವ ರಮಣೀಯಂತೆಗಳಿಂದ ಇದು 'ಸೂರ್ಯೇಂದುಂ ಮೇರು ವಾರಿಧಿ ಪರ್ಯಂತ' ನಿಲ್ಲುವ ಕೃತಿಯಾಗಿದೆ. ಇದರಲ್ಲಿ ಕಂದಪದ್ಯದಲ್ಲಿರುವ ಸುಮಾರು 337 ಸೂತ್ರಗಳಲ್ಲಿ ಸಂಧಿಕಾರ್ಯ, ನಾಮನಿಯಮ ಲಕ್ಷಣ, ಸಮಾಸಭೇದ ವಿವರಣ, ತದ್ಧಿತ ಪ್ರತ್ಯಯ ನಿರೂಪಣ, ಆಖ್ಯಾತ ಸಾಕಲ್ಯ ಲಕ್ಷಣ, ಧಾತು, ಅಪಭ್ರಂಶ ಪ್ರಪಂಚ ಲಕ್ಷಣ ಮತ್ತು ಅವ್ಯಯದರ್ಥ ವಿವರಣಗಳನ್ನು ವಿಶದವಾಗಿ ಕೊಡಲಾಗಿದೆ. ಈ ವ್ಯಾಕರಣ ಪ್ರಕ್ರಿಯೆಗಳು ಅನುಕ್ರಮವಾಗಿ ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ ಮತ್ತು ಅವ್ಯಯ ಎಂಬ ಪ್ರಕರಣಗಳಲ್ಲಿ ಸೂತ್ರ, ವೃತ್ತಿ, ಪ್ರಯೋಗಗಳ ಮೂಲಕ ಖಚಿತವಾಗಿ ನಿರೂಪಿತವಾಗಿವೆ.

ಒಂದೆರಡು ಮೂರು ನಾಲ್ಕೈದು ಅರ್ಥಗಳನ್ನು ಹೇಳುವ ಸಹಜ ಱ, ೞ ಘಟಿತ ಶಬ್ದಗಳು (181), ನಿತ್ಯಬಿಂದುಕಗಳು (62), ವಿಕಲ್ಪಬಿಂದುಕಗಳು (18), ನಿಯತ ದ್ವಿತ್ವಗಳು (57), ಶಿಥಿಲ ದ್ವಿತ್ವಗಳು (11), 995 ಧಾತುಗಳ ಅರ್ಥ ನಿರ್ದೇಶ ಮಾಡುವ ಧಾತು ಪ್ರಕರಣ, 9 ಕನ್ನಡದ ಅಸಾಧಾರಣ ಲಕ್ಷಣಗಳು; ಪ್ರಯೋಗ ಸಾರವೆಂಬ ಶಬ್ದಾರ್ಥ ನಿರ್ಣಯ. ಇವು ದರ್ಪಣದ ವೈಶಿಷ್ಟ್ಯಗಳಲ್ಲಿ ಕೆಲವು. ಕವಿರಾಜಮಾರ್ಗ, ಸ್ಮೃತಿ, ಭೂಷಣಗಳ ತಲಸ್ಪರ್ಶಿಯಾದ ವ್ಯಾಸಂಗ ದರ್ಪಣದ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಸ್ಮೃತಿಯು "ಶಬ್ದಂ ಸಂದೇಹ ಧ್ವಾಂತೌಘಂ ಪಿಂಗು"ವ (ಪದ್ಯ 422) ಸಲುವಾಗಿ ರಚಿತವಾದುದಾದರೆ ದರ್ಪಣವು "ಸಮಸ್ತಶಾಬ್ದಿಕಜನಮನೋಜನಿತ ಶಬ್ದಸಂದೇಹ ಶಲ್ಯಚಾರುಚುಂಬಕಾಯಮಾನ"ವಾಗಿ ಹುಟ್ಟಿಕೊಂಡಿದೆ. ಒಟ್ಟಿನಲ್ಲಿ "ಇತರ ಹಳೆಗನ್ನಡ ವ್ಯಾಕರಣ ಗ್ರಂಥಗಳಲ್ಲಿ ಕಾಣಬಾರದ ೞಕಾರಯುಕ್ತ ಪದಗಳ ಪಟ್ಟಿ, ಧಾತು ಪಾಠ, ಪ್ರಯೋಗಸಾರ, ಮುಂತಾದ ವಿಶೇಷ ಪ್ರಕರಣಗಳನ್ನು ಹೊಂದಿರುವುದು; ಪ್ರಯೋಗ ಬಾಹುಳ್ಯ ; ವ್ಯಾಕರಣ ವಿಚಾರಗಳ ಸಂಗ್ರತೆ ; ಕೇಶಿರಾಜನ ಸೂಕ್ಷ್ಮವಾದ ಭಾಷಾಪ್ರಜ್ಞೆ, ಪ್ರಯೋಗನಿಷ್ಠೆ, ವಿಶಾಲ ಮನೋಧರ್ಮ ಮತ್ತು ಕಾವ್ಯಾಭಿರುಚಿ ಮುಂತಾದ ಹಲವು ಸಂದರ್ಭ ವಿಶೇಷಗಳ ಸಂಯೋಗವು ಕೇಶಿರಾಜನ ವ್ಯಾಕರಣಕ್ಕೆ ಸಾರ್ವಕಾಲಿಕ ಪ್ರಾಮಾಣ್ಯವನ್ನೂ ವಿದ್ವಜ್ಜನಾದರಣೀಯತೆಯನ್ನೂ ದೊರಕಿಸಿಕೊಟ್ಟಿದೆ" (ಪ್ರಾ.ಕ ವ್ಯಾ. ಪು.70) ಎಂಬುದು ಗಟ್ಟಿಮಾತು. ಡಾ. ಬರ್ನೆಲ್ (ನೋಡಿ. OASG), ರೆ. ಕಿಟ್ಟೆಲ್ (ದರ್ಪಣ(ಕಿ)ಪ್ರಸ್ತಾವನೆ. ಪು. 13) ಮೊದಲಾದ ಪಾಶ್ಚಾತ್ಯ ವಿದ್ವಾಂಸರು

ದ್ರಾವಿಡ ಭಾಷಾವ್ಯಾಕರಣಗಳಲ್ಲಿ ಇದು ಶ್ರೇಷ್ಠತಮ ಕೃತಿಯೆಂದು ಮುಕ್ತಕಂಠದಿಂದ ಹೊಗಳಿದ್ದಾರೆ.

## ಕರ್ತೃವಿಚಾರ

ಕೇಶಿರಾಜ ತಾನು ಯಾದವಕಟಕಾಚಾರ್ಯ ಕವಿ ಸುಮನೋಬಾಣನ ದೌಹಿತ್ರನೆಂದೂ ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂದೂ ಹೇಳಿಕೊಂಡುದಲ್ಲದೆ (ಸೂ. 2) ತಾನೂ ಕವಿ ಹಾಗೂ ಯಾದವ ಕಟಕಾಚಾರ್ಯನೆಂದೂ (ಸೂ. 264) ಕರ್ಣಾಟಲಕ್ಷಣ ಶಿಕ್ಷಾಚಾರ್ಯನೆಂದೂ (ಪ್ರಕರಣಾಂತ ಗದ್ಯ) ಘೋಷಿಸಿಕೊಂಡಿದ್ದಾನೆ. ಜನ್ನನ ಗುರುವಾದ ಕವಿಸುಮನೋಬಾಣನೂ ಕೇಶಿರಾಜನ ಮಾತಾಮಹನೂ ಒಬ್ಬನೇ ವ್ಯಕ್ತಿಯೆಂಬುದು ಖಚಿತ. ತಂದೆಯಾದ ಮಲ್ಲಿಕಾರ್ಜುನ 'ಸೂಕ್ತಿಸುಧಾರ್ಣವ' ಕರ್ತೃ. ದರ್ಪಣದಲ್ಲಿ ರಚನಕಾಲವನ್ನು ನಿರ್ದೇಶಿಸಿಲ್ಲವಾದ್ದರಿಂದ ಸುಮನೋಬಾಣ (ಕ್ರಿ. ಶ. ಸು. 12–13ನೆಯ ಶತಮಾನ) ಮತ್ತು ಮಲ್ಲಿಕಾರ್ಜುನ (ಕ್ರಿ. ಶ. ಸು. 13ನೆಯ ಶತಕದ ಮಧ್ಯಭಾಗ) —ಇವರಿಬ್ಬರ ಕಾಲದ ಆಧಾರದಲ್ಲಿ ಕ್ರಿ.ಶ.ಸು. 1260ರಲ್ಲಿ ಈತನಿದ್ದಿರಬೇಕೆಂದು ನಿರ್ಣಯಿಸಲಾಗಿದೆ. ದರ್ಪಣದ ಸಮಾಪ್ತಿ ವಾಕ್ಯಗಳಿಂದ ತಿಳಿಯುವಂತೆ ಚೋಳಪಾಲಕ ಚರಿತ, ಶ್ರೀಚಿತ್ರಮಾಲೆ, ಸುಭದ್ರಾಹರಣ, ಪ್ರಬೋಧ ಚಂದ್ರ, ಕಿರಾತ— ಇವು ಈತನ ಇತರ ಕೃತಿಗಳು. ಇವುಗಳಲ್ಲಿ ಯಾವುದೊಂದೂ ಈ ವರೆಗೆ ಉಪಲಬ್ಧವಿಲ್ಲ.

ಕೇಶಿರಾಜನ ಮತವಿಚಾರ ಸಾಕಷ್ಟು ಚರ್ಚೆಗೆ ದಾರಿ ತೋರಿದೆ. ಸುಮನೋಬಾಣ ಮತ್ತು ಮಲ್ಲಿಕಾರ್ಜುನರ ಮತ ವಿಚಾರವೂ ಈ ಚರ್ಚೆಯಲ್ಲಿ ಬೆಸೆದುಕೊಂಡಿದೆ. ಕವಿಚರಿತೆಕಾರರು ಸುಮನೋಬಾಣ–ಜನ್ನರಲ್ಲಿ ತಂದೆ–ಮಗ ಸಂಬಂಧವನ್ನು ಕಲ್ಪಿಸಿ ಜನ್ನನ ಸೋದರಳಿಯ ಕೇಶಿರಾಜನೆಂದು ನಿರ್ಣಯಿಸಿ ಈತನೂ ಜೈನನೆಂದೇ ತೀರ್ಮಾನಿಸಿದ್ದಾರೆ. ಕೆ. ಜಿ. ಕುಂದಣಗಾರ (ಕ. ಸಾ. ಪ. 18–1), ಎಚ್. ಚೆನ್ನಕೇಶವಯ್ಯಂಗಾರ್ (ದರ್ಪಣ (ಮು.)ಪೀಠಿಕೆ) ಮೊದಲಾದ ವಿದ್ವಾಂಸರು ಈ ಅಭಿಪ್ರಾಯಕ್ಕೆ ಒತ್ತುಕೊಟ್ಟಿದ್ದಾರೆ. ಎ. ವೆಂಕಟಸುಬ್ಬಯ್ಯ (ಕೆ. ಕ. ಕಾ. ವಿ.) ಪಂಡಿತ ಶ್ರೀನಿವಾಸ ರಂಗಾಚಾರ್ಯ (ಕ. ಸ. ಪ. 17–1), ಡಾ. ಶಾಮಾಶಾಸ್ತ್ರಿ (ಕ. ಸಾ. ಪ. 18–1) ಮೊದಲಾದ ವಿದ್ವಾಂಸರು ಕೇಶಿರಾಜ ಜೈನನಲ್ಲವೆಂದೂ ವೈದಿಕನೇ ಆಗಿರಬೇಕೆಂದೂ ವಾದಿಸಿದ್ದಾರೆ. ಆದರೆ ಸಾಹಿತ್ಯ ಚರಿತ್ರೆಯಲ್ಲಿ ಸುಮನೋಬಾಣ, ಮಲ್ಲಿಕಾರ್ಜುನರಂತೆ ಕೇಶಿರಾಜನೂ ಜೈನನೆಂದೇ ಪ್ರಖ್ಯಾತನಾಗಿದ್ದಾನೆ.

ಕೇಶಿರಾಜನ ಮತವನ್ನು ಖಚಿತವಾಗಿ ನಿರ್ಣಯಿಸುವುದು ಕಷ್ಟಸಾಧ್ಯ. ಆದರೂ ವಾದಕ್ಕಾಗಿ ಮುಂಡಿಸಿದ ಕೆಲವು ವಿಚಾರಗಳು ಪರಿಶೀಲನೆಗರ್ಹವಾಗಿವೆ :

1. ಕೇಶಿರಾಜನ ಕೌಟುಂಬಿಕ ಪರಿಸರ
2. ದರ್ಪಣದಲ್ಲಿ ಪಾಣಿನಿಯ ಅನುಸರಣೆ

3. ಗ್ರಂಥಾರಂಭದಲ್ಲಿಯ ಸರಸ್ವತಿಯ ಸ್ತುತಿ
4. 'ಶಬ್ದದ್ರವ್ಯಂ, ಶ್ವೇತಂ' ಎಂಬ ಕಲ್ಪನೆ
5. ವ್ಯಾಕರಣದ ಫಲವಿಚಾರ
6. ಕೇಶಿರಾಜನಿಗೆ ವೇದದ ಕುರಿತಾಗಿರುವ ಗೌರವ ಭಾವನೆ.

ಜನ್ನನ ಪದ್ಯವನ್ನು (ಅನಂತನಾಥ ಪುರಾಣ 1-34) ಆರ್. ನರಸಿಂಹಾಚಾರ್ಯರು ಅರ್ಥಯಿಸಿದ ರೀತಿ ಗ್ರಾಹ್ಯವಲ್ಲವೆಂದೂ ಜನ್ನ ಸುಮನೋಬಾಣನ ಶಿಷ್ಯನಲ್ಲದೆ ಮಗನಲ್ಲವೆಂದೂ ಹಿಂದೆಯೇ ಸ್ಪಷ್ಟೀಕರಿಸಲಾಗಿದೆ. ಹಾಗಾಗಿ ಜನ್ನ ಕೇಶಿರಾಜನ ಸೋದರಮಾವನೆಂಬ ಮಾತು ಬಿದ್ದುಹೋಗುತ್ತದೆ. ಮಲ್ಲಿಕಾರ್ಜುನನನ್ನು ಜೈನನೆನ್ನಲು ಸೂಕ್ತಿಸುಧಾರ್ಣವದಲ್ಲಿ ಯಾವುದೇ ಆಂತರ ಪ್ರಮಾಣಗಳಿಲ್ಲವೆಂಬುದನ್ನು ಎನ್. ಅನಂತ ರಂಗಾಚಾರ್ ಸ್ಪಷ್ಟೀಕರಿಸಿದ್ದಾರೆ (ಸೂಕ್ತಿ ಸುಧಾರ್ಣವ-ಮುನ್ನುಡಿ ಪು. 13-15). ಇದರಿಂದ ಕೇಶಿರಾಜನ ಮಾತಾಮಹ ಮತ್ತು ತಂದೆ ಜೈನರೆನ್ನಲು ಆಧಾರಗಳು ಸಾಲದು ಎಂದಂತಾಯಿತು.

ಕೇಶಿರಾಜ ವೈದಿಕ ಮತಾವಲಂಬಿಯೆನ್ನುವ ಪಕ್ಷದವರು ದರ್ಪಣದಲ್ಲಿ ಅಷ್ಟಾಧ್ಯಾಯಿಯ ಕೆಲವು ತತ್ವಗಳನ್ನು ಸ್ವೀಕರಿಸಲಾಗಿದೆಯೆಂದು ಹೇಳಿದ್ದಾರೆ. ಆದರೆ ಈ ಪ್ರಮಾಣ ಸಾಧಕವಾಗದು. ಸ್ಮೃತಿ ಭೂಷಣಕರ್ತರು ಜೈನರೆಂಬುದು ಖಚಿತವಷ್ಟೆ. ಆ ಕೃತಿಗಳಲ್ಲಿ ಜೈನೇಂದ್ರ ಮತ್ತು ಶಾಕಟಾಯನ ವ್ಯಾಕರಣಗಳಿಗಿಂತ ಹೆಚ್ಚಾಗಿ ಅಷ್ಟಾಧ್ಯಾಯಿಯನ್ನು ಅನುಸರಿಸಲಾಗಿದೆಯೆಂಬುದು ಗಮನಾರ್ಹ.

ದರ್ಪಣದ ಮೊದಲಲ್ಲಿ ಬರುವ ವಾಗ್ದೇವಿಯ ಸ್ತುತಿ ಜೈನಪರವಾಗಿಲ್ಲವೆಂಬುದು ಕೇಶಿರಾಜ ಅಜೈನನೆನ್ನುವುದಕ್ಕೆ ಮತ್ತೊಂದು ಸಾಧಕಾಂಶ. ಕಾವ್ಯಾವಲೋಕನ, ಭೂಷಣ, ಶಾಸನಗಳ ಸರಸ್ವತೀ ಕಲ್ಪನೆಗಿಂತ ದರ್ಪಣದ್ದು ಭಿನ್ನವಾಗಿದೆಯೆಂಬುದು ನಿರ್ವಿವಾದ. "ಪ್ರವೃತ್ತಾ ಯನ್ಮುಖಾದ್ದೇವೀ ಸರ್ವಭಾಷಾ ಸರಸ್ವತೀ" (ಭೂಷಣ-ಪ್ರಾರ್ಥನಾ ಶ್ಲೋಕ), ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತೆ (ಶಾಸನ-ಪ್ರಾರ್ಥನಾ ಶ್ಲೋಕ) ಎಂಬಲ್ಲಿನ ಕಲ್ಪನೆ ಪೂರ್ಣವಾಗಿ ಜೈನಮತೀಯವಾಗಿದೆ. ಪಂಪನ "ಪರಮಜಿನೇಂದ್ರವಾಣಿಯೆ ಸರಸ್ವತಿ" (ಆದಿಪುರಾಣ 1-9) ಎಂಬ ಮಾತಿನ ಅಭಿಪ್ರಾಯವೆ ಇಲ್ಲೂ ಧ್ವನಿಸಿದೆ. ಕಾವ್ಯಾವಲೋಕನದ ಸರಸ್ವತಿಯ ಸ್ತುತಿ (ಪದ್ಯ 2) ಇದಕ್ಕಿಂತ ಭಿನ್ನವೆನಿಸಿದರೂ ಅದು ಜೈನಮಾರ್ಗವನ್ನು ಬಿಟ್ಟಿಲ್ಲವೆನ್ನುವುದು ಸ್ಪಷ್ಟ. ದರ್ಪಣದಲ್ಲಿ "ಶ್ರೋತ್ರೇಂದ್ರಿಯವೊಂದರೊಳೆ ಶಬ್ದಮುಖದಿಂ ಅಭಿವ್ಯಕ್ತಿಯಂ ಮಾಳ್ಪ" ನಿರ್ಮಳ ಮೂರ್ತಿಯಾದ ವಾಗ್ದೇವಿಯನ್ನು ಸ್ತುತಿಸಲಾಗಿದೆ. ಇದು ಮೇಲಿನ ಜೈನ ಕಲ್ಪನೆಗಿಂತ ತೀರ ವ್ಯತಿರಿಕ್ತವಾಗಿದೆ. ಆದರೆ ಕೇಶಿರಾಜನನ್ನು ಜೈನನೆನ್ನುವವರಿಗೆ ಇದು ಬಾಧಕವಲ್ಲ. ಏಕೆಂದರೆ ರಾಮಚಂದ್ರ ಚರಿತ ಪುರಾಣ (1-6), ಲೀಲಾವತೀ ಪ್ರಬಂಧ (1-6), ಧರ್ಮಾಮೃತ (1-8) ಮೊದಲಾದ ಕೃತಿಗಳಲ್ಲಿ ಸರಸ್ವತಿಯ

ಸಾಕಾರರೂಪದ ಸ್ತುತಿಯಿದೆ. ವಾದ ಹೀಗಿದ್ದರೂ ದರ್ಪಣದ ಸರಸ್ವತೀ ಸ್ತುತಿ ಅವನು ಜೈನನೆಂದು ಹೇಳುವಲ್ಲಿ ಬಾಧಕವಾಗದೆಂದು ಹೇಳಬಹುದಲ್ಲದೆ ಸಾಧಕವೆನ್ನುವಂತಿಲ್ಲ.

ಕೇಶಿರಾಜನು ಜೈನನೆಂದು ವಾದಿಸುವವರು ಪ್ರಧಾನವಾಗಿ ಕೊಡುವ ಆಧಾರ "ಶಬ್ದದ್ರವ್ಯಂ ಶ್ವೇತಂ" ಎಂಬ ದರ್ಪಣದ ಹೇಳಿಕೆಯುನ್ನಾಗಿದೆ (ಸೂ. 9). ನಿಟ್ಟೂರ ನಂಜಯ್ಯನು "ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇಳ್ದಪರ್" (ಸೂ. 9ರ ವಿಚಾರು) ಎಂದು ಹೇಳಿದುದನ್ನು ಪ್ರಮಾಣವಾಗಿಸಿ ಕೇಶಿರಾಜನನ್ನು ಜೈನನೆಂದು ವಾದಿಸಲಾಗಿದೆ. ಶಬ್ದಕ್ಕೆ ದ್ರವ್ಯತ್ವವನ್ನು ಜೈನೇತರರೂ–ವೈದಿಕರೂ ಹೇಳುವುದನ್ನು ಗಮನಿಸದೆ ಬಂದ ನಿರ್ಣಯುವಿದು. ಪೂರ್ವ ಮೀಮಾಂಸಕರೂ, ಕುಮಾರಿಲಭಟ್ಟ ಮೊದಲಾದವರೂ ಶಬ್ದಕ್ಕೆ ದ್ರವ್ಯತ್ವವನ್ನು ಹೇಳಿದ್ದಾರೆಂಬುದು 'ನ್ಯಾಯ ಲೀಲಾವತಿ'ಯಿಂದ ತಿಳಿದು ಬರುತ್ತದೆ :

> "ಶಬ್ದೋದ್ರವ್ಯಮಿತಿ ಭಟ್ಟಮೀಮಾಂಸಕಾ ಆಹುಃ । ಅತ್ರ
> ಅನುಮಾನಂ ಪ್ರಮಾಣಂ । ಶಬ್ದೋದ್ರವ್ಯಂ ಸಾಕ್ಷಾದಿಂದ್ರಿಯ ಸಂಬಂಧವೇ
> ದ್ಯತ್ವಾತ್ ಘಟವತ್ ಇತಿ" (ನ್ಯಾಯಕೋಶ. ಪು. 861)

ಶ್ರೀಮನ್ನಿಗಮಾಂತ ಮಹಾದೇಶಿಕಾಚಾರ್ಯ ಪ್ರಣೀತವಾದ 'ನ್ಯಾಯ ಸಿದ್ಧಾಂಜನ' ದಲ್ಲೂ ಶ್ರೀಮತ್ ರಂಗರಾಮಾನುಜ ಸಂಯಮೀಂದ್ರ ಪ್ರಣೀತವಾದ 'ಪ್ರತಿತಂತ್ರ ಪ್ರಕ್ರಿಯಾ'ದಲ್ಲೂ ಶಬ್ದಕ್ಕೆ ದ್ರವ್ಯತ್ವವನ್ನು ಹೇಳಲಾಗಿದೆ.

ಮೀಮಾಂಸಕರು ಧ್ವನಿ (Sound) ಎಂಬರ್ಥದಲ್ಲಿ 'ಶಬ್ದ' ಎಂಬ ಸಂಜ್ಞೆ ಯನ್ನು ಬಳಸುತ್ತಾರೆಂಬುದೂ ಮುಖ್ಯ (EBP.P 154). ಹಾಗಾಗಿ ಜೈನರು ಮಾತ್ರ ಶಬ್ದಕ್ಕೆ ದ್ರವ್ಯತ್ವವನ್ನು ಕಲ್ಪಿಸುತ್ತಾರೆನ್ನುವುದು ಹುರುಳಿಲ್ಲದ ಮಾತು. ಈ ಕಲ್ಪನೆಯ ಮೂಲವೆಲ್ಲೇ ಇರಲಿ, ಕೇಶಿರಾಜನಿಗಿಂತ ಸಾಕಷ್ಟು ಹಿಂದೆ ಜೈನೇತರರಲ್ಲಿ ಈ ಕಲ್ಪನೆ ಮೂಡಿದ್ದಿತು ಅಥವಾ ಸ್ವೀಕೃತವಾಗಿತ್ತು ಎಂಬುದು ಪ್ರಧಾನ. ಹಾಗಾಗಿ ಕೇಶಿರಾಜ "ಶಬ್ದದ್ರವ್ಯಂ" ಎಂದುದಕ್ಕೆ ಅವನು ಅನುಸರಿಸಿದ ಸಂಪ್ರದಾಯುವೇ ಕಾರಣವೆಂದು ಹೇಳಬೇಕಾಗುತ್ತದೆ.

ಶಬ್ದವನ್ನು ದ್ರವ್ಯವೆಂದ ಬಳಿಕ ಅದನ್ನು ಶ್ವೇತವೆಂದೂ ಹೇಳಲಾಗಿದೆ. ಈ ಕಲ್ಪನೆ ನೇರವಾಗಿ ಜೈನರಲ್ಲಾಗಲೀ, ವೈದಿಕರಲ್ಲಾಗಲೀ ಗೋಚರಿಸುವುದಿಲ್ಲ. ಜೈನಪಕ್ಷ ದವರು ಧವಲಾ, ಜಯುಧವಲಾ ಮುಂತಾದ ಶಬ್ದಗಳ ಬಳಕೆಯುನ್ನು ಎಳೆದುತಂದು ಇದನ್ನೂ ಅರ್ಥಯಿಸುವ ಪ್ರಯತ್ನ ಮಾಡಿದ್ದಾರೆ (ಕ. ಸಾ. ಪ. 18–1). ಆದರೆ ಆದೇ ರೀತಿಯಲ್ಲಿ ವೈದಿಕರಲ್ಲೂ ಸರಸ್ವತಿಯನ್ನು ಶುಭ್ರವರ್ಣೆಯಾಗಿ ನಿರೂಪಿಸುತ್ತ ಬಂದುದಕ್ಕೆ ವೇದವೆ ಸಾಕ್ಷಿಯಾಗಿದೆ. ಋಗ್ವೇದದ 7ನೆಯ ಮಂಡಳ ಸೂಕ್ತ 96ರಲ್ಲಿ ಸರಸ್ವತಿಯನ್ನೂ 'ಶುಭ್ರೇ' ಎನ್ನಲಾಗಿದೆ. ದಂಡಿ ತನ್ನ ಕಾವ್ಯಾದರ್ಶದಲ್ಲಿ 'ಸರ್ವಶುಕ್ಲಾ

ಸರಸ್ವತೀ' ಎಂದು ಹೇಳಿದ್ದಾನೆ. ಅಜ್ಞಾತ ಕವಿಯೊಬ್ಬನ ಕೆಳಗಿನ ನಿರೂಪಣೆ ಅತ್ಯಂತ ಪ್ರಸಿದ್ಧವಾದುದು :

ಯಾ ಕುಂದೇಂದುತುಷಾರಹಾರಧವಲಾ ಯಾ ಶುಭ್ರವಸ್ತ್ರಾವೃತಾ
........................ಯಾ ಶ್ವೇತ ಪದ್ಮಾಸನಾ................

ಹಾಗಿರುವಾಗ ಶಬ್ದದ್ರವ್ಯವನ್ನು ಶ್ವೇತವೆಂದುದರಿಂದ ಕೇಶಿರಾಜ ಜೈನನೆಂದು ಸಾಧಿಸಲು ಬಾರದು. ಆತನು ಅನುಸರಿಸಿದ ಸಂಪ್ರದಾಯವೇ ಈ ಕಲ್ಪನೆಗೂ ಕಾರಣವೆಂದು ಹೇಳಲೆಡೆಯಿದೆ.

ವ್ಯಾಕರಣದ ಫಲವನ್ನು ಹೇಳುವ ದರ್ಪಣದ ಸೂತ್ರ (10) ಪ್ರಭಾಚಂದ್ರಾಚಾರ್ಯನು ಶಾಕಟಾಯನ ವ್ಯಾಕರಣಕ್ಕೆ ಬರೆದ 'ಅಮೋಘವೃತ್ತಿನ್ಯಾಸ'ದಲ್ಲಿ ಬರುವ ಕೆಳಗಿನ ಶ್ಲೋಕದ ಭಾಷಾಂತರವಾಗಿದೆ.

''ವ್ಯಾಕರಣಾತ್ ಪದಸಿದ್ಧಿ : ಪದಸಿದ್ಧೇರರ್ಥನಿರ್ಣಯೋ ಭವತಿ
ಅರ್ಥಾತ್ ತತ್ತ್ವಜ್ಞಾನಮ್ ತತ್ತ್ವಜ್ಞಾನಾತ್ ಪರಂ ಶ್ರೇಯಃ ''

ಕೇಶಿರಾಜನ ಅನುವಾದ ಆತನು ಆ ಗ್ರಂಥವನ್ನು ನೋಡಿರುವುದಕ್ಕೆ ಪ್ರಮಾಣವಾಗಬಹುದಲ್ಲದೆ ಆತನ ಜೈನತ್ವವನ್ನು ಸ್ಥಾಪಿಸಲು ಸಮರ್ಥವಾಗದು.

ಕೇಶಿರಾಜನನ್ನು ಜೈನನೆನ್ನಲು ಉಳಿದ ಸಬಲ ಆಧಾರಗಳೇನಾದರೂ ಇದ್ದರೆ ಮೇಲಿನವುಗಳನ್ನು ಪೂರಕವಾಗಿ ಹೇಳಬಹುದಲ್ಲದೆ ಉಳಿದ ಪ್ರಮಾಣಗಳ ಅಭಾವದಲ್ಲಿ ಕೇವಲ ಇವುಗಳಿಂದ ಜೈನನೆಂಬ ಸಿದ್ಧಾಂತದ ಸ್ಥಾಪನೆ ಸಾಧ್ಯವಾಗದು.

ಕೇಶಿರಾಜನಿಗೆ ವೇದದ ಬಗ್ಗೆ ಗೌರವಭಾವವಿದೆಯೆನ್ನುವುದಕ್ಕೆ ಅಂತರ ಪ್ರಮಾಣಗಳಿವೆ. ''ಕಲಾಪ್ರೌಢಿಯೊಳಬ್ಜಸಂಭವನೆ ಕರ್ತಾರಂ, ಅಖಿಲ ಶಾಸ್ತ್ರಾಮ್ನಾಯಮಂ ಕೂಡೆ ಬಲ್ಲವರಿಲ್ಲೆನ್ನದಿರೆ, ಒರ್ವನಿಂದಭಿನವ ಬ್ರಹ್ಮಂಗಡ''(ಆಖ್ಯಾತ ಪ್ರಕರಣದ ಕೊನೆಯ ಪದ್ಯ). ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು '(ಸೂ.261)—ಈ ಮಾತುಗಳು ವಿಚಾರಿಸತಕ್ಕುವಾಗಿವೆ. ಅಂತೆಯೇ ''ವೇದಂಗಳ್ ಪ್ರಮಾಣಂ'' (ಸೂತ್ರ 155ರ ಪ್ರಯೋಗ) ಎಂಬ ಪ್ರಯೋಗವಾಕ್ಯವೂ ಅವನ ದೃಷ್ಟಿಯನ್ನು ಸೂಚಿಸುತ್ತದೆ. ಆದರೆ ಇದಿಷ್ಟರಿಂದಲೇ ಸಮನ್ವಯ ಯುಗದಲ್ಲಿದ್ದ ಆತನ ಮತವನ್ನು ನಿರ್ಧರಿಸಲು ಬರುವಂತಿಲ್ಲ. ಒಟ್ಟಿನಲ್ಲಿ ಮೇಲಿನಂತೆ ವಾದಗಳನ್ನೂ ಪ್ರಮಾಣಗಳನ್ನೂ ವಿವೇಚಿಸಿದಾಗ ಕೇಶಿರಾಜ ಜೈನನೆಂದು ಸಾಧಿಸುವುದಾಗಲೀ ವೈದಿಕನೆಂದು ಸಿದ್ಧಾಂತಿಸುವುದಾಗಲೀ ಕಷ್ಟಸಾಧ್ಯವೆಂದೇ ಹೇಳಬೇಕಾಗುತ್ತದೆ. ಆದರೆ ಇರುವ ಪ್ರಮಾಣಗಳು—ಕೇಶಿರಾಜ ವೈದಿಕ ಧರ್ಮಾವಲಂಬಿಯೆನ್ನುವುದರ ಕಡೆಗಿವೆಯೆಂಬುದು ಖಚಿತ.

## ವೃತ್ತಿ :

ಸಂಸ್ಕೃತದ ಪ್ರಕ್ರಿಯಾ ಗ್ರಂಥಗಳನ್ನು ಮತ್ತು ಭೂಷಣವನ್ನನುಸರಿಸಿ ಕೇಶಿರಾಜ ತನ್ನ ಸೂತ್ರಗಳಿಗೆ ವೃತ್ತಿಯನ್ನು ಬರೆದಿದ್ದಾನೆ. ತನ್ನದು ಅರ್ಥವೃತ್ತಿಯೆಂದು ಸೂತ್ರ ದಲ್ಲಿ (6) ಹೇಳಿಕೊಂಡರೆ 'ತಾತ್ಪಯಾರ್ಥ' ವೆಂದು ವೃತ್ತಿಯಲ್ಲಿ ಹೇಳಿಕೊಂಡಿದ್ದಾನೆ. ಹಾಗಾಗಿ 'ದರ್ಪಣದ ವೃತ್ತಿ ಕೇಶಿರಾಜನದಲ್ಲ (ಕ. ಸಾ. ಪ. 26-1)' ಎನ್ನಲು ಬರುವು ದಿಲ್ಲ. ಆದರೆ ದರ್ಪಣದ ವೃತ್ತಿಗೆ ಪಾಠ ಸಮಸ್ಯೆಗಳು ಧಾರಾಳವಾಗಿವೆಯೆಂಬುದು ಸತ್ಯ. ಲಿಂಗಣಾರಾಧ್ಯನ ವೃತ್ತಿ ಕೇಶಿರಾಜನ ವೃತ್ತಿಯನ್ನು ಆಧಾರವಾಗಿಟ್ಟುಕೊಂಡಂತಿದೆ. ಕೇಶಿರಾಜನ ವೃತ್ತಿಯಲ್ಲೇ ಅನ್ವಯ ವೃತ್ತಿ ಮತ್ತು ಅರ್ಥವೃತ್ತಿಯೆಂಬ ಎರಡು ಪ್ರಭೇದ ಗಳಿರುವುದಾಗಿಯೂ ಅನ್ವಯ ವೃತ್ತಿಯಲ್ಲಿ ಸಂಗ್ರಹ ವೃತ್ತಿ, ವಿಂಶ್ರಣವೃತ್ತಿ, ವ್ಯಾಖ್ಯಾನ ವೃತ್ತಿಯೆಂಬ ಮೂರು ಬಗೆಯದಾದ ವೃತ್ತಿಗಳಿರುವುದಾಗಿಯೂ ಎಂ. ಎಂ. ಕಲಬುರ್ಗಿ ಹೇಳಿದ್ದಾರೆ (ಕ. ಭಾ. 1-1). ಮೇಲಿನ 'ಸೂತ್ರ 6' ಎಲ್ಲ ಪ್ರತಿಗಳಲ್ಲಿರುವುದರಿಂದಲೂ 'ತಾತ್ಪರ್ಯಾರ್ಥ' ಎಂಬುದು ಕೇಶಿರಾಜನ ದೃಷ್ಟಿಯಾಗಿರುವುದು ಸಂಭವನೀಯವಾಗಿರು ವುದರಿಂದಲೂ ಆತ ವೃತ್ತಿಯನ್ನು ಬರೆದಿರಬೇಕೆಂದೇ ತೀರ್ಮಾನಿಸಬೇಕಾಗುತ್ತದೆ. ಪಂಡಿತರಾದ ಎಷ್ಟೋ ಪ್ರತಿಕಾರರು ಮೂಲವೃತ್ತಿಯನ್ನು ತಮಗೆ ಬೇಕುಬೇಕಾದಂತೆ ಮಾರ್ಪಡಿಸಿಕೊಂಡಿರಲೆಡೆಯಿದೆ. ಆದರಿಂದಾಗಿಯೇ ಪಾಠಸಮಸ್ಯೆಗಳು ಹುಟ್ಟಿಕೊಂಡಿವೆ ಯೆಂದು ಹೇಳಬಹುದು.

## ಪ್ರಯೋಗ

ದರ್ಪಣದ ಪ್ರಯೋಗಗಳು ವ್ಯಾಕರಣದ ಅಭ್ಯಾಸಕ್ಕೆ ರಸದ ಲೇಪವನ್ನು ಬಳಿಯುತ್ತವೆ. ಗಜಗ, ಗುಣನಂದಿ, ಅಸಗ ಮೊದಲಾದ ಕವಿಶ್ರೇಷ್ಠರ ಸುಮಾರ್ಗವನ್ನು ಲಕ್ಷ್ಯವಾಗಿ ಎತ್ತಿಕೊಳ್ಳುವಲ್ಲಿ ಕೇಶಿರಾಜನ ಸಹೃದಯತೆ, ಭಾವುಕತನ, ರುಚಿಸಂಸ್ಕಾರಗಳು ಮಿಂಗಿಲು ಮುಟ್ಟಿವೆ. ಒಂದು ವ್ಯಾಕರಣ ಪ್ರಕ್ರಿಯೆಗೆ ಹಲವಾರು ಲಕ್ಷ್ಯಗಳನ್ನು ಕೊಡು ವಲ್ಲಿ ಖಚಿತತೆಯೂ, ಪ್ರಯೋಗ ವಾಕ್ಯ ಇಲ್ಲವೆ ಪದ್ಯವನ್ನು ಸ್ವೀಕರಿಸುವಲ್ಲಿ ರಸಿಕತೆಯೂ ಹೊರಹೊಮ್ಮಿವೆ.

ಪ್ರಯೋಗದಲ್ಲೂ ಪಾಠಸಮಸ್ಯೆಗಳಿವೆ. ಒಂದೇ ಪ್ರಯೋಗ ಪದ್ಯ ಕೆಲವು ಪ್ರತಿ ಗಳಲ್ಲಿ ಇಡಿಯಾಗಿಯೂ ಕೆಲವು ಪ್ರತಿಗಳಲ್ಲಿ ಆಂಶಿಕವಾಗಿಯೂ ಕಾಣಿಸಿಕೊಳ್ಳುತ್ತವೆ. ಭಾಗಶಃ ಉದಾಹೃತವಾಗಿರುವ ಪದ್ಯಗಳೇ ಎಲ್ಲ ಮಾತೃಕೆಗಳಲ್ಲೂ ಅಧಿಕ ಸಂಖ್ಯೆಯಲ್ಲಿರು ವುದರಿಂದ ಕೇಶಿರಾಜನೇ ಪದ್ಯಭಾಗಗಳನ್ನು ಉದಾಹರಿಸಿದನೇನೋ ಎಂಬ ಸಂದೇಹ ತಲೆದೋರುತ್ತದೆ. "ಒಟ್ಟಿನಲ್ಲಿ ವೃತ್ತಿ ಪ್ರಯೋಗಗಳ ಪಾಠ ಅನೇಕ ಸಮಸ್ಯೆಗಳಿಂದ ತುಂಬಿದೆಯೆಂಬುದು ಸ್ಪಷ್ಟವಾಗಿದೆ. ಅವು ಅತಿ ಜಟಿಲವೂ ಭ್ರಾಂತಿಕಾರಕವೂ ಆಗಿರುವು ದಲ್ಲದೆ ಎಷ್ಟೋ ವೇಳೆ ಅಪರಿಹಾರ್ಯವಾಗಿರುವಂತೆಯೂ ತೋರುತ್ತವೆ" (ದರ್ಪಣ.

ಪ್ರಸ್ತಾವನೆ. ಪು. 24) ಎಂಬ ಡಿ. ಎಲ್. ನರಸಿಂಹಾಚಾರ್ಯರ ಹೇಳಿಕೆ ಗಮನಾರ್ಹವಾಗಿದೆ.

'ಶಬ್ದಮಣಿದರ್ಪಣ'ವೆಂಬ ಹೆಸರೂ ಸಂಸ್ಕೃತ ವ್ಯಾಕರಣಗಳ ಹೆಸರುಗಳೊಂದಿಗೆ ಹೋಲಿಸಿದಾಗ ವೈಶಿಷ್ಟ್ಯಪೂರ್ಣವಾಗಿ ಗೋಚರಿಸುತ್ತದೆ. ವ್ಯಾಕರಣದ ಬಗ್ಗೆ ಗ್ರಂಥಕಾರನ ದೃಷ್ಟಿಯೂ ಇದರಿಂದ ಖಚಿತವಾಗುತ್ತದೆ.

ಕೇಶಿರಾಜನ ಮತ್ತೊಂದು ವಿಶಿಷ್ಟಗುಣ ದರ್ಪಣದಲ್ಲಿ ಗಮನಾರ್ಹವಾಗಿ ಎದ್ದು ತೋರುತ್ತದೆ. ತನ್ನ ಹಿಂದಿನ ವೈಯಾಕರಣರು ನಿರೂಪಿಸಿದ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದಲ್ಲಿ ಅದನ್ನವನು ಪ್ರತ್ಯೇಕವಾಗಿ ಒತ್ತಿಹೇಳುತ್ತಾನೆ. ಅಂತೆಯೇ ಪ್ರಾಚೀನರು ಹೇಳದಿರುವ ವಿಷಯವನ್ನು ಪ್ರಸ್ತಾವಿಸುವಲ್ಲಿಯೂ ಆ ಕಡೆಗೆ ಗಮನ ಸೆಳೆಯುತ್ತಾನೆ. ಕೆಳಗಿನ ವಿಚಾರಗಳು ಈ ದೃಷ್ಟಿಯಿಂದ ಗಮನಾರ್ಹ.

1. ಕ್ಷಳ ವಿಚಾರ
2. ಎ ಒ ವಿಚಾರ
3. ಮಹಾಪ್ರಾಣಗಳು
4. ಱ ೞ ಘಟಿತ ಶಬ್ದಗಳು
5. ಸಮಸಂಸ್ಕೃತ+ಅಚ್ಚಗನ್ನಡ ಸಮಾಸ
6. ಮೂರು ಲಿಂಗಗಳು
7. ಎರಡು ವಚನಗಳು
8. ಗಮಕ ಸಮಾಸ

(ಇವೆಲ್ಲವುಗಳ ವಿವರಣೆ ಆಯಾ ಆಧ್ಯಾಯಗಳಲ್ಲಿ ಬರುತ್ತದೆ)

ಕ್ಷಳದ ಬಗ್ಗೆ ಹಿಂದಿನ ವೈಯಾಕರಣರು ಮೌನಧರಿಸಿದ್ದುದರಿಂದ ಆದರ ಕುರಿತಾಗಿ ಖಚಿತವಾದ ವಿವರಣೆಯನ್ನು ಕೊಟ್ಟುದಲ್ಲದೆ "ಪೇೞ್ದನದಱಿಂ ಕ್ಷಳಮ" (ಸೂ. 15) ಎಂದು ಸ್ಪಷ್ಟೀಕರಿಸುತ್ತಾನೆ.

ಕನ್ನಡದಲ್ಲಿ ಏ ಓ ಗಳಿಗೆ ಹ್ರಸ್ವ ರೂಪಗಳು ಕ್ವಚಿತ್ತಾಗಿವೆಯೆಂಬ ವಿಚಾರ ಸ್ಮೃತಿಯಲ್ಲಿ ಪರೋಕ್ಷವಾಗಿ ಮತ್ತು ಭೂಷಣದಲ್ಲಿ ನೇರವಾಗಿ ಪ್ರಸ್ತಾವಿತವಾಗಿವೆ. ದರ್ಪಣಕಾರನಿಗೆ ಎ, ಒ ಗಳ ಬಗ್ಗೆ ಯಾವ ಸಂದೇಹವೂ ಇಲ್ಲ. ಅವನ ಪ್ರಕಾರ ಎ, ಏ, ಒ, ಓ "ಕನ್ನಡದೊಳ್ ಸ್ವಭಾವದಿಂದೊಳವು ಸವರ್ಣಮಪ್ಪುವು" (ಸೂ. 18).

ಸ್ಮೃತಿ ಭೂಷಣಗಳ ಪ್ರಕಾರ ಕನ್ನಡದಲ್ಲಿ (ಸಹಜವಾಗಿಲ್ಲದ) ಮಹಾಪ್ರಾಣಗಳು (ವರ್ಗದ್ವಿತೀಯ ಚತುರ್ಥಗಳು) ಸಂಖ್ಯಾನುಕರಣಾದಿಗಳಲ್ಲಿ ಮಾತ್ರ ಬಳಕೆಗೊಂಡರೆ

ದರ್ಪಣಕಾರನ ಪ್ರಕಾರ "ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ಣಾಟ ಭಾಷೆಯೊಳ್ ಕೆಲವು ನಿಜೋಜ್ವಳವಾಗಿ" (ಸೂ. 25).

ಸಮಸಂಸ್ಕೃತಗಳನ್ನು ದೇಶೀಯ ಪದಗಳೊಂದಿಗೆ ಕೂಡಿಸಿ ಸಮಾಸವೆಸಗಬಹುದೆಂದು ಸ್ಮೃತಿಭೂಷಣಗಳು ಒಮ್ಮತದ ಅಭಿಪ್ರಾಯ ತಾಳಿವೆ (ಸ್ಮೃತಿ: ಸೂ. 63 ; ಭೂಷಣ ಸೂ. 132) ಆದರೆ ದರ್ಪಣಕಾರ "ಆ ಸಮಸಂಸ್ಕೃತ ಪದಂಗಳಂ ಅಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು" (ಸೂ. 90ರ ಪ್ರಯೋಗ ವಿವರಣೆ) ಎಂದು ಅದನ್ನು ನಿಷೇಧಿಸುತ್ತಾನೆ.

ಸಂಸ್ಕೃತದಲ್ಲಿರುವಂತೆ ಒಂಭತ್ತು ವಿಧವಾದ ಲಿಂಗಗಳು (ಕಾವ್ಯಮಾರ್ಗದಲ್ಲಿ) ಗೋಚರಿಸಿದರೂ ಸಹಜವಾಗಿರುವುದು ಕನ್ನಡದಲ್ಲಿ 'ಪುಂಸ್ತ್ರೀನಪ' ಎಂಬ ಮೂರೇ ಲಿಂಗಗಳು ಎಂಬುದು ದರ್ಪಣಕಾರನ ಸ್ಪಷ್ಟೀಕರಣ (ಸೂ. 101) ಇಂಥ ವಿವರಣೆ ಸ್ಮೃತಿ ಭೂಷಣಗಳಲ್ಲಿಲ್ಲ.

ಕವಿರಾಜಮಾರ್ಗದ ಪ್ರಕಾರ ವಚನಗಳೆರಡು. ಆದರೆ ಸ್ಮೃತಿಭೂಷಣಗಳ ಪ್ರಕಾರ ಮೂರು ವಚನಗಳು. ದರ್ಪಣಕಾರನ ಅಭಿಮತದಂತೆ "ಸ್ವೀಕಾರಂ ಕನ್ನಡದೊಳಗೇಕ ಬಹುತ್ವಂ" (ಏಕ ಬಹುತ್ವಂಗಳ್ ಕನ್ನಡದೊಳ್ ಆತಿ ವ್ಯಕ್ತಂಗಳ್) ಆತಿ ವ್ಯಕ್ತವಾಗದ ದ್ವಿವಚನವನ್ನು ಔಚಿತ್ಯವರಿತು ತಿಳಿದುಕೊಳ್ಳಬೇಕು (ಸೂ. 104).

ಸ್ಮೃತಿಕಾರನ ದೃಷ್ಟಿಯಲ್ಲಿ 'ಸಮಾಸ'ಕ್ಕೆ ವಿರುದ್ಧವಾದುದು 'ಗಮಕ '(ಪದ್ಯ 200, 201). ಆದರೆ ದರ್ಪಣಕಾರನಿಗೆ 'ಗಮಕ'ವೊಂದು ಸಮಾಸ (ಸೂ. 179).

ಹೀಗೆ ತನ್ನ ಹಿಂದಿನ ವಿಚಾರಧಾರೆಯನ್ನು ಸಾಕಷ್ಟು ವಿಮರ್ಶೆಗೆ ಒಳಪಡಿಸಿ ಕೇಶಿ ರಾಜ ಮುಂದುವರಿದಿರುವನೆಂಬುದು ನಿಸ್ಸಂದೇಹ. ಹಾಗೆ ಮುಂದಡಿಯಿಡುವಲ್ಲಿ ಕೆಲವೊಮ್ಮೆ ಎಡವಿರುವುದೂ ಸತ್ಯ.

## ಕರ್ನಾಟಕ ಶಬ್ದಾನುಶಾಸನ

ಭಟ್ಟಾಕಳಂಕದೇವನ ಕೃತಿ ಕರ್ಣಾಟಕ ಶಬ್ದಾನುಶಾಸನ ಹಳೆಗನ್ನಡ ವ್ಯಾಕರಣ ಗಳಲ್ಲಿ ಅತ್ಯಂತ ಪ್ರೌಢಕೃತಿಯಿದು. ಇದರಲ್ಲಿ ನಾಲ್ಕು ಪಾದಗಳಿದ್ದು ಒಟ್ಟು 592 ಸೂತ್ರಗಳಿವೆ. ಸೂತ್ರಗಳಿಗೆ ಭಾಷಾಮಂಜರಿಯೆಂಬ ವೃತ್ತಿ ಮತ್ತು ಮಂಜರೀಮಕರಂದ ವೆಂಬ ವ್ಯಾಖ್ಯಾನವೂ ಉಂಟು. ಪ್ರಯೋಗಗಳಾಗಿ ಬಿಡಿಮಾತುಗಳೇ ಹೆಚ್ಚಾಗಿದ್ದರೂ ಕೆಲವೆಡೆಗಳಲ್ಲಿ ಪೂರ್ವಕಾವ್ಯಗಳಿಂದ ಲಕ್ಷ್ಯಗಳನ್ನೂ ಎತ್ತಿಕೊಳ್ಳಲಾಗಿದೆ. ಸೂತ್ರ ವೃತ್ತಿ ವ್ಯಾಖ್ಯಾನಗಳು ಏಕಕರ್ತೃಕವೇ, ಅಲ್ಲ, ಭಿನ್ನಕರ್ತೃಕವೇ ಎಂಬುದರ ಬಗ್ಗೆ ಭಿನ್ನಾಭಿಪ್ರಾಯ ಹುಟ್ಟಿಕೊಂಡಿದೆ. ವಾದಪ್ರತಿವಾದದಲ್ಲಿ ಸೂತ್ರ ವೃತ್ತಿಕಾರ ಒಬ್ಬ ಭಟ್ಟಾಕಳಂಕ ಮತ್ತು ಇವನಿಗಿಂತ ಭಿನ್ನವಾದ ಇನ್ನೊಬ್ಬ ಭಟ್ಟಾಕಳಂಕ ವ್ಯಾಖ್ಯಾನ ಕರ್ತೃವೆಂಬ ಕಡೆಗೆ ವಿದ್ವಾಂಸರ ಒಲವಿರುವಂತೆ ತೋರುತ್ತದೆ (ಕ. ಭಾ.

10-4) ವ್ಯಾಖ್ಯಾನ ಸಮಾಪ್ತಿಯಾದ ಕಾಲ ಕ್ರಿ. ಶ. 1604 ಆಗಿರುವುದರಿಂದ ಅದೇ ಭಟ್ಟಾಕಳಂಕನ ಕಾಲವೆಂದು ಪ್ರಸಿದ್ಧವಾಗಿದೆ.

'ಶಬ್ದಾನುಶಾಸನ' ಎಂಬ ಹೆಸರು ಸಂಸ್ಕೃತ ವ್ಯಾಕರಣದ ಅನುಸರಣೆಯಲ್ಲಿ ಉಳಿದ ಕೃತಿಗಳಿಗಿಂತ ಹೇಗಿದು ಭಿನ್ನವಾಗಿದೆಯೆಂಬುದನ್ನು ತಿಳಿಸುತ್ತದೆ. ಇದರಲ್ಲಿ ಕಾತಂತ್ರ ಹಾಗೂ ಶಾಕಟಾಯನ ವ್ಯಾಕರಣದ ನಿರೂಪಣ ಕ್ರಮಕ್ಕಿಂತ ಹೆಚ್ಚಾಗಿ ಪಾಣಿನಿಯ ನಿರೂಪಣ ಪದ್ಧತಿಯನ್ನು ಅನುಸರಿಸಲಾಗಿದೆ. ''ಒಟ್ಟಿನಲ್ಲಿ ವಿಚಾರಮಾಡಿನೋಡಿದರೆ ಈ ಕೃತಿ ಅತ್ಯಂತ ಆಸಕ್ತಿಯನ್ನು ಹುಟ್ಟಿಸುವಂಥದು, ಹಳಗನ್ನಡ ವ್ಯಾಸಂಗಕ್ಕೆ ಅತ್ಯಂತ ಪ್ರಾಮುಖ್ಯವುಳ್ಳದ್ದು; ಕೃತಿಕಾರನ ವಿದ್ವತ್ತಿಗೆ ಚಿರಸ್ಥಾಯಿಯಾದ ಸ್ಮಾರಕ'' (ಪ್ರಾ. ಕ. ವ್ಯಾ: ಪು. 110) ಎಂಬ ಆರ್. ನರಸಿಂಹಾಚಾರ್ಯರ ಅಭಿಪ್ರಾಯ ಸಮುಚಿತವಾಗಿದೆ.

ಇದು ಉಪಲಬ್ಧ ವ್ಯಾಕರಣಗಳ ಸ್ಥೂಲ ಪರಿಚಯ. ಮೊದಲನೆಯ ಮೂರು ಕೃತಿಗಳ ವ್ಯಾಕರಣ ವಿಷಯ ಮಾತ್ರ ಇಲ್ಲಿ ಪ್ರಸ್ತುತ. ಭಾಷಾಮಾಧ್ಯಮ ಮತ್ತು ಸೂತ್ರ ರಚನೆ ಈಯೆರಡು ಅಂಶಗಳನ್ನು ಬಿಟ್ಟರೆ ಸ್ಮೃತಿ ಭೂಷಣ ದರ್ಪಣಗಳ ವ್ಯಾಕರಣ ವಿಷಯಗಳ ವಿವೇಚನೆ ಸಮಾನವಾಗಿದೆ. ಸ್ಮೃತಿಯಲ್ಲಿ ಸಂಕ್ಷಿಪ್ತವಾಗಿದ್ದುದು ಭೂಷಣದಲ್ಲಿ ವಿಸ್ತಾರಗೊಂಡು ದರ್ಪಣದಲ್ಲಿ ಇನ್ನಷ್ಟು ವಿಸ್ತೃತವಾಗಿದೆ. ಸ್ಮೃತಿ ದರ್ಪಣಗಳು ಕಾವ್ಯ ಭಾಷೆಯನ್ನು ಅದರಲ್ಲೂ ಪ್ರಧಾನವಾಗಿ ಪದ್ಯಕಾವ್ಯಗಳ ಭಾಷೆಯನ್ನು ವಿವೇಚಿಸುತ್ತವೆ. ಸ್ಮೃತಿಯಲ್ಲಿ ಒಂದೇ ಒಂದೂ ಗದ್ಯದ ತುಣುಕಿಲ್ಲ. ಭೂಷಣ ಪೂರ್ವಕವಿಪ್ರಯೋಗ ಕ್ಕಿಂತಲೂ ಮಿಗಿಲಾಗಿ ಸ್ವತಂತ್ರ ಪ್ರಯೋಗಗಳನ್ನೇ ಕೊಡುತ್ತದೆ. ಪ್ರಯೋಗಗಳ ದೃಷ್ಟಿ ಯಿಂದ ಭೂಷಣವು ಪದ್ಯಕಾವ್ಯಗಳ ಭಾಷೆಯನ್ನೇ ಆಧರಿಸಿಕೊಂಡಿದೆಯೆನ್ನುವಂತಿಲ್ಲ. ವ್ಯಾಕರಣ ವಿಷಯಗಳ ಪ್ರತಿಪಾದನೆಯ ದೃಷ್ಟಿಯಿಂದ ಸ್ಮೃತಿಗೆ ಭೂಷಣವೂ, ಸ್ಮೃತಿ ಭೂಷಣಗಳಿಗೆ ದರ್ಪಣವೂ ಧಾರಾಳವಾಗಿ ಋಣಿ.

ಸ್ಮೃತಿ ಭೂಷಣ ದರ್ಪಣಗಳು ವಿಭಿನ್ನ ಸಂಸ್ಕೃತ ವ್ಯಾಕರಣ ಸಂಪ್ರದಾಯಗಳ ಪ್ರಭಾವಕೊಳ್ಳಗಾಗಿವೆ. ಲಕ್ಷಣ ಗ್ರಂಥಗಳ ರಚನೆಯಲ್ಲಿ ಸಂಸ್ಕೃತದ ಹಲವಾರು ಲಕ್ಷಣ ಗ್ರಂಥಗಳನ್ನು ಅನುಸರಿಸುವುದು ಕನ್ನಡ ಲಾಕ್ಷಣಿಕರ ಕ್ರಮ. ಕವಿರಾಜಮಾರ್ಗಕಾರನು ದಂಡಿ, ಭಾಮಹರನ್ನನುಸರಿಸಿದರೆ ಕಾವ್ಯಾವಲೋಕನಕಾರನು ಏಕಕಾಲದಲ್ಲಿ ವಾಮನ, ರುದ್ರಟ, ಭಾಮಹ, ದಂಡಿ ಮೊದಲಾದವರನ್ನು ಅನುಸರಿಸಿರುವುದಾಗಿ ಹೇಳಿಕೊಂಡಿ ದ್ದಾನೆ (ಪದ್ಯ 961). ಈ ರೀತಿಗನುಸಾರವಾಗಿ ಕನ್ನಡ ವೈಯಾಕರಣರು ಸಂಸ್ಕೃತದ ಬೇರೆ ಬೇರೆ ವ್ಯಾಕರಣ ಸಂಪ್ರದಾಯಗಳಿಗೆ ಋಣಿಗಳಾಗಿರುವಲ್ಲಿ ಆಶ್ಚರ್ಯವಿಲ್ಲ. ಆದರೆ ಸ್ಮೃತಿಭೂಷಣ ದರ್ಪಣಗಳಲ್ಲಿ ಸಂಸ್ಕೃತ ವೈಯಾಕರಣರ ಇಲ್ಲವೆ ವ್ಯಾಕರಣ ಗ್ರಂಥಗಳ ನೇರವಾದ ಉಲ್ಲೇಖವಿಲ್ಲದಿರುವುದು ಅಚ್ಚರಿಗೆ ಕಾರಣವಾಗಿದೆ.

ಸ್ಮೃತಿಭೂಷಣಗಳ ಕರ್ತೃಗಳು ಜೈನಮತೀಯರಾಗಿದ್ದೂ ಈ ಗ್ರಂಥಗಳ ಮೇಲೆ ಜೈನೇಂದ್ರ ಮತ್ತು ಶಾಕಟಾಯನ ವ್ಯಾಕರಣಗಳ ಪ್ರಭಾವ ಅತಿ ಕಡಿಮೆಯಾಗಿರುವುದು ಮತ್ತೊಂದು ಗಮನಾರ್ಹವಾದ ಅಂಶವಾಗಿದೆ.

## ಅಡಿಟಿಪ್ಪಣಿಗಳು

1. ನೋ. ಪ್ರಾ. ಕ. ವ್ಯಾ. ಪು. 66ರ ಅಡಿಟಿಪ್ಪಣಿ. ವಾಮನನ ಕಾವ್ಯಾಲಂಕಾರ ಸೂತ್ರ 1-3-1, 3.
2. ದರ್ಪಣ ಸೂ. 41. 'ವೈಯಾಕರಣರ್' ಎನ್ನದೆ 'ಕವಿಗಳ್' ಎಂದುದು ಗಮನಾರ್ಹ.
3. ನೋ. ಶಾಸ್ತ್ರಸಾಹಿತ್ಯ ಪು. 158. ಸ್ಮೃತಿಯ ರಚನೆ ಮೊದಲು, ಬಳಿಕ ಭೂಷಣದ ರಚನೆಯೆಂದು ಅಭಿಪ್ರಾಯಪಡಲಾಗಿದೆ.
4. ಅಲಂಕಾರ ಗ್ರಂಥದ ಆರಂಭದಲ್ಲಿ ವ್ಯಾಕರಣವನ್ನು ನಿರೂಪಿಸುವ ಪದ್ಧತಿಗೆ ನಾಗವರ್ಮನು ಭೋಜನ 'ಶೃಂಗಾರ ಪ್ರಕಾಶ'ಕ್ಕೆ ಋಣಿಯಾಗಿರಬಹುದೇ ಎಂಬುದರ ಕುರಿತು ತೌಲನಿಕ ಸಮೀಕ್ಷೆ ನಡೆಯಬೇಕಾಗಿದೆ.
5. ಮಲೆಯಾಳದಲ್ಲಿ ಭಾಷಾಭೂಷಣ ಎಂಬ ಕೃತಿ ಒಂದಲಂಕಾರ ಗ್ರಂಥ. ಅದರ ಕರ್ತೃ ಎ. ಆರ್. ರಾಜರಾಜವರ್ಮ (ಕ್ರಿ. ಶ. 1863–1918)

# ಅಧ್ಯಾಯ 4

# ಸಂಸ್ಕೃತ ವ್ಯಾಕರಣಗಳ ಪ್ರಭಾವ: ಕಾರಣಗಳು ಮತ್ತು ಸ್ವರೂಪ

ಪ್ರಾಚೀನ ಕಾಲದಲ್ಲಿ ಸಂಸ್ಕೃತವು ಸಮಗ್ರ ಭರತಖಂಡವನ್ನು ವ್ಯಾಪಿಸಿಕೊಂಡು ವಿಶೇಷವಾಗಿ ಪ್ರಾಬಲ್ಯವನ್ನು ಪಡೆದು ಪಂಡಿತಲೋಕದ ಏಕಮಾತ್ರ ಸಂಪರ್ಕ ಭಾಷೆಯಾಗಿ ಪ್ರತಿಷ್ಠೆಯನ್ನು ಹೊಂದಿತ್ತು. ಅದರಲ್ಲಿ ವಿಸ್ತಾರವೂ ವಿಪುಲವೂ ಆದ ಸಾಹಿತ್ಯ ನಿರ್ಮಾಣಗೊಂಡಿತ್ತು, ಧಾರ್ಮಿಕ ಗ್ರಂಥಗಳ ರಚನೆಯಾಗಿತ್ತು. ಸಮಾಜ ವ್ಯವಸ್ಥೆ, ಆಡಳಿತ, ವೇದಾಂತ, ತಾಂತ್ರಿಕತೆ ಮೊದಲಾದವುಗಳಿಗೆ ಸಂಬಂಧಿಸಿದ ಗ್ರಂಥಗಳು ಅದರಲ್ಲಿ ಹುಟ್ಟಿಕೊಂಡಿದ್ದುವು. ಸಾಹಿತ್ಯದ ಸೃಷ್ಟಿ ಮತ್ತು ಆಸ್ವಾದನೆಗೆ ಆಗತ್ಯವಾದ ಛಂದಸ್ಸು, ವ್ಯಾಕರಣ, ಅಲಂಕಾರಶಾಸ್ತ್ರ ಸಂಬಂಧಿಯಾದ ಗ್ರಂಥಗಳು ವಿಪುಲ ಪ್ರಮಾಣದಲ್ಲಿ ಸೃಷ್ಟಿಗೊಂಡಿದ್ದುವು. ಸಂಸ್ಕೃತದಲ್ಲಿ ಗ್ರಂಥ ರಚನೆಯ ಕಾರ್ಯ ಕೇವಲ ಆರ್ಯರಿಂದ ಮಾತ್ರ ನಡೆಯುತ್ತಿದ್ದುದಲ್ಲ, ಆಸೇತು ಹಿಮಾಚಲ ಯಾವುದೇ ಜನಾಂಗದ ಭೇದಭಾವವಿಲ್ಲದೆ ಎಲ್ಲರಿಂದ ಸಂಸ್ಕೃತ ಸಾಹಿತ್ಯದ ಶ್ರೀವೃದ್ಧಿಯಾಗುತ್ತಿತ್ತು.[1] ದಕ್ಷಿಣ ಭಾರತದಲ್ಲಿ ಸಂಸ್ಕೃತದ ಅಧ್ಯಯನ ಅಧ್ಯಾಪನಗಳು ವಿಶೇಷವಾಗಿ ನಡೆಯುತ್ತಿದ್ದುವು. ಕನ್ನಡವೇ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಗ್ರಾಂಥಿಕ ಸಾಹಿತ್ಯ ರೂಪುಗೊಳ್ಳುವ ಆರಂಭ ಕಾಲದ ಸ್ಥಿತಿ ಇದಾಗಿತ್ತು. ಕನ್ನಡ ನಾಡಿನ ಪ್ರತಿಭಾಶಾಲಿಗಳು ಸಂಸ್ಕೃತದಲ್ಲಿ ಕೃತಿರಚನೆ ಮಾಡುತ್ತಿದ್ದುದಕ್ಕೆ ಸಮಂತಭದ್ರ, ಪೂಜ್ಯಪಾದ, ಜಿನಸೇನ, ಗುಣಭದ್ರ, ಶಾಕಟಾಯನ ಮೊದಲಾದವರು ನಿದರ್ಶನರಾಗಿದ್ದಾರೆ.

ಕನ್ನಡದಲ್ಲಿ ಕೃತಿರಚನೆ ಆರಂಭಗೊಂಡಾಗ ಸಂಸ್ಕೃತದಲ್ಲಿರುವ ಧಾರ್ಮಿಕ ಮತ್ತು ಲೌಕಿಕ ಕೃತಿಗಳೇ ಕನ್ನಡದ ಅಂಥ ಕೃತಿಗಳಿಗೆ ಆಕರಗಳಾದುವು. ಕನ್ನಡ ಕವಿಗಳು ಸಂಸ್ಕೃತದಲ್ಲಿ ಮೊದಲಿಗೆ ಪಾಂಡಿತ್ಯವನ್ನು ಗಳಿಸಿಯೆ ತಮ್ಮ ಪ್ರತಿಭೆಯನ್ನು ಪ್ರಖರಗೊಳಿಸಿದರು. ಕನ್ನಡದಲ್ಲಿ ಬರೆಯತೊಡಗಿದರೂ ಸಂಸ್ಕೃತದಲ್ಲಿ ಬರೆಯುವುದನ್ನು ತೊರೆಯಲಿಲ್ಲ. ಕನ್ನಡ ಕವಿಗಳ 'ಉಭಯಕವಿ', 'ಉಭಯಕವಿತಾವಿಲಾಸ', 'ಸಂಸ್ಕೃತ ಕರ್ಣಾಟಕ ಕವಿತಾ ವಿಶಾರದ' ಮೊದಲಾದ ಬಿರುದುಗಳಿಂದ ಇದು ಖಚಿತವಾಗುತ್ತದೆ. ಹೀಗೆ ಕನ್ನಡ ನುಡಿ ಶಕ್ತಿಯುತವಾಗಲು ಅದರಲ್ಲಿ ಗ್ರಾಂಥಿಕ ಸಾಹಿತ್ಯ ನಿರ್ಮಾಣಗೊಳ್ಳಲು ಸಂಸ್ಕೃತವೇ ಕಾರಣವೆಂಬುದನ್ನು ವಿದ್ವಾಂಸರು ಎತ್ತಿಹೇಳಿದ್ದಾರೆ.

"ಕನ್ನಡ ಭಾಷೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಬಲ್ಲ ವಿಷಯವಾಗಿದೆ. ಆರ್ಯರು ದಕ್ಷಿಣಕ್ಕೆ ಬಂದು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು. ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ದವನ್ನು ಹೊಂದಿಸಿಕೊಟ್ಟು ಭಾಷೆಯನ್ನು ಪುಷ್ಟಿಮಾಡಿದರು; ಬರಹವನ್ನು ಕಲಿಸಿಕೊಟ್ಟರು; ಕಾವ್ಯಸ್ವರೂಪವನ್ನು ತೋರಿಸಿಕೊಟ್ಟರು. ಆ ಕಾವ್ಯಕ್ಕೆ ಬೇಕಾದ ವೃತ್ತಗಳನ್ನು ಅಲಂಕಾರ ವ್ಯಾಕರಣಗಳನ್ನು ಪುರಾಣ ಇತಿಹಾಸಗಳನ್ನು ಒದಗಿಸಿಕೊಟ್ಟರು. ಈ ರೀತಿ ಉಳದ ಹೊಲದಲ್ಲಿ ಬೆಳೆಮಾಡಿ ನಾಡೆಲ್ಲ ಜೀವಕಳೆಯಿಂದ ತುಂಬಿ ತುಳುಕಾಡುವಂತೆ ಮಾಡಿಟ್ಟರು. ತಮ್ಮ ಸಂಸ್ಕೃತ ಭಾಷೆಯ ಮತ್ತು ಕಾವ್ಯದ ಬಲದಿಂದ ದ್ರಾವಿಡ ಜನರಿಗೆ ಲಾಭವನ್ನು ಕಾಣಿಸಿದರೇ ಹೊರತು ನಷ್ಟವೇನೂ ತರಲಿಲ್ಲ; ಅವರ ಭಾಷೆ ಪುಷ್ಟಿಯಾಯಿತು. ಅವರ ಜ್ಞಾನ ವೃದ್ಧಿಯಾಯಿತು. ಅವರ ಮತ ಶ್ರೇಷ್ಠವಾಯಿತು" (ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಪು: 41–42).

ಇದರ ಪರಿಣಾಮವಾಗಿ ಕನ್ನಡ ಸಾಹಿತ್ಯಕೃತಿಗಳ ಭಾಷೆ, ಶೈಲಿ, ಶಬ್ದಸಂಪತ್ತು ಛಂದಸ್ಸುಗಳ ಮೇಲೆ ಸಂಸ್ಕೃತದ ದಟ್ಟವಾದ ಪ್ರಭಾವ ಬಿದ್ದಿತು. ಶಾಸ್ತ್ರ ಗ್ರಂಥಗಳೂ ಲಕ್ಷಣಗ್ರಂಥಗಳೂ ಕನ್ನಡ ಭಾಷೆಯಲ್ಲಿ ಉದಯಗೊಂಡವು. ಬಹುಶಃ ಆರಂಭದಲ್ಲಿ, ಬರೆಯುವುದು ಕನ್ನಡದಲ್ಲಿ; ಕವಿಗಳಿಗೆ ರಾಜಮಾರ್ಗವನ್ನು ತೋರಿಸಿಕೊಡುವ ಗ್ರಂಥಗಳಿರುವುದು ಸಂಸ್ಕೃತದಲ್ಲಿ, ಎಂಬ ಸ್ಥಿತಿಯಿದ್ದಿರಬೇಕು. ಕಾಲಕ್ರಮದಲ್ಲಿ ಕನ್ನಡದಲ್ಲೇ ಲಕ್ಷಣ ಗ್ರಂಥಗಳನ್ನು ಬರೆಯುವ ಕ್ರಮ ತೊಡಗಿರಬೇಕು. ಶ್ರೀವಿಜಯನ **ಕವಿರಾಜಮಾರ್ಗ** ಇಂತಹ ಪ್ರಾಮಾಣಿಕ ಪ್ರಯತ್ನಗಳಲ್ಲೊಂದಾಗಿದೆ. ಕನ್ನಡದಲ್ಲಿ ಲಕ್ಷಣಗ್ರಂಥಗಳ ಸೃಷ್ಟಿಯಾಗುವಾಗಲೂ ಲಾಕ್ಷಣಿಕರು ಅಗತ್ಯವಾದ ಮೂಲಸಾಮಗ್ರಿಗಳನ್ನು ಸಂಸ್ಕೃತದಿಂದ ಕೈಹಿಡಿದು ಕರೆದು ತಂದರು. ಹಾಗಾಗಿ ಸ್ವಲ್ಪಮಟ್ಟಿಗೆ ಕನ್ನಡ ಲಕ್ಷಣಗ್ರಂಥಗಳು ಸಂಸ್ಕೃತದ ಅಂಥ ಗ್ರಂಥಗಳ ಪಡಿಯಚ್ಚಾಗುವುದು ಅನಿವಾರ್ಯವಾಯಿತು. ಗ್ರಂಥಕರ್ತ ಪ್ರತಿಭಾವಂತನಾಗಿದ್ದಾಗ ಕನ್ನಡದ ಜಾಯಮಾನವನ್ನು ಸರಿಯಾಗಿಯೆ ಗುರುತಿಸಿರಬಹುದು. 'ಯತಿವಿಲಂಘನ'ದಂಥ ವಿಚಾರಗಳು ಇದಕ್ಕೆ ನಿದರ್ಶನ.

ಒಟ್ಟಿನಲ್ಲಿ ವಿದ್ವತ್ಪ್ರಪಂಚದಲ್ಲಿ ಸಂಸ್ಕೃತ ಭಾಷೆಗಿದ್ದ ಪ್ರತಿಷ್ಠೆ, ಸಾರ್ವಭೌಮತೆಗಳು, ಅದರಲ್ಲಿ ಧಾರ್ಮಿಕ ಗ್ರಂಥಗಳಿದ್ದುದರಿಂದ 'ದೇವವಾಣಿ'ಯೆಂಬ ಪೂಜ್ಯಭಾವ, ಅದರಲ್ಲಿರುವ ವಿಪುಲವಾದ ಸಾಹಿತ್ಯ ರಾಶಿ, ಸಾಹಿತ್ಯ ನಿರ್ಮಿತಿ—ಆಸ್ವಾದನೆಗಳಿಗೆ ಅಗತ್ಯವಾದ ಪೂರಕ ಸಾಹಿತ್ಯ—ಇವೆಲ್ಲ ಕಾರಣವಾಗಿ ಕನ್ನಡದಲ್ಲಿ ಗ್ರಂಥರಚನೆ ಆರಂಭಗೊಂಡಾಗ ಕನ್ನಡದ ಯಾವುದೇ ಕೃತಿಯ ಮೇಲೆ ಸಂಸ್ಕೃತದ ಅಂಥ ಕೃತಿಯ ಪ್ರಭಾವ ಅನಿವಾರ್ಯವಾಯಿತು. ಈ ಪ್ರಭಾವ ಲಕ್ಷಣ ಗ್ರಂಥಗಳ ಮೇಲೆ ಇನ್ನಷ್ಟು ಹೆಚ್ಚಾಯಿತು.

**ಕಾರಣಗಳು**

ಕನ್ನಡ ವ್ಯಾಕರಣಗಳು ಧಾರಾಳವಾಗಿ ಸಂಸ್ಕೃತದ ಪ್ರಭಾವಕ್ಕೆ ಸಿಲುಕಲು ಮೂಲ ಭೂತವಾದ ಪ್ರಧಾನ ಕಾರಣಗಳೆರಡು.

1. ಶಾಖೋಪಶಾಖೆಗಳಿಂದ ಬೃಹತ್ತಾಗಿ ಬೆಳೆದು ನಿಂತಿರುವ ಸಂಸ್ಕೃತದ ವ್ಯಾಕರಣಸಾಹಿತ್ಯ ಕನ್ನಡ ವ್ಯಾಕರಣಗಳಿಗೆ ಮಾದರಿಯಾದುದು. ಮತ್ತು 2. ಸಂಸ್ಕೃತ ವ್ಯಾಕರಣಗಳ ಚೌಕಟ್ಟು, ನಿಯಮಗಳು ಯಾವುದೇ ಭಾಷೆಯ ವ್ಯಾಕರಣ ನಿರೂಪಣೆಗೆ ಹೊಂದಿಕೊಳ್ಳತಕ್ಕುವೆಂಬ ನಂಬಿಕೆ ಬಲವಾಗಿದ್ದುದು.

1. ಸಂಸ್ಕೃತದಲ್ಲಿ ನಡೆದ ವ್ಯಾಕರಣ ವ್ಯವಸಾಯ, ಕನ್ನಡ ನಾಡಿನಲ್ಲಿ ಅದರ ಅಭ್ಯಾಸದ ಅನಿವಾರ್ಯತೆ ಮತ್ತು ವ್ಯಾಪಕತೆಗಳನ್ನು ಹಿಂದೆಯೇ ಸಮೀಕ್ಷಿಸಲಾಗಿದೆ (ಅಧ್ಯಾಯ 2). ಸಂಸ್ಕೃತ ವ್ಯಾಕರಣಗಳು ನಿರೂಪಣೆಯಲ್ಲಿ ಸಾಧಿಸಿಕೊಂಡ ಸಂಕ್ಷಿಪ್ತತೆ ಕನ್ನಡ ವೈಯಾಕರಣರ ಗಮನವನ್ನಾಕರ್ಷಿಸಿರಬೇಕು. ಕೆಳಗಿನ ಮಾತು ಈ ದೃಷ್ಟಿಯಿಂದ ಅವಲೋಕನೀಯ :

The Specific reason why Kannada Grammarians followed the Sanskrit grammars closely is that it was the most developed and mechanically precise system, built by Panini and others. (K.S.D. P.10).

ದ್ರಾವಿಡ ಭಾಷೆಗಳ ವೈಯಾಕರಣರಿಗೆ ಕಾತಂತ್ರದ ವಿಷಯ ವಿನ್ಯಾಸ ಮತ್ತು ನಿರೂಪಣಾ ಕ್ರಮ ಆದರ್ಶವಾಗಿ ತೋರಿದಂತಿದೆ ; ಅದರ ಸರಳತೆ ಮತ್ತು ಸಂಕ್ಷಿಪ್ತತೆ ಅವರ ಮನವನ್ನು ಸೂರೆಗೊಂಡಂತಿದೆ. ಅದಕ್ಕನುಸರಿಸಿ ಕನ್ನಡ ವೈಯಾಕರಣರೂ ಕಾತಂತ್ರವನ್ನು ಪ್ರಧಾನ ಮಾದರಿಯಾಗಿಟ್ಟುಕೊಂಡಿರಬೇಕು. ಕಾಲಕಾಲಕ್ಕೆ ಸಂಸ್ಕೃತದಲ್ಲಿ ಹುಟ್ಟಿಕೊಂಡ ಭಿನ್ನ ವ್ಯಾಕರಣ ಸಂಪ್ರದಾಯಗಳನ್ನು, ವಾರ್ತಿಕ, ಭಾಷ್ಯ, ವೃತ್ತಿ, ಟೀಕೆ ಗಳನ್ನು ಅರಗಿಸಿಕೊಂಡು ತಮ್ಮ ದೃಷ್ಟಿಯಿಂದ ಅಗತ್ಯವೆನಿಸಿದುದನ್ನು ಕನ್ನಡಕ್ಕೆ ಭಟ್ಟಿಯಿಳಿಸಿರಬೇಕು. ಹೀಗೆ ಮಾಡುವುದಕ್ಕೆ ಪ್ರಬಲವಾದ ಕಾರಣಗಳಿವೆ. ದೇಶಭಾಷೆ ಗಳ ಅಧ್ಯಯನಕ್ಕಿಂತ ಮೊದಲು ಸಂಸ್ಕೃತ ಭಾಷೆ, ಸಾಹಿತ್ಯಗಳ, ಅದರಲ್ಲಿರುವ ವಿವಿಧ ಲಕ್ಷಣ ಗ್ರಂಥಗಳ ಅಧ್ಯಯನ ಪ್ರಾಚೀನ ವಿದ್ಯಾಭ್ಯಾಸದ ಅನಿವಾರ್ಯ ಅಂಗವಾಗಿತ್ತು. ಹಾಗೆ ಸಂಸ್ಕೃತ ವ್ಯಾಕರಣಗಳನ್ನು ಓದಿಕೊಂಡು ಅದರ ನಿರೂಪಣಾ ಕ್ರಮ ಮತ್ತು ನಿಯಮಗಳ ಹಿನ್ನೆಲೆಯಲ್ಲಿ ದೇಶಭಾಷೆಗಳನ್ನು ವಿವೇಚಿಸುವ ದೃಷ್ಟಿ ಆರಂಭದಲ್ಲಿ ಇದ್ದಿರ ಬೇಕು. ಇದು ಉಳದ ಹೊಲವನ್ನು ಉಳುವ ಮೊದಲ ಹಂತ. ಈ ಹಂತದಲ್ಲಿ ಕನ್ನಡದ ಕವಿ ಮೊದಲಿಗೆ ಓದುವುದು ಸಂಸ್ಕೃತ ವ್ಯಾಕರಣವನ್ನು. ಓದುಗನಾದ ಪಂಡಿತ ವಿಮರ್ಶ ಕನೂ ಓದುವುದು ಮೊದಲಿಗೆ ಸಂಸ್ಕೃತ ವ್ಯಾಕರಣವನ್ನು—ಹೀಗೆ ಸಂಸ್ಕೃತ ವ್ಯಾಕರಣದ ಹಿನ್ನೆಲೆಯಲ್ಲಿ ಕನ್ನಡ ಭಾಷೆಯನ್ನು ಕುರಿತು ಚಿಂತನೆ ನಡೆಯುತ್ತಿತ್ತು. ಕನ್ನಡ ವ್ಯಾಕರಣ

(ಗ್ರಂಥ) ನಿರ್ಮಾಣಗೊಳ್ಳುವ ಈ ಮೊದಲ ಹಂತದಲ್ಲಿ ಹೀಗೆ ಸಂಸ್ಕೃತ ವ್ಯಾಕರಣಗಳು ಮಾದರಿಯಾಗಿ ಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಕನ್ನಡ ಕವಿಗಳಿಗಿರುವ ಪ್ರಾಕೃತ ವ್ಯಾಕರಣದ ಸಂಸರ್ಗದ ಕುರಿತು ಮೊದಲೇ ವಿಚಾರಿಸಲಾಗಿದೆ. ವ್ಯಾಕರಣಗಳ ಮೂಲಕ ಭಾಷೆಯನ್ನು ಕಲಿಯುವ ಪ್ರಾಚೀನ ಪದ್ಧತಿಗೆ ಹೊಂದಿಕೊಂಡು ಕನ್ನಡ ವಿದ್ವಾಂಸರು ಸಾಹಿತ್ಯ ಪ್ರಾಕೃತಗಳ ವ್ಯಾಕರಣಗಳನ್ನು ಓದುತ್ತಿದ್ದಿರಬೇಕೆಂದು ಊಹಿಸಬಹುದು. ಪಾಲಿ ಹಾಗೂ ಪ್ರಾಕೃತ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳ ಪಡಿನೆಳಲೆಂಬುದು ವಿದ್ವಾಂಸರ ಮತ. ಪ್ರಾಕೃತ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳ ಚೌಕಟ್ಟನ್ನು, ನಿರೂಪಣಾ ವಿಧಾನವನ್ನು ಸ್ವೀಕರಿಸಿರುವುದು ಕನ್ನಡ ವೈಯಾಕರಣರಿಗೆ ಪ್ರೇರಣೆಯನ್ನಿತ್ತಿರಬೇಕು. ಪ್ರಾಕೃತಗಳಂತೆ ಕನ್ನಡವೂ ಸಂಸ್ಕೃತ ಜನ್ಯವೆಂಬ ಅಭಿಪ್ರಾಯ ಪ್ರಾಚೀನರಲ್ಲಿದ್ದುದು ಮತ್ತೊಂದು ಕಾರಣವಾಗಿರಬಹುದು. ಅಂತೂ ಇವೆಲ್ಲದರ ಪರಿಣಾಮವೆಂದರೆ ಸಂಸ್ಕೃತ ವ್ಯಾಕರಣಗಳು ಕನ್ನಡ ವ್ಯಾಕರಣಕ್ಕೆ ಮಾದರಿಯಾಗಿ ನಿಂತುದಾಗಿದೆ.

2. ಪ್ರಾಚೀನ ವಿದ್ವಾಂಸರು ಸಂಸ್ಕೃತ ವ್ಯಾಕರಣದ ನಿಯಮಗಳು ಬೇರೆ ಯಾವುದೇ ಭಾಷೆಯ ವಿವೇಚನೆಗೆ ಸಮರ್ಥವಾಗಿ ಒಗ್ಗಿಕೊಳ್ಳತಕ್ಕವುಗಳೆಂಬ ವಿಶ್ವಾಸವನ್ನೂ ಹೊಂದಿಕೊಂಡಂತಿದೆ.[3] ಮುಂದಿನ ಅವತರಣಿಕೆ ಈ ಊಹೆಯನ್ನು ಸಮರ್ಥಿಸುತ್ತದೆ :

While following the Sanskrit grammatical system for Kannada, with the necessary changes, and also writing their grammars in Sanskrit, the Kannada grammarians might have had some basic assumption about the nature of the grammar. This assumption might have been that there is no difference between one language and another. In the commentary under Su.442 of Shabdanusasana, Bhattakalanka says that there is no difference, so far as the theory and the grounds for the theory are concerned. It is only while implementing the theory that the question of difference in language arises. Whatever applies to the Sanskrit language, may apply to the Kannada Language as well" (K.S.D: P.12).

ಇಂತಹ ಒಂದು ದೃಷ್ಟಿಕೋನದಿಂದ ಸಂಸ್ಕೃತ ವ್ಯಾಕರಣಗಳ ಎಷ್ಟೋ ಸೂತ್ರಗಳು ಕನ್ನಡದಲ್ಲಿ ನಿಜರೂಪದಲ್ಲಾಗಲೀ ಇಲ್ಲವೇ ರೂಪಮರೆಸಿಕೊಂಡಾಗಲೀ ಬರುವುದಕ್ಕೆಡೆಯಾಗಿದೆ. ಸಂಸ್ಕೃತ ವ್ಯಾಕರಣದ ಚೌಕಟ್ಟು, ತತ್ವಗಳನ್ನು ಎತ್ತಿಕೊಂಡುದು ಮಾತ್ರವಲ್ಲ, ಭೂಷಣ ಶಾಸನಗಳು ಸಂಸ್ಕೃತ ಭಾಷೆಯಲ್ಲೇ ರಚಿತವಾಗಿವೆಯೆಂಬುದು ವಿಚಾರಣೀಯ. ಈ ಗ್ರಂಥಗಳ ಹುಟ್ಟಿಗಿಂತ ಮೊದಲೇ ಕನ್ನಡ ಭಾಷೆಯಲ್ಲಿ ವ್ಯಾಕರಣ

ಗಳು ರಚಿತವಾಗಿರಲು ಈ ಗ್ರಂಥಕಾರರು ಸಂಸ್ಕೃತದಲ್ಲೇಕೆ ಬರೆದರು ಎಂಬುದು ಸಹಜ ವಾಗಿಯೆ ಉದ್ಭವಿಸುವ ಪ್ರಶ್ನೆ. ಅದಕ್ಕೆ ಹಲವು ವಿಧವಾದ ಉತ್ತರಗಳು ಬಂದುದುಂಟು.

"ಕನ್ನಡ ಭಾಷೆಯ ಸ್ವರೂಪವನ್ನು ಸಂಸ್ಕೃತ ಭಾಷೆಯಲ್ಲಿ ನಿರೂಪಿಸಿರುವ ಮೂಲಕವಾಗಿ, ಕನ್ನಡ ಭಾಷೆಯ ಸತ್ವಸಾಮರ್ಥ್ಯಗಳನ್ನು ಲೋಕಪ್ರಕಟ ಮಾಡುವ ಹಾಗೂ ಅದಕ್ಕೆ ಭಾರತೀಯ ಸಾಹಿತ್ಯದಲ್ಲಿ ಗಣ್ಯವಾದ ಸ್ಥಾನವನ್ನೂ ವ್ಯಾಪ್ತಿಯನ್ನೂ ಉಂಟುಮಾಡುವ ಉದ್ದೇಶವು, ಆ ವ್ಯಾಕರಣ ಕರ್ತೃಗಳಿಗೆ ಇದ್ದಂತೆ ತೋರುತ್ತದೆ" (ಆ. ಕ. ಸಾ. ಚ. : ಪು: 658) ಎಂಬ ಸಮಾಧಾನದ ಮಾತು ಹುಟ್ಟಿಕೊಂಡದ್ದಿದೆ. "ಕರ್ಣಾಟಕದ ಮತ್ತು ಹೊರಗಿನ ಸಂಸ್ಕೃತ ವಿದ್ವಾಂಸರಿಗೆ ಕನ್ನಡ ಭಾಷೆಯ ಸ್ವರೂಪ ವನ್ನೂ ಮಹತ್ವವನ್ನೂ ಪರಿಚಯ ಮಾಡಿಕೊಡಬೇಕೆಂಬುದು ನಾಗವರ್ಮನ ಉದ್ದೇಶ ವಾಗಿದ್ದಿತು" (ಪ್ರಾ. ಕ. ವ್ಯಾ.: ಪು. 64) ಎಂದಾಗಲಿ "17ನೆಯ ಶತಮಾನದಲ್ಲಿ ಕೂಡ ಭಟ್ಟಾಕಳಂಕನು ಸಂಸ್ಕೃತ ಪ್ರಚುರವಾದ ವಿದ್ವತ್ಪ್ರಪಂಚದಲ್ಲಿ ಕನ್ನಡದ ಪ್ರತಿಷ್ಠೆ ಯನ್ನು ಎತ್ತಿಹಿಡಿಯುವುದಕ್ಕಾಗಿ ಸಂಸ್ಕೃತದಲ್ಲಿ ವ್ಯಾಕರಣವನ್ನು ರಚಿಸಿದನು" (ಅದೇ) ಎಂದಾಗಲಿ ಕಾರಣ ಹೇಳಿದ್ದುಂಟು. ಮಾತ್ರವಲ್ಲ ಶಾಸನಕ್ಕೆ ಸಂಬಂಧಿಸಿದಂತೆ "ಕನ್ನಡ ಭಾಷೆಯ ವಿಚಾರವನ್ನು ತಿಳಿದ ಕೊಳ್ಳುವ ಮನಸ್ಸೂ ಇಲ್ಲದೆ, ಕನ್ನಡವನ್ನು ಕಡೆಗಣ್ಣಿ ನಿಂದ ನೋಡುತ್ತಿದ್ದ ಸಂಸ್ಕೃತ ಭಾಷಾ ಪಂಡಿತರಿಗೆ ಕನ್ನಡದ ಭಾಷಾ ಸ್ವರೂಪವನ್ನೂ, ಸಂಸ್ಕೃತವಂತೆ ಕನ್ನಡದಲ್ಲಿಯೂ ಸಹಜವಾಗಿರುವ ಸಾಧ್ವಸಾಧು ವಿವೇಚನವಿಷಯತಾ ನಿಮಿತ್ತವಾದ ಅನುಶಾಸನ ಶಕ್ಯತೆಯನ್ನು ಸಂಸ್ಕೃತದ ಕನ್ನಡಿಯಲ್ಲಿಯೇ ತೋರಿಸಿಕೊಡು ವುದು ಭಟ್ಟಾಕಳಂಕನ ಸಂಕಲ್ಪವಾಗಿತ್ತು" (ಅದೇ: ಪು: 102)[3] ಎಂದು ನಿಸ್ಸಂದೇಹ ವಾಗಿ ನಿರ್ಣಯಿಸಿದ್ದುಂಟು. ಆದರೆ ಈಯೆಲ್ಲ ಅಭಿಪ್ರಾಯಗಳು ಆಂಶಿಕ ಕಾರಣಗಳನ್ನು ತಿಳಿಸುತ್ತವೆಯೇ ಹೊರತು ಮುಖ್ಯವಾದವುಗಳನ್ನಲ್ಲ. ಮೂಲಭೂತವಾದ ಕಾರಣ ಬೇರೆಯೇ ಇರಬೇಕೆಂದು ತೋರುತ್ತದೆ. ಕನ್ನಡ ವೈಯಾಕರಣರ ಮುಂದೆ ವಿಪುಲವಾಗಿದ್ದ ಸಂಸ್ಕೃತ ವ್ಯಾಕರಣರಾಶಿ ವ್ಯಾಕರಣಶಾಸ್ತ್ರದ ನಿರೂಪಣೆಗೆ ಹೇಗೆ ಸಂಸ್ಕೃತ ಭಾಷೆ ಸಮರ್ಥವಾಗಿದೆ ಎಂಬುದಕ್ಕೆ ದೃಷ್ಟಾಂತವಾಗಿತ್ತು. ಶಾಸ್ತ್ರ ನಿರೂಪಣೆಗೆ ಅಗತ್ಯವೆನಿಸಿದ ಸಂಕ್ಷಿಪ್ತತೆ ಸಾಧಿತವಾಗಿದ್ದು ವ್ಯಾಕರಣದ ರಚನೆಗೆ ಆಗತ್ಯವಾದ ಸಕಲ ತಂತ್ರಗಳೂ ಅಲ್ಲಿ ವ್ಯವಸ್ಥಿತವಾಗಿ ಲಭ್ಯವಿದ್ದುವು. ಸಂಕ್ಷಿಪ್ತತೆಗೆ ಆಗತ್ಯವಾದ ಸೂತ್ರಗಳ ರಚನೆಯಲ್ಲಿ ಕನ್ನಡ ಕಾವ್ಯಭಾಷೆ ಹೇಗೆ ಸೋಲನ್ನನುಭವಿಸುತ್ತದೆಯೆಂಬುದೂ ಅನುಭವಕ್ಕೆ ಬಂದಿತ್ತು (ಶಬ್ದಸ್ಮೃತಿ), ಭಟ್ಟಾಕಳಂಕನು "ನ ಚೈಷಾ ಭಾಷಾ ಶಾಸ್ತ್ರಾನುಪಯೋಗಿನೀ" ಎಂದು ಘೋಷಿಸಿ ಚೂಡಾಮಣಿಯೆಂಬ ಮಹಾಶಾಸ್ತ್ರದ ರಚನೆ ಕನ್ನಡದಲ್ಲಿ ಆಗಿರುವುದೆಂದು ಹೇಳಿದ ಬಳಿಕವೂ ಆತ ಬರೆದುದು ಸಂಸ್ಕೃತದಲ್ಲೆಂಬುದನ್ನೂ, ಕನ್ನಡದಲ್ಲೇ ಆತನು ಬರೆದಿರುತ್ತಿದ್ದರೆ ಶಾಸ್ತ್ರಗ್ರಂಥವೊಂದರಲ್ಲಿ ನಿರೀಕ್ಷಿಸಬಹುದಾದ ಪ್ರೌಢಿಮೆ, ಪಾಂಡಿತ್ಯ, ಸಂಕ್ಷಿಪ್ತತೆಗಳು (ಶಾಸನದಲ್ಲಿ ಈಗಿರುವಂತೆ) ಲಭ್ಯವಾಗುತ್ತಿರಲಿಲ್ಲವೆಂಬುದನ್ನೂ ಲೆಕ್ಕಿಸಿದರೆ ಸಂಸ್ಕೃತದಲ್ಲಿ ಕನ್ನಡ ವ್ಯಾಕರಣ ರಚನೆಯ ರಹಸ್ಯ ಬಯಲಾಗುತ್ತದೆ.

ಇನ್ನೂ ಒಂದು ನಿಟ್ಟಿನಲ್ಲಿ ವಿಚಾರಿಸಬಹುದು. ಯಾವುದೇ ಒಂದು ಶಾಸ್ತ್ರ ಯಾವ ಭಾಷೆಯಲ್ಲಿ ಸಮೃದ್ಧವಾಗಿ ಬೆಳೆದಿದೆಯೋ ಆ ಭಾಷೆಯಲ್ಲಿ ತತ್ಸಂಬಂಧವಾದ ಗ್ರಂಥ ರಚನೆ ಸುಲಭವಾಗುತ್ತದೆ. ಇಂದು ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಬರವಣಿಗೆ ಆಂಗ್ಲ ಭಾಷೆಯಲ್ಲಿ ಸುಲಭವೆನಿಸಿದಷ್ಟು ಇತರ ಭಾರತೀಯ ಭಾಷೆಗಳಲ್ಲಿ ಸಾಧ್ಯವಾಗದಿರು ವುದನ್ನು ಗಮನಿಸಬಹುದು. ಈಗ ಭಾರತೀಯ ಭಾಷೆಗಳಿಗೆ, ಉಪಭಾಷೆಗಳಿಗೆ ಹುಟ್ಟಿ ಕೊಳ್ಳುವ ವರ್ಣನಾತ್ಮಕ ವ್ಯಾಕರಣಗಳಾಗಲೀ (Descriptive Grammars), ಇತರ ಭಾಷಾ ವೈಜ್ಞಾನಿಕ ಅಧ್ಯಯನಗಳಾಗಲೀ ಹೆಚ್ಚಾಗಿ ಆಂಗ್ಲ ಭಾಷೆಯಲ್ಲೇ ಇರುತ್ತವಷ್ಟೆ.

ಪ್ರಾಕೃತ ವ್ಯಾಕರಣಗಳೆಲ್ಲ ಸಂಸ್ಕೃತದಲ್ಲಿ ರಚಿತವಾಗಿರುವುದನ್ನು ನೋಡಬಹುದು. ಬಹುಶಃ ಅಂಥ ಪ್ರಾಕೃತ ವ್ಯಾಕರಣಗಳೂ ಕನ್ನಡ ವೈಯಾಕರಣರಿಗೆ ಪ್ರೇರಣೆಯನಿತ್ತಿರ ಬಹುದು. ಸ್ವಾರಸ್ಯವೆಂದರೆ ತೆಲುಗು ಮತ್ತು ಮಲೆಯಾಳಗಳ ಮೊದಲ ಉಪಲಬ್ಧ ವ್ಯಾಕರಣಗಳಾದ ಆಂಧ್ರಶಬ್ದಚಿಂತಾಮಣಿ (ನನ್ನಯ್ಯ ಭಟ್ಟ ಕ್ರಿ. ಶ. 11 ನೆಯ ಶತಮಾನ) ಮತ್ತು ಲೀಲಾತಿಲಕಂ (ಕ್ರಿ. ಶ. ಸು. 14ನೆಯ ಶತಮಾನ) ಸಂಸ್ಕೃತದಲ್ಲಿವೆ. ಹಾಗಾಗಿ ಮೇಲಿನ ಕಾರಣಗಳಿಂದ ಕನ್ನಡ ವೈಯಾಕರಣರಿಬ್ಬರು ಸಂಸ್ಕೃತ ಭಾಷೆಯಲ್ಲಿ ವ್ಯಾಕರಣ ರಚಿಸಿರಬಹುದೆಂದು ಊಹಿಸಿಕೊಳ್ಳಬಹುದು. ಕೆಳಗಿನ ಅವತರಣಿಕೆಯೂ ಈ ದೃಷ್ಟಿಯಿಂದ ವಿಚಾರಾರ್ಹವಾಗಿದೆ. "....ಪಂಡಿತಲೋಕದ ಏಕಮಾತ್ರ ವ್ಯವಹಾರ ಭಾಷೆಯಾಗಿದ್ದ ಸಂಸ್ಕೃತವನ್ನು ಬಳಸಿರಬಹುದು. ಎರಡನೆಯದಾಗಿ ಅವರು ಬರೆಯು ತ್ತಿದ್ದದ್ದು ಕೇವಲ ಅಕ್ಷರಸ್ಥ ಜನಸಾಮಾನ್ಯನಿಗಲ್ಲ; ಹೇಳಿಕೇಳಿ ವಿದ್ವತ್ಪಂಚಕ್ಕೆ. ಆಗಿನ ಭಾಷಾ ಪಂಡಿತರಿಗೆಲ್ಲ ಸಂಸ್ಕೃತವೂ ಚೆನ್ನಾಗಿ ಅಭ್ಯಾಸವಾಗಿದ್ದುದರಿಂದ ದೇಶಭಾಷೆಯ ವ್ಯಾಕರಣ ಸಂಸ್ಕೃತದಲ್ಲಿರುವುದು ಅಂಥದೇನೂ ಸೋಜಿಗವೆನಿಸಲಾರದು. ಜತೆಗೆ ಸಂಸ್ಕೃತ ಸೂತ್ರಗಳನ್ನು ಗಟ್ಟಿಮಾಡಿ ಮನದಟ್ಟು ಮಾಡಿಕೊಳ್ಳುವುದು ಸುಲಭ ಎಂಬ ನಂಬಿಕೆಯೂ ಇದ್ದಿರಬೇಕು. ಅಲ್ಲದೆ ಒಂದು ಭಾಷೆಯ ವ್ಯಾಕರಣ ಸಂಸ್ಕೃತದಲ್ಲಿರುವುದು ಆ ಭಾಷೆಗೆ ಒಂದು ಕೋಡು ಎಂಬ ಭಾವನೆಯೂ ಇದ್ದಿರಬಹುದು" (ಕ. ವ್ಯಾ: ಪು: 28).

## ಸ್ವರೂಪ

ಸ್ಮೃತಿಭೂಷಣ ದರ್ಪಣಗಳು ಪ್ರಧಾನವಾಗಿ ಕಾತಂತ್ರ ವ್ಯಾಕರಣಕ್ಕೆ ಋಣಿ ಗಳಾಗಿವೆ. ಕಾತಂತ್ರವನ್ನು ಬಿಟ್ಟರೆ ಉಳಿದ ಸಂಸ್ಕೃತ ವ್ಯಾಕರಣಗಳಲ್ಲಿ ಅಷ್ಟಾಧ್ಯಾಯಿಯ ಪ್ರಭಾವ ಕನ್ನಡದ ಮೇಲಿನ ಮೂರು ಕೃತಿಗಳ ಮೇಲೆ ದಟ್ಟವಾಗಿದೆ. ಭಾಗಶಃ ಜೈನೇಂದ್ರ, ಚಾಂದ್ರ, ಶಾಕಟಾಯನ, ಸಾರಸ್ವತ, ಸಿದ್ಧಹೇಮಶಬ್ದಾನುಶಾಸನ, ಸರಸ್ವತೀ ಕಂಠಾಭರಣಗಳ ಪ್ರಭಾವವೂ ಗೋಚರಿಸುತ್ತದೆ. ಈ ಗ್ರಂಥಗಳ ವಿವಿಧ ವೃತ್ತಿ, ಟೀಕೆಗಳ, ಪ್ರಕ್ರಿಯಾತ್ಮಕ ರೂಪಗಳ ಪ್ರಭಾವವೂ ಇದೆ. ಮಹಾಭಾಷ್ಯ ಮತ್ತು ಕಾಶಿಕಾ ವೃತ್ತಿಯ ವರ್ಚಸ್ಸು ಗಣನೀಯವಾಗಿದೆ. ರೂಪಾವತಾರದ ಪ್ರಭಾವ ಭೂಷಣದ ಮೇಲಾದುದನ್ನು ತೌಲನಿಕ ಅಧ್ಯಯನದಿಂದ ಸ್ಪಷ್ಟೀಕರಿಸಬಹುದು (ಅಧ್ಯಾಯ 5). ಈಯೆಲ್ಲ ಗ್ರಂಥಗಳ

ಬೀರಿರುವ ಪ್ರಭಾವವನ್ನು ಪ್ರತಿಪಾದಿತ ವಿಷಯಗಳ ಅನುಕ್ರಮದಲ್ಲಿ, ಪಾರಿಭಾಷಿಕ ಪದಗಳ ಬಳಕೆಯಲ್ಲಿ, ನಿರೂಪಣಾ ತಂತ್ರದಲ್ಲಿ, ಕೆಲವೊಂದು ವ್ಯಾಕರಣ ತತ್ವಗಳ ಅಳವಡಿಕೆಯಲ್ಲಿ ಮತ್ತು ಕೆಲವು ಸೂತ್ರಗಳ ಹಾಗೂ ವೃತ್ತಿ, ಭಾಷ್ಯ ವಾಕ್ಯಗಳ ಸ್ವೀಕರಣದಲ್ಲಿ ಗುರುತಿಸಬಹುದಾಗಿದೆ. ಕೆಲವೊಮ್ಮೆ ಪ್ರಯೋಗ ವಾಕ್ಯಗಳು ಅನುವಾದಿತವಾಗಿ ಬಂದಿರುವುದನ್ನೂ ಕಾಣಬಹುದು.

## ವ್ಯಾಕರಣ ವಿಷಯಗಳ ಅನುಕ್ರಮ

ವ್ಯಾಕರಣಾಂಶಗಳ ಆನುಪೂರ್ವಿಯ ದೃಷ್ಟಿಯಿಂದ ಸ್ಮೃತಿಭೂಷಣ ದರ್ಪಣಗಳು ಐಂದ್ರ ಪದ್ಧತಿಗೆ ಸೇರಿದವಾಗಿದ್ದು ಕಾತಂತ್ರವನ್ನು ಧಾರಾಳವಾಗಿ ಅನುಸರಿಸಿವೆ. ವರ್ಣಮಾಲೆ, ಸಂಧಿ, ನಾಮ-ವಿಭಕ್ತಿ-ಕಾರಕ, ಸಮಾಸ, ತದ್ಧಿತ, ಆಖ್ಯಾತ – ಹೀಗೆ ಪ್ರಕ್ರಿಯೆಗನುಸಾರವಾಗಿ ಇಲ್ಲಿ ವಿಷಯಗಳ ಪ್ರತಿಪಾದನೆಯಿದೆ (ಪ್ರಕ್ರಿಯಾತ್ಮಕ ವ್ಯಾಕರಣಗಳ ಸ್ವರೂಪದ ಕುರಿತು ಹಿಂದೆಯೇ ಚರ್ಚಿಸಲಾಗಿದೆಯಷ್ಟೆ. ಮುಂದೆ ಪ್ರಕರಣ ವಿಭಜನೆಯ ಹಿನ್ನೆಲೆಯನ್ನು ಹೇಳುವಲ್ಲಿ ಕನ್ನಡ ವ್ಯಾಕರಣಗಳು ಹೇಗೆ ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಿಗೆ ಋಣಿಗಳೆಂಬುದನ್ನೂ ಕಾಣಬಹುದು).

## ಸಂಜ್ಞೆಗಳು (ಪಾರಿಭಾಷಿಕ ಪದಗಳು)

ಸಂಜ್ಞೆಗಳು ಶಾಸ್ತ್ರ ವ್ಯವಹಾರಕ್ಕೆ ಅತ್ಯಾವಶ್ಯಕವಾಗಿವೆ. ಸಾಮಾನ್ಯಾರ್ಥದಲ್ಲಿ 'ಸಂಜ್ಞೆ'ಯೆಂದರೆ ಹೆಸರು. ವಿಶೇಷಾರ್ಥದಲ್ಲಿ ಶಾಸ್ತ್ರಗಳ ನಿರ್ವಹಣೆಯಲ್ಲಿ ಸಂಕ್ಷಿಪ್ತತೆಯನ್ನು ಸಾಧಿಸುವ ಸಲುವಾಗಿ ಬಳಸುವ ಕೆಲವು ನಿಶ್ಚಿತಾರ್ಥಕಗಳಾದ ವರ್ಣ ಅಥವಾ ಶಬ್ದಗಳಿಗೆ 'ಸಂಜ್ಞೆ'ಯೆಂದು ಅಭಿಧಾನ. ಆಧುನಿಕರು ಅದನ್ನೇ ಪಾರಿಭಾಷಿಕ ಪದ (Technical Term) ಎನ್ನುತ್ತಾರೆ. ಪಾರಿಭಾಷಿಕ ಪದಗಳ ಮುಖ್ಯ ಉಪಯೋಗ ಸಂಕ್ಷಿಪ್ತತೆಯನ್ನು ತರುವುದಾಗಿದೆ. ಪತಂಜಲಿಯ "ಲಘ್ವರ್ಥಂ ಹಿ ಸಂಜ್ಞಾಕರಣಮ್" (ಮ. ಭಾ. 1-1-1) ಎಂಬ ಮಾತು ಅದನ್ನೇ ಸಾರುತ್ತದೆ. ವ್ಯಾಕರಣದಲ್ಲಿ ಸಂಜ್ಞಾ ಶಬ್ದಗಳ ಸ್ವಭಾವದ, ಅರ್ಥವ್ಯಾಪ್ತಿಯ ಕುರಿತು ಕೆಳಗಿನ ಹೇಳಿಕೆ ಅರ್ಥವತ್ತಾಗಿದೆ :

"Sanjna Sabda, as a rule, are not derivable; and though popular words, such as, viddhi, guna, etc. are used as sanjna, their popular significations have practically no connection with what they signify in grammar. Bhartrhari says that the meaning assigned to such Sanjna Sabda by the grammarians is to be taken as modern convention as opposed to the divine convention" (Ph. S. G: P: 67).

ಅಷ್ಟಾಧ್ಯಾಯಿಯು ಸಂಜ್ಞೆಗಳನ್ನು ಕೃತ್ರಿಮ ಮತ್ತು ಅಕೃತ್ರಿಮ ಎಂದು ಎರಡು ಗುಂಪುಗಳಾಗಿ ಮಹಾಭಾಷ್ಯ ವಿಂಗಡಿಸುತ್ತದೆ. ಸಾಮಾನ್ಯವಾಗಿ ಭಾಷೆಯಲ್ಲಿ ಬಳಕೆ

ಗೊಳ್ಳದ ಹಾಗೂ ವ್ಯಾಕರಣ ನಿರ್ವಾಹಕ್ಕಾಗಿ ಮಾತ್ರ ಬಳಕೆಯಾಗುವ ಪಾರಿಭಾಷಿಕ ಪದಗಳು ಕೃತ್ರಿಮ ಸಂಜ್ಞೆಗಳು. ಸ್ವಯಂ ಅರ್ಥವನ್ನು ಕೊಡುವ (self-explanatory) ಪಾರಿಭಾಷಿಕ ಪದಗಳು ಅಕೃತ್ರಿಮ ಸಂಜ್ಞೆಗಳು. ಇವುಗಳನ್ನು ಮಹತೀ ಸಂಜ್ಞೆಗಳೆಂದೂ ಪತಂಜಲಿ ಹೇಳುತ್ತಾನೆ. ಘಟ್, ನಪ್, ಘು–ಇತ್ಯಾದಿಗಳು ಕೃತ್ರಿಮ ಸಂಜ್ಞೆಗಳಾದರೆ ಸ್ವರ, ಸಂಧಿ, ಸಮಾಸ, ಲೋಪ, ಆಗಮ ಇತ್ಯಾದಿಗಳು ಅಕೃತ್ರಿಮ ಇಲ್ಲವೆ ಸಾರ್ಥಕ ಸಂಜ್ಞೆಗಳಾಗಿವೆ.

ವಿಭಿನ್ನ ಸಂಪ್ರದಾಯಗಳಿರುವ ಸಂಸ್ಕೃತ ವ್ಯಾಕರಣ ವಾಙ್ಮಯದ ಪಾರಿಭಾಷಿಕ ಪದಗಳನ್ನು ಸಮೀಕ್ಷಿಸಿದಾಗ ಕೆಳಗಿನ ಅಂಶಗಳು ಗೋಚರಿಸುತ್ತವೆ.

1. ಸಂಜ್ಞೆಗಳು ಒಂದು ಸಂಪ್ರದಾಯದಿಂದ ಇನ್ನೊಂದು ಸಂಪ್ರದಾಯಕ್ಕೆ ಬದಲಾಗುವುದುಂಟು. ಇದಕ್ಕೆ ಅಷ್ಟಾಧ್ಯಾಯಿ, ಕಾತಂತ್ರ ಮತ್ತು ಜೈನೇಂದ್ರ ವ್ಯಾಕರಣಗಳು ನಿದರ್ಶನ:

| ಅಷ್ಟಾಧ್ಯಾಯಿ | ಕಾತಂತ್ರ | ಜೈನೇಂದ್ರ |
|---|---|---|
| ಪ್ರಾತಿಪದಿಕ | ಲಿಂಗ | ಮೃತ್ |
| ತದ್ಧಿತ | ತದ್ಧಿತ | ಹೃತ್ |
| ಅಚ್ | ಸ್ವರ | ಅಚ್ |
| ಹಲ್ | ವ್ಯಂಜನ | ಹಲ್ |
| ಅವ್ಯಯ | ಅಸಂಖ್ಯ | ಪ್ರ |
| ಧಾತು | ಧಾತು | ಧು |

ಹೀಗೆ ಸಂಜ್ಞೆಗಳು ಬದಲಾಗುವುದರಿಂದ ಉಂಟಾಗುವ ತೊಂದರೆಯನ್ನು ಕೆಳಗಿನ ಅವತರಣಿಕೆ ಸ್ಪಷ್ಟೀಕರಿಸುತ್ತದೆ:

"The Sanjnas adopted in different systems of grammar are so variant that one cannot expect to make a successful study of any system of grammar without having a thorough acquaintance with its particular sets of sanjnas" (Ph. S. G: P. 69).

2. ವೈಯಾಕರಣನಿಂದ ವೈಯಾಕರಣನಿಗೆ, ಕಾಲದಿಂದ ಕಾಲಕ್ಕೆ ಸಂಜ್ಞೆಗಳ ಅರ್ಥ ವ್ಯಾಪ್ತಿಯಲ್ಲಿ ಅಂತರ ತಲೆದೋರುವುದುಂಟು. ಹಾಗೆಯೇ ಭಿನ್ನಾರ್ಥಕಗಳಾದ ಸಂಜ್ಞೆಗಳು ಏಕಾರ್ಥಕಗಳಾಗುವುದುಂಟು. 'ವಿಭಕ್ತಿ' ಮತ್ತು 'ಪ್ರತ್ಯಯ'ಗಳು ಮೊದಲಿನದಕ್ಕೆ ನಿದರ್ಶನವಾದರೆ 'ಸಂಧಿ' ಮತ್ತು 'ಸಂಹಿತೆ' ಮತ್ತಿನದಕ್ಕೆ ಉದಾಹರಣೆ.

3. ಕೆಲವೊಮ್ಮೆ ವ್ಯಾಕರಣಗಳು ತಮ್ಮ ಕಾಲದಲ್ಲಿ ಪ್ರಚುರವಾಗಿದ್ದ ಅಕೃತ್ರಿಮ ಸಂಜ್ಞೆಗಳಿಗೆ ಅರ್ಥವಿವರಣೆ ಕೊಡದೆ ಹೋಗುವುದುಂಟು. ಅಷ್ಟಾಧ್ಯಾಯಿ, ಕಾತಂತ್ರ, ಮೊದಲಾದ ಗ್ರಂಥಗಳಲ್ಲಿ ವಿವರಣೆಯಿಲ್ಲದೆ ಕೆಲವು ಸಂಜ್ಞೆಗಳು ಬಳಕೆಗೊಳ್ಳುವುದಕ್ಕೆ ಇದೂ ಒಂದು ಕಾರಣವಾಗಿದೆ. ಕಾತಂತ್ರದ "ಲೋಕೋಪಚಾರಾದ್ ಗ್ರಹಣಸಿದ್ಧಿ:"

(1-1-23) ಎಂಬ ಸೂತ್ರವಾಗಲೀ, ಸಿದ್ಧಹೇಮಶಬ್ದಾನುಶಾಸನದ "ಲೋಕಾತ್" (1-1-3) ಎಂಬ ಸೂತ್ರವಾಗಲೀ ಈ ವಿಚಾರಕ್ಕೆ ಒತ್ತುಕೊಡುತ್ತವೆ.

4. ಮಾತ್ರಾಲಾಭದ ದೃಷ್ಟಿಯಿಂದ ನಿರ್ಮಿಸಿದ ಅತಿ ಚಿಕ್ಕದಾದ ಸಂಜ್ಞೆಗಳು ಕಾಲಾನುಕ್ರಮದಲ್ಲಿ ಅರ್ಥವಾಗದೆ ಹೋಗುವುದುಂಟು. ಅಷ್ಟಾಧ್ಯಾಯಿಯ 'ಲಟ್' ಎಂಬಂತಹ ಸಂಜ್ಞೆಗಳು ಈ ವರ್ಗಕ್ಕೆ ಸೇರುತ್ತವೆ.

ಸಂಜ್ಞೆಗಳನ್ನು ವ್ಯಾಕರಣದಾದಿಯಲ್ಲಿ ಹೇಳುವುದು ಸಾಮಾನ್ಯವಾದ ಕ್ರಮ. ಅಷ್ಟಾಧ್ಯಾಯಿ, ಜೈನೇಂದ್ರ, ಶಾಕಟಾಯನ, ಸರಸ್ವತೀ ಕಂಠಾಭರಣ ಮೊದಲಾದವುಗಳಲ್ಲಿ ಮೊದಲ ಅಧ್ಯಾಯದ ಮೊದಲ ಪಾದದಲ್ಲಿ ಸಂಜ್ಞೆಗಳ ವಿವರಣೆ ಬರುತ್ತದೆ. ಕೆಲವು ಸಂಜ್ಞೆಗಳು ಉಳಿದ ಅಧ್ಯಾಯಗಳಲ್ಲಿ ಉಕ್ತವಾಗುವುದುಂಟು. ಆದರೆ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಆರಂಭದಲ್ಲಿಯೇ ಪ್ರತ್ಯೇಕ ಪ್ರಕರಣವಾಗಿ—ಹೆಚ್ಚಿನ ಸಂಜ್ಞೆಗಳನ್ನು ಹೇಳುವುದು ಕ್ರಮ:

ಕಾತಂತ್ರ—ಪ್ರಥಮಾಧ್ಯಾಯದ ಮೊದಲ ಪಾದ
ಸಿ. ಹೇ. ಶ.— "
ರೂಪಾವತಾರ—ಸಂಜ್ಞಾವತಾರ
ಪ್ರ. ಸಂ.—ಸಂಜ್ಞಾಸಂಗ್ರಹ
ರೂಪಮಾಲಾ—ಸಂಜ್ಞಾ ಮಾಲಾ
ಸಾ. ಪ್ರ.—ಸಂಜ್ಞಾಪ್ರಕರಣಮ್

ಪ್ರಕ್ರಿಯಾ ಸಂಗ್ರಹದಲ್ಲಿ "ತತ್ರಾದೌ ಶಾಸ್ತ್ರೇ ಸಂವ್ಯವಹಾರಾರ್ಥಂ ಸಂಜ್ಞಾ ಸಂಗ್ರಹ: ಕಥ್ಯತೇ" ಎಂಬುದಾಗಿ ಪ್ರಕರಣದ ಆರಂಭದಲ್ಲೇ ಉಕ್ತವಾಗಿರುವುದು ಗಮನಾರ್ಹ.

ಕನ್ನಡ ವ್ಯಾಕರಣಗಳು ಸಂಜ್ಞೆಗಳ ನಿರೂಪಣೆಯಿಂದ ಆರಂಭಗೊಳ್ಳುತ್ತವೆಯಾದರೂ ಪ್ರತ್ಯೇಕವಾದ ಪ್ರಕರಣದಲ್ಲಿ ಸಂಜ್ಞೆಗಳನ್ನು ಹೇಳುವುದು ಭೂಷಣ ಮಾತ್ರವಾಗಿದೆ. ಸಂಜ್ಞೆಗಳನ್ನು ವಿವರಿಸುವಲ್ಲಿಯೂ 'ಅಕ್ಷರ ಸಂಜ್ಞಾಕಾರ'ದ ನಿರೂಪಣೆಯನ್ನು ಮಾತ್ರ ಪ್ರಧಾನವಾಗಿ ಹೇಳುತ್ತವೆ; ಪದ ಮತ್ತು ಸಂಧಿ ಅಥವಾ ಸಂಹಿತೆಯ ವಿವರಣೆಯೊಂದಿಗೆ ಸಂಜ್ಞಾಪ್ರಕರಣ ಮುಗಿದುಬಿಡುತ್ತದೆ. ಹೀಗಿರುವುದಕ್ಕೆ ಬಹುಶಃ ಕಾತಂತ್ರವೇ ಕಾರಣವಾಗಿರಬೇಕು. ಕಾತಂತ್ರದಲ್ಲಿ ಲಿಂಗ, ಉಪಧಾ, ಅಪಾದಾನಾದಿ ಕಾರಕಗಳು, ಸಮಾಸ, ವಿಭಕ್ತಿ, ಧಾತು ಮೊದಲಾದ ಸಂಜ್ಞೆಗಳಿಗೆ ಬೇರೆ ಬೇರೆ ಅಧ್ಯಾಯಗಳಲ್ಲಿ ವಿವರಣೆ ನೀಡುವುದನ್ನು ಕಾಣಬಹುದು. ವಿಭಕ್ತಿಯ ಹೊರತಾಗಿ ಉಳಿದೆಲ್ಲವುಗಳ ವಿವರಣೆ ಕನ್ನಡ ವ್ಯಾಕರಣಗಳಲ್ಲೂ ಆಯಾ ಪ್ರಕರಣದಲ್ಲೇ ಬರುತ್ತದೆ.

ಕನ್ನಡ ವ್ಯಾಕರಣಗಳು ಶಿವಸೂತ್ರಗಳು ಹಾಗೂ ಪ್ರತ್ಯಾಹಾರಗಳನ್ನು ತ್ಯಜಿಸಿವೆ. ಸಂಜ್ಞೆಗಳ ಮಟ್ಟಿಗೆ ಅವುಗಳು ಐಂದ್ರ ಪದ್ಧತಿಗೆ ಋಣಿಗಳಾಗಿರುವುದು ಸ್ಪಷ್ಟ. ವರ್ಣಮಾಲೆಯ ನಿರೂಪಣೆಯಲ್ಲಿ ಇದು ಖಚಿತವಾಗಿ ಗೋಚರಿಸುತ್ತದೆ. ಸ್ವರ, ವ್ಯಂಜನ, ಸಂಧ್ಯಕ್ಷರ, ಸಮಾಸ, ನಾಮಿ, ಮೊದಲಾದವು ಪ್ರಾತಿಶಾಖ್ಯಗಳು ಹಾಗೂ ಕಾತಂತ್ರ

ವ್ಯಾಕರಣದಲ್ಲಿ ಪ್ರಯುಕ್ತವಾದವುಗಳಾಗಿವೆ. ಸಂಧಿ, ಸಂಹಿತೆ, ವಿಭಕ್ತಿ, ಕಾರಕ, ಸಮಾಸ, ತದ್ಧಿತ, ಆಖ್ಯಾತ ಮೊದಲಾದವು ಪಾಣಿನಿ ಮತ್ತು ಐಂದ್ರ—ಎರಡು ಸಂಪ್ರದಾಯ ಗಳಿಗೂ ಸಮಾನವಾಗಿವೆಯಾದ್ದರಿಂದ ಇವುಗಳನ್ನು ಬಳಸುವಲ್ಲಿ ಅವೆರಡೂ ಪ್ರಭಾವ ಬೀರಿವೆ. ಲಿಂಗ, ಯೋಗವಾಹ, ಎಂಬಿವನ್ನು ಕಾತಂತ್ರಸೂತ್ರ ವೃತ್ತಿಗಳಿಂದಲೂ, 'ವಿಸರ್ಗ'ವನ್ನು ಸಿದ್ಧಹೇಮ ಶಬ್ದಾನುಶಾಸನದಿಂದಲೂ ಎತ್ತಿಕೊಂಡಿರಬೇಕು. ಅಂತೆಯೆ 'ನಪ್'ಗೆ ಜೈನೇಂದ್ರಕ್ಕೂ, 'ಉಪಾಂತ್ಯ'ಕ್ಕೆ ಶಾಕಟಾಯನಕ್ಕೂ ಋಣಿಯಾಗಿರಬೇಕು. 'ನಪ್' ಒಂದನ್ನು ಬಿಟ್ಟರೆ ಬೇರೆ ಯಾವುದೇ ಕೃತ್ರಿಮ ಸಂಜ್ಞೆಯನ್ನು ಕನ್ನಡ ವ್ಯಾಕರಣ ಗಳು ಬಳಸಿಲ್ಲವೆಂಬುದನ್ನು ಗಮನಿಸಬೇಕು.

ಸಂಸ್ಕೃತ ವ್ಯಾಕರಣಗಳು ಬಳಸದಿರುವ ಆದರೆ ರೂಪದಲ್ಲಿ ಪೂರ್ಣವಾಗಿ ಸಂಸ್ಕೃತ ವಾಗಿರುವ 'ಅವರ್ಗ' ಎಂಬ ಸಂಜ್ಞೆಯನ್ನು ಕನ್ನಡ ವ್ಯಾಕರಣಗಳು ನಿರ್ಮಿಸಿಕೊಂಡಿವೆ. ಮಾತ್ರವಲ್ಲ, ದಡ್ಡಕ್ಕರ, ಸೊನ್ನೆ ಮೊದಲಾದ (ತದ್ಭವ) ಸಂಜ್ಞೆಗಳೂ ಬಳಕೆಗೊಂಡು ದುಂಟು. ಇದರಿಂದ ಸಂಸ್ಕೃತ ವ್ಯಾಕರಣಕ್ಕೆ ಅವುಗಳ ಋಣಭಾರವೇನೂ ಕಡಿಮೆಯಾಗಿಲ್ಲ.

## ನಿರೂಪಣಾತಂತ್ರ

ಸೂತ್ರ, ವಾರ್ತಿಕ, ಭಾಷ್ಯ, ವೃತ್ತಿ, ಟೀಕೆಗಳಲ್ಲಿ ಸಂಸ್ಕೃತ ವ್ಯಾಕರಣ ಹಬ್ಬಿ ಕೊಂಡಿದೆಯಷ್ಟೆ. ಆರಂಭದಲ್ಲಿ ವ್ಯಾಕರಣವೆಂದರೆ ಹಲವು ಸೂತ್ರಗಳು ಮಾತ್ರವಾಗಿರ ಬೇಕು—ಅಷ್ಟಾಧ್ಯಾಯಿಯಂತೆ. ಕಾಲಕ್ರಮೇಣ ಉಳಿದ ವಿವರಣಾತ್ಮಕ ಸಾಹಿತ್ಯ ಹುಟ್ಟಿ ಕೊಂಡಿರಬೇಕು. ಕನ್ನಡದಲ್ಲಿ ವ್ಯಾಕರಣಗಳು ಹುಟ್ಟಿಕೊಳ್ಳುವ ಹೊತ್ತಿಗೆ ಸಂಸ್ಕೃತ ವ್ಯಾಕರಣದಲ್ಲಿ ಮೇಲೆ ಹೇಳಿದಂತೆ ವಾಙ್ಮಯ ವಿಶಾಲವಾಗಿತ್ತು. ಹಾಗಾಗಿ ಕನ್ನಡ ವ್ಯಾಕರಣಗಳು 'ಸೂತ್ರ'ಗಳಲ್ಲಿ ವ್ಯಾಕರಣ ತತ್ವಗಳನ್ನು ಹಿಡಿದಿಟ್ಟು ಪೂರ್ವಕವಿ ಪ್ರಯೋಗಗಳಿಂದ ಅದನ್ನು ಸ್ಪಷ್ಟೀಕರಿಸುತ್ತವೆ. ಭೂಷಣ, ದರ್ಪಣಗಳು ಸೂತ್ರಾರ್ಥ ವನ್ನು ವೃತ್ತಿಯಲ್ಲಿ ಮತ್ತಷ್ಟು ಸ್ಪಷ್ಟೀಕರಿಸಿದ ಬಳಿಕವೇ ಪ್ರಯೋಗಗಳನ್ನು ಲಕ್ಷ್ಯವಾಗಿ ಕೊಡುತ್ತವೆ. ಹೀಗೆ ಸೂತ್ರ-ವೃತ್ತಿ-ಪ್ರಯೋಗಗಳ ಮೂಲಕ ವ್ಯಾಕರಣಾಂಶಗಳನ್ನು ಪ್ರತಿಪಾದಿಸುವ ಸಂಸ್ಕೃತ ವ್ಯಾಕರಣಗಳ ನಿರೂಪಣಾ ತಂತ್ರದ ಪ್ರಭಾವ ಕನ್ನಡ ವ್ಯಾಕರಣ ಗಳ ಮೇಲಾದುದು ಕಣ್ಣೊತ್ತಾಗಿದೆ.

## ಸೂತ್ರ ಸ್ವರೂಪ

ಪ್ರಾಚೀನ ಕಾಲದಲ್ಲಿ ಸೂತ್ರಶೈಲಿ ಶಾಸ್ತ್ರವಿಚಾರನಿರೂಪಣೆಗೆ ಅನಿವಾರ್ಯ ವೆನಿಸಿತ್ತು. "As the art of writing was not very common and as a result, the fundamental rules in every shastra had to be necessarily stored up in memory, especially so in Vyakarana. For mastering the Sutra, brevity, generally, was the soul of the

sutra works" (Paribhasha Sangraha: Introduction: P: 1) ಎಂಬ ಹೇಳಿಕೆ ಆ ಅನಿವಾರ್ಯತೆಗೆ ಕನ್ನಡಿ ಹಿಡಿಯುತ್ತದೆ. ಬರೆಯುವ ಪದಾರ್ಥದ (ತಾಡಪತ್ರ, ಭೂರ್ಜಪತ್ರ ಇತ್ಯಾದಿ) ಅಭಾವವೂ ಸೂತ್ರ ಶೈಲಿಗೆ ಕಾರಣವಾಗಿರಬಹುದೆಂಬ ಅಭಿಪ್ರಾಯವಿದೆ (Panini. P. 28). ಕೇವಲ ನಾಮಪದಗಳ ಪ್ರಚುರ ಪ್ರಯೋಗ, ಕ್ರಿಯಾಪದಗಳ ಸಂಪೂರ್ಣ ಅಭಾವ, ಭಾವನಾಮಗಳ, ಸಮಾಸಪದಗಳ ವಿಶೇಷವಾದ ಬಳಕೆ (ಭಾ. ಸಾ. ಚ. ಪು. 3)—ಇದು ಸೂತ್ರ ಶೈಲಿಯ ಪ್ರಧಾನ ಲಕ್ಷಣವಾಗಿದೆ. ಕೆಳಗಿನ ಕಾರಿಕೆ ಸೂತ್ರ ಲಕ್ಷಣದ ಬಗೆಗೆ ಪ್ರಸಿದ್ಧವಾಗಿದೆ.

"ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ
ಅಸ್ತೋಭಮನವದ್ಯಂಚ ಸೂತ್ರಂ ಸೂತ್ರವಿದೋ ವಿದುಃ"

ಸೂತ್ರ ಅತ್ಯಂತ ಕಡಮೆ ಸಂಖ್ಯೆಯ ಅಕ್ಷರಗಳಲ್ಲಿ ಹೇಳಿರಬೇಕು. (ಒಂದು ಅಕ್ಷರವನ್ನು ಉಳಿಸಿದರೆ ಸೂತ್ರಕಾರನಿಗೆ ಪುತ್ರೋತ್ಸವವಾದಷ್ಟು ಸಂತೋಷ). ಸಂದೇಹಕ್ಕೆ ಎಡೆಯಿರ ಕೂಡದು. ಸಾರವತ್ತಾಗಿರಬೇಕು. ಅವ್ಯಾಪ್ತಿ ಅತಿವ್ಯಾಪ್ತಿ ದೋಷಗಳಿಗೆ ಒಳಗಾಗದೆ, ವ್ಯಾಪಕವಾಗಿರಬೇಕು. ಅರ್ಥಾಂತಕವಾಗಿ ನಿಲ್ಲಕೂಡದು: ಎಂಬುದಿದರ ತಾತ್ಪರ್ಯ (ಪ್ರಾ. ಕ. ವ್ಯಾ: ಪು. 15). ಸೂತ್ರ ಶೈಲಿಯು ಅತ್ಯಂತ ಪ್ರಾಚೀನವಾದ ಸಂಕ್ಷಿಪ್ತ ಗದ್ಯ ಸ್ವರೂಪದ್ದು, ಶಾಸ್ತ್ರಸಾಹಿತ್ಯದ ಒಂದು ಲಕ್ಷಣ ಎಂಬುದಂತೂ ಖಚಿತ.

ಸಂಸ್ಕೃತದ ವ್ಯಾಕರಣಗಳೆಲ್ಲ ಸೂತ್ರಾತ್ಮಕವಾಗಿವೆ. ಕೆಲವೊಮ್ಮೆ ಸೂತ್ರಗಳನ್ನು ಜೋಡಿಸಿದರೆ ಕಾರಿಕೆಗಳಾಗುತ್ತವೆ (ಋ. ಪ್ರಾ.). ಸಂಸ್ಕೃತದ ವ್ಯಾಕರಣಗಳನ್ನನುಸರಿಸಿ ಭೂಷಣ ಗದ್ಯಸ್ವರೂಪದ ಸೂತ್ರ ಶೈಲಿಯನ್ನೇ ಬಳಸಿದೆ. ಅದರ ಸೂತ್ರಗಳು ಹೆಚ್ಚಾಗಿ ಕಾತಂತ್ರ, ಸಿದ್ಧಹೇಮ ಶಬ್ದಾನುಶಾಸನದ ಸೂತ್ರಗಳನ್ನು ಹೋಲುತ್ತವೆ. ಸ್ಮೃತಿ ದರ್ಪಣಗಳು ಕಂದಪದ್ಯದಲ್ಲಿರುವ ತಮ್ಮ ರಚನೆಗಳನ್ನು ಸೂತ್ರಗಳೆಂದೇ ಹೇಳುತ್ತವೆ. ಸಂಸ್ಕೃತ ವ್ಯಾಕರಣದ ರೀತಿಯನ್ನು ನೋಡಿದರೆ ಅವುಗಳನ್ನು ಕಾರಿಕೆಗಳೆಂದು ಕರೆಯುವುದು ಮೇಲೇನೋ (ಆಲೋಕ: ಪು: 6) ಎಂಬ ಅಭಿಪ್ರಾಯ ಒಂದಿದೆ. ಬಹುಶಃ ಕನ್ನಡ ಲಾಕ್ಷಣಿಕರು ಗದ್ಯದಲ್ಲಿರಲಿ, ಪದ್ಯದಲ್ಲಿರಲಿ, ಲಕ್ಷಣಗಳನ್ನು ತಿಳಿಸುವ ರಚನೆಗೆ 'ಸೂತ್ರ' ಎಂಬ ಪದಪ್ರಯೋಗ ಮಾಡಿರುವಂತೆ ಭಾಸವಾಗುತ್ತದೆ. ಸೂತ್ರದ ಅರ್ಥ ವ್ಯಾಪ್ತಿಯಲ್ಲಿ ವಿಸ್ತಾರವನ್ನವರು ತಂದುಕೊಂಡಿರಬೇಕೆಂದು ಹೇಳಬಹುದು.

## ಸೂತ್ರ ಪ್ರಭೇದ

ಸಂಸ್ಕೃತ ವ್ಯಾಕರಣಗಳಲ್ಲಿ ಸಾಮಾನ್ಯವಾಗಿ ಸಂಜ್ಞೆ, ಪರಿಭಾಷೆ, ವಿಧಿ, ನಿಯಮ, ಅಧಿಕಾರ, ಅತಿದೇಶಗಳೆಂದು ಷಡ್ವಿಧ ಸೂತ್ರಭೇದಗಳನ್ನೂ ಹೇಳಲಾಗುತ್ತದೆ: (ಕ. ಶ. ಪ್ರ: ಪು: 9–11, ಪ್ರಾ. ಕ. ವ್ಯಾ: ಪು: 15–16).

1. ಸಂಜ್ಞಾಸೂತ್ರ: ಸಂಜ್ಞೆಯನ್ನು ವಿಧಿಸುವ ಸೂತ್ರ.

2. ಪರಿಭಾಷಾ ಸೂತ್ರ : (The key to interpretation) ಸೂತ್ರಾರ್ಥಗಳನ್ನು ಮಾಡುವುದಕ್ಕೆ ಸಾಧಕಗಳಾದ ವಾಕ್ಯವಿಶೇಷಗಳು.
3. ವಿಧಿಸೂತ್ರ : (The Statement of a general rule) ಅಪೂರ್ವವಾಗಿ ಯಾವುದಾದರೂ ಒಂದು ವಿಷಯವನ್ನು ಬೋಧಿಸುವ ವಾಕ್ಯವಿಶೇಷ.
4. ನಿಯಮಸೂತ್ರ : (A restrictive rule) ವಿಧಿಗೆ ವಿಷಯಗಳಾದ ಕೆಲವು ಎಡೆಗಳಲ್ಲಿ ಆ ವಿಧಿವಾಕ್ಯವನ್ನು ಬಾರದಂತೆ ಮಾಡುವುದು.
5. ಅಧಿಕಾರ ಸೂತ್ರ : (A head or governing rule) ತನಗಿಂತಲೂ ಮುಂದೆ ಇರುವ ಸೂತ್ರಗಳಲ್ಲಿ ತಾನು ಸಂಪೂರ್ಣವಾಗಾಗಲಿ ಏಕದೇಶದಿಂದಾಗಲಿ ಸಂಬಂಧಿಸಿಕೊಂಡು ಆ ಸೂತ್ರಾರ್ಥಕ್ಕೆ ಸಹಾಯ ಮಾಡುವ ವಾಕ್ಯಸಂದರ್ಭ.
6. ಅತಿದೇಶ ಸೂತ್ರ : (Extended application by analogy) ಒಂದರಲ್ಲಿಲ್ಲದ್ದನ್ನು ಆರೋಪಿಸಿ ಹೇಳುವ ಸೂತ್ರ.

ಸ್ಮೃತಿ ದರ್ಪಣಗಳು ಇಂತಹ ಪ್ರಭೇದಗಳ ಕುರಿತು ಮೌನ ತಾಳಿವೆ. ಬಹುಶಃ ಕನ್ನಡದಲ್ಲಿ ಸೂತ್ರ ರಚನೆ ಸ್ಪಷ್ಟವಾಗಿರುವುದು ಇದಕ್ಕೆ ಕಾರಣವಾಗಿರಬಹುದು. ಭೂಷಣ ಮಾತ್ರ ಅಧಿಕಾರ, ವಿಧಿ ಮತ್ತು ನಿಯಮ ಸೂತ್ರಗಳನ್ನು ಗಮನಿಸಿದೆ. ಸೂತ್ರ 1ರ ವೃತ್ತಿಯಲ್ಲಿ ''ಅಧಿಕಾರಾರ್ಥೋಽಪಾ'' ಎಂದೂ ಸಂಧಿವಿಧಾನದ ಮೊದಲ ಸೂತ್ರವಾದ 'ಸಂಧೌ' (ಸೂ. 18) ಎಂಬುದರ ವೃತ್ತಿಯಲ್ಲಿ ''ಸಂಧಾವಿತ್ಯಧಿಕಾರೋಽಯಂ'' ಎಂದೂ ಹೇಳುವಲ್ಲಿದನ್ನು ಗಮನಿಸಬಹುದು. ಜೈನೇಂದ್ರದಲ್ಲಿ 'ಸಂಧೌ' (4–3–68) ಅಧಿಕಾರ ಸೂತ್ರವಾಗಿದ್ದರೆ ಭೂಷಣ ಅದನ್ನೇ ಎತ್ತಿಕೊಂಡು ಅಧಿಕಾರ ಸೂತ್ರವೆಂದು ಹೇಳುವುದು ಸ್ವಾರಸ್ಯಕರವಾಗಿದೆ. 'ಸಿದ್ಧೇಸತ್ಯಾರಭ್ಯಮಾಣೋ ವಿಧಿರ್ನಿಯಮಾಯೇತಿ ನಿಯಮಾರ್ಥೋಽಯಂ ಯೋಗಃ' (ಸೂ. 20ರ ವೃತ್ತಿ) ಎಂದು ಭೂಷಣ ಹೇಳುವಲ್ಲಿ ವಿಧಿ ಮತ್ತು ನಿಯಮಗಳ ಪ್ರಸ್ತಾವ ಗಮನಿಸತಕ್ಕುದಿದೆ.

## ವೃತ್ತಿ

'ಸೂತ್ರಾರ್ಥಪ್ರಧಾನೋ ಗ್ರಂಥೋ ವೃತ್ತಿಃ' ಎಂಬ ಹೇಳಿಕೆಯಂತೆ ಸೂತ್ರದ ಅರ್ಥವನ್ನು ವಿಶೇಷ ಚರ್ಚೆಯಿಲ್ಲದೆ ಸಂಗ್ರಹವಾಗಿ ತಿಳಿಸುವ ರೀತಿಗೆ ವೃತ್ತಿಯೆಂದು ಹೆಸರು (D. S. G: P. 340). ವ್ಯಾಕರಣ ಗ್ರಂಥಗಳು ಉದಯವಾಗುವ ಕಾಲದಲ್ಲಿ ಸಂಸ್ಕೃತದಲ್ಲಿ 'ವೃತ್ತಿ'ಗಳಿರಲಿಲ್ಲವೆಂದೇ ತೋರುತ್ತದೆ. ಅಷ್ಟಾಧ್ಯಾಯಿಗೆ ಪಾಣಿನಿಯ ವೃತ್ತಿಯಿಲ್ಲ. ಕಾಲಕ್ರಮೇಣ ಹಿಂದಿನ ವ್ಯಾಕರಣ ಗ್ರಂಥಗಳಿಗೆ ವಾರ್ತಿಕ, ಭಾಷ್ಯ, ವೃತ್ತಿಗಳ ರಚನೆಯಾಗತೊಡಗಿತು. ಹಿಂದಿನ ವ್ಯಾಕರಣಗಳನ್ನು ಜನತೆ ಅರ್ಥಮಾಡಿಕೊಳ್ಳುವಲ್ಲಿ ಇದಿರಿಸಬೇಕಾಗಿ ಬಂದ ಕ್ಲಿಷ್ಟತೆಯೇ ಇದಕ್ಕೆ ಕಾರಣ. ಅಷ್ಟಾಧ್ಯಾಯಿಗೆ ಕಾಶಿಕಾ ವೃತ್ತಿಯಂತೆ ಕಾತಂತ್ರಕ್ಕೆ ದುರ್ಗಸಿಂಹನ ವೃತ್ತಿ ಅತ್ಯಂತ ಪ್ರಾಚೀನವಾದುದು. ಇತರ ವ್ಯಾಕರಣ ಸಂಪ್ರದಾಯಗಳನ್ನು ಆರಂಭಿಸಿದ ವೈಯಾಕರಣರಲ್ಲಿ ಹೆಚ್ಚಿನವರು ತಮ್ಮ ಸೂತ್ರಗಳಿಗೆ

ತಾವೇ ವೃತ್ತಿ ರಚನೆ ಮಾಡಿದರು. ಶಾಕಟಾಯನ, ಸಿದ್ಧಹೇಮ ಶಬ್ದಾನುಶಾಸನಗಳಿಗೆ ಸೂತ್ರಕಾರರೇ ವೃತ್ತಿಕಾರರೂ ಆಗಿರುವುದನ್ನು ಗಮನಿಸಬಹುದು. ವೃತ್ತಿಯಲ್ಲಿ ಪ್ರಯೋಗಗಳನ್ನು ಕೊಡುವುದು ಕ್ರಮ. ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ವೃತ್ತಿಗೆ ಹೆಚ್ಚಿನ ಸ್ಥಾನವಿದೆ. ಇಂಥ ಸಂಸ್ಕೃತದ ಸಂಪ್ರದಾಯದಿಂದ ಪ್ರಭಾವಿತರಾಗಿ ಭೂಷಣ ಮತ್ತು ದರ್ಪಣದ ಕರ್ತೃಗಳು ತಮ್ಮ ಸೂತ್ರಗಳಿಗೆ ತಾವೇ ವೃತ್ತಿಗಳನ್ನು ರಚಿಸಿದರು. ಭೂಷಣಕಾರ ವೃತ್ತಿ ರಚನೆಗೆ ಕಾರಣವನ್ನು ಕೊಟ್ಟಿಲ್ಲ. ದರ್ಪಣಕಾರನು "ಪ್ರಾಸಚ್ಛಂದೋನ್ವಯವಿನ್ಯಾಸದಿಂ" ಶಬ್ದಗಳು ಆಚೀಚೆ ಚೆದರಿ ಹೋಗಿವೆ. ಇದರಿಂದ ಸರಿಯಾಗಿ ಅರ್ಥವನ್ನು ಗ್ರಹಿಸುವುದು ಕ್ಲಿಷ್ಟವಾಗುವುದು. ಹಾಗಾಗಿ ತಾತ್ಪರ್ಯಾರ್ಥವಾಗುವಂತೆ ಅರ್ಥ ವೃತ್ತಿ ಬರೆದೆ ಎಂದು ಹೇಳಿಕೊಂಡಿದ್ದಾನೆ (ಸೂ. 6).

## ಪ್ರಯೋಗ

ಪ್ರಾಚೀನರು ಕಾವ್ಯಭಾಷೆಗೆ ವ್ಯಾಕರಣ ರಚಿಸಿದಂತೆ ಭಾವಿಸಲೆಡೆಯಿದೆ. ಛಂದಸ್ಸು ಅಲಂಕಾರ, ರೀತಿಗಳಿಗೆ ದೃಷ್ಟಾಂತಗಳನ್ನು ಕೊಡುವಲ್ಲಿ ಪದ್ಯಗಳನ್ನು ಉದ್ಧರಿಸಿದರೆ ಅರ್ಥವಿದೆ. ಆದರೆ ವ್ಯಾಕರಣ ತತ್ವಗಳಿಗೆ ಪದ್ಯಗಳನ್ನು ಪ್ರಯೋಗವಾಗಿ ಕೊಡುವ ಅಗತ್ಯವೇನು ? ಮೊದಲು ಹೇಳಿದಂತೆ ಪ್ರಾಚೀನ ವೈಯಾಕರಣರ ದೃಷ್ಟಿಯಲ್ಲಿದ್ದುದು ಪದ್ಯ ಕಾವ್ಯದ ಭಾಷೆಯೆಂಬುದು ಇದರಿಂದ ಖಚಿತ. ಸಂಸ್ಕೃತ ವ್ಯಾಕರಣಗಳಲ್ಲಿ ಪೂರ್ವಕವಿಗಳ ಪದ್ಯಗಳನ್ನು ಉದಾಹರಣೆಯಾಗಿ ಕೊಡುವ ಕ್ರಮವಿಲ್ಲ. ವೃತ್ತಿ ಭಾಷ್ಯಗಳಲ್ಲಿ ಕೆಲವೊಮ್ಮೆ ಕಾರಿಕೆಗಳನ್ನು ಉದ್ಧರಿಸುವ ಕ್ರಮವಿದೆ. ಕಾಶಿಕಾ ವೃತ್ತಿಯಲ್ಲಿ, ಜೈನೇಂದ್ರದ ಮಹಾ ವೃತ್ತಿಯಲ್ಲಿ, ಶಾಕಟಾಯನ ವ್ಯಾಕರಣದ ಅಮೋಘಾವೃತ್ತಿಯಲ್ಲಿ ಕೆಲವು ಕಾರಿಕೆಗಳು ಗೋಚರಿಸುತ್ತವೆ. ಹೇಮಚಂದ್ರನ ದ್ವ್ಯಾಶ್ರಯ ಕಾವ್ಯ ಈ ನಿಟ್ಟಿನಲ್ಲಿ ಒಂದು ವಿಶಿಷ್ಟ ಕೃತಿ. ಆತನು ಪ್ರಾಕೃತ ವ್ಯಾಕರಣಾಂಶಗಳಿಗೆ ಲಕ್ಷ್ಯಗಳಾಗಿ ಬೃಹತ್ಕಥೆ ಮತ್ತು ನಾಟಕಗಳಿಂದ ಪ್ರಯೋಗಗಳನ್ನು ಎತ್ತಿಕೊಂಡು ಉದಾಹರಿಸುವುದನ್ನು ಕಾಣಬಹುದು.

ಕನ್ನಡ ವ್ಯಾಕರಣಗಳಲ್ಲಿ ಪೂರ್ವಕವಿಗಳ ಪ್ರಯೋಗಗಳೇ ಲಕ್ಷ್ಯಗಳಾಗಿ ಬರುವುದು ಹೆಚ್ಚು. ಸ್ಮೃತಿ ದರ್ಪಣಗಳು ಪೂರ್ವಗ್ರಂಥಗಳ ಪದ್ಯಗಳನ್ನೇ ಹೆಚ್ಚಾಗಿ ಉದಾಹರಿಸುತ್ತವೆ. ಭೂಷಣವು ವಾಕ್ಯಗಳನ್ನು ಹೆಚ್ಚಾಗಿಯೂ ಪದ್ಯಗಳನ್ನು ವಿರಳವಾಗಿಯೂ ಉದಾಹರಿಸುತ್ತದೆ. ಛಂದಸ್ಸು ಅಲಂಕಾರ ಶಾಸ್ತ್ರಗಳ ರೀತಿಗನುಸರಿಸಿ ಬಹುಶಃ ಕನ್ನಡ ವ್ಯಾಕರಣಗಳು ಪೂರ್ವಕವಿಗಳ ಪದ್ಯಗಳನ್ನು ಉದಾಹರಿಸಿರಬೇಕು.

ಕನ್ನಡ ವ್ಯಾಕರಣಗಳು ಕೆಲವೊಮ್ಮೆ ಸಂಸ್ಕೃತ ವ್ಯಾಕರಣಗಳಿಂದ ಪ್ರಯೋಗಗಳನ್ನು ಅನುವಾದಿಸಿ ಕೊಡುತ್ತವೆ (ನೋ: ಅಧ್ಯಾಯ: 8, 13).

| | |
|---|---|
| ಗಾಂ ದೋಗ್ಧಿ ಪಯಃ | ಪಶುವಂ ಪಾಲಂ ಕರೆದಂ |
| ದೇವದತ್ತೇನ ಕೃತಂ | ದೇವದತ್ತನಿಂ ಮಾಡಲ್ಪಟ್ಟುದು |
| ಪರಶುನಾ ಛಿನತ್ತಿ | ಪರಶುವಿಂ ಕಡಿದಂ |

| | |
|---|---|
| ಪ್ರಮಾಣಂ ವೇದಾಃ | ವೇದಂಗಳ್ ಪ್ರಮಾಣಂ |
| ದೇವದತ್ತಾಯ ರೋಚತೇ ಮೋದಕಃ | ದೇವದತ್ತಂಗೆ ರುಚಿಯಾಯ್ತು ಮೋದಕಂ |

ಹೀಗೆ ಸೂತ್ರ—ವೃತ್ತಿ—ಪ್ರಯೋಗಗಳ ಮೂಲಕ ಕನ್ನಡ ವ್ಯಾಕರಣ ತತ್ವಗಳನ್ನು ನಿರೂಪಿಸುವ ತಂತ್ರದಲ್ಲಿ ಸಂಸ್ಕೃತ ವ್ಯಾಕರಣಗಳ ನಿರೂಪಣಾತಂತ್ರದ ದಟ್ಟವಾದ ಪ್ರಭಾವ ದೃಗ್ಗೋಚರವಾಗುತ್ತದೆ.

## ಸೂತ್ರಗಳ ಸ್ವೀಕರಣ

ಕನ್ನಡ ವ್ಯಾಕರಣಗಳು ಸಂಸ್ಕೃತದ ಬೇರೆ ಬೇರೆ ವ್ಯಾಕರಣ ಸಂಪ್ರದಾಯಗಳಿಂದ ಸೂತ್ರಗಳನ್ನು ಎತ್ತಿಕೊಂಡಿವೆ. ಹಾಗೆ ಸ್ವೀಕರಿಸುವಲ್ಲಿ ಭೂಷಣವು ನೇರವಾಗಿ ಇಲ್ಲವೆ ಅಲ್ಪ ಮಾರ್ಪಾಟಿನೊಂದಿಗೆ ಎತ್ತಿಕೊಂಡರೆ ಸ್ಮೃತಿ ದರ್ಪಣಗಳು ನೇರವಾದ ಇಲ್ಲವೆ ವಿವರಣಾತ್ಮಕ ಅನುವಾದಗಳ ಮೂಲಕ ಎತ್ತಿಕೊಳ್ಳುತ್ತವೆ. ಅಲ್ಲಿನ ಸೂತ್ರ ಇಲ್ಲಿ ಕೆಲವೊಮ್ಮೆ ವೃತ್ತಿಯಾಗಿ ಪರಿವರ್ತನೆಗೊಳ್ಳುವುದಿದೆ. ಕೆಲವೊಮ್ಮೆ ಅಲ್ಲಿನ ಎರಡು ಮೂರು ಸೂತ್ರಗಳನ್ನು ಜೊತೆಗೂಡಿಸಿ ಅಲ್ಪ ಪರಿವರ್ತನೆಯೊಂದಿಗೆ ಎತ್ತಿಕೊಳ್ಳುವುದುಂಟು. ಇವೆಲ್ಲವುಗಳ ಸಮಗ್ರ ಪರಿಶೀಲನೆ ಕಾರಕಗಳ ವಿವೇಚನೆಯಲ್ಲಿ ಬರುತ್ತದೆ. ದೃಷ್ಟಾಂತ ಕ್ಕಾಗಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಬಹುದು.

1. ನೇರವಾದ ಸ್ವೀಕರಣ :

| | | | | | |
|---|---|---|---|---|---|
| ಭೂಷಣ | ಸೂ. | 16 | ಸ. ಕಂ. | ಸೂ. | 1-1-25 |
| ” | ” | ” | ಸಾ. ಪ್ರ. | ” | 7-1 |
| ” | ” | 75 | ಅಷ್ಟಾಧ್ಯಾಯಿ | ” | 2-3-47 |
| ” | ” | 76 | ” | ” | 2-3-2 |
| ” | ” | 78 | ” | ” | 2-3-18 |
| ” | ” | 80 | ಚಾಂದ್ರ | ” | 2-1-33 |
| ” | ” | 84 | ಅಷ್ಟಾಧ್ಯಾಯಿ | ” | 2-3-28 |
| ” | ” | 194 | ಶಾಕಟಾಯನ | ” | 1-1-22 |
| | | | ಸಿ. ಹೇ. ಶ. | ” | 3-3-3 |

2. ಅಲ್ಪ ಮಾರ್ಪಾಟಿನೊಡನೆ ಸ್ವೀಕರಣ :

| | | | |
|---|---|---|---|
| ಭೂಷಣ | ಸೂ. 85 | ಚಾಂದ್ರ | 2-1-95 |
| ” | ಸೂ. 128 | ಕಾತಂತ್ರ | 2-5-6 |

3. ಸೂತ್ರವೃತ್ತಿಯಾಗಿ—

| | |
|---|---|
| ಭೂಷಣ. ಸೂ. 76ರ ವೃತ್ತಿ | ಕಾತಂತ್ರ 2-4-17 |
| " ಸೂ. 78ರ ವೃತ್ತಿ | " 2-4-14 |
| (ಯಃ ಕ್ರಿಯಾಂ ಕರೋತಿ ಸ ಕರ್ತಾ) | |
| ಭೂಷಣ ಸೂ. 78ರ ವೃತ್ತಿ | ಅಷ್ಟಾಧ್ಯಾಯಿ 1-4-42 |
| (ಸಾಧಕ ತಮಂ ಕರಣಂ) | ಜೈನೇಂದ್ರ 1-2-113 |
| | ಸಿ. ಹೇ. ಶ. 2-2-24 |
| ಭೂಷಣ ಸೂ. 86ರ ವೃತ್ತಿ | ಅಷ್ಟಾಧ್ಯಾಯಿ ; 1-4-45 |

4. ಸೂತ್ರಗಳನ್ನು ಜೊತೆಗೂಳಿಸಿ.

ಭೂಷಣ. ಸೂ. 81 ಅಷ್ಟಾಧ್ಯಾಯಿ 1-4-33 ಮತ್ತು 37

5. ನೇರವಾದ ಅನುವಾದ :

| | |
|---|---|
| ದರ್ಪಣ ಸೂ. 142 | ಅಷ್ಟಾಧ್ಯಾಯಿ 2-3-28 |
| " " 143ರ ವೃತ್ತಿ | ಚಾಂದ್ರ 2-1-95 |
| " " 144 | ಕಾತಂತ್ರ 2-4-11 |

6. ವಿವರಣಾತ್ಮಕ ಅನುವಾದ :

| | |
|---|---|
| ಸ್ಮೃತಿ ಸೂ. 85 | ಕಾತಂತ್ರ : 3-1-4 |
| ದರ್ಪಣ ಸೂತ್ರ 103ರ ವೃತ್ತಿ | ಸ. ಕಂ. 1-1-30 |
| " " 137 " | ಅಷ್ಟಾಧ್ಯಾಯಿ 2-3-2 |
| " " 138 " | " 1-4-49 |

ಭಾಷ್ಯದ ವಾಕ್ಯಗಳು ಸೂತ್ರಗಳಾಗಿಯೂ ವೃತ್ತಿವಾಕ್ಯಗಳು ವೃತ್ತಿವಾಕ್ಯಗಳಾಗಿಯೂ ಇಲ್ಲಿ ಬಂದುದುಂಟು :

| | |
|---|---|
| ಸ್ಮೃತಿ ಸೂತ್ರ 46 ಮತ್ತು 47 | ಮ. ಭಾ. 2-1-6 |
| ಭೂಷಣ. ಸೂ. 75ರ ವೃತ್ತಿ | ಜೈನೇಂದ್ರ 1-4-55ರ ಮಹಾವೃತ್ತಿ |
| ದರ್ಪಣ. ಸೂ. 136ರ ವೃತ್ತಿ | |

## ವ್ಯಾಕರಣಾಂಶಗಳ ಅಳವಡಿಕೆ

ಎಲ್ಲಾ ಭಾಷೆಗಳಿಗೂ ಸಮಾನವಾದ ತತ್ವಗಳನ್ನು ಹೇಳುವಲ್ಲಿ ಒಂದು ಭಾಷೆಯ ವ್ಯಾಕರಣದ ರೀತಿಯನ್ನೇ ಇನ್ನೊಂದು ಭಾಷೆಯ ವ್ಯಾಕರಣವೂ ಅಳವಡಿಸಿ ಹೇಳಲು ಸಾಧ್ಯವಿದೆ. ಅಲ್ಲಿ ಪ್ರಮಾದಗಳೇನೂ ಸಂಭವಿಸುವುದಿಲ್ಲ. ಶಬ್ದೋತ್ಪತ್ತಿ, ಯಮಲಗಳ

ಅನುನಾಸಿಕತೆ, ಸಂಧಿಯ ವ್ಯಾಖ್ಯೆ, ಸಮಾಸ ಲಕ್ಷಣ, ಧಾತುವಿನ ಕಲ್ಪನೆ ಇತ್ಯಾದಿಗಳು ಅಂಥ ತತ್ವಗಳಾಗಿದ್ದು ಸಂಸ್ಕೃತ ವ್ಯಾಕರಣದ ನಿರೂಪಣೆಯನ್ನು ಯಥಾವತ್ತಾಗಿ ಸ್ವೀಕರಿಸಿ ಕೊಳ್ಳಲು ಕನ್ನಡ ವ್ಯಾಕರಣಗಳಿಗೆ ಸಾಧ್ಯವಾಗಿದೆ. ಅವು ಸಂಸ್ಕೃತ ವ್ಯಾಕರಣಗಳ ಪ್ರಭಾವದ ಫಲವೆಂಬುದೂ ಸತ್ಯ. ಆದರೆ ದ್ವಿವಚನ, ಸಂಬೋಧನೆಯಲ್ಲಿ ಪ್ರಥಮೆ, ನವವಿಧ ಲಿಂಗ ಕಲ್ಪನೆ, ವಿಶೇಷಣವು ವಿಶೇಷ್ಯಾನುಸಾರ, ಲಿಂಗ, ವಚನ, ವಿಭಕ್ತಿಗಳನ್ನು ಪಡೆಯುವುದು ಇತ್ಯಾದಿ ಸಂಸ್ಕೃತ ವ್ಯಾಕರಣಗಳ ತತ್ವಗಳನ್ನು ಕಣ್ಣುಮುಚ್ಚಿ ಅನುಸರಿಸಿ ದುದರಿಂದ ತಲೆದೋರಿರುವ, ಕನ್ನಡಕ್ಕೆ ತೀರ ಅಸಹಜವಾದ, ವ್ಯಾಕರಣಾಂಶಗಳಾಗಿದ್ದು ಸಂಸ್ಕೃತ ವ್ಯಾಕರಣಗಳ ದುಷ್ಪರಿಣಾಮಕ್ಕೆ ದೃಷ್ಟಾಂತಗಳಾಗಿವೆ.

ಮೇಲಿನ ಪರಿಶೀಲನೆಯಿಂದ ಕನ್ನಡ ವ್ಯಾಕರಣಗಳ ಮೇಲೆ ಸಂಸ್ಕೃತ ವ್ಯಾಕರಣಗಳ ಪ್ರಭಾವ ದಟ್ಟವಾಗಿ ಬಿದ್ದಿರುವುದು ಸ್ಪಷ್ಟವಾಗುತ್ತದೆ. ಆ ಪ್ರಭಾವದ ಸಮಗ್ರ ಸ್ವರೂಪವನ್ನು ಮುಂದಿನ ಅಧ್ಯಾಯಗಳಲ್ಲಿ ಸಮೀಕ್ಷಿಸಬೇಕಾಗಿದೆ.

ಅಡಿಟಿಪ್ಪಣಿಗಳು

1. Foreign Models in Tamil Grammar: P. 301. "Sanskrit became the Lingua Franca of India and the Far East, especially among the learned. Ideas spread from one corner to another as quickly as possible. Society, law, administration, religion, Philosophy, Technology and Science became Pan-Indian. Books on these subjects were written and studied in Sanskrit not only by Brahmins but also by non-brahmins like architects, astrologers, etc."

2. ತಮಿಳಿನ ವ್ಯಾಕರಣ ಗ್ರಂಥಗಳಾದ ವೀರಚೋಳಿಯಂ (ಕ್ರಿ. ಶ. 11ನೇ ಶತಮಾನ) ಪಿರಯೋಕ ವಿವೇಕಂ (ಕಿ. ಶ. 17ನೇ ಶತಮಾನ) ಮತ್ತು ಇಲಕ್ಕಣಕ್ಕೊತ್ತು (ಕ್ರಿ. ಶ. 17ನೇ ಶತಮಾನ)—ಇವುಗಳ ಮೇಲಾಗಿರುವ ಸಂಸ್ಕೃತ ವ್ಯಾಕರಣಗಳ ಪ್ರಭಾವದ ಬಗ್ಗೆ ನೋ. ಅದೇ ಪು. 35–36. "All the three proceed on the basis that Sanskrit grammar applies to all the languages of the world though differing from them in minor details. This may be taken as tantamount to saying that Sanskrit grammar can be looked upon as the universal grammar and that all the languages agree in having more or less the same linguistic universals."

ಕ್ರಿ. ಶ. 17ನೇ ಶತಮಾನದವನಾದ ಭಟ್ಟಾಕಳಂಕನೂ ಸಂಸ್ಕೃತ ವ್ಯಾಕರಣ ತತ್ವಗಳು ಎಲ್ಲ ಭಾಷೆಗಳಿಗೂ ಸಮಾನವೆಂದೂ ಅವುಗಳನ್ನು ಪ್ರಕ್ರಿಯಾ ವಿಶೇಷಗಳಿಗೆ ಅನ್ವಯಿಸಿದಾಗ ಮಾತ್ರ ವಿಶಿಷ್ಟಗಳಾಗುತ್ತವೆ (ಶಾಸನ. ಸೂ. 442ರ ವ್ಯಾಖ್ಯಾನ) ಎಂದೂ ಹೇಳಿದ್ದಾನೆ.

3. "ಕನ್ನಡ ಭಾಷೆ ಅನುಶಾಸನಕ್ಕನರ್ಹ, ಸಂಸ್ಕೃತ ಭಾಷೆ ಸರ್ವಶಾಸ್ತ್ರೋಪಯೋಗಿ, ಮಹಾಜನ ಪರಿಗ್ರಾಹ್ಯ, ಅನುಶಾಸನಕ್ಕರ್ಹ ಎಂದು ಆಗ್ರಹವನ್ನು ಮಾಡುವ ಪಂಡಿತಮನ್ಯರಾದ ಕೇವಲ ಸಂಸ್ಕೃತಜ್ಞರ ಮನಸ್ಸಿನಲ್ಲಿ ನೆಲೆಗೊಂಡಿರುವ ಅನ್ಯಥಾ ಖ್ಯಾತಿಯು ತೊಲಗುವ ಸಲುವಾಗಿ ಸಂಸ್ಕೃತ ಶಬ್ದಗಳಂತೆ ಕನ್ನಡ ಭಾಷಾಶಬ್ದಗಳೂ ಅನುಶಾಸನಕ್ಕೆ ವಿಷಯಗಳು ಎಂಬುದನ್ನು ತಿಳಿಯಪಡಿಸುವ ಸಲುವಾಗಿ", ಸಂಸ್ಕೃತದಲ್ಲಿ ಕರ್ಣಾಟಕ ಶಬ್ದಾನುಶಾಸನವನ್ನು ಬರೆದಿರುವುದಾಗಿ ಭಟ್ಟಾಕಳಂಕ ವ್ಯಾಖ್ಯೆಯಲ್ಲಿ ಸೂಚಿಸಿದ್ದಾನೆ (ನೋ. ಕ. ಶ. ಪ್ರ ಪು. 6). ಆದರೆ ಕೇವಲ ಆ ಒಂದು ಕಾರಣಕ್ಕಾಗಿ ಸಂಸ್ಕೃತದಲ್ಲಿ ಬರೆದನೆಂಬುದು ಅಷ್ಟು ಯುಕ್ತಿಯುಕ್ತವಾಗಿ ತೋರುವುದಿಲ್ಲ. ಏಕೆಂದರೆ ಮಲೆಯಾಳ ತೆಲುಗು ಭಾಷೆಗಳ ಮೊದಲ ವ್ಯಾಕರಣ ಕೃತಿಗಳು, ಅಂತೆಯೆ ತಮಿಳಿನ 'ವೀರಚೋಳಿಯಂ' (ಕ್ರಿ. ಶ. 11ನೇ ಶತಮಾನ) ಸಂಸ್ಕೃತದಲ್ಲಿರುವುದು ಗಮನಾರ್ಹ.

# ಅಧ್ಯಾಯ 5

## ವಿಷಯ ವಿಂಗಡಣೆ

ಸಂಸ್ಕೃತದ ಪ್ರಕ್ರಿಯಾ ಪದ್ಧತಿಯ ವ್ಯಾಕರಣಗಳ ವಿಷಯ ವಿಂಗಡಣೆ ಸರಳ ಹಾಗೂ ಪ್ರಾಚೀನವೆಂಬುದು ವಿದ್ವಾಂಸರ ಅಭಿಮತ.[1] ಕಾತಂತ್ರವು ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಅತ್ಯಂತ ಪ್ರಾಚೀನವಾದುದೆಂದೂ ಅಷ್ಟಾಧ್ಯಾಯಿಯ ಪ್ರಕ್ರಿಯಾತ್ಮಕ ರೂಪಗಳಲ್ಲಿ ರೂಪಾವತಾರ ಬಹಳ ಹಿಂದಿನದೆಂದೂ ಹಿಂದೆಯೇ ವಿಚಾರಿಸಲಾಗಿದೆ. ಸಂಸ್ಕೃತದ ಕೆಲವು ಪ್ರಕ್ರಿಯಾತ್ಮಕ ವ್ಯಾಕರಣಗಳ ವಿಷಯಾನುಕ್ರಮ ಹೀಗಿದೆ:

1. ಸಿದ್ಧಹೇಮ ಶಬ್ದಾನುಶಾಸನ—ಸಂಜ್ಞಾ, ಸಂಧಿ—ಸ್ವರಸಂಧಿ, ವ್ಯಂಜನ ಸಂಧಿ, ವಿಸರ್ಗಸಂಧಿ, ವಿಭಕ್ತಿ, ಸ್ವಾದಿಸಂಧಿ, ಕಾರಕ.... ಸ್ತ್ರೀಪ್ರತ್ಯಯ, ಸಮಾಸ, ಆಖ್ಯಾತ, ಧಾತು, ಕೃದಂತ, ತದ್ಧಿತಾಂತ—ಹೆಚ್ಚು ಕಡಮೆ ಈ ಕ್ರಮದಲ್ಲಿದೆ.
2. ಸಾರಸ್ವತ ಪ್ರಕ್ರಿಯೆ—ಸಂಜ್ಞಾ, ಪರಿಭಾಷಾ, ಸ್ವರಸಂಧಿ, ಪ್ರಕೃತಿಭಾವ, ವ್ಯಂಜನಸಂಧಿ, ವಿಸರ್ಗಸಂಧಿ .. ಯುಷ್ಮದಸ್ಮದ್ ಪ್ರಕ್ರಿಯಾ... ಅವ್ಯಯ, ಸ್ತ್ರೀಪ್ರತ್ಯಯ, ಕಾರಕ, ಸಮಾಸ, ತದ್ಧಿತ, ಆಖ್ಯಾತ, ಕೃದಂತ.
3. ಕಚ್ಚಾಯನ ವ್ಯಾಕರಣ—ಸಂಧಿಕಪ್ಪ (ಸಂಜ್ಞೆ, ಸಂಧಿ) ನಾಮಕಪ್ಪ (ಸರ್ವನಾಮ, ವಿಭಕ್ತಿ, ಕಾರಕ, ಸಮಾಸ, ತದ್ಧಿತ) ಆಖ್ಯಾತಕಪ್ಪ, ಕಿಬ್ಬಿಧಾನಕಪ್ಪ.

ಸ್ಮೃತಿ ಭೂಷಣ ದರ್ಪಣಗಳು ಪ್ರಕ್ರಿಯಾ ಪದ್ಧತಿಗೆ ಸೇರಿದ ವ್ಯಾಕರಣಗಳು. ಇವುಗಳ ವಿಷಯಾನುಕ್ರಮದ ಮೇಲೆ ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳ ಪ್ರಭಾವ ಕಣ್ಣೊತ್ತಾಗಿದೆ.

### ಕನ್ನಡ ವ್ಯಾಕರಣಗಳ ವಿಷಯ ವಿಂಗಡಣೆ

| ಸ್ಮೃತಿ | ಭೂಷಣ | ದರ್ಪಣ |
|---|---|---|
| 1. ಸಂಧಿ (ಸಂಜ್ಞೆ, ಸಂಧಿ) | 1. ಸಂಜ್ಞಾವಿಧಾನ<br>2. ಸಂಧಿವಿಧಾನ | 1. ಸಂಧಿ (ಸಂಜ್ಞೆ, ಸಂಧಿ) |

| | | |
|---|---|---|
| 2. ನಾಮಂ | 3. ವಿಭಕ್ತಿ ವಿಧಾನ<br>4. ಕಾರಕ ವಿಧಾನ<br>5. ಯುಂಷ್ಮದಾದಿವಿಧಾನ | 2. ನಾಮಂ |
| 3. ಸಮಾಸ | 6. ಸಮಾಸ ವಿಧಾನ | 3. ಸಮಾಸ |
| 4. ತದ್ಧಿತ | 7. ತದ್ಧಿತ ವಿಧಾನ | 4. ತದ್ಧಿತ |
| 5. ಆಖ್ಯಾತ | 8. ಆಖ್ಯಾತ | 5. ಆಖ್ಯಾತ |
| — | — | 6. ಧಾತು |
| — | — | 7. ಅಪಭ್ರಂಶ |
| — | 9. ಅವ್ಯಯಂ | 8. ಅವ್ಯಯಂ |
| — | 10. ನಿಪಾತ | — |

ಮೇಲಿನ ಗ್ರಂಥಗಳ ವಿಷಯಗಳ ಜೋಡಣೆಯಲ್ಲಿ ಸ್ಮೃತಿ ದರ್ಪಣಗಳದ್ದು ಒಮ್ಮತದ ಹಾದಿ, ಭೂಷಣ ಅವೆರಡರಿಂದ ದೂರಸಾಗಿದೆ. ಅಧ್ಯಾಯಗಳ ಹೆಸರು ಮತ್ತು ಸಂಖ್ಯೆಗಳಲ್ಲಿ ವ್ಯತ್ಯಾಸವಿದ್ದರೂ ಭೂಷಣ ದರ್ಪಣಗಳು ಸ್ಮೃತಿಗಿಂತ ಹೆಚ್ಚಿನ ವ್ಯಾಕರಣ ವಿಚಾರಗಳನ್ನು ಹೆಚ್ಚು ಕಡಿಮೆ ಏಕಾಭಿಪ್ರಾಯದಿಂದ ನಿರೂಪಿಸುತ್ತವೆ.

**ತುಲನೆ**

ಸ್ಮೃತಿಯಲ್ಲಿ "ತರದಿಂದಂ ಸಂಧಿನಾಮಸ್ಥಿತಿ ವಿತತ ಸಮಾಸಕ್ರಮಂ ತದ್ಧಿತಂ ವಿಸ್ತರ ರೂಪಾಖ್ಯಾತಮಾಖ್ಯಾತಮುಂ ಎನೆದೊರೆವೆತ್ತಯ್ದುಮಧ್ಯಾಯವರ್ಗಂ" (ಪದ್ಯ-6) ಎಂದು ಪ್ರಕರಣಗಳು ಐದೆಂದು ಲೆಕ್ಕಮಾಡಿ ಹೇಳಿದ್ದರೂ ಮುಂದೆ "ಸಂಜ್ಞಾ ಪ್ರಕರಣ" ವನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಅದೇ ಪ್ರಕರಣದ ಕೊನೆಯಲ್ಲಿ "ಇದು ಶಬ್ದಸ್ಮೃತಿಯೊಳ್ ಸಂಜ್ಞಾಪ್ರಕರಣಂ ಸಮಾಪ್ತಂ" ಎಂದೂ ಮುಕ್ತಾಯಗೊಳಿಸಲಾಗಿದೆ. ಹೀಗೆ ಕೂಡಿಸಿ ನೋಡಿದಲ್ಲಿ ಸ್ಮೃತಿಯಲ್ಲಿ ಪ್ರಕರಣಗಳೈದಲ್ಲ, ಆರು. ದರ್ಪಣದಲ್ಲಿಯೂ "ಕ್ರಮದಿಂದೆ ಸಂಧಿ ನಾಮಂ ಸಮಾಸಂ ಆ ತದ್ಧಿತಂ ಪೊದಳ್ದ ಆಖ್ಯಾತಂ ಸಮುದಿತ ಧಾತುಮಪಭ್ರಂಶಂ ಅವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್" (ಸೂ. 8) ಎಂದು ಹೇಳುವಲ್ಲಿ ಸಂಜ್ಞಾಪ್ರಕರಣದ ಪ್ರಸ್ತಾಪವಿಲ್ಲ. ಸಂಧಿಪ್ರಕರಣದ ಮೊದಲ ಸೂತ್ರದಲ್ಲಿ "ಆರಯೆ ತಚ್ಛಾಸ್ತ್ರ ವ್ಯವಹಾರಜ್ಞಾನಾರ್ಥಮಾಗಿ ಪೇಟಲ್ಪಡೆಗುಂ ಧೀರರಿಂ ಅಕ್ಷರ ಸಂಜ್ಞಾಕಾರಂ ವ್ಯಾಕರಣವಾದಿಯೊಳ್ ಪರಿವಿಡಿಯಿಂ" ಎಂದು ಕೆಲವು ಸಂಜ್ಞೆಗಳನ್ನು ನಿರೂಪಿಸಿದುದಲ್ಲದೆ ಕೊನೆಯಲ್ಲಿ "ಇದು ಪೂರ್ವಪ್ರಕರಣಮಿಂತಿದರೊಳ್ ಸಾಕಲ್ಯ ಸಂಜ್ಞೆ ಪೇಟ್ದುದನಲ್ ಬೇಡ ಉದಿತ ಪ್ರಕರಣಗಣಸೂತ್ರದಿಪ್ಪುದಿಂ ಸಂಜ್ಞೆಯೊಡನೆ ಪೇಟಲ್ಪಡೆಗುಂ" (ಸೂ. 61) ಎಂದೂ ಸಾರಲಾಗಿದೆ. ಮಾತ್ರವಲ್ಲ, "ಇದು ಸಂಜ್ಞಾ ಪ್ರಕರಣಂ" ಎಂದು ಪ್ರಕರಣ ಮುಗಿಯುತ್ತದೆ (ವಾಸ್ತವವಾಗಿ ಸಂಧಿಯ ನಿರೂಪಣೆ ತೊಡಗುವುದೇ 'ಸ್ವರಮಿದಿರೊಳಿರೆ'(ಸೂ.62) ಎಂಬ ಸೂತ್ರದಿಂದಾಗಿದೆ). ಭೂಷಣದಲ್ಲಿ

ಸಂಜ್ಞೆಗಳನ್ನು ನಿರೂಪಿಸುವ ಸಲುವಾಗಿ ಪ್ರತ್ಯೇಕವಾದ ಪ್ರಕರಣ ವಿನ್ಯಾಸಲಾಗಿರವುದು ಅದರ ವೈಶಿಷ್ಟ್ಯ.

ಸ್ಮೃತಿಯಲ್ಲಿ ಭೂಷಣದ ವಿಭಕ್ತಿ, ಕಾರಕ, ಯುಷ್ಮದಾದಿ, ಅವ್ಯಯ ನಿಪಾತ ವಿಧಾನಗಳಾಗಲಿ ದರ್ಪಣದ ಧಾತು, ಅಪಭ್ರಂಶ ಅವ್ಯಯ ಪ್ರಕರಣಗಳಾಗಲಿ ಇಲ್ಲ. ಭೂಷಣದ ವಿಭಕ್ತಿ, ಕಾರಕ, ಯುಷ್ಮದಾದಿ ವಿಧಾನಗಳಲ್ಲಿ ಪ್ರತಿಪಾದಿತ ವಿಚಾರಗಳು ಸ್ಮೃತಿಯ ನಾಮಪ್ರಕರಣದಲ್ಲಿ ಬರುತ್ತವೆ. ಯುಷ್ಮದಾದಿ ವಿಧಾನದ ಸೂತ್ರ ಸಂಖ್ಯೆ 114, 119, 121 ಮತ್ತು 123ರಲ್ಲಿ ನಿರೂಪಿತ ವಿಚಾರಗಳು ಸ್ಮೃತಿಯ ಸಮಾಸ ಪ್ರಕರಣದ ಅನುಕ್ರಮ ಸೂತ್ರ ಸಂಖ್ಯೆ 66, 65, 65 ಮತ್ತು 66ರಲ್ಲಿ ಬರುತ್ತವೆ. ಭೂಷಣದ ಸೂತ್ರ ಸಂಖ್ಯೆ 116, 117, 120 ಮತ್ತು 122ರಲ್ಲಿ ಪ್ರತಿಪಾದಿತ ವಿಷಯಗಳು ಸ್ಮೃತಿಯಲ್ಲಿಲ್ಲ.

ಭೂಷಣದಲ್ಲಿ ಸ್ಮೃತಿ ದರ್ಪಣಗಳ ನಾಮಪ್ರಕರಣವಾಗಲೀ ದರ್ಪಣದ ಧಾತು ಮತ್ತು ಅಪಭ್ರಂಶಪ್ರಕರಣಗಳಾಗಲೀ ಇಲ್ಲ. ಆದರೆ ನಾಮಪ್ರಕರಣದಲ್ಲಿ ಪ್ರತಿಪಾದಿತ ವಿಷಯಗಳು ಭೂಷಣದ ವಿಭಕ್ತಿ, ಕಾರಕ, ಯುಷ್ಮದಾದಿ ವಿಧಾನಗಳಲ್ಲಿ ಬರುತ್ತವೆ. ದರ್ಪಣದ ಅಪಭ್ರಂಶ ಪ್ರಕರಣದ ಕೆಲವೊಂದು ವಿಚಾರಗಳನ್ನು ಯುಷ್ಮದಾದಿ ವಿಧಾನ ದಲ್ಲಿ (ಸೂತ್ರ 116, 117, 118, 122) ನಿರವಿಸಲಾಗಿದೆ.

ದರ್ಪಣವು ಪ್ರಕರಣ ವಿಭಜನೆಯಲ್ಲಿ ಪೂರ್ಣವಾಗಿ ಸ್ಮೃತಿಯನ್ನೇ ಅನುಸರಿಸಿರು ವುದರಿಂದ ಅದರ ಎಲ್ಲ ಪ್ರಕರಣಗಳೂ ಇದರಲ್ಲಿದ್ದು, ಆದರಲ್ಲಿಲ್ಲದ ಧಾತು, ಅಪಭ್ರಂಶ ಮತ್ತು ಅವ್ಯಯ ಪ್ರಕರಣಗಳು ಹೊಸತಾಗಿ ಸೇರಿಕೊಂಡಿವೆ. ಭೂಷಣದ ವಿಭಕ್ತಿ, ಕಾರಕ, ಯುಷ್ಮಧಾದಿ ವಿಧಾನಗಳ ಮಟ್ಟಿಗೆ ದರ್ಪಣವು ಸ್ಮೃತಿಯನ್ನೇ ಅನುಸರಿಸುತ್ತದೆ. ಭೂಷಣದ ನಿಪಾತ ವಿಧಾನಕ್ಕೆ ದರ್ಪಣದಲ್ಲಿ ಪ್ರತ್ಯೇಕ ಪ್ರಕರಣ ಲಭ್ಯವಾಗದಿದ್ದರೂ ಅಲ್ಲಿ ನಿರೂಪಿತವಾದ ಎಲ್ಲ ವಿಚಾರಗಳೂ ಇದರ ಅವ್ಯಯ ಪ್ರಕರಣದಲ್ಲಿ ಬರುತ್ತವೆ.

## ಹಿನ್ನೆಲೆ

ಕನ್ನಡ ವ್ಯಾಕರಣಗಳ ವಿಷಯಾನುಕ್ರಮಕ್ಕೆ ಭದ್ರವಾದ ಹಿನ್ನೆಲೆಯಿದೆ. ಅವು ಕಾತಂತ್ರ ವ್ಯಾಕರಣಕ್ಕೆ ಧಾರಾಳವಾಗಿ ಋಣಿಗಳಾದರೂ ಪ್ರಕರಣ ವ್ಯವಸ್ಥೆಯಲ್ಲಿ ಪೂರ್ಣ ವಾಗಿ ಅದನ್ನೇ ಅವಲಂಬಿಸಿಕೊಂಡಿಲ್ಲ. ಅದರಲ್ಲಿ ಅಧ್ಯಾಯಗಳ ಮತ್ತು ಪಾದಗಳ ವ್ಯವಸ್ಥೆಯಿದ್ದರೆ ಈ ಗ್ರಂಥಗಳು ಅದನ್ನು ಪೂರ್ಣವಾಗಿ ಕೈಬಿಟ್ಟು ಅಧ್ಯಾಯ ಮತ್ತು ಪಾದಗಳ ಸ್ಥಾನದಲ್ಲಿ 'ಪ್ರಕರಣ'ವೆಂದಿಟ್ಟುಕೊಂಡಿವೆ. ಅಂಥ ಪ್ರಕರಣಗಳ ಹೊಂದಾಣಿಕೆ ಯಲ್ಲಿ ಕಾತಂತ್ರವನ್ನು ಸ್ಮೃತಿ ಅಧಿಕವಾಗಿಯೂ ದರ್ಪಣ ಆಂಶಿಕವಾಗಿಯೂ ಅನುಸರಿಸಿರುವುದು ಸ್ಪಷ್ಟವಾಗುತ್ತದೆ.

| ಕಾತಂತ್ರ | ಸ್ಮೃತಿ | ದರ್ಪಣ |
|---|---|---|
| 1. ಸಂಧಿ ಪ್ರಕರಣ | 1. ಸಂಧಿ | 1. ಸಂಧಿ |
| 1) ಸಂಜ್ಞಾ 1-1 | 1) ಸಂಜ್ಞಾ | 1) ಸಂಜ್ಞಾ |
| 2) ಸಂಧಿ | 2) ಸಂಧಿ | 2) ಸಂಧಿ |
| ಅ) ಸ್ವರಸಂಧಿ 1-2 | ಅ) ಸ್ವರಸಂಧಿ | ಅ) ಸ್ವರಸಂಧಿ |
| ಆ) ಪ್ರಕೃತಿಭಾವ 1-3 | ಆ) ಪ್ರಕೃತಿಭಾವ | ಆ) ಪ್ರಕೃತಿಭಾವ |
| ಇ) ವ್ಯಂಜನಸುಧಿ 1-4 | ಇ) ವ್ಯಂಜನಸಂಧಿ | ಇ) ವ್ಯಂಜನಸಂಧಿ |
| ಈ) ವಿಸರ್ಗಸಂಧಿ 1-5 | — | — |
| | ಈ) ದ್ವಿತ್ವ ಸಂಧಿ | ಈ) ದ್ವಿತ್ವ ಸಂಧಿ |
| 2. ನಾಮ್ನಿಚತುಷ್ಟಯ ಪ್ರಕರಣ | 2. ನಾಮ ಪ್ರಕರಣ | 2. ನಾಮಪ್ರಕರಣ |
| 1) ವಿಭಕ್ತಿಗಳು | 1) ಲಿಂಗ ವಚನ ವಿಭಕ್ತಿ | 1) ಲಿಂಗ, ವಚನ, ವಿಭಕ್ತಿ |
| 2) ಸರ್ವನಾಮಗಳು, ನಾಮ ಸಂಖ್ಯಾವಾಚಕ 2–1,2,3 | 2) ಸರ್ವನಾಮ | 2) ಸರ್ವನಾಮ, ವಿಶೇಷಣ |
| 3) ಕಾರಕ ಪ್ರಕರಣ 2-4 | 3) ಕಾರಕ | 3) ಕಾರಕಗಳು |
| 4) ಸಮಾಸ ಪ್ರಕರಣ 2-5 | 4) ಸಮಾಸ ಪ್ರಕರಣ | 4) ಸಮಾಸ ಪ್ರಕರಣ |
| 5) ತದ್ಧಿತಗಳು 2-6 | 5) ತದ್ಧಿತ ಪ್ರಕರಣ | 5) ತದ್ಧಿತ ಪ್ರಕರಣ |
| 3. ಆಖ್ಯಾತ ಪ್ರಕರಣ | 5) ಆಖ್ಯಾತ ಪ್ರಕರಣ | 5) ಆಖ್ಯಾತ ಪ್ರಕರಣ |
| 4. ಕೃತ್ಪ್ರಕರಣ | | 6) ಧಾತು ಪ್ರಕರಣ |
| | | 7) ಅಪಭ್ರಂಶ |
| | | 8) ಅವ್ಯಯ |

ಸಂಧಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸ್ಮೃತಿ ದರ್ಪಣಗಳ ಮೇಲೆ ಕಾತಂತ್ರದ ನೇರವಾದ ಪ್ರಭಾವವಿದೆ. ಸಂಧಿಯೊಡನೆ ಪ್ರಕೃತಿಭಾವವನ್ನು ಸೇರಿಸಿ ಹೇಳುವುದು ಕಾತಂತ್ರ ಹಾಗೂ ಪ್ರಾತಿಶಾಖ್ಯದ ಕ್ರಮ. ಹೆಚ್ಚೇಕೆ ? ಪ್ರಕರಣವೆಂಬ ಹೆಸರೇ ಕಾತಂತ್ರ ದಿಂದ ಎತ್ತಿಕೊಂಡುದಾಗಿದೆ. ಹೀಗೆ ಸಂಧಿ, ನಾಮ, ಸಮಾಸ, ತದ್ಧಿತ ಮತ್ತು ಆಖ್ಯಾತ ಪ್ರಕರಣಗಳನ್ನು ಸ್ಮೃತಿ ದರ್ಪಣಗಳಲ್ಲಿ ಕಾತಂತ್ರದ ಮಾದರಿಯಲ್ಲೇ ಅಳವಡಿಸಲಾಗಿದೆ. ಸಂಜ್ಞಾ ಪ್ರಕರಣವೆಂಬ ಪ್ರತ್ಯೇಕ ಪ್ರಕರಣಕ್ಕೆ ಆಸ್ಪದವೀಯದೆ ಸಂಧಿಪ್ರಕರಣದ ಅಂಗ ವಾಗಿ, ಆದರೆ ಪ್ರತ್ಯೇಕ ಪಾದವಾಗಿ ಕಾತಂತ್ರದಲ್ಲಿ ಬಂದಿದ್ದರೆ ಈಯೆರಡು ಗ್ರಂಥಗಳಲ್ಲೂ ಸಂಧಿಪ್ರಕರಣದ ಒಂದು ಭಾಗವಾಗಿ ಅಂತೆಯೇ ಪ್ರತ್ಯೇಕ ಪ್ರಕರಣವೆಂಬ ರೀತಿಯಲ್ಲಿ ಸಂಜ್ಞಾ ಪ್ರಕರಣ ಬಂದಿರುವುದು ಗಮನಾರ್ಹ. ಎರಡನೆಯದಾದ ನಾಮಪ್ರಕರಣದಲ್ಲಿ ನಾಮಪ್ರಕೃತಿ, ಸರ್ವನಾಮ, ವಿಶೇಷಣ, ಲಿಂಗ, ವಚನ, ವಿಭಕ್ತಿ, ಕಾರಕ ಇತ್ಯಾದಿಗಳನ್ನು

ಹೇಳಿರುವಲ್ಲಿಯೂ ಕಾತಂತ್ರದ ಪ್ರಭಾವವಿದೆ. ಸಮಾಸ ಮತ್ತು ತದ್ಧಿತಗಳು ಕಾತಂತ್ರದ ಎರಡನೇ ಅಧ್ಯಾಯದ ಐದು ಮತ್ತು ಆರನೆಯ ಪಾದಗಳಲ್ಲಿ ಬಂದರೆ ಸ್ಮೃತಿ ದರ್ಪಣ ಗಳಲ್ಲಿ ಪ್ರತ್ಯೇಕ ಪ್ರಕರಣಗಳೇ ಆಗಿವೆ. ಅವೆರಡನ್ನೂ ಪ್ರತ್ಯೇಕವಾದ ಪ್ರಕರಣಗಳೆಂದು ಕರೆಯುವಲ್ಲಿ, ಅವುಗಳ ಅನುಪೂರ್ವಿಯಲ್ಲಿ ಕಾತಂತ್ರದ ನೇರವಾದ ಪ್ರಭಾವ ಕಣ್ಣೊತ್ತಾಗಿದೆ.

ಪ್ರಕರಣಗಳ ಹೊಂಡಾಣಿಕೆಯಲ್ಲಿ ಸ್ಮೃತಿ ಪೂರ್ಣವಾಗಿ ಕಾತಂತ್ರಕ್ಕೆ ಋಣಿ. ದರ್ಪಣದ ಮೇಲಿನ ಐದು ಪ್ರಕರಣಗಳಿಗೆ ಕಾತಂತ್ರದ ಜೊತೆಯಲ್ಲಿ ಸ್ಮೃತಿಯೂ ಆದರ್ಶ ವಾಗಿದ್ದಿರಬೇಕು. ಉಳಿದ ಮೂರು ಪ್ರಕರಣಗಳಿಗೆ (ಧಾತು, ಅಪಭ್ರಂಶ, ಅವ್ಯಯ) ಬೇರೆಡೆಯಿಂದ ಪ್ರೇರಣೆ ದೊರಕಿರಬೇಕು. ಧಾತು ಪ್ರಕರಣಕ್ಕೆ ಸಂಸ್ಕೃತದಲ್ಲಿ ಪ್ರಸಿದ್ಧ ವಾಗಿರುವ ಧಾತು ಪಾಠ ಪ್ರೇರಕವಾಗಿರಬೇಕು. ಕೆಳಗಿನ ಸೂತ್ರ ಈ ಊಹೆಗೆ ಉಪಷ್ಟಂಭಕವಾಗಿದೆ.

"ವೇದಸಮನಾಗಿ ಭೀಮನಿ
ನಾದುದು ಸಂಸ್ಕೃತಧ ಧಾತುವಾತೆಜದಿಂದಂ
ಯಾದವ ಕಟಕಾಚಾರ್ಯನಿ
ನಾದುದು ಕರ್ಣಾಟಧಾತು ಕವಿಕೇಶವನಿಂ"

(ದರ್ಪಣ ಸೂ. 264)

ಅಪಭ್ರಂಶ ಪ್ರಕರಣಕ್ಕೆ ವರರುಚಿಯ ಪ್ರಾಕೃತ ಪ್ರಕಾಶ, ಹೇಮಚಂದ್ರನ ಪ್ರಾಕೃತ ವ್ಯಾಕರಣಗಳು ದಾರಿತೋರಿಸಿದರೆ ರೂಪಮಾಲೆಯಂಥ ಕೃತಿಗಳಿಂದ ಪ್ರೇರಣೆ ಹೊಂದಿ ಪ್ರತ್ಯೇಕವಾದ ಅವ್ಯಯ ಪ್ರಕರಣವನ್ನು ಹೇಳಿರಬೇಕು. ಅವ್ಯಯ ಮತ್ತು ನಿಪಾತಗಳನ್ನು ಒಟ್ಟು ಸೇರಿಸಿ 'ಅವ್ಯಯ ಪ್ರಕರಣ'ವಾಗಿ ಹೇಳುವಲ್ಲಿ ಭೂಷಣವು ಪ್ರಭಾವ ಬೀರಿರಬೇಕು. ಸ್ಮೃತಿ ದರ್ಪಣಗಳು 'ಪ್ರಕರಣ'ವೆನ್ನುವಲ್ಲಿ ಭೂಷಣ 'ವಿಧಾನ' ವೆನ್ನುತ್ತದೆ. ಚಂಡನ 'ಪ್ರಾಕೃತ ಲಕ್ಷಣ'ದಲ್ಲಿ ಅಧ್ಯಾಯಗಳನ್ನು 'ವಿಧಾನ' ಎನ್ನಲಾಗಿದೆ.[3] ವಿಭಕ್ತಿ ವಿಧಾನ, ಸ್ವರ ವಿಧಾನ, ವ್ಯಂಜನ ವಿಧಾನ ಇತ್ಯಾದಿ. ಇಲ್ಲಿನ 'ವಿಧಾನವನ್ನು ಭೂಷಣಕಾರ ನೋಡಿರಬೇಕು.[4] ಭೂಷಣದ ವಿಷಯ ವಿಭಜನೆಯ ಮೇಲೆ ಕಾತಂತ್ರದ ಜೊತೆಯಲ್ಲಿ ಧರ್ಮಕೀರ್ತಿಯ (ಕ್ರಿ. ಶ. 1090) ರೂಪಾವತಾರದ ಪೂರ್ವಾರ್ಧದ ಗಾಢವಾದ ಪ್ರಭಾವ ಬಿದ್ದಿದೆ.

ರೂಪಾವತಾರದ ಪ್ರಕರಣಗಳೊಂದಿಗೆ ಭೂಷಣವನ್ನು ಹೋಲಿಸಿದಾಗ ಈ ಅಂಶ ಹೆಚ್ಚು ಮುಂದಟ್ಟಾಗುವುದು.

| ರೂಪಾವತಾರ (ಪೂರ್ವಾರ್ಧ) | ಭೂಷಣ |
|---|---|
| 1. ಸಂಜ್ಞಾವತಾರ | 1. ಸಂಜ್ಞಾ ವಿಧಾನ |
| 2. ಸಂಹಿತಾವತಾರ | 2. ಸಂಧಿ ವಿಧಾನ |

| | |
|---|---|
| 3. ವಿಭಕ್ತ್ಯವತಾರ | 3. ವಿಭಕ್ತಿ ವಿಧಾನ |
| 4. ಅವ್ಯಯಾವತಾರ | 4. — |
| 5. ಸ್ತ್ರೀಪ್ರತ್ಯಯಾವತಾರ | — |
| 6. ಕಾರಕಾವತಾರ | 4. ಕಾರಕ ವಿಧಾನ |
| — | 5. ಯುಷ್ಮದಾದಿ |
| 7. ಸಮಾಸಾವತಾರ | 6. ಸಮಾಸ ವಿಧಾನ |
| 8. ತದ್ಧಿತಾವತಾರ | 7. ತದ್ಧಿತ ವಿಧಾನ |
| ಉತ್ತರಾರ್ಧ | 8. ಆಖ್ಯಾತ ವಿಧಾನ |
| ಧಾತು ಪ್ರತ್ಯಯ ಪಂಚಿಕಾ | 9. ಅವ್ಯಯ ವಿಧಾನ |
| (ದಶಲಕಾರ, ದಶಪಕ್ರಿಯೆ, ಕೃದಂತ) | 10. ನಿಪಾತ ವಿಧಾನ |

ಮೇಲಿನ ಹೋಲಿಕೆಯಿಂದ ಭೂಷಣದ ಯುಷ್ಮದಾದಿ ವಿಧಾನ ಮತ್ತು ನಿಪಾತ ವಿಧಾನಗಳು ಹೆಚ್ಚಿನವೆಂದು ತೋರುತ್ತವೆ. ಆದರೆ ರೂಪಾವತಾರದಲ್ಲಿ ಅವ್ಯಯಗಳನ್ನು ಪ್ರತ್ಯೇಕವಾಗಿ ನಿರೂಪಿಸಿದ್ದನ್ನೂ. ಅವ್ಯಯಗಳಲ್ಲಿ ನಿಪಾತಗಳು ಸೇರಿರುವುದನ್ನು ನೋಡಿದರೆ ನಿಪಾತಗಳನ್ನು ಪ್ರತ್ಯೇಕವಾಗಿ ಹೇಳಿದ್ದು ಭೂಷಣಕಾರನ ಸ್ವಂತಿಕೆಯೆನ್ನಬೇಕಾಗುತ್ತದೆ. ವರರುಚಿಯ ಪ್ರಾಕೃತ ಪ್ರಕಾಶದಲ್ಲಿ ಅವ್ಯಯಗಳನ್ನು ನಿಪಾತಗಳೆಂದು (ನವಮ ಪರಿಚ್ಛೇದಃ ನಿಪಾತಾಃ) ವರ್ಣಿಸುವುದನ್ನೂ ಹೇಮಚಂದ್ರನು ನಿಪಾತಗಳನ್ನು ಸೇರಿಸಿ ವಿಸ್ತಾರವಾಗಿ ಅವ್ಯಯಗಳೆಂದು (ಅವ್ಯಯಮ್ 8–2–175) ವರ್ಣಿಸುವುದನ್ನು ಗಮನಿಸಬಹುದು. ದರ್ಪಣದಲ್ಲಿ ನಿಪಾತಗಳು ಅವ್ಯಯ ಪ್ರಕರಣದಲ್ಲಿ ವಿವರಿಸಲ್ಪಟ್ಟಿವೆ. ಯುಷ್ಮದಾದಿ ವಿಧಾನವೆಂಬ ನಾಮಕರಣಕ್ಕೆ ನೇರವಾಗಲ್ಲದಿದ್ದರೂ ಪರೋಕ್ಷವಾಗಿ ಕಾತಂತ್ರವೇ ಪ್ರೇರಕವಾಗಿದ್ದಿರಬೇಕೆಂದು ತೋರುತ್ತದೆ. ಕಾತಂತ್ರದ ಸರ್ವನಾಮಗಳನ್ನು ನಿರೂಪಿಸುವ ಎರಡನೇ ಅಧ್ಯಾಯದ ಮೂರನೇ ಪಾದ "ಯುಷ್ಮದಸ್ಮದೋಃ ಪದಂ ಪದಾತ್ ಷಷ್ಠೀ ಚತುರ್ಥೀ ದ್ವಿತೀಯಾಸು ವಸ್ ನಸೌ" (ಕಾತಂತ್ರ 2–3–1) ಎಂಬ ಸೂತ್ರದಿಂದ ಆರಂಭಗೊಳ್ಳುತ್ತದೆ. ಈ ಸೂತ್ರದ ಆದಿಯ ಯುಷ್ಮದ್ ಎನ್ನುವ ಶಬ್ದವೇ ಯುಷ್ಮದಾದಿ ಎಂದು ಹೆಸರಿಸಲು ಕಾರಣವಾಗಿರಬೇಕು, ಯುಷ್ಮದಾದಿ ವಿಧಾನದ ಮೊದಲ ಸೂತ್ರ ನೀನ್ ಎಂದು ಆರಂಭವಾಗುವುದು ಗಮನಾರ್ಹ. ಭೂಷಣದ ಇನ್ನೊಂದು ಪ್ರತಿಯಲ್ಲಿ "ಯುಷ್ಮದಸ್ಮತ್ಪ್ರಕರಣಂ ಶಬ್ದರೀತಿ ವಿಧಾನಂ" (ರೈಸ್ ಸಂಪಾದಿಸಿದ ಭೂಷಣ) ಎಂದಿರುವುದೂ ಲಕ್ಷಿಸತಕ್ಕ ವಿಷಯ. ಸರ್ವನಾಮಗಳನ್ನು ಹೇಳುವ ಭಾಗಕ್ಕೆ ಈ ವಿಧವಾದ ಹೆಸರು ಸಂಸ್ಕೃತ ವ್ಯಾಕರಣಗಳಲ್ಲಿ ಬಳಕೆಯಲ್ಲಿತ್ತೆಂಬುದಕ್ಕೆ ಆಧಾರವಿದೆ. ಅನುಭೂತಿ ಸ್ವರೂಪಾಚಾರ್ಯರ (ಕ್ರಿ. ಶ. 13–14ನೆಯ ಶತಮಾನ) ಸಾರಸ್ವತ ಪ್ರಕ್ರಿಯೆಯಲ್ಲಿ "ಯುಷ್ಮದಸ್ಮತ್ ಪ್ರಕ್ರಿಯೆ" ಎನ್ನುವ ಅಧ್ಯಾಯವೊಂದಿದೆ. ಇಂದು

ಮಾಯವಾಗಿರುವ ಮೂಲ ಸಾರಸ್ವತ ವ್ಯಾಕರಣದಲ್ಲಿ (ಕಾಲ. ಕ್ರಿ. ಶ. 10ನೇ ಶತಮಾನ) ಇಂತಹ ಒಂದು ಪ್ರಕರಣ ಇದ್ದಿರಲಿಕ್ಕೆಯಿದೆ. ಹಾಗಿದ್ದಲ್ಲಿ ಭೂಷಣ ಸಾರಸ್ವತ ವ್ಯಾಕರಣಕ್ಕೂ ಋಣಿಯಾಗಿದ್ದಿರಬಹುದು. ಸಾರಸ್ವತ ವ್ಯಾಕರಣವೂ ಪ್ರಕ್ರಿಯಾ ಪದ್ಧತಿಯದೆಂಬುದು ಗಮನಾರ್ಹ.

ಒಟ್ಟಿನಲ್ಲಿ ಸ್ವರೂಪದಲ್ಲಿ ಪ್ರಕ್ರಿಯಾ ಗ್ರಂಥಗಳಾಗಿರುವ ಕನ್ನಡ ವ್ಯಾಕರಣಗಳು ವಿಷಯ ವಿಂಗಡಣೆಯಲ್ಲಿ ಸಂಸ್ಕೃತ ವ್ಯಾಕರಣದ ಬೇರೆ ಬೇರೆ ಪ್ರಕ್ರಿಯಾ ಗ್ರಂಥಗಳಿಂದ ಪ್ರೇರಿತವಾಗಿರುವುದು ಬಹು ಸ್ಪಷ್ಟ. ಸ್ಮೃತಿ ದರ್ಪಣಗಳು ಕಾತಂತ್ರಕ್ಕೆ ಹೆಚ್ಚು ಋಣಿಯಾಗಿದ್ದರೆ ಭೂಷಣ ರೂಪಾವತಾರಕ್ಕೆ ಋಣಿಯಾಗಿಯೂ ಕಾತಂತ್ರದ ಚೌಕಟ್ಟನ್ನು ಉಳಿಸಿಕೊಂಡಿದೆ ಎನ್ನುವುದು ಹೆಚ್ಚು ಸತ್ಯ. ಹಾಗಿದ್ದೂ ಕನ್ನಡ ವ್ಯಾಕರಣಗಳು ಕೃದಂತ ಪ್ರಕರಣಕ್ಕೆ ಸ್ಥಾನ ಕೊಡದಿರುವಲ್ಲಿ ಸಹಮಂತವಾಗಿರುವುದು ಗಮನಾರ್ಹ.

## ಅಡಿಟಿಪ್ಪಣಿಗಳು

1. O.A.S.G. Page 9-In the latest grammars which rearrange Panini's matter in much and the same way, we see probably a reversion to the singular and older system.

2. ಕಚ್ಚಾಯನ ವ್ಯಾಕರಣದಲ್ಲಿ ಸಂಜ್ಞೆಗಳ ವಿವರಣೆ 'ಸಂಧಿಕಪ್ಪ'ದ ಮೊದಲ ಕಾಂಡದಲ್ಲಿದೆ.

3. ನೋ.ಪ್ರಾ.ಪ್ರ. (ಬ) ಪು. 76-77. ಚಂಡನ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಆತನು ಹೇಮಚಂದ್ರನಿಗಿಂತ ಪೂರ್ವದ ವೈಯಾಕರಣನೆಂಬುದು ವಿದ್ವಾಂಸರ ಒಮ್ಮತದ ಅಭಿಪ್ರಾಯ.

4. ಕಚ್ಚಾಯನ ವ್ಯಾಕರಣದಲ್ಲಿ ಕೃದಂತಗಳನ್ನು ಹೇಳುವ ಭಾಗಕ್ಕೆ ಕಿಬ್ಬಿಧಾನ (ಕೃತ್‌ವಿಧಾನ) ಕಪ್ಪವೆಂದು ಹೆಸರು.

# ಅಧ್ಯಾಯ 6

## ವರ್ಣಮಾಲೆ

ಸಂಸ್ಕೃತದಲ್ಲಿ ಶಿಕ್ಷಾ ಗ್ರಂಥಗಳು ಪ್ರಧಾನವಾಗಿಯೂ ಪ್ರಾತಿಶಾಖ್ಯಗಳು ಆಂಶಿಕವಾಗಿಯೂ ನಾದದ (Tone) ಹುಟ್ಟು, ವರ್ಣೋತ್ಪತ್ತಿ ಸ್ಥಾನ, ವರ್ಣವಿಭಜನೆ, ವರ್ಣಮಾಲೆಗಳ ಕುರಿತು ವಿವೇಚಿಸುತ್ತವೆ. ಭಾಷ್ಯ, ಟೀಕಾ, ವೃತ್ತಿಗ್ರಂಥಗಳೂ ಸಾಂದರ್ಭಿಕವಾಗಿ ಈ ವಿಚಾರಗಳನ್ನು ಪ್ರಸ್ತಾವಿಸುತ್ತವೆ. ಹಾಗೆ ಅದಕ್ಕಾಗಿಯೇ ವಿನ್ಯಾಸಲಾಗಿಟ್ಟ ಗ್ರಂಥಗಳಿರುವುದರಿಂದ ಸಂಸ್ಕೃತದ ಶಬ್ದಾನುಶಾಸನಗಳು (ಸೂತ್ರಪಾಠ) ಮೇಲಿನವುಗಳ ಕುರಿತು ವಿವೇಚಿಸುವುದು ಕಡಿಮೆ.

ಕನ್ನಡದಲ್ಲಿ ಸಂಸ್ಕೃತದಂತೆ ವ್ಯಾಕರಣಕ್ಕೆ ಪೂರಕ ಸಾಹಿತ್ಯಗಳು ಹುಟ್ಟಿಕೊಂಡಿಲ್ಲ. ವ್ಯಾಕರಣ ಗ್ರಂಥಗಳೂ ಅಷ್ಟಾಗಿ ಶಬ್ದೋತ್ಪತ್ತಿ, ಉಚ್ಚಾರಣಾ ಸ್ಥಾನ ಹಾಗೂ ವಿಧಾನಗಳ ಬಗ್ಗೆ ಹೆಚ್ಚು ಗಮನವಿತ್ತಿಲ್ಲ. ಆದರೆ ವರ್ಣಮಾಲೆಯನ್ನು ಮಾತ್ರ ನಿರೂಪಿಸಲು ಮರೆತಿಲ್ಲ.

**ಶಬ್ದೋತ್ಪತ್ತಿ :** (ಇಲ್ಲಿ ಶಬ್ದ ಎಂದರೆ ನಾದ-Tone-ಎಂದರ್ಥ).

ಶಬ್ದೋತ್ಪತ್ತಿ, ಅದರ ಸ್ವರೂಪ, ಕಾರ್ಯಗಳ ಕುರಿತು ಕನ್ನಡ ವ್ಯಾಕರಣಗಳಲ್ಲಿ ದರ್ಪಣ ಮಾತ್ರ ಸಂಕ್ಷಿಪ್ತವಾಗಿ ಹೇಳುತ್ತದೆ (ಸೂ. 9 ; 44). ಅಲ್ಲಿ ನಿರವಿಸಿದ ವಿಚಾರವನ್ನು ಹೀಗೆ ಸೂಚಿಸಬಹುದು.

1. ಶಬ್ದವೆಂಬುದು ದ್ರವ್ಯ
2. ಅದು ಜೀವನ (ಆತ್ಮನ) ಇಷ್ಟದಂತೆ (ಮನೋವೃತ್ತಿ ನಿಮಿತ್ತವಾಗಿ) ಅನುಕೂಲ ಪವನನಿಂದ ಹುಟ್ಟುತ್ತದೆ.
3. ಅದು ನಾಭಿಮೂಲದಲ್ಲಿ ಹುಟ್ಟುತ್ತದೆ
4. ಅದರ ಬಣ್ಣ ಶ್ವೇತ
5. ಅದರ ಕಾರ್ಯ ಶಬ್ದ
6. ಆ ಶಬ್ದವು ಧವಲವರ್ಣವಾಗಿದ್ದು ಅಕ್ಷರರೂಪವುಳ್ಳದ್ದಾಗಿದೆ.

(ಶಬ್ದದ ದ್ರವ್ಯತ್ವ ಮತ್ತು ಅದರ ಬಣ್ಣದ ಬಗ್ಗೆ ಹಿಂದೆಯೇ ಚರ್ಚಿಸಲಾಗಿದೆ. ಅದನ್ನು ಬಿಟ್ಟು ಉಳಿದವುಗಳನ್ನಿಲ್ಲಿ ವಿಚಾರಿಸಲಾಗುವುದು).

ಶಬ್ದ ದ್ರವ್ಯದ ಹುಟ್ಟಿನಲ್ಲಿ ಜೀವನ ಇಚ್ಛೆ ಮತ್ತು ಅನುಕೂಲ ಪವನದ ಅಗತ್ಯ ವನ್ನು ತೋರಿಸಿಕೊಟ್ಟುದು ಅರ್ಥವತ್ತಾಗಿದೆ. ಭಾರತೀಯರಲ್ಲಿ ಬಹಳ ಹಿಂದಿನ ಕಾಲದಿಂದಲೇ ಉಚ್ಛ್ವಾಸವನ್ನು ಧ್ವನಿಯನ್ನಾಗಿ ಪರಿವರ್ತಿಸಿಕೊಳ್ಳುವುದರ ಬಗ್ಗೆ ಖಚಿತ ವಾದ ಅಭಿಪ್ರಾಯವಿತ್ತು. ಆಗಮಗಳಲ್ಲಿ, ಅಂತೆಯೆ ಛಾಂದೋಗ್ಯ ಉಪನಿಷತ್ತಿನಲ್ಲಿ ದೇಹದ ಒಳಗಿನ ಗಾಳಿ, ಹೊರಗೆ ಬರುವಾಗ ಮಾತಿನ ಧ್ವನಿ (Speech Sound) ಯಾಗಿ ಪರಿವರ್ತಿತಗೊಳ್ಳುವ ವಿಚಾರವಿದೆ (LSOH. P. 85). ಋಗ್ವೇದ ಪ್ರಾತಿ ಶಾಖ್ಯದಲ್ಲಿ (13–1) ಈ ಬಗ್ಗೆ ಖಚಿತವಾದ ನಿರೂಪಣೆಯಿದೆ. ಪಾಣಿನೀಯ ಶಿಕ್ಷಾದ ಕಾರಿಕೆಯೊಂದು ಈ ದೃಷ್ಟಿಯಿಂದ ಅವಗಾಹಿಸಲು ಯೋಗ್ಯವಿದೆ :

> "ಆತ್ಮಾಬುದ್ಧ್ಯಾ ಸಮೇತ್ಯಾರ್ಥಾನ್ಮನೋಯುಂಕ್ತೇವಿವಕ್ಷಯಾ
> ಮನಃ ಕಾಯಾಗ್ನಿಮಾಹಂತಿ ಸಪ್ರೇರಯತಿ ಮಾರುತಂ" (6)

ಭರ್ತೃಹರಿಯೂ ಇದಕ್ಕೆ ದನಿಗೂಡಿಸಿದ್ದಾನೆ,

> "ಲಬ್ಧಕ್ರಿಯಃ ಪ್ರಯತ್ನೇನ ವಕ್ತುರಿಚ್ಛಾನುವರ್ತಿನಾ
> ಸ್ಥಾನೇಷ್ವಭಿಹಿತೋ ವಾಯುಃ ಶಬ್ದತ್ವಂ ಪ್ರತಿಪದ್ಯತೇ".

(ವಾಕ್ಯಪದೀಯ 1–108)

ಇಲ್ಲೆಲ್ಲ ಶಬ್ದದ ಉತ್ಪಾದನೆಯಲ್ಲಿರುವ ಬುದ್ಧಿಪೂರ್ವಕ ಪ್ರಯತ್ನ ಮತ್ತು ಆಂತರಿಕ ವಾಯುವಿನ ಪಾತ್ರವನ್ನು ಸ್ಪಷ್ಟೀಕರಿಸಲಾಗಿದೆ. ಇಂತಹ ಅಭಿಪ್ರಾಯದ ಪ್ರೇರಣೆಯಿಂದ ದರ್ಪಣಕಾರನು ಸೂತ್ರ ರಚಿಸಿರಬೇಕೆಂಬುದು ಸ್ಪಷ್ಟ.

'ಅನುಕೂಲ ಪವನ' ಎಂಬ ಮಾತು ಮತ್ತಷ್ಟು ವಿಚಾರಯೋಗ್ಯವಾಗಿದೆ. ಪ್ರಾಚೀನರು ಹೇಳುವಂತೆ ಒಡಲಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನವೆಂಬ ಐದು ವಾಯುಗಳಿವೆ. ಋಗ್ವೇದ ಪ್ರಾತಿಶಾಖ್ಯೆಯ ಪ್ರಕಾರ (13–1) ಪ್ರಾಣವಾಯು ಶಬ್ದವಾಗಿ ಮಾರ್ಪಡುತ್ತದೆ. ಕೆಲವು ವಿದ್ವಾಂಸರು ಉದಾನ ವಾಯು ವಿನಿಂದ ಶಬ್ದನಿರ್ಮಾಣವಾಗುವುದಾಗಿ ಹೇಳುತ್ತಾರೆಂದೂ ಅದಕ್ಕಾಗಿ ಶೌನಕನು ಪ್ರಾಣ ವಾಯುವೆಂದೇ ಒತ್ತಿ ಹೇಳುತ್ತಾನೆಂಬುದೂ ಉವ್ವಟನ ಅನ್ನಿಸಿಕೆ (ಋ ಪ್ರಾ. 13-19ರ ಭಾಷ್ಯ). ಬಹುಶಃ ದರ್ಪಣಕಾರನು ಇಂತಹ ಒಂದು ಅಭಿಪ್ರಾಯದಿಂದಲೇ 'ಪವನ' ಎಂದು ಮಾತ್ರ ಹೇಳದೆ 'ಅನುಕೂಲ ಪವನ' ಎಂದಿರಬೇಕು.

ನಾಭಿಮೂಲದಲ್ಲಿ ಶಬ್ದ ಹುಟ್ಟುವ ವಿಚಾರಕ್ಕೆ ಪ್ರಾಚೀನರ ಅಂದಿನ ನಂಬಿಕೆಯ ಬೆಂಬಲವಿದೆ. ವೈದಿಕ ಯೋಗ ಶಾಸ್ತ್ರಗಳಲ್ಲಿ ನಾದವು ನಾಭಿಯಲ್ಲಿ ಹುಟ್ಟುವುದೆಂದು ಹೇಳಿದೆ (ಪ್ರಾ. ಕ. ವ್ಯಾ. ಪು. 77). ತೈತ್ತಿರೀಯ ಪ್ರಾತಿಶಾಖ್ಯದ ಮಾಹಿಷೇಯ

ಭಾಷ್ಯದಲ್ಲಿ "ಔದರೇಣಾಗ್ನಿನಾ ಸಮೀರಿತ ಊರ್ಧ್ವಂ ನಾಭೀರುತ್ಥಿತೋ ಕಂಠಸ್ಯೋರಸಶ್ಚ ಸಂಧಾನೇ...." (ತೈ. ಪ್ರಾ. 2-2) ಎಂದು ನಿರವಿಸಿದ್ದರೆ ಶಬರ ಭಾಷ್ಯದಲ್ಲಿ "ವಾಯುರ್ನಾಭೇರುತ್ಥಿತಃ ಉರಸಿ ವಿಸ್ತೀರ್ಣಃ ಕಂಠೇವಿವರ್ತಿತಃ.... ವಿವಿಧಾನ್ ಶಬ್ದಾನಭಿವ್ಯನಕ್ತಿ" (1-3-25) ಎಂಬ ನಿರೂಪಣೆಯಿದೆ. ಆಧುನಿಕರೂ ಇದನ್ನು ಹೆಚ್ಚು ಕಡಮೆ ಸಮ್ಮತಿಸುತ್ತಾರೆ. "ಪ್ರಾಣವಾಯುವನ್ನು ಶ್ವಾಸಕೋಶದಿಂದ ಹೊರ ತಳ್ಳಲೂ, ಹೊರಗಿನ ಗಾಳಿಯನ್ನು ಮತ್ತೆ ಶ್ವಾಸಕೋಶಕ್ಕೆ ತುಂಬಿಕೊಳ್ಳಲೂ ಅರ್ಥಾತ್ ಶ್ವಾಸಕೋಶದ ಸಂಕುಚನ-ವಿವರಣಗಳಲ್ಲಿ ಮುಖ್ಯ ಪಾತ್ರವಹಿಸುವ, ಬಿಲ್ಲಿನಂತಿರುವ ಅಂಗವೊಂದು (diaphragm) ನಾಭಿಯ ಮೇಲಿದೆ. ಆದುದರಿಂದ ನಾಭಿಮೂಲದಲ್ಲಿ ಶಬ್ದ ಹುಟ್ಟುತ್ತದೆ ಎಂಬ ಮಾತಿನಲ್ಲಿ ಅಂಥ ವೈಚಿತ್ರ್ಯವೇನೂ ಇಲ್ಲ" (ಆಲೋಕ. ಪು. 18).

ಶಬ್ದದ್ರವ್ಯದ ಹುಟ್ಟಿನ ಸ್ವರೂಪವನ್ನು ಹೇಳುವಲ್ಲಿ "ಕಹಳೆಯ ಪಾಂಗಿನವೊಲ್" ಎಂಬ ಹೋಲಿಕೆ ಕೇವಲ ಅಲಂಕಾರಕ್ಕಾಗಿ ಬಂದುದಲ್ಲ. ಶಬ್ದದ್ರವ್ಯವು "ನೆಗಪಿದ ಕಹಳೆಯಾಕಾರದಿಂ....ಪುಟ್ಟುಗುಂ" (ಸೂ. 9ರ ವೃತ್ತಿ) ಎಂಬುದು ಮೇಲುನೋಟಕ್ಕೆ ಅರ್ಥವತ್ತಾಗಿಲ್ಲವೆಂಬಂತೆ ತೋರಿದರೂ ಕಹಳೆಯಲ್ಲಿ ಗಾಳಿ ಧ್ವನಿಯಾಗಿ ಮಾರ್ಪಡುವ ಸತ್ಯವೊಂದು ಅಡಗಿ ಕುಳಿತಿರುವುದನ್ನು ಕಡೆಗಣಿಸಬಾರದು. ಕಹಳೆಯನ್ನು ಊದುವವನು ಅದನ್ನು ಎತ್ತಿ ಹಿಡಿದು ಅದರಲ್ಲಿ ಗಾಳಿಯ ಒತ್ತಡವನ್ನು ಹಾಕುತ್ತಾನೆ. ಅವನು ಎಂದೂ ಅದರಲ್ಲಿ ಧ್ವನಿಯನ್ನು ತುಂಬುವುದಿಲ್ಲ. ಹಾಕಿದ ಒತ್ತಡ, ತುಂಬಿದ ಗಾಳಿ ಧ್ವನಿಯಾಗಿ ಮಾರ್ಪಡುತ್ತದೆ. ಹಾಗೆ ಆ ಕ್ರಿಯೆಯನ್ನು ದರ್ಪಣಕಾರ ಹೀಗೆ ಸಂಕೇತಿಸಿರಬೇಕೆಂದು ಹೇಳಬಹುದು. ಇನ್ನೂ ಒಂದು ರೀತಿಯಿಂದ ಕಹಳೆಯ ಹೋಲಿಕೆಯಲ್ಲಿ ಸೊಗಸು ಅಡಗಿದೆ. "ಕಹಳೆಯನ್ನು ಊದುವ ಕಡೆ ಇರುವ ತೂತು ಸಣ್ಣದು. ಆದರೆ ಅದರ ದೇಹ ಕ್ರಮೇಣ ದೊಡ್ಡದಾಗುತ್ತಾ ಹೋಗುತ್ತದೆ. ಹಾಗೆಯೇ ಶಬ್ದವೂ ಒಂದು ಕಡೆ ಹುಟ್ಟಿ ಅಲೆಯಲೆಯಾಗಿ ಹೊರಟು ಹರಡಿಕೊಳ್ಳುತ್ತದೆ" (ಆಲೋಕ. ಪು. 18).

ಶಬ್ದವು ಹುಟ್ಟುತ್ತದೆಯೇ ? ಅಲ್ಲ, ಅಭಿವ್ಯಕ್ತಗೊಳ್ಳುತ್ತದೆಯೆ ? ಈ ಕುರಿತು ಭಾರತೀಯರಲ್ಲಿ ಎರಡು ಅಭಿಪ್ರಾಯಗಳಿವೆ. ನೈಯಾಯಿಕರು ಶಬ್ದ ಹುಟ್ಟುತ್ತದೆಂದು ಹೇಳುತ್ತಾರೆ. ಮೀಮಾಂಸಕರ ಪ್ರಕಾರ ಮೊದಲೇ ಇದ್ದ ಶಬ್ದ ಅಭಿವ್ಯಕ್ತಗೊಳ್ಳುತ್ತದೆ. ದರ್ಪಣಕಾರನು 'ಶಬ್ದದ್ರವ್ಯಂ ...ಜನಿಯಿಸುಗುಂ' ಎಂದುದರಿಂದ ಆತನು ನೈಯಾಯಿಕರನ್ನು ಅನುಸರಿಸಿರುವುದು ಸ್ಪಷ್ಟ.

"ಶಬ್ದದ್ರವ್ಯಂ ಜನಿಯಿಸುಗುಂ ಅದರ ಕಾರ್ಯಂ ಶಬ್ದಂ"—ಇಲ್ಲಿ ಶಬ್ದ ಎಂಬುದು ಎರಡು ಸಲ ಬಂದಿದ್ದು ವಿವರಣೆಯನ್ನಪೇಕ್ಷಿಸುತ್ತದೆ. "ಶಬ್ದದ್ರವ್ಯ" ಎಂಬ ಸಮಸ್ತ ಪದವನ್ನು ಹೇಗೆ ವಿಗ್ರಹಿಸಬೇಕೆಂಬುದು ಮೊದಲ ಪ್ರಶ್ನೆ. ವೃತ್ತಿಯಲ್ಲಿ ಶಬ್ದಮೆಂಬ ದ್ರವ್ಯಂ ಎಂದಿದೆ. "ದ್ರವ್ಯರೂಪವಾದ ಶಬ್ದಕಾರಣದಿಂದ ಕಾರ್ಯರೂಪವಾದ ಶಬ್ದ ಹುಟ್ಟುತ್ತದೆ ಎಂದರೆ ಶಬ್ದದಿಂದ ಶಬ್ದ ಹುಟ್ಟುತ್ತದೆ ಎನ್ನುವುದು ದೋಷಯುಕ್ತ.

ಕಾಣಣ ಎರಡಂ ಕಡೆಯೂ 'ಶಬ್ದ' ಎಂದರೆ ಪದ (Word) ಎಂದೇ ಅರ್ಥ" (ಪ್ರಾ.ಕ. ವ್ಯಾ. ಪು. 76) ಎಂಬುದಾಗಿ ಆ ವಿಗ್ರಹವಾಕ್ಯವನ್ನು ಅಲ್ಲಗಳೆದು "ಶಬ್ದದ್ರವ್ಯ ಎಂದರೆ ಶಬ್ದದ+ದ್ರವ್ಯ' (ಶಬ್ದಸ್ಯದ್ರವ್ಯಂ) ಎಂದು ಅರ್ಥಮಾಡಬೇಕೇ ಹೊರತಂ 'ಶಬ್ದವೇ ದ್ರವ್ಯ' (ಶಬ್ದ ಏವ ದ್ರವ್ಯಂ) ಎಂದಲ್ಲ. ಶಬ್ದದ ದ್ರವ್ಯ ನಾದ : ಇದರ ಕಾರ್ಯಂ ಶಬ್ದಂ ; ಹೀಗೆ ಹೇಳುವುದಂ ಯುಕ್ತಿಯುಕ್ತವಾದದ್ದು" (ಅದೇ. ಪು. 77) ಎಂಬ ಸಮಾಧಾನವಾಕ್ಯ ಹುಟ್ಟಿಕೊಂಡದ್ದಿದೆ. "ಅದಱ ಕಾರ್ಯಂ ಶಬ್ದಂ" ಎಂಬುದಂ ಪಾದಪೂರಣಕ್ಕೆ ಬಂದಿದೆಯೆಂದಂ ತೋರುತ್ತದೆ. ಶಬ್ದದ್ರವ್ಯದ ಕಾರ್ಯ ಶಬ್ದ ಎಂದರೆ ಪುನರುಕ್ತಿದೋಷವಾಗುವುದಿಲ್ಲವೇ" (ಆಲೋಕ. ಪು. 20) ಎಂಬ ಅನ್ನಿಸಿಕೆ ಹೊರ ಹೊಮ್ಮಿದ್ದುಂಟು. ಇಲ್ಲಿ ಒಂದೆಡೆ 'ಶಬ್ದ'ಕ್ಕೆ ಪದ (word), ಅರ್ಥವತ್ತಾದ ಧ್ವನಿ ಸಮುದಾಯ ಎಂಬ ಒಂದೇ ಅರ್ಥವನ್ನು[1] ಇಟ್ಟುಕೊಂಡದ್ದರಿಂದ ಪ್ರಮಾದವಾದರೆ ಇನ್ನೊಂದೆಡೆಯಲ್ಲಿ 'ಶಬ್ದದ ದ್ರವ್ಯ' ಎಂಬ ವಿಗ್ರಹವಾಕ್ಯವನ್ನು ಸ್ವೀಕರಿಸಿಕೊಂಡುದ ರಿಂದ ಅಸಮರ್ಪಕವಾದ ಅರ್ಥ ಹೇಳುವಂತಾಗಿದೆ.

'ಶಬ್ದದ್ರವ್ಯಂ ಜನಿಯಿಸುಗುಂ ಅದಱ ಕಾರ್ಯಂ ಶಬ್ದಂ' ಎಂಬಲ್ಲಿ ಮೊದಲನೆಯ ಶಬ್ದಕ್ಕೆ ನಾದ (tone) ಎಂದರ್ಥ. ಎರಡನೆಯ ಶಬ್ದಕ್ಕೆ ವರ್ಣ (sound) ಎಂಬ ಅರ್ಥ. ಹೀಗೆ ತಿಳಿಯಲು ಸಂಸ್ಕೃತದಲ್ಲಿ ಆಧಾರವಿದೆ. ತೈತ್ತಿರೀಯ ಪ್ರಾತಿಶಾಖ್ಯದಲ್ಲಿ "ಶಬ್ದಃ ಪ್ರಕೃತಿ ಸರ್ವವರ್ಣಾನಾಂ" (22-1) ಎಂದಿರುವ ಮಾತಿಗೆ ತ್ರಿಭಾಷ್ಯರತ್ನದಲ್ಲಿ "ಸರ್ವವರ್ಣಾನಾಂ ಶಬ್ದಃ ಧ್ವನಿಃ —ಮೂಲಕಾರಣಂ ಭವತಿ" ಎಂದಿದೆ.[2] ವಾಕ್ಯ ಪದೀಯದ ಈ ಕಾರಿಕೆಯಲ್ಲೂ ಶಬ್ದವು ಮೇಲಿನೆರಡು ಅರ್ಥಗಳನ್ನು ಹೇಳುತ್ತದೆ.

> "ದ್ವಾವುಪಾದಾನ ಶಬ್ದೇಷು ಶಬ್ದೌ ಶಬ್ದವಿದೋವಿದುಃ
> ಏಕೋನಿಮಿತ್ತಂ ಶಬ್ದಾನಾಮಪರೋರ್ಥೇ ಪ್ರಯುಜ್ಯತೇ" (1-44)

ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ 'ಶಬ್ದದ್ರವ್ಯ'ವನ್ನು ಶಬ್ದವೆಂಬ ದ್ರವ್ಯವೆಂದೇ ವಿಗ್ರಹಿಸಿ ಶಬ್ದದ(ವರ್ಣ) ನಿರ್ಮಾಣಕ್ಕೆ ಉಪಾದಾನ ಕಾರಣವಾದ ದ್ರವ್ಯವೆ ಶಬ್ದದ್ರವ್ಯವೆಂದು (ನಾದ) ಅರ್ಥಹೇಳಬೇಕಾಗುತ್ತದೆ. ಆಗ ಶಬ್ದದಿಂದ ಶಬ್ದ ಹುಟ್ಟುತ್ತದೆ ಎನ್ನುವಲ್ಲಿನ ದೋಷ ನಿವಾರಣೆಯಾಗುತ್ತದೆ. ಮಾತ್ರವಲ್ಲ, ನಾದವು ನಾಭಿಯಲ್ಲಿ ಹುಟ್ಟುತ್ತದೆಂಬ ಪ್ರಾಚೀನರ ಅಭಿಪ್ರಾಯದೊಂದಿಗೆ ಇದು ಸಾಕಷ್ಟು ಹೊಂದಿಕೊಳ್ಳುತ್ತದೆಂಬುದೂ ಗಮನಾರ್ಹ.

'ಶಬ್ದ ದ್ರವ್ಯದ ಕಾರ್ಯ ಶಬ್ದ' ಎಂಬ ಮಾತು "ಶಬ್ದವೆಲ್ಲ ಕಾರ್ಯ"ವೆಂದು ಹೇಳುವ ನೈಯಾಯಿಕರ (ಭಾ. ಸ. ಚ. ಪು. 141) ಪ್ರಭಾವ ದರ್ಪಣಕಾರನ ಮೇಲಾದುದಕ್ಕೆ ಮತ್ತೊಂದು ಸಾಕ್ಷಿಯಾಗುತ್ತದೆ.

ನಾದರೂಪದಲ್ಲಿರುವ ಶಬ್ದದ್ರವ್ಯವು ಅಕ್ಷರ ರೂಪಕ್ಕಿಳಿದಾಗ (ವರ್ಣ) ಮಾತ್ರವೆ ಭಾಷೆಯಲ್ಲಿ ಬಳಕೆಯಾಗಬಲ್ಲುದು. ಈ ವಿಚಾರ 'ಅಕ್ಷರರೂಪಂ' ಎಂಬ ಮಾತಿನಿಂದ

ಸ್ಫುಟವಾಗುತ್ತದೆ. ಒಟ್ಟಿನಲ್ಲಿ ಸಂಸ್ಕೃತದಲ್ಲಿ ತನ್ನ ಕಾಲಕ್ಕಿಂತ ಹಿಂದೆಯೇ ಪ್ರಚಾರದಲ್ಲಿದ್ದು ಬಂದಿರುವ ಧ್ವನಿಯ ಉತ್ಪತ್ತಿ ಸಂಬಂಧವಾದ ತತ್ವಗಳನ್ನು ಕ್ರೋಢೀಕರಿಸಿ ದರ್ಪಣಕಾರ ಸಂಕ್ಷೇಪದಲ್ಲಿ ಹೇಳಿದ್ದಾನೆ ಎಂದು ತಿಳಿದರೆ ಸಮರ್ಪಕವಾದೀತು.

## ಅಕ್ಷರೋತ್ಪತ್ತಿ ಸ್ಥಾನ

ಅಕ್ಕರಗಳು ಹುಟ್ಟುವ ಸ್ಥಾನಗಳ ಹೆಸರುಗಳು ದರ್ಪಣದಲ್ಲಿ ಮಾತ್ರ ಉಲ್ಲೇಖ ಗೊಂಡಿವೆ (ಸೂ. 40). ಆ ಸಂಬಂಧವಾದ ಸೂತ್ರ ಪಾಣಿನೀಯ ಶಿಕ್ಷಾದ ಕೆಳಗಿನ ಕಾರಿಕೆಯ ನೇರವಾದ ಅನುವಾದವಾಗಿದೆ.

"ಅಷ್ಟೌಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ
ಜಿಹ್ವಾಮೂಲಂಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ"

ಶಾಕಟಾಯನನ ವ್ಯಾಕರಣದ ಚಿಂತಾಮಣಿ ಲಘುವೃತ್ತಿಯಲ್ಲೂ ಇಂತಹ ಹೇಳಿಕೆಯಿದೆ.

"ಕಂಠೋಷ್ಠ ಮೂರ್ಧಜಿಹ್ವಾದಂತೋರಸ್ತಾಲು ನಾಸಿಕಾವರ್ಣಾನಾಮ್
ಸ್ಥಾನಾನಿ" (1-1-6)

ಶಿಕ್ಷಾ ಹಾಗೂ ಪ್ರಾತಿಶಾಖ್ಯಗಳಲ್ಲಿ ಯಾವ ಯಾವ ವರ್ಣಗಳು ಎಲ್ಲೆಲ್ಲಿ ಹುಟ್ಟುತ್ತವೆಂಬ ವಿಸ್ತಾರವಾದ ವಿವರಣೆಯಿದ್ದರೆ ದರ್ಪಣಕಾರ ಅವು ಯಾವುದನ್ನೂ ಎತ್ತಿ ಹೇಳುವುದಿಲ್ಲ. ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವುದರಿಂದ ಹೇಳುವ ಅಗತ್ಯವಿಲ್ಲವೆಂದು ತಿಳಿದಿರಬೇಕು. ಸಂಸ್ಕೃತ ವರ್ಣಮಾಲೆಯಲ್ಲಿ ಐ, ಬಿ, ಳಕಾರ (ಕುಳ)ಗಳಿಲ್ಲದುದರಿಂದ-ಎಂದರೆ ಅಲ್ಲಿ ಅವುಗಳ ಉಚ್ಚಾರಣಾ ಸ್ಥಾನಗಳ ವಿಚಾರ ಬಾರದಿರುವುದರಿಂದ—ಅವುಗಳ ಸ್ಥಾನಗಳ ಕುರಿತು ಮಾತ್ರ ದರ್ಪಣದಲ್ಲಿ ವಿವರಣೆ ಬರುತ್ತದೆ (ಸೂತ್ರ 28 ಮತ್ತದರ ವೃತ್ತಿ).

ವರ್ಣೋಚ್ಚಾರದಲ್ಲಿ ಸ್ಥಾನದಂತೆ ಕರಣ ಹಾಗೂ ಪ್ರಯತ್ನಗಳೂ ಗಮನಿಸತಕ್ಕುದಾಗಿವೆ. ಸಂಸ್ಕೃತದ ಉಪಯುಕ್ತ ಗ್ರಂಥಗಳಲ್ಲಿ ಅಂಥ ವಿವರಣೆ ಬರುವುದಿದ್ದರೂ ದರ್ಪಣಕಾರ ಹೆಚ್ಚಿನ ವಿವರಣೆಗಿಳಿಯದೆ ಕೆಳಗಿನ ಮಾತಿನಿಂದಲೇ ತೃಪ್ತಿಪಟ್ಟುಕೊಳ್ಳುತ್ತಾನೆ.

"ತನುವಾದ್ಯಂ ನಾಲಗೆ ವಾದನದಂಡಂ" (ಸೂ. 44)

ಈ ನಿರೂಪಣೆ ಅರ್ಥವತ್ತಾಗಿದೆಯೆಂಬುದರಲ್ಲಿ ಅನುಮಾನವಿಲ್ಲ (K. S. D. P. 38). ಈ ತೆರನಾದ ಹೇಳಿಕೆಗಳು ಸ್ಮೃತಿ ಭೂಷಣಗಳಲ್ಲಿಲ್ಲ.

## ಅಕ್ಕರ (ಅಕ್ಷರ)–ವರ್ಣ–ಶುದ್ಧಾಕ್ಷರ

ಅಕ್ಷರ ಮತ್ತು ವರ್ಣ–ಈ ಸಂಜ್ಞೆಗಳು ಕನ್ನಡದ ಮೂರೂ ವ್ಯಾಕರಣಗಳಲ್ಲಿ ಗೋಚರಿಸುತ್ತವೆ. ಭಾಷೆಯ 'ಮೂಲವರ್ಣ' ಎಂಬರ್ಥದಲ್ಲಿ ಶುದ್ಧಾಕ್ಷರ ಮತ್ತು ಶುದ್ಧಗೆ ಎಂಬ ಸಂಜ್ಞೆಗಳು ದರ್ಪಣದಲ್ಲಿ ಮಾತ್ರ ಬಳಕೆಯಾಗಿವೆ. ಸಾಧಾರಣವಾಗಿ ಸಂಸ್ಕೃತ ವ್ಯಾಕರಣಗಳಲ್ಲಿ 'ಶುದ್ಧಾಕ್ಷರ' ವೆಂಬ ಸಂಜ್ಞೆ ನಿರನುನಾಸಿಕ ಸ್ವರಗಳಿಗೆ ಸಂದಿದೆ. (D. S. G. P. 364). ಋಗ್ವೇದ ಪ್ರಾತಿಶಾಖ್ಯೆಯ ವರ್ಗದ್ವಯ ವೃತ್ತಿಯಲ್ಲಿ ವಿಷ್ಣುಮಿತ್ರನು 'ಶೌದ್ಧೋಕ್ಷರೋಚ್ಚಾರಣಂ', 'ಶುದ್ಧೆ ಅಕ್ಷರೇ' ಇತ್ಯಾದಿಯಾಗಿ ಬಳಸಿರುವುದನ್ನು ಗಮನಿಸಬೇಕು (ಋ. ಪ್ರಾ. ಪು. 18). ಇಲ್ಲಿನ ಶುದ್ಧಾಕ್ಷರಕ್ಕೆ 'ವಿಕಾರರಹಿತವಾದ ಅಕ್ಷರ' ಎಂದು ಪಂಡಿತರು ಅರ್ಥಯಿಸುತ್ತಾರೆ (ಋ. ಪ್ರಾ. ಪು. 19) ಎಂದರೆ ಮೂಲ ವರ್ಣ ಎಂದೇ ಅದನ್ನು ಗ್ರಹಿಸಿದಂತಾಯಿತು. ಬಹುಶಃ ಇಂತಹ ಒಂದು ನಿರೂಪಣೆಯಿಂದ ಪ್ರೇರಿತರಾಗಿ ಕನ್ನಡ ವಿದ್ವಾಂಸರು ಶುದ್ಧಾಕ್ಷರವೆಂಬ ಪದವನ್ನೂ ಬಳಕೆಗೆ ತಂದಿರಬೇಕು. 'ಶುದ್ಧಾಕ್ಷರ' ಎಂಬ ಪದಪ್ರಯೋಗಕ್ಕೆ ದರ್ಪಣಕಾರನೇ ಆದ್ಯನಲ್ಲ. ಪಂಪ ಭಾರತದಲ್ಲಿ ಈ ಪದದ ಇನ್ನೊಂದು ರೂಪವಾದ ಶುದ್ಧಕದ ತದ್ಭವ ಎನಿಸಿದ 'ಸುದ್ದಗೆ ಪ್ರಯೋಗಗೊಂಡಿದೆ :

> ಬರೆಯದೆ ಬಂದ ಸುದ್ದಗೆಯ ಸೂತ್ರವನೊಂದೆ ಮುಹೂರ್ತ ಮಾತ್ರದಿಂ
> ಬರಿಸಿದುದಂತು ಸೂತ್ರಿಸಿದ ಸೂತ್ರವೃತ್ತಿ.... (2–34)

ಆದ್ದರಿಂದ ಶುದ್ಧಾಕ್ಷರ, ಶುದ್ಧಕ, ಶುದ್ಧಗೆ, ಸುದ್ದಗೆ ಮೊದಲಾದ ಪದಗಳು 'ಭಾಷೆಯ ಮೂಲವರ್ಣ' ಎಂಬರ್ಥದಲ್ಲಿ ಕನ್ನಡದಲ್ಲಿ ಬಹಳ ಹಿಂದಿನಿಂದಲೇ ಬಂದಿರಬೇಕೆಂದು ಹೇಳಬಹುದು.

ಅಕ್ಕರ (ಅಕ್ಷರ) ವರ್ಣ ಮತ್ತು ಶುದ್ಧಾಕ್ಷರ ಇವು ಏಕಾರ್ಥಕಗಳಾದ ಸಂಜ್ಞೆಗಳೆಂದು ದರ್ಪಣ ಹೇಳುತ್ತದೆ (ಸೂ. 12), ಅಕ್ಷರ ಮತ್ತು ವರ್ಣ ಪರ್ಯಾಯವಾಚಿಗಳೆಂಬುದು ಸ್ಮೃತಿಯಿಂದಲೂ (ಸೂ. 6) ಧ್ವನಿತವಾಗುತ್ತದೆ. ಆಧುನಿಕರ ಪ್ರಕಾರ ವರ್ಣ ಎಂಬುದು 'letter' ಎಂಬರ್ಥದಲ್ಲೂ, ಅಕ್ಷರ ಎಂಬುದು 'syllable' ಎಂಬರ್ಥದಲ್ಲೂ ಬಳಕೆಗೊಳ್ಳುತ್ತವೆ. ಪ್ರಾಚೀನರು ಈ ವ್ಯತ್ಯಾಸವನ್ನು ಗಮನಿಸಿದ್ದರೂ ಸರ್ವತ್ರ ಅದನ್ನು ಅನುಸರಿಸಿಲ್ಲ. ವರ್ಣಮಾಲೆಯನ್ನು ವರ್ಣಸಮಾಮ್ನಾಯವೆಂದು ಪ್ರಾತಿಶಾಖ್ಯಗಳು ಹೇಳಿದರೆ ಐತರೇಯ ಆರಣ್ಯಕ ಅಕ್ಷರಸಮಾಮ್ನಾಯವೆಂದು ಹೇಳುತ್ತದೆ. ಮಹಾಭಾಷ್ಯ, ಋಕ್ ತಂತ್ರ ಮೊದಲಾದುವುಗಳಲ್ಲಿ letter ಎಂಬರ್ಥದಲ್ಲಿ 'ಅಕ್ಷರ' ಬಳಕೆಗೊಂಡಿದೆ. ಅಕ್ಷರ ಮತ್ತು ವರ್ಣದ ಬಳಕೆಯಲ್ಲಿ ಯಾವುದೇ ಅಂತರವಲ್ಲಿ ಕಾಣುವುದಿಲ್ಲ. ಋಗ್ವೇದ (1-164-24), ಋಗ್ವೇದ ಪ್ರಾತಿಶಾಖ್ಯ (1–19, 18–32), ತೈತ್ತಿರೀಯ ಪ್ರಾತಿಶಾಖ್ಯ (23–7)ಗಳಲ್ಲಿ syllable ಎಂಬರ್ಥದಲ್ಲಿ ಅಕ್ಷರ ಪ್ರಯುಕ್ತ

ವಾಗಿದೆ. ಇದರಿಂದ ಅಕ್ಷರ ಮತ್ತು ವರ್ಣ ಏಕಾರ್ಥಕಗಳಾಗಿಯೂ ಭಿನ್ನಾರ್ಥಕ ಗಳಾಗಿಯೂ ಬಳಕೆಗೊಳ್ಳುತ್ತಿದ್ದುವೆಂಬುದು ಸ್ಪಷ್ಟ.

'ಅಕ್ಷರ' ಎಂಬ ಸಂಜ್ಞೆಯ ಬಳಕೆಯಲ್ಲಿ ಒಂದು ತೆರನಾದ ಬೆಳವಣಿಗೆ ಗೋಚರಿಸು ತ್ತದೆ. ಪದ, ಅಕ್ಷರ, ವರ್ಣ, ಸ್ವರ ಹೀಗೆ ನಾಲ್ಕು ಅರ್ಥಗಳಲ್ಲಿ 'ಅಕ್ಷರ' ಬಳಕೆ ಗೊಂಡುದುಂಟು. ಸಾಹಿತ್ಯಕವಾಗಿ ಅಕ್ಷರವೆಂದರೆ ನಾಶವಿಲ್ಲದ್ದು. ಅರ್ಥಾತ್ ಮತ್ತೆ ವಿಭಜಿಸಲು ಸಾಧ್ಯವಿಲ್ಲದ್ದು ಎಂಬರ್ಥ. ವಾಕ್ಯಗಳನ್ನು ಪದಗಳಾಗಿ ವಿಭಜಿಸುವ ಹಂತ ದಲ್ಲಿ ಪದ, ಪದಗಳನ್ನು ಅಕ್ಷರಗಳನ್ನಾಗಿ ತುಂಡರಿಸುವಲ್ಲಿ syllable, ಅಕ್ಷರಗಳನ್ನು ವರ್ಣಗಳಾಗಿ ವಿಂಗಡಿಸುವಲ್ಲಿ ವರ್ಣ (letter) ಕೊನೆಗೆ ವಿಭಜಿಸಲಾರದ ಘಟಕವಾಗಿ ನಿಂತ ಸ್ವರ–ಈ ಅರ್ಥಗಳಲ್ಲಿ ಅಕ್ಷರದ ಬಳಕೆಯನ್ನು ಗುರುತಿಸಬಹುದು (S. P. p.67)

ದರ್ಪಣವು ಅಕ್ಷರ ಮತ್ತು ವರ್ಣ ಎಂಬ ಎರಡರ್ಥಗಳಲ್ಲೂ 'ಅಕ್ಷರ' ಸಂಜ್ಞೆ ಯನ್ನು ಬಳಸಿಕೊಂಡಿದೆ. ಯಾವುದು ಅಕ್ಕರ ಎಂಬುದಕ್ಕೆ ದರ್ಪಣ ಕೊಡುವ ವಿವರಣೆ ವಿಚಾರಾರ್ಹವಾಗಿದೆ. "ಬರೆಪುಂಬೊಕ್ಕುಚ್ಚರಿಸಲ್ ಬಾರದುವು ಅಕ್ಕರಂ ಅಲ್ತು, ಅವು ಘನಸ್ವನಾದಿ ಧ್ವನಿಗಳ್" (ಸೂ. 12) ಎಂಬ ಹೇಳಿಕೆಯನ್ನು ವೃತ್ತಿಯ ಸಹಾಯದಿಂದ ಬರೆಯಲೂ ಉಚ್ಚರಿಸಲೂ ಬಾರದವುಗಳು ಅಕ್ಷರಗಳಲ್ಲ ; ಮೊಳಗು ಮೊದಲಾದ ಪಲ ತೆರೆದ ಧ್ವನಿಗಳಂತೆ ಎಂದು ಅರ್ಥವಿಸಬಹುದು. ಎಂದರೆ ಬರೆಯಲೂ ಉಚ್ಚರಿಸಲೂ ಬರುವವುಗಳು ಮಾತ್ರ ಅಕ್ಷರಗಳು ಎಂದು ಹೇಳಿದಂತಾಗುತ್ತದೆ. ಘನಸ್ವನಾದಿ ಧ್ವನಿ ಗಳು ಬರೆಯಲೂ ಉಚ್ಚರಿಸಲೂ ಬಾರದುವಷ್ಟೆ. ವೃತ್ತಿಯನ್ನು ಮರೆತು ಸೂತ್ರ ವಾಕ್ಯವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡರೆ ಉಚ್ಚರಿಸಲು ಬಂದರೂ ಬರೆಯಲು ಬಾರದವು ಅಕ್ಷರಗಳಲ್ಲ ಎಂದು ಅರ್ಥಹೇಳಬೇಕಾಗುತ್ತದೆ. ಈಗ ಘನಸ್ವನಾದಿ ಧ್ವನಿ ಗಳೆಂಬ ಮಾತನ್ನು ಹೊಂದಿಸಿಕೊಳ್ಳುವುದು ಹೇಗೆ ? ಅವು ಬರೆಯಲು ಬಂದು ಉಚ್ಚರಿ ಸಲು ಬಾರದವುಗಳೇ ? ಅರ್ಥವಾಗುವುದಿಲ್ಲ[3]. ಅಂತೂ ದರ್ಪಣಕಾರನ ಪ್ರಕಾರ ಯಾವುದೇ ಒಂದು ಧ್ವನಿ ವರ್ಣವೆನ್ನಿಸಬೇಕಾದರೆ ಕೆಳಗಿನ ಎರಡು ಅಗತ್ಯಗಳನ್ನು ಪೂರೈಸಬೇಕೆಂಬುದು ಸ್ಪಷ್ಟ.

1. ಅದು ಉಚ್ಚರಿಸಲು ಬರಬೇಕು
2. ಅದು ಬರೆಯಲು ಬರಬೇಕು

ಹೀಗೆ ಹೇಳುವುದಕ್ಕೆ ಸಂಪ್ರದಾಯದ ಭದ್ರವಾದ ಹಿನ್ನೆಲೆಯೊಂದು ಇದ್ದಿರ ಬೇಕೆಂದು ತೋರುತ್ತದೆ.

ಮೀಮಾಂಸಾ, ನ್ಯಾಯ, ವೈಶೇಷಿಕ ಗ್ರಂಥಗಳಲ್ಲಿ ಧ್ವನಿ ಹಾಗೂ ವರ್ಣದ ಕುರಿತು ವರ್ಣನೆ ಬರುತ್ತದೆ. ಆ ಗ್ರಂಥಗಳು ಶಬ್ದಕ್ಕೆ (sound) ಧ್ವನಿ ಮತ್ತು ವರ್ಣವೆಂಬ ಎರಡು ರೂಪಗಳಿವೆಯೆಂದು ಹೇಳುತ್ತವೆ. ಮೀಮಾಂಸಕರು ಇದೇ ಅಭಿಪ್ರಾಯ ಹೊಂದಿದ್ದಾರೆ (E.B.P.P. 166). ಅನ್ನಂಭಟ್ಟನ ತರ್ಕ ಸಂಗ್ರಹದಲ್ಲಿ (ಕಾಲ ಕ್ರಿ. ಶ.

16ನೆಯ ಶತಮಾನ) "ಸಃ (ಶಬ್ದಃ) ದ್ವಿವಿಧೋ ಧ್ವನ್ಯಾತ್ಮಕೋ ವರ್ಣಾತ್ಮಕಶ್ಚೇತಿ। ಧನ್ಯಾತ್ಮಕೋಭೇರ್ಯಾದೌ। ವರ್ಣಾತ್ಮಕಃ ಸಂಸ್ಕೃತ ಭಾಷಾದಿರೂಪಃ" (33) ಎಂಬ ವಿವರಣೆ ಬರುತ್ತದೆ. ಇಲ್ಲಿ ಅನುಚ್ಚಾರಿತವಾದ (inarticulate) ಧ್ವನಿಗೆ ಭೇರೀ ಶಬ್ದ ವನ್ನು, ಉಚ್ಚಾರಿತ (articulate) ಧ್ವನಿಗೆ ಸಂಸ್ಕೃತ ಭಾಷೆಯನ್ನು ಉದಾಹರಣೆಯಾಗಿ ಕೊಟ್ಟಿದ್ದು ಯುಕ್ತಿಯುಕ್ತವಾಗಿದೆ. ವಿಶ್ವನಾಥ ತರ್ಕಪಂಚಾನನನ (ಕಾಲ ಕ್ರಿ. ಶ. ಸು. 17ನೆಯ ಶತಮಾನ) ಭಾಷಾಪರಿಚ್ಛೇದದಲ್ಲಿ "ಶಬ್ದೋಧ್ವನಿಶ್ಚ ವರ್ಣಶ್ಚ ಮೃದಂಗಾದಿ ಭವೋ ಧ್ವನಿಃ" (ಕಾರಿಕೆ 64) ಎಂದು ಹೇಳಿದ್ದೂ ಈ ದೃಷ್ಟಿಯಿಂದಾಗಿದೆ. "........ divided shabda into two classes, namely dhvani and varna, sounds pure and simple, that is, those sounds that do not usually convey any definite sense are called 'dhvanyatmaka shabda'. This class is represented by those unintelligible sounds that are, for instance, produced by the beating of drums. The varnas (varnatmaka sabda) or real words, on the other hand are such as consist of sounds capable of being expressed by letters" (LSOH. p. 77) ಎಂಬ ವಿವರಣೆ ಧ್ವನಿಯ ಧ್ವನ್ಯಾತ್ಮಕ ಮತ್ತು ವರ್ಣಾತ್ಮಕ ಭೇದ ಗಳ ಸರಿಯಾದ ಅರ್ಥವನ್ನು ತೋರಿಸಿಕೊಡುತ್ತದೆ. ಇಂತಹ ಒಂದು ಹಿನ್ನೆಲೆಯಲ್ಲಿ ದರ್ಪಣಕಾರನು ಮೇಲಿನ (ಸೂ. 12) ಅಭಿಪ್ರಾಯವನ್ನು ತಾಳಿರಬೇಕೆಂದು ಊಹಿಸ ಬಹುದು.

ಮನುಷ್ಯನ ಧ್ವನ್ಯಂಗಗಳು ಉತ್ಪಾದಿಸುವ ಸಾವಿರಾರು ಧ್ವನಿಗಳಲ್ಲಿ ಕೆಲವನ್ನು ಮಾತ್ರ ಭಾಷೆ ಬಳಸುತ್ತದೆ. ಹಾಗೆ ಬಳಸಿಕೊಳ್ಳುವ ಧ್ವನಿಗಳಿಗೆ ಮಾತ್ರ ವರ್ಣತ್ವ ಲಭ್ಯ ವಾಗುತ್ತದೆ. ವರ್ಣಕ್ಕೆ ಮಾತ್ರ ಲಿಪಿಸಂಕೇತ ದೊರಕುತ್ತದೆ. ಹಾಗಾಗಿ ಪ್ರಾಚೀನರ ದೃಷ್ಟಿಯಲ್ಲಿ ಒಂದು ಧ್ವನಿಗೆ ವರ್ಣತ್ವ ಲಭಿಸಬೇಕಿದ್ದರೆ ಅದು ಬರೆಯಲೂ ಬರುವುದು ಅನಿವಾರ್ಯವಾಗುತ್ತದೆ. ಅವರ ದೃಷ್ಟಿಯಲ್ಲಿ ಗ್ರಾಂಥಿಕ ಭಾಷೆಯೇ ಸರಿಯಾದ ಭಾಷೆ ತಾನೇ. ಬರೆಹ ಮತ್ತು ಉಚ್ಚಾರ ಈಯೆರಡು ಅವಸ್ಥೆಗಳಲ್ಲಿ ಯಾವುದೊಂದು ಇಲ್ಲ ದಿದ್ದರೂ ಅವರ ದೃಷ್ಟಿಯಲ್ಲಿ ಅಕ್ಷರವಾಗದು. ದರ್ಪಣದಲ್ಲಿ ಮುಂದೆ ಹೇಳುವ ಅಕ್ಷರದ ದ್ವಿವಿಧರೂಪಗಳ ವಿಚಾರದಿಂದಲೂ ಬರವಣಿಗೆಯು ರೂಪ ಅಕ್ಷರದ ಒಂದು ಅವಿಭಾಜ್ಯ ಅಂಗವೆಂಬುದು ಸ್ಪಷ್ಟವಾಗುತ್ತದೆ.

ಅಕ್ಷರವಲ್ಲದುದಕ್ಕೆ ಕೊಟ್ಟ 'ಘನಸ್ವನಾದಿಧ್ವನಿಗಳ್' ಎಂಬ ಮಾತನ್ನು ಈ ಹಿನ್ನೆಲೆ ಯಲ್ಲಿ ವಿಚಾರಿಸಬೇಕು. ಮೋಡಗಳ ಮೊಳಗು ಧ್ವನ್ಯಾತ್ಮಕವಾದ ಶಬ್ದಗಳೇ ಹೊರತು ವರ್ಣಾತ್ಮಕಗಳಾದ ಉಚ್ಚಾರಗಳಲ್ಲ. ಅವುಗಳಿಗೆ ನಿಶ್ಚಿತವಾದ ಅರ್ಥದ್ಯೋತನತ್ವವೂ ಇಲ್ಲ. ವರ್ಣಾತ್ಮಕವಲ್ಲದ ಧ್ವನಿಗಳಿಗೆ ಸಂಪ್ರದಾಯದಲ್ಲಿ ಕೊಡುವ ಉದಾಹರಣೆಗಳನ್ನು ಅನುಸರಿಸಿ (ಭೇರೀರವ, ಮೃದಂಗ ಧ್ವನಿ ಇತ್ಯಾದಿ) ಪ್ರಕೃತಿಯಲ್ಲಿ ಸಹಜವಾಗಿ ಹುಟ್ಟುವ ಧ್ವನಿಗಳೆಂಬ ನೆಲೆಯಲ್ಲಿ ದರ್ಪಣಕಾರ ಈ ಉದಾಹರಣೆಯನ್ನು ಹೇಳಿರಬೇಕೆಂದು

ತೋರಂತ್ತದೆ. ಭೇರೀರವ ಘನಸ್ವನಾದಿ ಧ್ವನಿಗಳನ್ನು ಅನುಕರಿಸಬಹುದೇ ಹೊರತು ಉಚ್ಚರಿಸಲು ಸಾಧ್ಯವಿಲ್ಲ. ಅನುಕರಿಸಿದ ಮಾತ್ರಕ್ಕೆ ಅದು ಯಾವುದೇ ಅರ್ಥವನ್ನು ಕೊಡದು. ಉಚ್ಚರಿಸಲು ಸಾಧ್ಯವಲ್ಲದ ಬಳಿಕ ಬರೆಯಲೂ ಸಾಧ್ಯವಾಗದು. ಏಕೆಂದರೆ ಭಾಷೆಯಲ್ಲಿ ಮೊದಲು ಉಚ್ಚಾರ ಆ ಬಳಿಕ ಬರೆಹ. ಒಟ್ಟಿನಲ್ಲಿ ಕೇಶಿರಾಜನ ವಿಚಾರ ಧಾರೆಯನ್ನು ಹೀಗೆ ಸಂಗ್ರಹಿಸಬಹುದು—

1. ಬರೆಯಲೂ ಉಚ್ಚರಿಸಲೂ ಬರುವ ಧ್ವನಿಯೆ (sound) ವರ್ಣ.
2. ಅದು ಮೊಳಗು ಮೊದಲಾದ ಪಲತೆಱದ ಧ್ವನಿಗಳಿಗಿಂತ ಭಿನ್ನ.

ಆಧುನಿಕ ಭಾಷಾ ವಿಜ್ಞಾನಿಗಳ ಪ್ರಕಾರ ಬರಹವನ್ನೂ ವರ್ಣತ್ವರ ಅವಶ್ಯಕತೆಯಾಗಿ ಹೇಳುವುದು ತರವಲ್ಲವಾದರೂ ಲಿಪಿಯುಳ್ಳದ ಭಾಷೆಗ ಲಿಪಿಯನ್ನು ಕಲ್ಪಿಸುವುದು ಸಾಧ್ಯವಾದುದರಿಂದ ಪರಂಪರೆಯ ಗಟ್ಟಿಯಾದ ಹಿನ್ನಲೆಯಲ್ಲಿ ಮೂಡಿ ಬಂದ ಮೇಲಿನ ಅಭಿಪ್ರಾಯವನ್ನು ಅಲ್ಲಗಳೆಯಬೇಕಾಗಿಲ್ಲ.

## ಅಕ್ಕರದ ರೂಪಗಳು

ಅಕ್ಕರಕ್ಕೆ ಶ್ರಾವಣ ಮತ್ತು ಚಾಕ್ಷುಷ ಎಂಬೆರಡು ರೂಪಗಳೆಂದು ಹೇಳಿ ಶ್ರಾವಣ ರೂಪವು ಸ್ವನೈಕಾಕಾರವೆಂದೂ ಲಿಪಿಭೇಧ ವೃತ್ತಿಯಿಂದಾಗಿ ಚಾಕ್ಷುಷ ರೂಪವು ವಿವಿಧಾಕಾರವೆಂದೂ ದರ್ಪಣಕಾರ ನಿರ್ಣಯಿಸುತ್ತಾನೆ (ಸೂ. 13). ಈ ವಿಚಾರವೂ ಸ್ಮೃತಿ ಭೂಷಣಗಳಲ್ಲಿಲ್ಲ. 'ಪುರಾತನ ಮತದಿಂ' ಎಂದು ಒತ್ತಿ ಹೇಳಿರುವುದರಿಂದ ಆ ರೂಪ ಭೇದಗಳ ವಿಚಾರ ಹಿಂದಿನ ಕಾಲದಿಂದಲೇ ಬಂದುದೆಂಬುದು ಸ್ಪಷ್ಟವಾಗುತ್ತದೆ. ಹಿಂದಿನ ಸೂತ್ರದ ಬರೆಯಲೂ ಉಚ್ಚರಿಸಲೂ ಬಂದರೆ ಮಾತ್ರ ವರ್ಣವೆಂಬ ವಿಚಾರವನ್ನಿದು ನೆನಪಿಗೆ ತರುತ್ತದೆ.

## ಅಕ್ಷರ ಸಂಜ್ಞಾ ಸ್ವರೂಪದ ಪ್ರಯೋಜನ

ಅಕ್ಷರಗಳು ಸಂಜ್ಞೆಗಳು. ಆ ಸಂಜ್ಞೆಗಳನ್ನು ವ್ಯಾಕರಣದ ಆದಿಯಲ್ಲಿ ಹೇಳುವುದಾಗಿಯೂ ಶಬ್ದ ಶಾಸ್ತ್ರ ವ್ಯವಹಾರ ಜ್ಞಾನಕ್ಕೆ ಅದು ಅಗತ್ಯವೆಂದೂ ದರ್ಪಣಕಾರ ಹೇಳುತ್ತಾನೆ (ಸೂ. 11). ಈ ವಿಚಾರ ಸ್ಮೃತಿ ಭೂಷಣಗಳಲ್ಲಿಲ್ಲ. ಇಂತಹ ಅಭಿಪ್ರಾಯ ಸಂಸ್ಕೃತದಲ್ಲಿದ್ದಂತಿದೆ. ವಿಷ್ಣುಮಿತ್ರನು ಋಗ್ವೇದ ಪ್ರಾತಿಶಾಖ್ಯೆಯ ವರ್ಗದ್ವಯ ವೃತ್ತಿಯಲ್ಲಿ—'ಶಾಸ್ತ್ರ ಸಂವ್ಯವಹಾರಾರ್ಥಂ ವರ್ಣಕ್ರಮಾರ್ಥಂ ಚಾಕ್ಷರ ಸಮಾಮ್ನಾಯಮೂಹ' (ಋ. ಪ್ರಾ. ಪು. 29) ಎಂದು ಹೇಳುತ್ತಾನೆ. ಇಂತಹ ಒಂದು ಹೇಳಿಕೆಯ ಪ್ರೇರಣೆ ಕೇಶಿರಾಜನಿಗಿದ್ದಿರಬೇಕೆಂದು ಊಹಿಸಬಹುದು.

## ವರ್ಣಮಾಲೆ

ಒಂದು ಭಾಷೆ ಬಳಸಿಕೊಳ್ಳುವ ಮೂಲ ವರ್ಣಗಳನ್ನು ಒಂದು ಪ್ರತ್ಯೇಕವಾದ ರೀತಿಯಲ್ಲಿ ಅನುಗೊಳಿಸಿ 'ವರ್ಣಮಾಲೆ'ಯೆಂಬ ಹೆಸರಿನಿಂದ ಕರೆಯುವುದು ಸಂಪ್ರದಾಯ. ವರ್ಣಸಮಾಮ್ನಾಯ, ವರ್ಣರಾಶಿ, ಅಕ್ಷರ ಸಮಾಮ್ನಾಯ, ಅಕ್ಷರಮಾಲೆ ಇತ್ಯಾದಿ ಹೆಸರುಗಳೂ ವರ್ಣಮಾಲೆಗಿವೆ. "ವರ್ಣಾನಾಂಸಮಾಮ್ನಾಯೋ ವರ್ಣಸಮಾಮ್ನಾಯಃ! ಆಮ್ನಾಯ ಇತ್ಯಾನುಪೂರ್ವೇಣ ಅಕಾರಾದಯೋಯಮ ಪರ್ಯವಸಾನಾಃ ಪೂರ್ವಾಚಾರ್ಯೈರುಪದಿಷ್ಟಾ ವರ್ಣಾಃ" (ತೈ. ಪ್ರಾ. 1-1 ಮಾಹಿಷೇಯ ಭಾಷ್ಯ) ಎಂಬ ವಿವರಣೆ ವರ್ಣಮಾಲೆಯ ಸ್ವರೂಪವನ್ನು ತಿಳಿಸುತ್ತದೆ.[4] ಈಗ ರೂಢವಾಗಿರುವಂತೆ ಅಕಾರ ಮೊದಲಾಗಿ ಳಕಾರ ಕೊನೆಯಾಗುಳ್ಳ ವರ್ಣರಾಶಿಗೆ 'ವರ್ಣಮಾಲೆ'ಯೆಂದು ಹೆಸರು.

## ವರ್ಣಗಣನೆ

ಭಿನ್ನ ವ್ಯಾಕರಣ ಸಂಪ್ರದಾಯಗಳು ಹೇಳುವ ಸಂಸ್ಕೃತ ವರ್ಣಮಾಲೆಗಳಲ್ಲಿನ ಒಟ್ಟು ವರ್ಣಗಳು ಕೆಳಗಿನಂತಿವೆ.

| | |
|---|---|
| ಅಷ್ಟಾಧ್ಯಾಯಿ | 43 (ದೀರ್ಘಗಳು, ಹ್ರಸ್ವಗಳ ವೈವಿಧ್ಯ) |
| ಪಾಣಿನೀಯ ಶಿಕ್ಷಾ | 63 ಅ 64 |
| ಋಗ್ವೇದ ಪ್ರಾತಿಶಾಖ್ಯೆ | 47 |
| ತೈತ್ತಿರೀಯ ಪ್ರಾತಿಶಾಖ್ಯೆ | 58 |
| ವಾಜಸನೇಯಿ ಪ್ರಾತಿಶಾಖ್ಯೆ | 65 |
| ಕಾತಂತ್ರ | 51 |
| ಸಿದ್ಧಹೇಮ ಶಬ್ದಾನುಶಾಸನ | 51 |

ವರ್ಣಮಾಲೆಯ ಕಲ್ಪನೆ ಮತ್ತು ಅದರ ನಿರೂಪಣೆಯಲ್ಲಿ ಸಂಸ್ಕೃತ ವರ್ಣಮಾಲೆ ಪೂರ್ಣವಾಗಿ ಕನ್ನಡ ವೈಯಾಕರಣರಿಗೆ ಆದರ್ಶವಾದಂತಿದೆ. ಸಂಸ್ಕೃತ ವರ್ಣಮಾಲೆಯನ್ನು ಸ್ಥೂಲವಾಗಿಯಾದರೂ ನಿರೂಪಿಸಿದ ಬಳಿಕವೇ ಅವರು ಕನ್ನಡ ವರ್ಣಮಾಲೆಯ ವರ್ಣಗಳನ್ನು ನಿರ್ಣಯಿಸುತ್ತಾರೆ. ಹಾಗಾಗಿ ಕನ್ನಡ ವರ್ಣಮಾಲೆಯ ನಿರೂಪಣಾ ವಿಧಾನದ ಆಧಾರದಿಂದ ಸಂಸ್ಕೃತದ ವರ್ಣಮಾಲೆಯಲ್ಲಿ ಅವರೆಷ್ಟು ವರ್ಣಗಳನ್ನು ಕಂಡಿದ್ದಾರೆಂಬುದನ್ನು ಹೇಳಬಹುದಾಗಿದೆ.

| | |
|---|---|
| ಸ್ಮೃತಿ | 47 |
| ಭೂಷಣ | 49 |
| ದರ್ಪಣ | 52 |

ಸ್ಮೃತಿ ಹೇಳದೆ ಬಿಟ್ಟಿರುವ ಬಿಂದು ಮತ್ತು ವಿಸರ್ಗವನ್ನು ಭೂಷಣ ಹೇಳುತ್ತದೆ. ದರ್ಪಣವು ಅವೆರಡರ ಜೊತೆಯಲ್ಲಿ ಕಳ, ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯ ವನ್ನು ಸೇರಿಸಿಕೊಂಡಿದೆ. ಕನ್ನಡ ವ್ಯಾಕರಣಗಳು ಇಲ್ಲಿ ಪ್ರಧಾನವಾಗಿ ಕಾತಂತ್ರವನ್ನನು ಸರಿಸಿರುವುದು ಸ್ಪಷ್ಟ.

## ವರ್ಣಭೇದ

ಸಂಸ್ಕೃತದಲ್ಲಿ ವರ್ಣಮಾಲೆಯನ್ನು ಹೇಳುವ ಎರಡು ಭಿನ್ನ ಸಂಪ್ರದಾಯಗಳು ಪಾಣಿನಿ ಪೂರ್ವದಲ್ಲಿದ್ದಂತೆ ಊಹಿಸಲಾಗಿದೆ. ಅವುಗಳಲ್ಲಿ ಒಂದು ಮಾಹೇಶ್ವರ ಪದ್ಧತಿ ಯಾದರೆ ಇನ್ನೊಂದು ಪ್ರಾತಿಶಾಖ್ಯ ಪದ್ಧತಿ. ಮೊದಲನೆಯದರಲ್ಲಿ ಧ್ವನಿಗಳ ಪಾರಸ್ಪರಿಕ ಸಂಬಂಧ ಮತ್ತು ವಿನಿಮಯಗಳ ಸ್ಪಷ್ಟೀಕರಣ ಮುಖ್ಯ ಗುರಿಯಾದರೆ ಎರಡನೆಯದರಲ್ಲಿ ಧ್ವನಿಗಳ ವೈಜ್ಞಾನಿಕ ಅಧ್ಯಯನ ಪ್ರಧಾನವಾಗಿದೆ. ಪ್ರತ್ಯಾಹಾರ ಗಳ ಬಳಕೆ ಮೊದಲನೆಯ ಸಂಪ್ರದಾಯದಲ್ಲಾದರೆ ಎರಡನೆಯದರಲ್ಲಿ ಸ್ವರ, ವ್ಯಂಜನ, ಅಯೋಗವಾಹ ಇತ್ಯಾದಿಯಾಗಿ ವರ್ಣಗಳನ್ನು ವಿಭಜಿಸುವ ಕ್ರಮ. ಪ್ರಾತಿಶಾಖ್ಯಗಳು, ಕಾತಂತ್ರ, ಸಿದ್ಧಹೇಮ ಶಬ್ದಾನುಶಾಸನ ಮೊದಲಾದುವುಗಳಲ್ಲಿ ಎರಡನೆಯ ಪದ್ಧತಿ ಯನ್ನು ಕಾಣುತ್ತೇವೆ. ಕನ್ನಡ ವರ್ಣಮಾಲೆಯನ್ನು ಹೇಳುವಲ್ಲಿ ವೈಯಾಕರಣರಿಗೆ ಪ್ರಾತಿಶಾಖ್ಯ ಪದ್ಧತಿ ಮಾದರಿಯಾಗಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸ್ಮೃತಿ ಯಲ್ಲಿ "ಸ್ವರಮೊಂದುಂ ವ್ಯಂಜನಮೆಂದೆರಡಕ್ಕುಂ ವರ್ಣಭೇದಂ" (ಸೂತ್ರ 1) ಎಂಬ ಸ್ಪಷ್ಟವಾದ ಮಾತಿದೆ. ಭೂಷಣವು ಸ್ಮೃತಿಯನ್ನನುಸರಿಸುತ್ತದೆ. ದರ್ಪಣದಲ್ಲಿ ಅವೆರಡರ ಜೊತೆಯಲ್ಲಿ 'ಯೋಗವಾಹ'ವನ್ನು ಕಾಣುತ್ತೇವೆ. ಸಂಸ್ಕೃತದಲ್ಲಿ 'ಅಯೋಗ ವಾಹ'ವೆಂದೇ ಪ್ರಸಿದ್ಧವಾಗಿರುವುದನ್ನು 'ಯೋಗವಾಹ'ವೆಂದು ಹೇಳಿದ್ದು ದರ್ಪಣದ ವೈಶಿಷ್ಟ್ಯವಾಗಿದೆ.

## ವರ್ಣಕ್ರಮ

(ಋ. ಪ್ರಾ. ವರ್ಗದ್ವಯ ವೃತ್ತಿ-10) ಪ್ರಾತಿಶಾಖ್ಯ ಪದ್ಧತಿಗೆ ಸೇರಿದ ಗ್ರಂಥ ಗಳಲ್ಲಿ ವರ್ಣಕ್ರಮ ಹೆಚ್ಚು ಕಡಿಮೆ ಹೀಗಿದೆ :

| | |
|---|---|
| ಪ್ರಾತಿಶಾಖ್ಯಗಳು | ಸ್ವರ–ವ್ಯಂಜನ–ಅಯೋಗವಾಹ |
| ಕಾತಂತ್ರ | ಸ್ವರ–ವ್ಯಂಜನ–ಅಯೋಗವಾಹ |
| ಸಿ. ಹೇ. ಶ. | ಸ್ವರ–ಎರಡು ಅಯೋಗವಾಹಗಳು–<br>ವ್ಯಂಜನ–ಎರಡು ಅಯೋಗವಾಹಗಳು |

ಕನ್ನಡ ವ್ಯಾಕರಣಗಳಲ್ಲಿ :

| | |
|---|---|
| ಸ್ಮೃತಿ | ಸ್ವರ–ವ್ಯಂಜನ |

| | |
|---|---|
| ಭೂಷಣ | ಸ್ವರ–ವ್ಯಂಜನ–ಯೋಗವಾಹ |
| ದರ್ಪಣ | ಸ್ವರ–ಎರಡು ಯೋಗವಾಹಗಳು–ವ್ಯಂಜನ –ಎರಡು ಯೋಗವಾಹಗಳು |

ತೈತ್ತಿರೀಯ ಮತ್ತು ಋಗ್ವೇದ ಪ್ರಾತಿಶಾಖ್ಯಗಳಲ್ಲಿ ಅಂತೆಯೇ ಕಾತಂತ್ರ ಹಾಗೂ ಸಿದ್ಧ ಹೇಮ ಶಬ್ದಾನುಶಾಸನದಲ್ಲಿ ಅಯೋಗವಾಹವೆಂಬ ಪದ ಬಳಕೆಯಾಗಿಲ್ಲವಾದರೂ ಅಲ್ಲಿ ಕೆಲವು ಅಯೋಗವಾಹಗಳನ್ನು ಹೇಳಲಾಗಿದೆ. 'ವಾಜಸನೇಯಿ' ಮಾತ್ರ ನೇರವಾಗಿ "ಅಥಾಯೋಗವಾಹಾಃ" (8-18) ಎಂದು ಹೇಳುತ್ತದೆ. ಸ್ಮೃತಿಭೂಷಣಗಳು ಯೋಗವಾಹವೆಂಬ ಶಬ್ದವನ್ನು ಬಳಸದಿರುವುದರಲ್ಲಿ ಸಹಮತವಾಗಿವೆ. ಆದರೆ ಭೂಷಣ ಬಿಂದು ಮತ್ತು ವಿಸರ್ಗವನ್ನು ಉಲ್ಲೇಖಿಸುತ್ತದೆ. ದರ್ಪಣದಲ್ಲಿ ಎರಡು ಯೋಗವಾಹ ಗಳನ್ನು (ಬಿಂದು ಮತ್ತು ವಿಸರ್ಗ) ವ್ಯಂಜನಗಳ ನಿರೂಪಣೆಗಿಂತ ಮೊದಲು ಹೇಳಿ ಉಳಿದೆರಡನ್ನು (ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯ) ಕೊನೆಯಲ್ಲಿ ಹೇಳ ಲಾಗಿದೆ. ಆ ಮಟ್ಟಿಗೆ ಅದು ಸಿದ್ಧಹೇಮ ಶಬ್ದಾನುಶಾಸನವನ್ನನುಸರಿಸಿದೆ ಯೆನ್ನಬಹುದು. ಮೇಲುನೋಟಕ್ಕೆ ಈ ಕ್ರಮ ಅವ್ಯವಸ್ಥಿತವಾದಂತೆ ಭಾಸವಾಗುತ್ತದೆ. ಆದರೆ ಆಳಕ್ಕಿಳಿದು ವಿಚಾರಿಸಿದರೆ ರೂಢಿಯಲ್ಲಿರುವ ಗಮನಾರ್ಹ ವಿಚಾರವೊಂದಲ್ಲಿ ಅಡಗಿರುವುದು ತಿಳಿಯುತ್ತದೆ.

ಇಂದು ವರ್ಣಮಾಲೆಯನ್ನು ಹೇಳುವಾಗ ಬಿಂದು ಮತ್ತು ವಿಸರ್ಗವನ್ನು ಸ್ವರ ವ್ಯಂಜನಗಳ ಮಧ್ಯೆ ಹೇಳುವುದು ಕ್ರಮವಷ್ಟೆ. ಬಹುಶಃ ಈ ಪದ್ಧತಿ ಕೇಶಿರಾಜನ ಕಾಲ ಕ್ಕಿಂತ ಹಿಂದೆಯೇ ಎಂದರೆ ಹೆಚ್ಚು ಕಡಿಮೆ ಹೇಮಚಂದ್ರನ ಕಾಲಕ್ಕಾಗಲೇ ಸಂಪ್ರದಾಯ ವಾಗಿ ಹೋಗಿದ್ದಿರಬೇಕೆಂದು ತೋರುತ್ತದೆ. ಹೇಮಚಂದ್ರ ಮತ್ತು ಕೇಶಿರಾಜರ ಪ್ರತಿಭೆ ರೂಢಿಗೆ ತಲೆಬಾಗಿದ್ದನ್ನಿಲ್ಲಿ ಗುರುತಿಸಬೇಕು. ಹೀಗಿದ್ದೂ ಭೂಷಣ ಮತ್ತು ದರ್ಪಣದ ಆರಂಭದಲ್ಲಿ ಕೊಡುವ ವರ್ಣಮಾಲೆಯಲ್ಲಿ ಬಿಂದು ಮತ್ತು ವಿಸರ್ಗಕ್ಕೆ ಪ್ರವೇಶ ದೊರಕ ದಿರುವುದು ಅಚ್ಚರಿಗೆ ಕಾರಣವಾಗುತ್ತದೆ.

## ಅಕಾರಾದಿ ವರ್ಣಗಳು

ತಾವು ಹೇಳುವ ವರ್ಣಮಾಲೆ ಅತ್ಯಂತ ಪ್ರಸಿದ್ಧವಾದವು ಎಂಬ ಅಭಿಪ್ರಾಯ ಕನ್ನಡ ವೈಯಾಕರಣರದು—

"ತೇಪ್ಯನಾದಿಕಾಲ ಪ್ರಸಿದ್ಧತ್ವಾದನ್ಯಥಾನೋಪದೇಷ್ಟವ್ಯಾ ಇತ್ಯರ್ಥಃ"

(ಭೂಷಣ ಸೂತ್ರ 2ರ ವೃತ್ತಿ)

ಎಂದು ಭೂಷಣಕಾರ ಹೇಳಿದರೆ "ವರ್ಣಂಗಳ ಪಾಠಕ್ರಮಂ ಅರ್ಣವವೃತ ಧಾತ್ರಿಯೊಳ್ ಪ್ರಸಿದ್ಧಂ" ಎಂಬುದಾಗಿ ದರ್ಪಣಕಾರ ಹೇಳುತ್ತಾನೆ. ಹೀಗೆ ಅವರು ಹೇಳುವುದು ಸಂಸ್ಕೃತ ವರ್ಣಮಾಲೆಯನ್ನು ದೃಷ್ಟಿಯಲ್ಲಿಟ್ಟುಕೊಂಡಾಗಿದೆ. ಅಕಾರದಿಂದ ವರ್ಣ

ಮಾಲೆಯಂ ಆರಂಭವಾಗುವುದರ ಕುರಿತು ಭೂಷಣ, ದರ್ಪಣಗಳಲ್ಲಿ ಭಿನ್ನಾಭಿಪ್ರಾಯವಿಲ್ಲ, ಆದರೆ ಕೊನೆಯ ವರ್ಣದ ಬಗ್ಗೆ ಏಕಾಭಿಪ್ರಾಯವಿಲ್ಲ. ಭೂಷಣ 'ಹಕಾರ ಪರ್ಯವಸಾನ' ವೆಂದರೆ ದರ್ಪಣ 'ಳಕಾರಂಬರೆಗಂ' ಎಂದು ಕಳವನ್ನು ಸೇರಿಸಿಕೊಳ್ಳುತ್ತದೆ, ದುರ್ಗಸಿಂಹನ "ವರ್ಣಾ ಅಕಾರಾದಯಃ" ಎಂಬ (ಕಾತಂತ್ರ 1-1-1ರ ವೃತ್ತಿ) ಮಾತನ್ನು ಭೂಷಣ ಎತ್ತಿಕೊಂಡು "ಅಕಾರಾದಯಃ ಪ್ರಸಿದ್ಧಾ ವರ್ಣಾಃ" (ಸೂ. 2) ಎಂದು ಮಾರ್ಪಡಿಸಿ ಸೂತ್ರವಾಗಿಸಿದೆ. ವರ್ಣಮಾಲೆ "ಹಕಾರಪರ್ಯವಸಾನ"ವೆಂದು ಹೇಳುವಲ್ಲಿ ಭೂಷಣವು ದುರ್ಗಸಿಂಹನ "ಕಕಾರಾದೀನಿ ಹಕಾರಪರ್ಯಂತಾನಿ ವ್ಯಂಜನ ಸಂಜ್ಞಕಾನಿ ಭವಂತಿ" (1-1-9ರ ವೃತ್ತಿ) ಎಂಬ ಮಾತಿಗೆ ಋಣಿಯಾಗಿರಬೇಕು.

## ಸ್ವರಗಳು

ಅಕಾರಾದಿಯಾದ ವರ್ಣಮಾಲೆಯಲ್ಲಿ ಮೊದಲ ಹದಿನಾಲ್ಕು ವರ್ಣಗಳಿಗೆ ಸ್ವರ ಸಂಜ್ಞೆಯನ್ನು ವಿಧಿಸುವಲ್ಲಿ ಕನ್ನಡ ವ್ಯಾಕರಣಗಳ ಮೇಲೆ ಕಾತಂತ್ರದ ಪ್ರಭಾವ ಕಣ್ಣೊತ್ತಾಗಿದೆ.

ಸ್ಮೃತಿ : "ಆದ್ಯಕ್ಷರದಿಂಬರೆ ಪದಿನಾಲ್ಕುಂ ಸ್ವರಂಗಳ್" (ಸೂ. 3)
ಭೂಷಣ : "ತೇಷ್ವಾದೌ ಚತುರ್ದಶ ಸ್ವರಾಃ" (ಸೂತ್ರ. 3)
ದರ್ಪಣ : "ಅಕಾರಂ ಮೊದಲಾಗಿರೆ ಪದಿನಾಲ್ಕುಂ ಸ್ವರಂಗಳ್" (ಸೂತ್ರ 16)

} "ತತ್ರ ಚತುರ್ದಶಾದೌ ಸ್ವರಾಃ" ಕಾತಂತ್ರ 1-1-2

## ಸಮಾನ ಮತ್ತು ಸವರ್ಣ

ಸಂಸ್ಕೃತ ವೈಯಾಕರಣರು ಸ್ವರಗಳನ್ನು ಸಮಾನಾಕ್ಷರ (Monopthongs) ಮತ್ತು ಸಂಧ್ಯಕ್ಷರ (Dipthongs) ಎಂದು ವಿಂಗಡಿಸುತ್ತಾರೆ. ಯಾವ ಯಾವ ಸ್ವರಗಳು ಸಮಾನಾಕ್ಷರಗಳು ಎಂಬ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಋಗ್ವೇದ ಪ್ರಾತಿಶಾಖ್ಯ, ತೈತ್ತಿರೀಯ ಪ್ರಾತಿಶಾಖ್ಯ, ಕಾತಂತ್ರ, ಸಿದ್ಧಹೇಮ ಶಬ್ದಾನುಶಾಸನಗಳು ಸಮಾನ ಎಂಬ ಸಂಜ್ಞೆಯನ್ನು ಒಮ್ಮತದಿಂದ ಬಳಸಿವೆ. ಕಾತಂತ್ರವನ್ನು ಅನುಸರಿಸಿ ದರ್ಪಣವು ಸಮಾನ ಸಂಜ್ಞೆಯನ್ನು ವಿಧಿಸಿದೆ.

ಕಾತಂತ್ರ "ದಶ ಸಮಾನಾಃ" 1-1-3
ದರ್ಪಣ "ಆದಿಯಪತ್ತಕ್ಕರಮುಂ ಸಮಾನಮೆನಿಸುಗುಂ" ಸೂತ್ರ. 16

ತೈತ್ತಿರೀಯ ಪ್ರಾತಿಶಾಖ್ಯ, ಅಷ್ಟಾಧ್ಯಾಯಿ, ಕಾತಂತ್ರಗಳಲ್ಲಿ ಸವರ್ಣ ಸಂಜ್ಞೆ ಪ್ರಯುಕ್ತವಾಗಿದೆ. ಕಾತಂತ್ರವನ್ನನುಸರಿಸಿ ದರ್ಪಣವೂ ಸವರ್ಣ ಸಂಜ್ಞೆಯನ್ನು ಹೇಳುತ್ತದೆ.

ಕಾತಂತ್ರ: "ತೇಷಾಂ ದ್ವೌದ್ವಾವನ್ಯೋನ್ಯಸ್ಯ ಸವರ್ಣಾ" 1-1-4
ದರ್ಪಣ: "ಎರಡೆರಡವಚೊಳ್ ಸವರ್ಣವೆಂತೋದಿದೊಡಂ" ಸೂ. 16

'ಅ' ಮೊದಲ್ಗೊಂಡು 'ಌ' ವರೆಗಿನ ಹತ್ತು ಸ್ವರಗಳಿಗೆ 'ಸಮಾನ' ಎಂಬ ಸಂಜ್ಞೆ. ಸಂದರೆ ಆ ಹತ್ತರಲ್ಲಿ ಎರಡೆರಡು ವರ್ಣಗಳ ಒಂದೊಂದು ಜೋಡಿ "ಸವರ್ಣ" ಎನಿಸಿಕೊಳ್ಳುತ್ತದೆ. ವರ್ಣಗಳ ಜೋಡಿ ಅನುಲೋಮಕ್ರಮದಲ್ಲಿದ್ದರೂ (ಅಆ) ವಿಲೋಮಕ್ರಮದಲ್ಲಿದ್ದರೂ (ಆಅ) ಸವರ್ಣ ಸಂಜ್ಞೆ ಸಲ್ಲುವುದೆಂದು ದರ್ಪಣದ ವೃತ್ತಿ ಹೇಳುತ್ತದೆ (ಸೂತ್ರ 16ರ ವೃತ್ತಿ). "ಕಾತಂತ್ರದಲ್ಲಿಲ್ಲದ ಅನುಲೋಮ ವಿಲೋಮಗಳ ಮಾತನ್ನು ಕೇಶಿರಾಜ ಏಕೆ ಎತ್ತಿದನೋ?" (ಆಲೋಕ ಪು 37) ಎಂಬ ಪ್ರಶ್ನೆ ಹುಟ್ಟಿಕೊಂಡಿದೆ. ತೈತ್ತಿರೀಯ ಪ್ರಾತಿಶಾಖ್ಯೆಯ ಮಾಹಿಷೇಯ ಭಾಷ್ಯ (1-3) ದಲ್ಲಿ ದೀರ್ಘದ ಮುಂದೆ ಹ್ರಸ್ವ ಹಾಗೂ ಹ್ರಸ್ವದ ಮುಂದೆ ದೀರ್ಘ ಬಂದಾಗ ಸವರ್ಣವೆನಿಸುವ ವಿಚಾರವಿದೆ. ಬಹುಶಃ ಅಂತಹ ಸಂಸ್ಕೃತದ ವಿಚಾರಧಾರೆಯಿಂದ ದರ್ಪಣಕಾರ ಪ್ರೇರಣೆ ಹೊಂದಿ ಹಾಗೆ ಹೇಳಿರಬೇಕು. ಮುಂದಿನ ಸೂತ್ರದಲ್ಲಿ (ಸೂ. 17) ಹ್ರಸ್ವದ ಮುಂದೆ ಹ್ರಸ್ವ ಬಂದಾಗ ಮತ್ತು ದೀರ್ಘದ ಮುಂದೆ ದೀರ್ಘ ಬಂದಾಗ ಸವರ್ಣ ಸಂಜ್ಞೆಗೆ ಅರ್ಹವೆನಿಸುವ ವಿಚಾರವಿದೆ. ಬಹುಶಃ ದುರ್ಗಸಿಂಹನಿಂದ ಪ್ರಭಾವಿತನಾಗಿ (ಕಾತಂತ್ರ 1-1-4ರ ವೃತ್ತಿ) ದರ್ಪಣಕಾರ ಈ ಸೂತ್ರವನ್ನು ಹೆಣೆದಿರಬೇಕು. ದರ್ಪಣದಲ್ಲಿ ಮುಂದೆಲ್ಲೂ ಬಳಕೆಗೊಳ್ಳದ ಸಮಾನ ಮತ್ತು ಸವರ್ಣ ಎಂದೇ ಸಂಜ್ಞೆಗಳು ಕನ್ನಡದ ಮಟ್ಟಿಗೆ ಅಪ್ರಯೋಜಕಗಳು.

## ಹ್ರಸ್ವ-ದೀರ್ಘ

ಹ್ರಸ್ವ ಮತ್ತು ದೀರ್ಘವೆಂಬ ಎರಡು ಸ್ವರಭೇದಗಳನ್ನು ಸಂಸ್ಕೃತ ವ್ಯಾಕರಣಗಳೆಲ್ಲ ಹೇಳುತ್ತವೆ. ಸಮಾನಗಳಲ್ಲಿ ಎರಡೆರಡರ ಯುಗ್ಮವನ್ನು ಸವರ್ಣವೆಂದು ಕರೆದ ಬಳಿಕ ಕಾತಂತ್ರವು ಹ್ರಸ್ವ ದೀರ್ಘ ವಿಚಾರವನ್ನು ಹೇಳಿದರೆ ಅಲ್ಲಿನ ವಿಚಾರವನ್ನೇ ದರ್ಪಣ ಕನ್ನಡಿಸಿದೆ.

ಕಾತಂತ್ರ : ಪೂರ್ವೋಹ್ರಸ್ವಃ, ಪರೋದೀರ್ಘಃ ; ಸೂ. 1-1-4, 5
ದರ್ಪಣ : ವಿದಿತಸಮಾನಂಗಳ ಪೂರ್ವದಕ್ಕರಂ
ಹ್ರಸ್ವಂ ಅದರ ಪರದಕ್ಕರಮಂತಮಂ
ದೀರ್ಘಂ ಸೂ. 19
ಹ್ರಸ್ವ : ಅ, ಇ, ಉ, ಋ, ಌ
ದೀರ್ಘ : ಆ, ಈ, ಊ, ೠ, ൡ

ಹ್ರಸ್ವ ಮತ್ತು ದೀರ್ಘವನ್ನು ಮೂರೂ ಗ್ರಂಥಗಳು ಯಶಸ್ವಿಯಾಗಿ ಬಳಸುತ್ತವೆ ಯಾದರೂ ಸ್ಮೃತಿ ಭೂಷಣಗಳು ಮೇಲಿನಂತೆ ಸಂಜ್ಞೆಯನ್ನು ವಿಧಿಸುವುದಿಲ್ಲ.

## ಮಾತ್ರೆ—ಅರ್ಧಮಾತ್ರೆ

ಒಂದು ಹ್ರಸ್ವ ಸ್ವರವನ್ನು ಉಚ್ಚರಿಸಲು ಬೇಕಾದ ಕಾಲ ಪರಿಮಾಣವನ್ನು 'ಮಾತ್ರೆ' ಎಂಬುದಾಗಿ ಋಗ್ವೇದ ಪ್ರಾತಿಶಾಖ್ಯದಲ್ಲಿ (1-27) ಹೇಳಲಾಗಿದೆ. (ಋ. ಪ್ರಾ. 1-27ರ ಉವ್ವಟ ಭಾಷ್ಯ). ವ್ಯಂಜನದ ಉಚ್ಚಾರ ಕಾಲಾವಧಿ ಸ್ವರಕ್ಕಿಂತ ಕಡಿಮೆಯಿರುವುದರಿಂದ ಅದನ್ನು ಅರ್ಧಮಾತ್ರಾಕಾಲವೆಂದು ಋಗ್ವೇದ, ತೈತ್ತಿರೀಯ ಮತ್ತು ವಾಜಸನೇಯಿ ಪ್ರಾತಿಶಾಖ್ಯೆಗಳು ಹೇಳುತ್ತವೆ. ಕನ್ನಡ ವ್ಯಾಕರಣಗಳಲ್ಲಿ ಸ್ಮೃತಿ 'ವ್ಯಂಜನಂಗಳ್ ಅರೆಮಾತ್ರಿಕೆಗಳ್' (ಸೂತ್ರ. 1) ಎಂದು ಹೇಳುತ್ತದೆ. ಇದು ವಾಜಸನೇಯಿ ಪ್ರಾತಿಶಾಖ್ಯದ 'ವ್ಯಂಜನಮರ್ಧಮಾತ್ರಾ' (1-59) ಎಂಬುದರ ಅನುವಾದದಂತಿದೆ. ಭೂಷಣ ದರ್ಪಣಗಳಲ್ಲಿ ಈ ಅರ್ಧಮಾತ್ರೆಯ ವಿಚಾರವಿಲ್ಲ. ಆದರೆ ಪ್ರತ್ಯೇಕವಾದ ಹೇಳಿಕೆಯೊಂದು ದರ್ಪಣದಲ್ಲಿ ಗೋಚರಿಸುತ್ತದೆ. "ಎರಡುಂ ವ್ಯಂಜನಮನುಚ್ಚರಿಸುವನಿತು ಕಾಲಮಂ ಮಾತ್ರೆಯೆಂಬುದು" (ಸೂ. 20ರ ವೃತ್ತಿ). ಇದು ಆಶ್ಚರ್ಯಕರವಾದ ಹೇಳಿಕೆ. ಎರಡು ವ್ಯಂಜನಗಳು ಮಾತ್ರ ಸೇರಿದರೆ ಒಂದು ಮಾತ್ರೆಯಾಗದು. '$\frac{1}{2}+\frac{1}{2}=1$' ಎಂಬ ಲೆಕ್ಕಾಚಾರ ಇಲ್ಲಿ ಸಲ್ಲದು. ಹ್ರಸ್ವದ ಅರ್ಧ ಕಾಲಮಾನವುಳ್ಳದ್ದು ವ್ಯಂಜನವೆಂದು ಒಪ್ಪಿಕೊಂಡಿರುವಾಗ (ತೈ. ಪ್ರಾ. 1-37) ಎರಡು ವ್ಯಂಜನಗಳನ್ನು ಉಚ್ಚರಿಸುವ ಕಾಲ ಅಂದರೆ ಒಂದು ಹ್ರಸ್ವದ ಕಾಲ ಮಾತ್ರ ಎಂಬ ರೀತಿಯಲ್ಲಿ ದರ್ಪಣದ ಮೇಲಿನ ಹೇಳಿಕೆ ಬಂದಿರಬೇಕೆಂದು ತೋರುತ್ತದೆ.

ಸ್ವರಗಳನ್ನು ಹ್ರಸ್ವ, ದೀರ್ಘ ಮತ್ತು ಪ್ಲುತವೆಂದು ಮಾತ್ರೆಯನ್ನು ತಳಹದಿಯನ್ನಾಗಿಟ್ಟುಕೊಂಡು ಹೇಳುವ ಕ್ರಮ ಪ್ರಾತಿಶಾಖ್ಯ ಪದ್ಧತಿಯಲ್ಲಿದೆ. ಅಷ್ಟಾಧ್ಯಾಯಿಯಲ್ಲಿ ಮಾತ್ರೆಯ ಜಾಗದಲ್ಲಿ ಕಾಲ (1-2-27) ಎನ್ನಲಾಗಿದೆ. ಕಾತಂತ್ರದಲ್ಲಿ ಇಂತಹ ನಿರೂಪಣೆಯಿಲ್ಲ. ಕನ್ನಡ ವ್ಯಾಕರಣಗಳು ಪ್ರಾತಿಶಾಖ್ಯ ಪದ್ಧತಿಯನ್ನನುಸರಿಸಿವೆ.

ಸ್ಮೃತಿ : "ಸ್ವರದೊಳಗಮೇಕಮಾತ್ರಾನಿರತಂ ಹ್ರಸ್ವಂ ದ್ವಿಮಾತ್ರಾಮಂತಮ
ದೀರ್ಘಂ....ಮಾತ್ರಾತ್ರಯ ಪರಿಗತಮಪ್ಪುಗೆ ಪ್ಲುತಂ" (ಸೂ.2)

ದರ್ಪಣ : 'ಹ್ರಸ್ವಮಂದೇಕಮಾತ್ರಕಂ ದೀರ್ಘಮುಭಯ
ಮಾತ್ರಂ ತ್ರಿಮಾತ್ರಕಂ ಪ್ಲುತಂ' (ಸೂ. 20)

ಈ ನಿರೂಪಣೆಯ ಮೇಲೆ ಪ್ರಾತಿಶಾಖ್ಯಗಳ ಪ್ರಭಾವ ದಟ್ಟವಾಗಿದೆ :

ಋಗ್ವೇದ ಪ್ರಾತಿಶಾಖ್ಯೆ :

"ಮಾತ್ರಾಹ್ರಸ್ವ : ದ್ವೇದೀರ್ಘ :
ತಿಸ್ರ : ಪ್ಲುತ ಉಚ್ಯತೇ ಸ್ವರ : 1-27, 29, 30.

ವಾಜಸನೇಯಿ ಪ್ರಾತಿಶಾಖ್ಯೆ :

ಅಮಾತ್ರಸ್ಸ್ವರೋ ಹ್ರಸ್ವ : ಮಾತ್ರಾಚದ್ವಿಸ್ತಾವಾನ್ ದೀರ್ಘ: ಪ್ಲುತಸ್ತ್ರಿ : 1-55-58.
ದರ್ಪಣದ "ವೃತ್ತಿಯಲ್ಲಿ ಸ್ವರಂ ವ್ಯಂಜನದಿಂ ಏಕಮಾತ್ರಮಾದೊಡೆ ಹ್ರಸ್ವಂ ಎಂದಿದೆ.

ಇಲ್ಲಿ ವ್ಯಂಜನದಿಂ ಎಂದರೇನು ಅರ್ಥ ? ವ್ಯಂಜನದ ಪರದಲ್ಲಿ ಎಂದೇ ? ಅಷ್ಟು ಸ್ಪಷ್ಟ ವಿಲ್ಲ" (ಆಲೋಕ. ಪು. 20).

ಭೂಷಣ ಹ್ರಸ್ವ ದೀರ್ಘ ಪ್ಲುತಗಳನ್ನು ಹೇಳುವಲ್ಲಿ ಸಿದ್ಧಹೇಮ ಶಬ್ದಾನು ಶಾಸನಕ್ಕೆ ಹೆಚ್ಚು ಋಣಿಯಾದಂತಿದೆ :

"ಏಕದ್ವಿತ್ರಿಮಾತ್ರಾ ಹ್ರಸ್ವದೀರ್ಘಪ್ಲುತಾಃ" (ಸಿ.ಹೇ.ಶ. 1-1-5)

ಭೂಷಣ : "ಏಕದ್ವಿತ್ರಿಮಾತ್ರಾಸ್ತೆ ಹ್ರಸ್ವದೀರ್ಘ ಪ್ಲುತಾಃ" ಸೂ. 4

**ಸಂಧ್ಯಕ್ಷರಗಳು**

ಏಐಓಔ—ಇವುಗಳು ಸಂಧ್ಯಕ್ಷರಗಳೆಂದು ಋಗ್ವೇದ ಪ್ರಾತಿಶಾಖ್ಯೆ ಹೇಳುತ್ತದೆ. ಕಾತಂತ್ರದಲ್ಲಿ "ಏಕಾರಾದೀನಿ ಸಂಧ್ಯಕ್ಷರಾಣಿ" (1–1–8) ಎಂಬ ಸೂತ್ರವಿದೆ. ಅದನ್ನು ಸ್ಮೃತಿ ನೇರವಾಗಿ ಕನ್ನಡಿಸಿದೆ.

"ಸಂಧ್ಯಕ್ಷರಮೆನೆ ಯಥಾರ್ಥದಿಂ ವ್ಯವಹರಿಸುಗು
ಮೇಕಾರಮಾದಿಯಾಗಿರೆ ನಾಲ್ಕುಂ" ಸೂತ್ರ 3

ಸ್ಮೃತಿಯ ವಿಚಾರದೊಂದಿಗೆ ಗುರು ಮತ್ತು ದೀರ್ಘವನ್ನು ದರ್ಪಣ ಸೇರಿಸಿಕೊಂಡಿದೆ.

"ಕ್ರಮದೆ ಗುರು ದೀರ್ಘಮೇಕಾರ ಮುಖ್ಯ ಸಂಧ್ಯಕ್ಷರಂಗಳವು" ಸೂತ್ರ 20

ಭೂಷಣ ಸಂಧ್ಯಕ್ಷರಗಳ ಕುರಿತು ಸೂತ್ರಪಾಠದಲ್ಲಿ ಏನೂ ಹೇಳಿಲ್ಲವಾದರೂ ಏಕಾರ ಒಕಾರಗಳ ಹ್ರಸ್ವರೂಪಗಳ ಕುರಿತಾಗಿ ಹೇಳುವ ಸೂತ್ರದ (ಸೂತ್ರ 5) ವೃತ್ತಿಯಲ್ಲಿ "ನಿತ್ಯಂ ಸಂಧ್ಯಕ್ಷರಾಣಿ ದೀರ್ಘಾಣಿ ಇತ್ಯುಪದೇಶಾದಿದಂ ವಚನಂ" ಎಂದು ಹೇಳುತ್ತದೆ. ದುರ್ಗಸಿಂಹನ ಕಾತಂತ್ರ ಪರಿಭಾಷಾ ಸೂತ್ರ ವೃತ್ತಿಯಲ್ಲಿ "ನಿತ್ಯಂ ಸಂಧ್ಯಕ್ಷರಾಣಿ ದೀರ್ಘಾಣಿ" (37) ಎಂಬ ಉಕ್ತಿಯಿದೆ. ಬಹುಶಃ ಭೂಷಣಕಾರ ಈ ವಿಚಾರದಲ್ಲಿ ಆ ಗ್ರಂಥಕ್ಕೆ ಋಣಿಯಾಗಿರಬೇಕು. ಆದರೂ ಸಂಧ್ಯಕ್ಷರಗಳು ಯಾವುದೆಂದು ಭೂಷಣ ಹೇಳುವುದಿಲ್ಲ. ಐ, ಔ ಗಳನ್ನು ಪ್ರಸ್ತಾಪಿಸುವುದಿಲ್ಲ. ಋಗ್ವೇದ ಪ್ರಾತಿಶಾಖ್ಯೆಯಲ್ಲಿ ದೀರ್ಘಗಳೆಲ್ಲ ಗುರುಗಳು (1-20) ಎಂದು ಹೇಳಲಾಗಿದೆ. ದರ್ಪಣಕಾರ ಈಯೆಲ್ಲ ಗ್ರಂಥಗಳಿಂದ ಪ್ರೇರಿತನಾಗಿ ಸಂಧ್ಯಕ್ಷರಗಳನ್ನು ಹೇಳುವಾಗ "ಕ್ರಮದೆ ಗುರು, ದೀರ್ಘಂ...." ಎಂದು ಕೂಡಿಸಿ ಹೇಳಿರಬೇಕು.

ಸಂಧ್ಯಕ್ಷರಗಳು ನಾಲ್ಕು ಎಂದು ಸ್ಮೃತಿ ಲೆಕ್ಕಮಾಡಿ ಹೇಳಿದರೆ ದರ್ಪಣ ಏಕಾರಾದಿ ಎಂದು ಮಾತ್ರ ಹೇಳುತ್ತದೆ. ಆದರೆ "ವರ ಸಂಧ್ಯಕ್ಷರದಂತಿರೆ ಗುರು.... ಸರ್ವೇತಂ" ಎಂಬ ಪ್ರಯೋಗವನ್ನು ನೋಡುವಾಗ ಅಲ್ಲಿಯೂ ಸಂಧ್ಯಕ್ಷರಗಳು ನಾಲ್ಕು ಎಂದು ಖಚಿತವಾಗುತ್ತದೆ. ವಾಜಸನೇಯಿ ಪ್ರಾತಿಶಾಖ್ಯ ದೀರ್ಘ ಪ್ಲುತಗಳ ಲೆಕ್ಕಾಚಾರದಿಂದ ಸಂಧ್ಯಕ್ಷರಗಳು ಎಂಟು (ವಾ. ಪ್ರಾ : 8-5) ಎಂದುದನ್ನು ನೆನೆಯಬಹುದು.

## ನಾಮಿ

14 ಸ್ವರಗಳಲ್ಲಿ ಅವರ್ಣ ಹೊರತಾದ ಸ್ವರಗಳಿಗೆ ನಾಮಿ ಎಂಬ ಸಂಜ್ಞೆಯನ್ನು ಕಾತಂತ್ರ ವಿಧಿಸಿದೆ. ಅದನ್ನು ಸ್ಮೃತಿ, ದರ್ಪಣಗಳು ಚಾಚು ತಪ್ಪದೆ ಅನುಸರಿಸಿವೆ.

ಕಾತಂತ್ರ : "ಸ್ವರೋವರ್ಣ ವರ್ಜೋ ನಾಮೀ" ಸೂ. 1-1-7

ಸ್ಮೃತಿ : "ಪರಿಹರಿಸೆ ಯವರ್ಣವನಾಸ್ವರಂಗಳವು
ನಾಮಿಯೆಂಬುವಕ್ಕುಂ' ಸೂತ್ರ 3

ದರ್ಪಣ : ಅವರ್ಣಂಪಿಂಗಿದಾ ಸ್ವರಂ ನಾಮಿಯೆಂದಂ
ಪೇೞಲ್ ಪಡೆಗುಂ" ಸೂತ್ರ 19

ಋಗ್ವೇದ ಪ್ರಾತಿಶಾಖ್ಯೆಯಲ್ಲಿ ಅವರ್ಣ ಹೊರತಾದ ಹತ್ತು ಸ್ವರಗಳನ್ನು 'ನಾಮಿ' ಯೆಂದು ಕರೆಯಲಾಗಿದೆ (1-6-5) "ಌ ೡ"ಗಳನ್ನು ಬಿಟ್ಟುದರಿಂದ ಅಲ್ಲಿ ನಾಮಿಗಳು ಸಂಖ್ಯೆಯಲ್ಲಿ ಹತ್ತಾದುವು. ಆದರೆ ಕಾತಂತ್ರವು ಅವೆರಡನ್ನೂ ಸೇರಿಸಿಕೊಂಡು ಹನ್ನೆರಡು ನಾಮಿಗಳನ್ನು ಹೇಳುತ್ತದೆ. ಸ್ಮೃತಿ ದರ್ಪಣಗಳು ಕಾತಂತ್ರವನ್ನು ನೇರವಾಗಿ ಅನುಸರಿಸಿರುವುದರಿಂದ ಇಲ್ಲಿಯೂ ನಾಮಿಗಳ ಸಂಖ್ಯೆ ಹನ್ನೆರಡಾಗಿದೆ. ಆದ್ದರಿಂದ "ಕನ್ನಡದಲ್ಲಿ 'ಎ', 'ಒ' ಎಂಬ ಹ್ರಸ್ವ ಸ್ವರಗಳಿರುವುದರಿಂದ ಕೇಶಿರಾಜನ ಮತದಲ್ಲಿ ನಾಮಿಗಳು ಹನ್ನೆರಡಾಗುತ್ತವೆ. ಌಕಾರವು ನಾಮಿಯಲ್ಲ, ಏಕೆಂದರೆ ಅದರ ಮುಂದೆ ಸಕಾರವು ಬರುವ ಸಂದರ್ಭವೇ ಇಲ್ಲ" (ವ್ಯಾಕರಣಗಳು ಪು. 182-183) ಎಂಬ ಹೇಳಿಕೆ ಸರಿಯಲ್ಲ. ದರ್ಪಣವು ಸ್ಮೃತಿಯಂತೆ ಕಾತಂತ್ರವನ್ನನುಸರಿಸಿ ಕಣ್ಣುಮುಚ್ಚಿ 'ನಾಮಿ' ಸಂಜ್ಞೆಯನ್ನು ವಿಧಿಸಿದೆ. ಕಾತಂತ್ರದಲ್ಲಿ 'ಎ ಒ'ಗಳ ಪ್ರಸ್ತಾವಕ್ಕೆ ಅವಕಾಶವಿಲ್ಲ. ದರ್ಪಣದ ವೃತ್ತಿಯಿಂದಲೂ (ಸೂ. 19ರ ವೃತ್ತಿ) ಎ, ಒ ಗಳಿಗೆ ನಾಮಿ ಸಂಜ್ಞೆ ಲಭಿಸಿಲ್ಲವೆಂಬುದು ವ್ಯಕ್ತವಾಗುತ್ತದೆ.

ಸ್ಮೃತಿ ದರ್ಪಣಗಳು ಹೇಳುವ ತೀರ ಅನುಪಯುಕ್ತ ಸಂಜ್ಞೆಯಾದ ನಾಮಿಯ ಬಗ್ಗೆ ಚಕಾರವೆತ್ತದಿರುವುದು ಭೂಷಣದ ವೈಶಿಷ್ಟ್ಯ.

## ದೇಶೀಯ ಸ್ವರಗಳು—ಎ, ಒ

ಸಂಸ್ಕೃತ ವರ್ಣಮಾಲೆಯನ್ನು ಆದರ್ಶವಾಗಿಟ್ಟುಕೊಂಡು ಕನ್ನಡ ವರ್ಣಮಾಲೆಯನ್ನು ಹೇಳುವಲ್ಲಿಯೂ ಕನ್ನಡ ಭಾಷೆಯ ಸಹಜ ಉಚ್ಚಾರದ ಕಡೆಗೆ ವೈಯಾಕರಣರು ಗಮನ ಕೊಟ್ಟುದಕ್ಕೆ ದೇಶೀಯ ವರ್ಣಗಳ ಪ್ರಸ್ತಾವ ಸಾಕ್ಷಿಯಾಗಿದೆ. ಆದರಲ್ಲೂ 'ಎ, ಒ' ಸ್ವರಗಳ ಉಲ್ಲೇಖ ಮತ್ತಷ್ಟು ಗಮನಾರ್ಹ. ಸಂಸ್ಕೃತ ವರ್ಣಮಾಲೆಯಲ್ಲಿ 'ಎ, ಒ' ಗಳಿಲ್ಲ. ಪಾಲಿ-ಪ್ರಾಕೃತಗಳ ಕಾಲಕ್ಕಾಗುವಾಗ ಆರ್ಯ ಭಾಷೆಗಳಲ್ಲಿ 'ಎ, ಒ'ಗಳು ಉಚ್ಚಾರದಲ್ಲಿ ಮೂಡಿದುವು. 'ಮೊಗ್ಗಲ್ಲಾನ'ನ ಪಾಲಿ ವ್ಯಾಕರಣದಲ್ಲಿ (ಕ್ರಿ. ಶ. 1153–1186) ಮೊದಲ ಬಾರಿಗೆ 'ಎ. ಒ' ಗಳ ಉಲ್ಲೇಖ ಹುಟ್ಟಿಕೊಂಡಿದೆ.

ಆದರೂ ಲಿಪಿಯಲ್ಲಿ 'ಎ, ಏ ಮತ್ತು ಒ, ಓ' ಗಳ ಹ್ರಸ್ವ, ದೀರ್ಘಗಳಿಗೆ ಬೇರೆಬೇರೆಯಾದ ಸಂಕೇತಗಳು ಬಂದಂತಿಲ್ಲ. ಕನ್ನಡ ಲಿಪಿಯ ವಿಕಾಸದಲ್ಲೂ ನಾವಿದನ್ನು ಕಾಣುತ್ತೇವೆ. ಎಂದರೆ ಆರಂಭದಲ್ಲಿ ಕನ್ನಡ ಲಿಪಿಯಲ್ಲಿ ಎ, ಏ ಮತ್ತು ಒ, ಓ ಗಳಿಗೆ ಒಂದೊಂದೇ ರೂಪಗಳು ಬಳಕೆಯಾಗುತ್ತಿದ್ದುವು ಎಂದಭಿಪ್ರಾಯ. ವ್ಯಕ್ತ ಸ್ವರೂಪದಲ್ಲಿ ಮೊದಲಿನ ರೂಪಗಳು ಸಂಸ್ಕೃತದಲ್ಲಿರುವಂತೆ ದೀರ್ಘವನ್ನೇ ಸೂಚಿಸುತ್ತಿದ್ದುವು. "ಅನಂತರ ಕನ್ನಡದ ಪ್ರಯೋಗ ಜಾಸ್ತಿಯಾದಾಗ ಹ್ರಸ್ವ ಮತ್ತು ದೀರ್ಘಗಳು ಸಾಮಾನ್ಯವಾಗಿ ಬಳಕೆಗೆ ಬಂದವು. ಲಿಪಿಯ ದೃಷ್ಟಿಯಿಂದ ಈ ವ್ಯತ್ಯಾಸವು ಯಾವಾಗ ಪ್ರಾರಂಭವಾಯಿತೆಂದು ಹೇಳುವುದು ಕಷ್ಟ" (ಕ. ಲೆ. ವಿ. ಪು. 44). ಬದ್ಧ ರೂಪದಲ್ಲಿದ್ದಾಗ ವಿಜಯನಗರದ ಕಾಲದವರೆಗೂ ಎಕಾರಕ್ಕೂ ಅದರ ದೀರ್ಘಕ್ಕೂ ಅಷ್ಟೊಂದು ವ್ಯತ್ಯಾಸಗಳು ಕಾಣಬರುವುದಿಲ್ಲ. ಎರಡನ್ನೂ ಒಂದೇ ರೀತಿಯಲ್ಲಿ ಬರೆಯುತ್ತಿದ್ದರೆಂದು ತೋರುತ್ತದೆ" (ಅದೇ ಪು 110). ಹದಿನೆಂಟನೆಯ ಶತಮಾನದಲ್ಲಿ ಹ್ರಸ್ವ ದೀರ್ಘಗಳ ರೂಪಗಳಲ್ಲಿ ವ್ಯತ್ಯಾಸವುಂಟಾದಂತಿದೆ. 'ಒ, ಓ' ಗಳ ವಿಚಾರವೂ ಹೀಗೆಯೇ "ಹದಿನೆಂಟನೆಯ ಶತಮಾನದಲ್ಲಿ ದೀರ್ಘವನ್ನು ಸೂಚಿಸಲು ಕೊಂಡಿಯಂತಿರುವ ರೇಖೆಯು ಅಕ್ಷರದ ಎಡಪಕ್ಕದಲ್ಲಿ ಅಕ್ಷರಕ್ಕೆ ಭಿನ್ನವಾದಂತೆ ಹೊಸದಾಗಿ ಸೇರುತ್ತದೆ" (ಅದೇ. ಪು. 114). ಕನ್ನಡ ವೈಯಾಕರಣರು ತಮ್ಮ ಕಾಲದಲ್ಲಿ 'ಎ' ಮತ್ತು 'ಒ' ಗಳ ಹ್ರಸ್ವ, ದೀರ್ಘಗಳು ಲಿಪಿಯಲ್ಲಿ ಭಿನ್ನವಾಗಿಲ್ಲವಾದರೂ ಉಚ್ಚಾರದಲ್ಲಿ ಭಿನ್ನವಾಗಿರುವುದನ್ನು ಗುರುತಿಸಿರುವುದು ಮಹತ್ವಪೂರ್ಣವಾಗಿದೆ.

ಭೂಷಣವು "ಏದೋತೌ ಹ್ರಸ್ವಾಚ" (ಸೂ. 5) ಎಂದು 'ಎ' 'ಒ' ಕಾರಗಳು ಭಾಷೆಯಲ್ಲಿ ಕ್ವಚಿತ್ತಾಗಿ ಬರುವುದಾಗಿ (ಸೂ. 5ರ ವೃತ್ತಿ) ಹೇಳಿದರೆ ದರ್ಪಣವು 'ಎ' ಕಾರ 'ಒ' ಕಾರಗಳನ್ನು ಕನ್ನಡಕ್ಕೆ ಸಹಜವೆಂದು ಒತ್ತಿ ಹೇಳಿದೆ (ಸೂ. 18). ಸ್ಮೃತಿಯು ವರ್ಣಮಾಲೆಯನ್ನು ನಿರೂಪಿಸುವಲ್ಲಿ ಎಕಾರ ಒಕಾರಗಳನ್ನು ಪ್ರಸ್ತಾವಿಸಿಲ್ಲವಾದ ಕಾರಣ ಈಯೆರಡು ವರ್ಣಗಳ ಕಲ್ಪನೆಯ ಬಗ್ಗೆ ಕನ್ನಡ ವ್ಯಾಕರಣ ಕ್ಷೇತ್ರದಲ್ಲಿ ಉಂಟಾದ ಬೆಳವಣಿಗೆಯನ್ನು ಗುರುತಿಸಬಹುದು. ಸ್ಮೃತಿಯು ಕೆಲವು ಶಬ್ದಗಳ ಕೊನೆಯಲ್ಲಿ ಬರುವ ಏ, ಓ ಗಳಿಗೆ ಹ್ರಸ್ವ ದೀರ್ಘ ರೂಪಗಳೆರಡನ್ನೂ ವಿಧಿಸುವಲ್ಲಿ ಎ, ಒ ಗಳನ್ನು ಸೂಚಿಸಿದೆ (ಸೂ. 68). ಪ್ರಯೋಗವಲ್ಲಿ 'ಪ್ರಾಯೋಗ್ರಹಣಕ್ಕೆ'ಂದು ಕೊಟ್ಟ ಪದ್ಯಗಳಲ್ಲಿ (320, 321) ಸಹಜವಾದ ಎ ಮತ್ತು ಒಗಳ ಬಳಕೆಯಾಗಿದೆ. ಸಂಸ್ಕೃತ ಸ್ವೀಕರಣಗಳನ್ನು ವಿವರಿಸುವಲ್ಲಿ "ಆಕಾರಕ್ಕೆ ಲಘೂಕೃತಮೇಕಾರಂ"(ಸೂತ್ರ 39) ಎಂದು ಹೇಳಿ ಉಚ್ಚಾರದಲ್ಲಿ ಎಕಾರವನ್ನು ಗುರುತಿಸಿದೆ. ಹೀಗಿದ್ದೂ ವರ್ಣಮಾಲೆಯಲ್ಲಿ ಅವುಗಳನ್ನು ಪ್ರಸ್ತಾವಿಸದಿರುವುದನ್ನು ನೋಡುವಾಗ ಆ ಕಾಲಕ್ಕೆ 'ಎ, ಒ'ಗಳ ಪ್ರತ್ಯೇಕ ವರ್ಣತ್ವದ ಬಗ್ಗೆ ಅಂತಹ ಬಲವಾದ ಅಭಿಪ್ರಾಯ ಮೂಡಿ ಬಂದಿರಲಿಲ್ಲವೆಂದು ತೋರುತ್ತದೆ. ಭೂಷಣದ ಕಾಲಕ್ಕಾಗುವಾಗ "ಕ್ವಚಿತ್ಪ್ರಯೋಗ" ವೆಂಬಭಿಪ್ರಾಯವಾದರೆ ದರ್ಪಣದ ಕಾಲಕ್ಕೆ ಕನ್ನಡದ ಸಹಜ ಧ್ವನಿಗಳಾಗಿ ಎ, ಒ ಗಳು ಕಲ್ಪಿತವಾಗಿರಬೇಕು.

ಕನ್ನಡ ಲಿಪಿಯಲ್ಲಿ ಎ, ಒಗಳಿಗೆ ಪ್ರತ್ಯೇಕ ರೂಪಗಳಿಲ್ಲದ್ದರಿಂದ ದರ್ಪಣಕಾರನಿಗೆ ಎ ಕಾರ ಒ ಕಾರಗಳನ್ನು ಹೇಳುವ ಸಂದರ್ಭಗಳಲ್ಲಿ ಕೆಲವೊಮ್ಮೆ ಉಂಟಾದ ತೊಡಕು ಕಣ್ಣೊತ್ತಾಗಿದೆ. ''ಪ್ರಾಸಚ್ಛಂದೋನ್ವಯವಿನ್ಯಾಸ''ದಿಂದ ಸೂತ್ರದಲ್ಲಿ ''ಅಂತಿಂತು'' ಶಬ್ದವನ್ನಿಟ್ಟು ಹೇಳಿದರೂ ವೃತ್ತಿಯಲ್ಲಿ ಸ್ಪಷ್ಟವಾಗಿ ಹೇಳಬಹುದಲ್ಲ ! ಆದರೆ ವೃತ್ತಿಯಲ್ಲಿ ಬರುವ ದ್ರಾವಿಡ ಪ್ರಾಣಾಯಾಮ ನೋಡತಕ್ಕದಿದೆ—

''ಸಂಸ್ಕೃತದ ಆಕಾರಾಂತಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ........'' (ಸೂ. 92ರ ವೃತ್ತಿ)
''ಅಕಾರಾಂತಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ....'' (ಸೂತ್ರ 93ರ ವೃತ್ತಿ)
''ಹ್ರಸ್ವಮಪ್ಪೆಕಾರದೊಳಂ'' (ಸೂತ್ರ 118ರ ವೃತ್ತಿ)

ಕೆಲವೊಮ್ಮೆ ಕೆಳಗಿನಂತೆ ಹೇಳುವ ದಿಟ್ಟತನವೂ ದರ್ಪಣದಲ್ಲಿ ಗೋಚರಿಸದಿಲ್ಲ.

''....ಎ ಒ ಎಂಬಿವು ಸಂಸ್ಕೃತದೊಳಿಲ್ಲ'' (ಸೂತ್ರ 29ರ ವೃತ್ತಿ)
''ಅಕಾರಾಂತಮಾದಲ್ಲಿ ಎ ಏ ಎಂಬಿವು ಪರಮಾಗೆ'' (ಸೂತ್ರ 135ರ ವೃತ್ತಿ)

ಒಟ್ಟಿನಲ್ಲಿ ಲಿಪಿಯಲ್ಲಿ ಭಿನ್ನ ಸಂಕೇತಗಳಿಲ್ಲದಾಗಲೂ ಭಾಷೆಯ ಉಚ್ಚಾರವನ್ನು ತಳಹದಿಯನ್ನಾಗಿಸಿ ಎ ಒ ಗಳನ್ನು ವರ್ಣವೆಂದು ಕಲ್ಪಿಸಿಕೊಂಡುದುಂ ಸಂಸ್ಕೃತದ ಭದ್ರಕೋಟೆಯೊಳಗಿದ್ದೂ ಕನ್ನಡ ವೈಯಾಕರಣರುಂ ಹೇಗೆ ಕನ್ನಡತನವನ್ನು ಕಂಡುಕೊಂಡಿರುವರೆಂಬುದಕ್ಕೆ ದೃಷ್ಟಾಂತವಾಗಿದೆ.

ದರ್ಪಣವು ಎ ಏ ಮತ್ತು ಒ ಓ ಎಂಬ ಯುಗ್ಮಗಳಿಗೆ ಸವರ್ಣ ಸಂಜ್ಞೆಯನ್ನು ವಿಧಿಸಿದೆ. ಆದರೆ ಅದಕ್ಕೆ ''ಕನ್ನಡದ ಎ–ಸಂಸ್ಕೃತದ ಏ, ಕನ್ನಡದ ಒ–ಸಂಸ್ಕೃತದ ಓ'' (ಆಲೋಕ. ಪು. 40) ಹೀಗೆಂದು ಅರ್ಥವಲ್ಲ. ಕನ್ನಡ ಮತ್ತು ಸಂಸ್ಕೃತದ ಸಮಾನ ವರ್ಣಗಳಲ್ಲಿ ದರ್ಪಣವು ಯಾವುದೇ ಅಂತರವನ್ನು ಕಾಣುವುದಿಲ್ಲ. 'ವರ್ಣ' ಎಂಬ ಬಳಕೆ 'ಸವರ್ಣ' ಎಂಬ ಅರ್ಥದಲ್ಲಿ ಬರುವುದರಿಂದ 'ಎವರ್ಣ, ಒವರ್ಣ'—ಇಂತಹ ಸಾರ್ಥಕ ಪ್ರಯೋಗ ಕನ್ನಡ ವ್ಯಾಕರಣಗಳಲ್ಲಿದೆ (ದರ್ಪಣ: ಸೂ. 66).

## ವ್ಯಂಜನಗಳು

ಕಕಾರಾದಿ ಹಕಾರ ಪರ್ಯವಸಾನವಾದ ವ್ಯಂಜನಗಳು ಮೂವತ್ತಮೂರು ಎಂಬ ಗಣನೆ ಭೂಷಣದಲ್ಲಿದೆ (ಸೂ. 6). ಸ್ಮೃತಿ ಸೂತ್ರದಲ್ಲಿ ಹಾಗೆ ಲೆಕ್ಕಮಾಡಿ ಹೇಳದಿದ್ದರೂ ಅದರ ಪ್ರಯೋಗ ಪದ್ಯದಿಂದ (9) ವ್ಯಂಜನಗಳ ಸಂಖ್ಯೆ ಮೂವತ್ತಮೂರೆಂಬುದು ಖಚಿತವಾಗುತ್ತದೆ. ಹಕಾರದ ಅನಂತರ 'ಳ' (ಕ್ಷಳ) ಕಾರವನ್ನು ಸೇರಿಸಿದ್ದು ದರ್ಪಣದ ಪ್ರತ್ಯೇಕತೆಯಾಗಿದೆ. ಕ್ಷಳದ ವಿಚಾರವೊಂದನ್ನು ಬಿಟ್ಟರೆ ಭೂಷಣ ದರ್ಪಣಗಳ

ನಿರೂಪಣೆಯ ಮೇಲೆ ಕಾತಂತ್ರದ ಸೂತ್ರ ವೃತ್ತಿಗಳ (1-1-9) ಪ್ರಭಾವ ನಿಚ್ಚಳ ವಾಗಿದೆ.

## ವರ್ಗ

ವ್ಯಂಜನಗಳನ್ನು ವರ್ಗ, ಅಂತಸ್ಥ ಮತ್ತು ಊಷ್ಮಗಳೆಂದು ವರ್ಗೀಕರಿಸುವ ಕ್ರಮ ವನ್ನು ಪ್ರಾತಿಶಾಖ್ಯ ಪದ್ಧತಿಯಲ್ಲಿ ಋಗ್ವೇದ ಪ್ರಾತಿಶಾಖ್ಯ ಮೊದಲ್ಗೊಂಡು ಕಾಣು ತ್ತೇವೆ. ಕಕಾರಾದಿ ಮಕಾರ ಪರ್ಯವಸಾನ ವರ್ಣಗಳನ್ನು ಐದೈದರ ಐದು ವರ್ಗಗಳಾಗಿ ವಿಂಗಡಿಸುವಲ್ಲಿ ಕನ್ನಡ ವ್ಯಾಕರಣಗಳು ನೇರವಾಗಿ ಕಾತಂತ್ರದೊಂದಿಗೆ ದನಿಗೂಡಿಸುತ್ತವೆ.

ಕಾತಂತ್ರ : 'ತೇವರ್ಗಾಃ ಪಂಚ ಪಂಚ ಪಂಚ' 1-1-10

ಸ್ಮೃತಿ : 'ಎಯ್ದೆ ಕಕಾರದಿನಿರ್ಪ
ತ್ತಯ್ದಕ್ಕರಮೆಂಯ್ದುವನ್ನೆಗಂ ಪರಿವಿಡಿಯಿಂ
ದಯ್ದಯ್ದುಗೆಯ್ದುವರ್ಣಾದಿ
ನಯ್ದುಂ ವರ್ಗಂಗಳಕ್ಕುಂ' ಸೂ. 4

ಭೂಷಣ : 'ವರ್ಗಾಸ್ತೇ ಮಾಂತಾಃ ಪಂಚಶಃ ಪಂಚ' ಸೂ. 7

ದರ್ಪಣ : '....ಪಂಚಕ ಪಂಚಕಂಗಳಿಂ ಪಂಚಕ
ಮಕ್ಕುಂ ವರ್ಗಂ' ಸೂ. 23

ಪ್ರತಿಯೊಂದು ವರ್ಗದ ಒಂದನೆಯ, ಎರಡನೆಯ, ಮೂರನೆಯ, ನಾಲ್ಕನೆಯ ಮತ್ತು ಐದನೆಯ ವರ್ಣಗಳಿಗೆ ಅನುಕ್ರಮವಾಗಿ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ ಮತ್ತು ಉತ್ತಮ ಎಂಬ ಸಂಜ್ಞೆಗಳು ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ವಿಧಿಸಲ್ಪಟ್ಟಿವೆ (1-11). ಈ ಸಂಜ್ಞೆಗಳನ್ನು ಅಥರ್ವ ಪ್ರಾತಿಶಾಖ್ಯೆಯಲ್ಲೂ ಕಾಣಬಹುದು. ವರ್ಗ ಪ್ರಥಮ, ವರ್ಗ ದ್ವಿತೀಯ, ತೃತೀಯ, ಚತುರ್ಥ, ಪಂಚಮ— ಇಂತಹ ಪ್ರಯೋಗ ಕಾತಂತ್ರದಲ್ಲಿದೆ.

ಕನ್ನಡ ವ್ಯಾಕರಣಗಳಲ್ಲಿ ವರ್ಗಪ್ರಥಮ, ಪ್ರಥಮ, ತೃತೀಯ. ಪಂಚಮ (ಸ್ಮೃತಿ ಭೂಷಣ, ದರ್ಪಣ) ವರ್ಗದ್ವಿತೀಯ, ವರ್ಗಚತುರ್ಥ (ದರ್ಪಣ)-ಇತ್ಯಾದಿ ಪ್ರಯೋಗ ಗಳು ತಲೆದೋರಿವೆ. ಉತ್ತಮ ಎಂಬ ಸಂಜ್ಞೆಗಿಲ್ಲಿ ಪ್ರವೇಶ ದೊರಕಿಲ್ಲ.

## ಅಲ್ಪಪ್ರಾಣ-ಮಹಾಪ್ರಾಣ

ಪ್ರಾತಿಶಾಖ್ಯಗಳಲ್ಲಾಗಲಿ, ಕಾತಂತ್ರ, ಅಷ್ಟಾಧ್ಯಾಯಿಗಳಲ್ಲಾಗಲಿ ಅಲ್ಪಪ್ರಾಣ- ಮಹಾಪ್ರಾಣ ಎಂಬೀ ಸಂಜ್ಞೆಗಳು ಪ್ರಯುಕ್ತವಾಗಿಲ್ಲ. ಮಹಾಭಾಷ್ಯದಲ್ಲಿ ವರ್ಗ ಪ್ರಥಮ ಮತ್ತು ವರ್ಗ ತೃತೀಯಗಳನ್ನು ಅಲ್ಪಪ್ರಾಣವೆಂದೂ ದ್ವಿತೀಯ ಚತುರ್ಥಗಳನ್ನು ಮಹಾಪ್ರಾಣಗಳೆಂದೂ ಹೇಳಲಾಗಿದೆ (1-1-9). ಮುಂದೆ ಸಂಸ್ಕೃತ ವ್ಯಾಕರಣದಲ್ಲಿ

ಬಾಹ್ಯ ಪ್ರಯತ್ನ ಹನ್ನೊಂದು ವಿಧವೆಂದು ರೂಢಿಗೆ ಬಂದಂತಿದೆ; ಆ ಹನ್ನೊಂದಂ ವಿಧಗಳಲ್ಲಿ ಅಲ್ಪಪ್ರಾಣ-ಮಹಾಪ್ರಾಣಗಳೂ ಸೇರುತ್ತವೆ :

"ವರ್ಗಾಣಾಂ ಪ್ರಥಮ ತೃತೀಯ ಪಂಚಮಃ ಪ್ರಥಮ ತೃತೀಯ
ಯಮೌ ಯರಲವಾಶ್ಚಾಲ್ಪಪ್ರಾಣಾಃ । ಅನ್ಯೇಮಹಾಪ್ರಾಣಾಃ"
(ಸಿ. ಕೌ. 1-12ರ ವೃತ್ತಿ)

ಈ ಹೇಳಿಕೆಯಿಂದ ಅಲ್ಪಪ್ರಾಣ ಮಹಾಪ್ರಾಣಗಳ ಗಣನೆ ವರ್ಗೀಯ ವ್ಯಂಜನಗಳಿಗಷ್ಟೇ ಸೀಮಿತವಾಗಿಲ್ಲವೆಂದು ತಿಳಿಯುತ್ತದೆ. ಪ್ರಾತಿಶಾಖ್ಯಗಳಲ್ಲಿ ಮಹಾಪ್ರಾಣ ಸಂಜ್ಞೆಗೆ ಸಂವಾದಿಯಾಗಿ-ಅದೂ ವರ್ಗದ್ವಿತೀಯ ಚತುರ್ಥಗಳಿಗೆ ಸೀಮಿತವಾಗಿ—"ಸೋಷ್ಮನ್" ಎಂಬ ಸಂಜ್ಞೆ ಪ್ರಯುಕ್ತವಾಗಿದೆ.

ಸ್ಮೃತಿ ದರ್ಪಣಗಳು ಮಹಾಪ್ರಾಣ ಸಂಜ್ಞೆಯನ್ನು ಬಳಸಿಕೊಂಡಿವೆ. ಸ್ಮೃತಿಯು ಸಂಖ್ಯೆ ಮತ್ತು ಅನುಕರಣಗಳಲ್ಲಿ "ಮಹಾಪ್ರಾಣಂಗಳ್ ವರ್ತಿಕುಂ" (ಸೂ. 6) ಎಂದು ಮಾತ್ರ ಹೇಳುವುದಲ್ಲದೆ ಯಾವ ಯಾವ ವರ್ಣಗಳಿಗೆ ಮಹಾಪ್ರಾಣ ಸಂಜ್ಞೆಯೆಂಬುದನ್ನು ಹೇಳುವುದಿಲ್ಲ. ಮಹಾಪ್ರಾಣಗಳು ಕನ್ನಡದಲ್ಲಿ ಇವೆಯೇ ಎಂಬ ಪ್ರಶ್ನೆಯೂ ಅಲ್ಲಿ ಹುಟ್ಟಿದಂತಿಲ್ಲ. ದರ್ಪಣದಲ್ಲಿ ಮಹಾಭಾಷ್ಯವನ್ನನುಸರಿಸಿ ವರ್ಗದ್ವಿತೀಯ ಮತ್ತು ಚತುರ್ಥಗಳನ್ನು ಮಹಾಪ್ರಾಣಗಳೆಂದು ಕರೆಯಲಾಗಿದೆ (ಸೂತ್ರ 24). ಒಂದೆಡೆ 'ಮಹಾಪ್ರಾಣ'ವನ್ನು ಒಂದು ಸಂಜ್ಞೆಯಾಗಿಯೂ ಬಳಸಲಾಗಿದೆ (ಸೂತ್ರ 265). ಈ ಮಹಾಪ್ರಾಣಗಳು ಅನುಕರಣೆ ಮತ್ತು ಸಂಖ್ಯಾವಾಚಕಗಳಲ್ಲಿ ಬಳಕೆಗೊಳ್ಳುತ್ತವೆ-ಎಂದು ಹೇಳುವಲ್ಲಿ ದರ್ಪಣ ಸ್ಮೃತಿಯೊಂದಿಗೆ ಸಹಮತವಾಗಿದೆ. ಆದರೆ ದರ್ಪಣ ಅಲ್ಲಿಗೇ ವಿರಮಿಸದೆ ಕನ್ನಡದಲ್ಲಿ ಸಹಜವಾಗಿರುವ ಮಹಾಪ್ರಾಣಗಳನ್ನು—ವರ್ಗದ್ವಿತೀಯ ಚತುರ್ಥಗಳನ್ನು-ಮುಂದೆ ಗುರುತಿಸುತ್ತದೆ (ಸೂ. 25). ದರ್ಪಣದ ದೃಷ್ಟಿಯಲ್ಲಿ ಮಹಾಪ್ರಾಣಗಳೆಂದರೆ ವರ್ಗದ್ವಿತೀಯ ಚತುರ್ಥಗಳು ಮಾತ್ರ. ಇಂದೂ ಸಾಮಾನ್ಯವಾಗಿ ಕನ್ನಡ ವರ್ಣಮಾಲೆಯಲ್ಲಿ ಮಹಾಪ್ರಾಣಗಳೆಂದು ವರ್ಗದ್ವಿತೀಯ ಚತುರ್ಥಗಳನ್ನು ಮಾತ್ರ ಹೇಳುವುದು ಗಮನಾರ್ಹ.

ಭೂಷಣದಲ್ಲಿ 'ಮಹಾಪ್ರಾಣ'ದ ವಿಚಾರವಿಲ್ಲ. ವರ್ಗದ್ವಿತೀಯ ಚತುರ್ಥಗಳು ಕನ್ನಡದಲ್ಲಿ ಸಾಧಾರಣವಾಗಿ ಬಳಕೆಗೊಳ್ಳುವುದಿಲ್ಲವೆಂಬ (ಸೂತ್ರ 11) ಅಭಿಪ್ರಾಯ ಭೂಷಣದ್ದು. ಅಂತಹ ದ್ವಿತೀಯ ಚತುರ್ಥಗಳು ಸಂಖ್ಯಾನುಕರಣಾದಿಗಳಲ್ಲಿ ಬರುವುದರ ವಿಚಾರದಲ್ಲಿ ಅದು ಸ್ಮೃತಿ ದರ್ಪಣಗಳೊಂದಿಗೆ ಏಕಾಭಿಪ್ರಾಯ ಹೊಂದಿದೆ. 'ಮಹಾಪ್ರಾಣ' ಎಂಬ ಸಂಜ್ಞೆಯನ್ನೇ ಭೂಷಣವು ಬಳಸದಿರುವುದರಿಂದ ನಾಗವರ್ಮನ ದೃಷ್ಟಿಯಲ್ಲಿ "ವರ್ಗದ್ವಿತೀಯ ಚತುರ್ಥಗಳಿಗೆ ಮತ್ತು ಶ, ಷ ಕಾರಗಳಿಗೇ ಮಹಾಪ್ರಾಣವೆಂಬ ಸಂಜ್ಞೆ" (ವ್ಯಾಕರಣಗಳು: ಪು. 5ರ ಅಡಿಟಿಪ್ಪಣಿ) ಎಂದು ಹೇಳಲೆಡೆಯಿಲ್ಲ. ಆದರೆ

ಸಂಖ್ಯಾನಂಕರಣಗಳನ್ನು ಬಿಟ್ಟುಳಿದೆಡೆಗಳಲ್ಲಿ ಬರುವ ದ್ವಿತೀಯ ಚತುರ್ಥಗಳನ್ನು ಭೂಷಣ ಲಕ್ಷಿಸದೆ ಇಲ್ಲ (ಸೂತ್ರ 11ರ ವೃತ್ತಿ).

ಸ್ಮೃತಿ ಭೂಷಣ ದರ್ಪಣಗಳು ಒಮ್ಮೆಯಾದರೂ 'ಅಲ್ಪಪ್ರಾಣ'ವೆಂಬ ಸಂಜ್ಞೆಯನ್ನು ಪ್ರಸ್ತಾವಿಸಿಲ್ಲ.

### ಅನುನಾಸಿಕಗಳು

ವರ್ಗಪಂಚಮಗಳಿಗೆ 'ಅನುನಾಸಿಕ' ಎಂಬ ಸಂಜ್ಞೆ ಋಕ್ ಪ್ರಾತಿಶಾಖ್ಯೆಯಲ್ಲಿ ಬಳಕೆಯಾಗಿದೆ. 'ಉತ್ತಮ'ಗಳನ್ನು 'ಅನುನಾಸಿಕ'ಗಳೆಂದು ತೈತ್ತಿರೀಯ ವಾಜಸನೇಯಿ ಹಾಗೂ ಅಥರ್ವ ಪ್ರಾತಿಶಾಖ್ಯೆಗಳಲ್ಲಿ ಹೇಳಲಾಗಿದೆ. ಋಕ್ ಪ್ರಾತಿಶಾಖ್ಯೆಯನನ್ನು ಸರಿಸಿ ಕಾತಂತ್ರವು ಅನುನಾಸಿಕಗಳನ್ನು ಹೇಳಿದರೆ ಅದನ್ನು ಕನ್ನಡ ವ್ಯಾಕರಣಗಳು ಚಾಚೂ ತಪ್ಪದೆ ಅನುಸರಿಸಿವೆ.

ಋ. ಪ್ರಾ. : "ಅನುನಾಸಿಕೋನ್ಯಃ " 1-14
ಕಾತಂತ್ರ : "ಅನುನಾಸಿಕಾ ಙ ಞ ಣ ನ ಮಾಃ " 1-1-13
ಸ್ಮೃತಿ : "ಅನುನಾಸಿಕವುಂಕ್ಕುಂ ಙ ಞ ಣ ನ ಮಂಗಳೆ" ಸೂ. 5
ಭೂಷಣ : ಅನುನಾಸಿಕಾಸ್ತೇಷಾಂ ಪಂಚಮಾಃ " ಸೂ. 8
ದರ್ಪಣ : "ವರ್ಗದಂತ್ಯಂಗಳನರಿಯನುನಾಸಿಕಾಖ್ಯೆಯಂ
ತಳೆದಿರ್ಕುಂ": ಸೂ. 25

ಅನುನಾಸಿಕ ಎಂಬ ಸಂಜ್ಞೆಯನ್ನು ಅಷ್ಟಾಧ್ಯಾಯಿ ಬಳಸಿಕೊಂಡಿದ್ದರೂ ಅಲ್ಲಿನ ಅರ್ಥವ್ಯಾಪ್ತಿ ಕಾತಂತ್ರಕ್ಕಿಂತ ಹಿರಿದಾಗಿದೆ (1-1-8).

### ಅವರ್ಗಗಳು

ಯ, ರ, ಲ, ವ ಗಳಿಗೆ ಅಂತಸ್ಥಗಳೆಂದೂ, ಶ, ಷ, ಸ, ಹ ಗಳಿಗೆ ಊಷ್ಮಗಳೆಂದೂ ಪ್ರಾತಿಶಾಖ್ಯ ಪದ್ಧತಿಯ ವ್ಯಾಕರಣಗಳಲ್ಲಿ ಹೇಳುವುದು ರೂಢಿ. ಕಾತಂತ್ರದಲ್ಲಿ 'ಅಂತಃಸ್ಥ' (1-1-14) ಮತ್ತು 'ಊಷ್ಮ' (1-1-15) ಎಂಬ ಸಂಜ್ಞೆಗಳು ಪ್ರಯುಕ್ತವಾಗಿವೆ. ಸಂಸ್ಕೃತ ವ್ಯಾಕರಣಗಳು ಹೇಳುವ ಇತರ ಸಂಜ್ಞೆಗಳಾದ ಅಘೋಷ, ಘೋಷ ಇತ್ಯಾದಿಗಳನ್ನು ತಿರಸ್ಕರಿಸಿದಂತೆ ಅಂತಃಸ್ಥ ಮತ್ತು ಊಷ್ಮ ಎಂಬೆರಡು ಸಂಜ್ಞೆಗಳನ್ನು ಕನ್ನಡ ವ್ಯಾಕರಣಗಳು ತಿರಸ್ಕರಿಸಿವೆ. ಆದರೆ 'ಅವರ್ಗ' ಎಂಬ ಹೊಸತಾದ ಒಂದು ಸಂಜ್ಞೆಯನ್ನು ವಿಧಿಸಿವೆ. ಬಹುಶಃ ಇದು 'ವರ್ಗ'ಕ್ಕೆ ವಿರೋಧ ಪದವೆಂಬ ಲೆಕ್ಕದಲ್ಲಿ—ವರ್ಗವಲ್ಲದ್ದು ಎಂಬರ್ಥದಲ್ಲಿ ಪ್ರಯುಕ್ತವಾಗಿರಬೇಕೆಂದು ತೋರುತ್ತದೆ.[5] ಅಂತಃಸ್ಥ ಮತ್ತು ಊಷ್ಮಗಳನ್ನು ಒಟ್ಟಾಗಿ 'ಅವರ್ಗ' ಎಂದು ಸ್ಮೃತಿ ಹೇಳುತ್ತದೆ.

ಸ್ಮೃತಿ : "ಉಟಿದುವವರ್ಗಂ" ಸೂ. 4
ದರ್ಪಣ : "ಅಂತ್ಯವರ್ಣಮಂವರ್ಗಂ" ಸೂ. 23

ದರ್ಪಣವು ಅವರ್ಗಗಳ ಸಾಲಿನಲ್ಲಿ ಕ್ಷಳವನ್ನು ಸೇರಿಸಿಕೊಂಡಿದೆ. ಭೂಷಣವು ಈ ಅವರ್ಗ ಎಂಬ ಸಂಜ್ಞೆಯ ವಿಚಾರವಾಗಿ ಮೌನ ಧರಿಸಿದೆ. ಕನ್ನಡ ವ್ಯಾಕರಣಗಳಲ್ಲಿ ಸಮಾನ, ಸವರ್ಣ, ನಾಮಿಂಗಳಂತೆ 'ಅವರ್ಗ'ವೂ ನಿರುಪಯುಕ್ತ ಸಂಜ್ಞೆಯಾಗಿದೆ.

## ಯವಲಗಳು ಅನುನಾಸಿಕಗಳು ಮತ್ತು ಅನನುನಾಸಿಕಗಳು

ಸಾನುನಾಸಿಕ ಮತ್ತು ನಿರನುನಾಸಿಕ ಎಂಬ ಭೇದ ಪ್ರತಿಯೊಂದು ಸ್ವರದಲ್ಲೂ, ಯ, ವ, ಲ ಗಳಲ್ಲೂ ಇರುವಂತೆ ಸಂಸ್ಕೃತ ವ್ಯಾಕರಣಗಳಿಂದ ತಿಳಿಯುತ್ತದೆ (ಕಾಶಿಕಾ 1–1–6). ವೈದಿಕ ಸಂಸ್ಕೃತದಲ್ಲಿ ಮಕಾರದ ಮುಂದೆ ಯವಲಗಳು ಬಂದಾಗ ಆ ಮಕಾರವು ಅನುನಾಸಿಕೀಕರಣಗೊಂಡ ಯವಲಗಳಾಗಿ ತಿರುಗುವುದೆಂದು ಪ್ರಾತಿಶಾಖ್ಯ ಗಳು ಹೇಳುತ್ತವೆ.[6] ಕನ್ನಡ ವ್ಯಾಕರಣಗಳು ಸ್ವರಗಳ ಸಾನುನಾಸಿಕ ಮತ್ತು ನಿರನು ನಾಸಿಕಗಳ ಭೇದಗಳನ್ನು ಗಣನೆಗೆ ತೆಗೆದುಕೊಂಡಿಲ್ಲವಾದರೂ ಯವಲಗಳಲ್ಲಿ ಅಂತಹ ಭೇದವನ್ನು ಒಮ್ಮತದಿಂದ ಹೇಳುತ್ತವೆ.

ಸ್ಮೃತಿ : ಯವಲಮನನುನಾಸಿಕಮುಂ
ಮತ್ತನುನಾಸಿಕಮುಂ...." ಸೂ.5
ಭೂಷಣ : "ವಿಭಾಷಯಾ ಯವಲಾಃ" ಸೂ. 9
ದರ್ಪಣ : ಅನುನಾಸಿಕಮುಂ ಯವಲಂ
"ಅನನುನಾಸಿಕಮುಂ ದಲ್ ಎಂಬರ್" ಸೂ. 26

ಹೇಳುವುದು ಸಂಸ್ಕೃತ ವರ್ಣಮಾಲೆಯನ್ನಾದರೂ ಅದನ್ನು ಅಲ್ಲಲ್ಲಿಯೇ ಹೊಂದಿಸಿ ಕೊಳ್ಳುವ ಕನ್ನಡ ವೈಯಾಕರಣರ ಪ್ರಯತ್ನಕ್ಕಿದು ನಿದರ್ಶನವಾಗಿದೆ. ಸಂಸ್ಕೃತ ವ್ಯಾಕರಣ ಗಳಲ್ಲಿ ಕಂಡುಬರುವ ತತ್ವವನ್ನು ಕನ್ನಡಕ್ಕೆ ಹೊಂದಿಸಿಕೊಂಡು ಕನ್ನಡದಿಂದಲೇ ಲಕ್ಷ್ಯ ಗಳನ್ನು ಎತ್ತಿಕೊಂಡುದು ಗಮನಿಸತಕ್ಕದಾಗಿದೆ. ಮಾತ್ರವಲ್ಲ "ಜಸೋಕ್ತಿಯಿಂದಜ್ಪು ದಮಟ ವಿಷಯಾಂತರಮುಂ" ಎಂಬ ಸ್ಮೃತಿಯ ಹೇಳಿಕೆ (ಸೂ. 5) ಉಚ್ಚಾರವನ್ನು ನೋಡಿ ಧ್ವನಿನಿರ್ಣಯ ಮಾಡುವ ರೀತಿಯನ್ನು ಅರ್ಥವತ್ತಾಗಿ ತೋರಿಸಿಕೊಡುತ್ತದೆ. ಮೂರೂ ಗ್ರಂಥಗಳಲ್ಲಿ ಬಂದಿರುವ ಉದಾಹರಣೆಗಳನ್ನು ಸಮೀಕ್ಷಿಸಿದರೆ ಈ ವೈಯಾ ಕರಣರು ಉಚ್ಚಾರವನ್ನು ಗಮನಿಸಿಯೆ ಯವಲಗಳ ಅನುನಾಸಿಕತೆ–ನಿರನುನಾಸಿಕತೆ ಯನ್ನು ನಿರ್ಣಯಿಸಿದ್ದಾರೆಂಬುದು ತಿಳಿಯುತ್ತದೆ.

ಕನ್ನಡದಲ್ಲಿ ಈ ಅನುನಾಸಿಕ ಮತ್ತು ಅನನುನಾಸಿಕ ಯವಲಗಳನ್ನು ಸೂಚಿಸಲು ಬೇರೆಬೇರೆಯಾದ ಲಿಪಿ ರೂಪಗಳು ಹುಟ್ಟಿಕೊಂಡಿಲ್ಲ. ಉಚ್ಚಾರ ರೀತಿಯಲ್ಲಿ ವ್ಯತ್ಯಾಸ

ವನ್ನು ಕಂಡುಕೊಂಡರೂ ಅದಕ್ಕೆ ಪ್ರತ್ಯೇಕವಾದ ವರ್ಣತ್ವವನ್ನು ಕಲ್ಪಿಸಿಕೊಳ್ಳದುದೆ ಇದಕ್ಕೆ ಕಾರಣ. ''ಅನುನಾಸಿಕ್ಯ ಯವಲಗಳು ಅನನುನಾಸಿಕ ಯವಲಗಳ ಉಪಧ್ವನಿಗಳು ಮಾತ್ರ. ಅವುಗಳಿಗೆ ಧ್ವನಿಮಾ ಸ್ಥಾನವಿಲ್ಲ'' (ಕ. ಭಾ. 11-1: ಪು. 30) ಎಂಬ ಅಭಿಪ್ರಾಯವಿಲ್ಲಿ ಗಮನಾರ್ಹ.

## ಕ್ಷಳ

''ಸಂಸ್ಕೃತದ ಲಕಾರದ ಸ್ಥಾನಕ್ಕೆ ಸರಿಯಾಗಿ ಸಲ್ವುದ''ನ್ನು ಕ್ಷಳವೆಂಬ ಸಂಜ್ಞೆಯಿಂದ ದರ್ಪಣಕಾರ ಗುರುತಿಸುತ್ತಾನೆ. ಕ್ಷಳದ ವಿಚಾರವನ್ನು ಸ್ಮೃತಿ ಭೂಷಣಗಳು ಎತ್ತಿಲ್ಲ. ಕೇಶಿರಾಜನಿಗಿಂತ ಹಿಂದೆ ಕನ್ನಡ ವ್ಯಾಕರಣದಲ್ಲಿ ಆ ಸಂಜ್ಞೆ ಬಳಕೆಯಲ್ಲಿತ್ತೆಂಬುದಕ್ಕೆ ಹರಿಹರನ ಮಾತು (ಗಿರಿಜಾ ಕಲ್ಯಾಣ 1–32) ಆಧಾರವಾಗಿದೆ. ಸಂಸ್ಕೃತದ ಲಕಾರದ ಜಾಗದಲ್ಲಿ ಕನ್ನಡವು ಳಕಾರವನ್ನು ಪ್ರಯೋಗಿಸುತ್ತಿದೆಯೆಂದು ಭೂಷಣಕಾರನು ಗುರುತಿಸಿದ್ದಾನೆ. ''ಸಂಸ್ಕೃತ ಪದೇಷು ತೇಷಾಮೈಕ್ಯಮೇವ—ಸಲಿಲು, ಸಳಿಳು, ಖಡ್ಗಂ, ಖಟ್ಗಂ'' (ಸೂ. 10ರ ವೃತ್ತಿ) ಎಂಬ ಮಾತು ಇದನ್ನು ಪುಷ್ಟೀಕರಿಸುತ್ತದೆ. ಆದರೆ ಕ್ಷಳ ಸಂಜ್ಞೆಯನ್ನು ಮಾತ್ರ ಅವನು ಪ್ರಸ್ತಾವಿಸುವುದಿಲ್ಲ. ಕ್ಷಳದ ಳಕಾರ ದೇಶೀಯ 'ಳ' ಕಾರಕ್ಕಿಂತ ಭಿನ್ನವಾದುದರಿಂದಲೇ ಕ್ಷಳ ಕುಳ ಎಂಬ ಸಂಜ್ಞೆಗಳು ಕನ್ನಡದಲ್ಲಿ ರೂಢವಾಗಿವೆ.

ಕ್ಷಳವು ಸಂಸ್ಕೃತ ವರ್ಣಮಾಲೆಗೆ ಸಂಬಂಧಪಟ್ಟುದೆಂದು ಕೇಶಿರಾಜನು ಸಂಸ್ಕೃತ ವರ್ಣಮಾಲೆಯ ಕೊನೆಯಲ್ಲಿ ಳ ಕಾರವನ್ನು ಸೇರಿಸಿಕೊಂಡಿದ್ದಾನೆ. ಕ್ಷಳ ಎಂಬ ಸಂಜ್ಞೆ ಹಾಗೂ ಆ 'ಳ' ಕಾರದ ವಿಕಾಸ ಸಾಕಷ್ಟು ಕುತೂಹಲಕಾರಿಯಾಗಿದೆ.

ಅಷ್ಟಾಧ್ಯಾಯಿ, ಕಾತಂತ್ರ, ಶಾಕಟಾಯನ, ಚಾಂದ್ರ ಮೊದಲಾದ ವ್ಯಾಕರಣಗಳು ಕೊಡುವ ಸಂಸ್ಕೃತ ವರ್ಣಮಾಲೆಯಲ್ಲಿ 'ಳ' ಕಾರವಿಲ್ಲ. ವೈದಿಕ ಸಂಸ್ಕೃತದ ವರ್ಣಮಾಲೆಯನ್ನು ನಿರೂಪಿಸುವಲ್ಲಿ ಪ್ರಾತಿಶಾಖ್ಯಗಳೂ 'ಳ' ಕಾರದ ಕುರಿತು ಮೌನಧರಿಸಿವೆ. ಆದರೆ ವೈದಿಕ ಸಂಸ್ಕೃತದಲ್ಲಿ ಸ್ವರಗಳ ಮಧ್ಯದಲ್ಲಿ ಬಂದ 'ಡ' ಕಾರ 'ಢ' ಕಾರಗಳು ಅನುಕ್ರಮವಾಗಿ 'ಳ' ಕಾರ 'ಳಹ' ಕಾರಗಳಾಗುವ ವಿಚಾರವಿದೆ (ಋ. ಪ್ರಾ. 1-52) ಉದಾ: ''ಇಳಾಂ ದೇವೀಮ್; ಮರುದ್ಭಿರುಗ್ರಃ ಪೃತನಾಸು ಸಾಳಹಾ''. ಇದರಿಂದ ವೈದಿಕ ಸಂಸ್ಕೃತದ ಉಚ್ಚಾರದಲ್ಲಿ 'ಳ' ಕಾರವಿದ್ದಿತೆಂದು ಹೇಳಿದಂತಾಯಿತು. ಪ್ರಾತಿಶಾಖ್ಯಗಳು ವರ್ಣಮಾಲೆಯಲ್ಲಿ ಹೇಳದಿದ್ದರೂ ಆಧುನಿಕ ಭಾಷಾ ವಿಜ್ಞಾನಿಗಳು, ವೈದಿಕ ಸಂಸ್ಕೃತದ ವರ್ಣಗಳನ್ನು ಲೆಕ್ಕಹಾಕುವಲ್ಲಿ 'ಳ' ಕಾರವನ್ನು ಒಂದು ವರ್ಣವಾಗಿ ಪರಿಗಣಿಸುತ್ತಾರೆ. ಋಗ್ವೇದದ ಸಾಹಿತ್ಯ ಭಾಷೆಗೆ ಮೂಲವಾದ ಆಡುನುಡಿಯಲ್ಲಿ 'ಳ' ಕಾರವಿದ್ದಿರಬೇಕೆಂಬುದೇ ಇದಕ್ಕೆ ಕಾರಣ (ಹಿಂದಿ ಭಾಷಾ ಕಾ ಇತಿಹಾಸ ಪು. 94). ಆ 'ಳ' ಕಾರವು ಮೂರ್ಧನ್ಯ ಪಾರ್ಶ್ವಿಕ ಅಲ್ಪಪ್ರಾಣವಾಗಿದೆ. ಆದರೆ ಅಲ್ಲಿ ಳಕಾರವು ಲಕಾರದ ಸ್ಥಾನಕ್ಕೆ ಸರಿಯಾಗಿ ಸುದುದಲ್ಲವೆಂಬುದು ಮುಖ್ಯ ವಿಚಾರ.

ಸಾಹಿತ್ಯ ಸಂಸ್ಕೃತದಲ್ಲಿ ಮರೆಯಾದ 'ಳ' ಕಾರ ಮತ್ತೆ ಪಾಲಿಯಲ್ಲಿ ಕಾಣಿಸಿಕೊಳ್ಳುತ್ತದೆ. ಕಚ್ಚಾಯನನು ಪಾಲಿ ವರ್ಣಮಾಲೆಯಲ್ಲಿ ಳ ಕಾರವನ್ನು ಹೇಳುತ್ತಾನೆ (1-1-2ರ ವೃತ್ತಿ). ಸಂಸ್ಕೃತ ಶಬ್ದಗಳಲ್ಲಿರುವ ಟ, ದ, ಣ ಕಾರಗಳು ಪಾಲಿಯಲ್ಲಿ ಕೆಲವೊಮ್ಮೆ ಳ ಕಾರವಾಗುವುದಾಗಿ ಡಿ.ಸಿ. ಸರ್ಕಾರ್ ಹೇಳುತ್ತಾರೆ (AGPL. P. 22). ಪ್ರಾಕೃತದಲ್ಲಿಯೂ ಅಪೂರ್ವವಾಗಿ 'ಳ' ಕಾರ ಗೋಚರಿಸುತ್ತದೆ. ''ಚೌಸಟ್ಟಿ ಮೂಳವಣ್ಣಾಹಂ'' (ಕನ್ನಡ ವರ್ಣಗಳು ಪು. 100) ಎಂಬ ಪ್ರಾಕೃತ ವಚನ ಪ್ರಸಿದ್ಧವಾಗಿದೆ. ರಿಚರ್ಡ್ ಪಿಶಲ್ ಹೇಳುವಂತೆ ಮಹಾರಾಷ್ಟ್ರೀ, ಜೈನ ಮಹಾರಾಷ್ಟ್ರೀ, ಅರ್ಧಮಾಗಧೀ ಮತ್ತು ಶೌರಸೇನೀ ಪ್ರಾಕೃತಗಳಲ್ಲಿ ಸಂಸ್ಕೃತದ ಟ, ಣ, ದ ಕಾರಗಳ ಸ್ಥಾನದಲ್ಲಿ 'ಳ' ಕಾರ ಬರುತ್ತದೆ (ಪ್ರಾಕೃತ ಭಾಷಾವೋಂಕಾ ವ್ಯಾಕರಣ: ಪು. 346; 353; 355). ಹೇಮಚಂದ್ರನು ಪೈಶಾಚೀ ಮತ್ತು ಚೂಲಿಕಾ ಪೈಶಾಚಿಯಲ್ಲಿ ಸಂಸ್ಕೃತದ ಲಕಾರವು ಳಕಾರವಾಗುವುದಾಗಿ ಹೇಳುತ್ತಾನೆ (ಸಿ. ಹೇ. ಶ. 8-4-308). ಕೊನೆಯದರಲ್ಲಿ ಮಾತ್ರ 'ಲ' ಕಾರದ ಸ್ಥಾನದಲ್ಲಿ 'ಳ' ಕಾರ ಬರುವುದೆಂದಿದೆ. ಹಾಗಿದ್ದೂ ವೈಯಾಕರಣರು ಕೊಡುವ ಪ್ರಾಕೃತದ ವರ್ಣಮಾಲೆಯಲ್ಲಿ 'ಳ' ಕಾರವಿಲ್ಲ. ಆದರೆ ಮರಾಠಿಯಲ್ಲಿ ಸಂಸ್ಕೃತ ಶಬ್ದದ ಕೊನೆಯ ಲಕಾರವು ಳಕಾರವಾಗುವುದು ತೀರ ಸಾಮಾನ್ಯವಾಗಿದೆ (SP. P. 64) ಇವನ್ನೆಲ್ಲ ಪರಿಶೀಲಿಸಿದಾಗ ಕಂಡುಬರುವುದಿಷ್ಟು :

1. ವೈದಿಕ ಸಂಸ್ಕೃತ ಮತ್ತು ಪಾಲಿಯಲ್ಲಿ ಳ ಕಾರವಿರುವುದಾದರೂ ಅದು 'ಲ' ಕಾರದ ಜಾಗದಲ್ಲಿ ಬರುವುದಲ್ಲ. ಪ್ರಾಕೃತದಲ್ಲಿ ಮಾತ್ರ ಕೆಲವೆಡೆಗಳಲ್ಲಿ ಲಕಾರ ಸ್ಥಾನದಲ್ಲಿ ಳಕಾರ ಬರುವುದುಂಟು.

2. ಕನ್ನಡ ವೈಯಾಕರಣರು ಹೇಳುವ ''ಕ್ಷಳ'' ಲಕಾರದ ಸ್ಥಾನ ಮಾತ್ರದಲ್ಲಿ ಬರುವ 'ಳ' ಕಾರ.

3. ಆದ್ದರಿಂದ ಸಂಸ್ಕೃತ ಲಕಾರದ ಜಾಗದಲ್ಲಿ ಕನ್ನಡದಲ್ಲಿ ಸಹಜವಾಗಿ ಬರುವ 'ಳ' ಕಾರ ಕನ್ನಡ ಭಾಷೆಯಲ್ಲಾದ ಒಂದು ಬದಲಾವಣೆಯಷ್ಟೆ. ಈ ಬದಲಾವಣೆಗೆ ಒಂದು ವೇಳೆ ಪ್ರಾಕೃತಗಳಿಂದ ಪ್ರೇರಣೆ ದೊರಕಿರಲೂ ಬಹುದು.

4. ಸಂಸ್ಕೃತ ಶಬ್ದಗಳ ಲ ಕಾರ ಸ್ಥಾನದಲ್ಲಿ ಮಾತ್ರ ಬರುವುದರಿಂದ ಆ ಳಕಾರಕ್ಕೆ ಪ್ರಾಚೀನ ಕನ್ನಡ ಪಂಡಿತರು ಸಂಸ್ಕೃತ ವರ್ಣಮಾಲೆಯಲ್ಲಿ ಸ್ಥಾನಕೊಟ್ಟಿರಬೇಕು. ಅದೇ ಧಾಟಿಯಲ್ಲಿ ದರ್ಪಣಕಾರ ''ಕ್ಷಳನಂ ಇದಱೊಳೆ ಬೆರಸಿ ಪೇೞ್ದಂ'' (ಸೂತ್ರ 15ರ ವೃತ್ತಿ) ಎಂದಿರಬೇಕು.

ಇಲ್ಲಿ ಇನ್ನೂ ಒಂದು ಗಮನಿಸಬೇಕಾದ ವಿಚಾರವಿದೆ. ದಕ್ಷಿಣ ಭಾರತದಲ್ಲಿ ದೊರಕುವ ಸಂಸ್ಕೃತದ ಹಸ್ತಪ್ರತಿಗಳಲ್ಲಿ ಯಾವುದೇ ಕ್ರಮಬದ್ಧವಾದ ನಿಯಮಕ್ಕೆ ಒಳಪಡದೆ ಳ ಮತ್ತು ಲಗಳ ವ್ಯತ್ಯಯವಿರುವುದಾಗಿ ವಿದ್ವಾಂಸರು ಹೇಳುತ್ತಾರೆ. ಎಂದರೆ ಈ ಲ>ಳ ಬದಲಾವಣೆ ದ್ರಾವಿಡರು ಮಾಡಿಕೊಂಡುದಾಗಿರಬೇಕೆಂದು ಹೇಳಬಹುದು.

ಸಿ. ವಿ. ವೈದ್ಯ. Wackernagal, Thumb Hirt, ಎಸ್. ಕೆ. ಚಟರ್ಜಿ ಮೊದಲಾದ ವಿದ್ವಾಂಸರ ಅಭಿಮತದಂತೆ ವೈದಿಕ ಸಂಸ್ಕೃತದಲ್ಲಿ ಡ, ಢ ಗಳ ಸ್ಥಾನದಲ್ಲಿ 'ಳ' 'ಳಹ' ಗಳು ಪ್ರತಿನಿಧಾನಗೊಳ್ಳಲುಂ ದ್ರಾವಿಡ ಭಾಷೆಗಳ ಪ್ರಭಾವವೇ ಕಾರಣವಾಗಿದೆ (SP. p. 64-65). ಇದರಿಂದ ಕ್ಷಳದ ನಿರ್ಮಾಣಕ್ಕೆ ದ್ರಾವಿಡ ಉಚ್ಚಾರವೇ ಹೇತುವೆಂಬುದಾಗಿ ನಿರ್ಣಯಿಸಬಹುದು.

'ಕ್ಷಳ' ಎಂಬ ಸಂಜ್ಞೆಯ ಹುಟ್ಟಿನ ಕುರಿತೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ರೂಢಿಯ ವರ್ಣಮಾಲೆಯಲ್ಲಿ ಳ ಕಾರದ ಬಳಿಕ 'ಕ್ಷ' ಬರುವುದಷ್ಟೆ. 'ಕ್ಷ' ಎಂಬುದರ ಸಮೀಪದಲ್ಲಿರುವ 'ಳ' ಎಂಬರ್ಥವನ್ನು ಕೊಡುವ ಸಂಜ್ಞೆ' (ಕನ್ನಡ ವರ್ಣಗಳು ಪು. 103) ಯಾಗಿ ಕ್ಷಳ ಬಂದಿರಬೇಕೆಂದು ಪಂಡಿತರು ಊಹಿಸಿದ್ದನ್ನು ಒಪ್ಪಿಕೊಳ್ಳಬಹುದು.

ಪ್ರಾಸಸ್ಥಾನದಲ್ಲಿ ಕುಳಕ್ಕೆ ಕ್ಷಳವನ್ನಾಗಲಿ, ಕ್ಷಳಕ್ಕೆ ಕುಳವನ್ನಾಗಲಿ ಹೇಳಬಹುದೆಂದು ದರ್ಪಣ ಮಾತ್ರ ಹೇಳುತ್ತದೆ (ಸೂ. 15). ಸಂಸ್ಕೃತ ಲಕಾರಕ್ಕೆ ಸಾಮಾನ್ಯವಾಗಿ ಕ್ಷಳ ವಿಕಲ್ಪವಾಗಿ ಬರುವುದಾದರೂ ಪ್ರಾಸಸ್ಥಾನದಲ್ಲಿ ಕ್ಷಳಕ್ಕೆ ಲಕಾರ ವಿಕಲ್ಪವನ್ನು ಹೇಳಬಾರ ದೆಂಬ ಕನ್ನಡ ಕಾವ್ಯಗಳಲ್ಲಿ ಸ್ವೀಕೃತವಾದ ತಥ್ಯವನ್ನು ದರ್ಪಣ ಒತ್ತಿಹೇಳುತ್ತದೆ.

**ದೇಶೀಯ ವ್ಯಂಜನಗಳು—ಱ, ೞ, ಳ**

ಸಂಸ್ಕೃತದಲ್ಲಿಲ್ಲದ ಮೂರು ವ್ಯಂಜನಗಳನ್ನು ಕನ್ನಡ ವ್ಯಾಕರಣಗಳು ಹೇಳುತ್ತವೆ.

ಸ್ಮೃತಿ : "ಲರಡ ಗ್ರಹಣದೆ ಳ, ಱ, ೞಾಕ್ಷರ ಮುಕ್ಕುಂ
ಪೀಡನ ಪ್ರಯತ್ನಾಶ್ರಯದಿಂ" ಸೂ. 6

ಭೂಷಣ : "ಲರಡಾ ಏವ ಱೞಾಃ : ಪ್ರಯತ್ನಾಶ್ರಯಾತ್" ಸೂ. 10

ದರ್ಪಣ : "ಅತಿಪೀಡನದಿಂ ರೇಫಾಶ್ರಿತಮಾದ
ಱಕಾರಮುಂ ಸಮಂತುಂ ಡಕಾರಾ
ಶ್ರಿತಮಾದ ೞನುಮಂಗೀಕೃತ
ಪದಲತ್ವಕ್ಕೆ ಸಮನೆ ಸಲ್ಲದ ಕುಳನುಂ" ಸೂ. 28

ದೇಶೀಯಂಗಳಾದ 'ಱ, ೞ, ಳ'ಗಳು ಅವರ್ಗಗಳ ಸಾಲಿಗೆ ಸೇರುತ್ತವೆ. ಅವುಗಳನ್ನು ನಿರೂಪಿಸುವ ವಿಧಾನ ಮೂರು ಗ್ರಂಥಗಳಲ್ಲಿ ಹೆಚ್ಚುಕಡಮೆ ಸಮಾನವಾಗಿದೆ. ಅಲ್ಲಿ ಬಳಸ ಲಾದ 'ಪೀಡನ' ಮತ್ತು 'ಪ್ರಯತ್ನ'ಗಳು ವರ್ಣೋಚ್ಚಾರಕ್ಕೆ ಸಂಬಂಧಿಸಿದವಾಗಿದ್ದು ವಿಚಾರಾರ್ಹವಾಗಿವೆ. ಋಕ್ ಪ್ರಾತಿಶಾಖ್ಯೆಯಲ್ಲಿ ಹೇಳಿರುವಂತೆ (14-3) ಸ್ಥಾನ–ಕರಣ ಗಳ ಅನಗತ್ಯ ಸಂಕುಚನಕ್ಕೆ 'ಪೀಡನ'ವೆಂದು ಹೆಸರಾಗಿದ್ದು ಅದೊಂದು ದೋಷವಾಗಿ ಪರಿಗಣಿತವಾಗಿದೆ. "Suppression of sounds, a fault in pronunciation" (SED. P. 629) ಎಂಬ ವಿವರಣೆ ಪೀಡನಕ್ಕೆ ಮೂಲದಲ್ಲಿದ್ದ ಅರ್ಥವನ್ನು ತೋರಿಸಿ

ಕೊಡುತ್ತದೆ. ಪ್ರಯತ್ನವೆಂದರೆ ಉಚ್ಚಾರಣಾ ವಿಧಾನ (mode of articulation). ಶಿಕ್ಷಾ ಗ್ರಂಥಗಳೇ ಮೊದಲಾಗಿ ವ್ಯಾಕರಣಗಳು ಹೇಳುವ ಬಾಹ್ಯಾಭ್ಯಂತರ ಪ್ರಯತ್ನಗಳು ಇಲ್ಲಿನ 'ಪ್ರಯತ್ನ'ದಿಂದ ವಿವಕ್ಷಿತವಾಗುತ್ತವೆ. ಹಾಗೆ ಈ ಹಿನ್ನೆಲೆಯಲ್ಲಿ ಮೇಲಿನ ಪೀಡನ ಪ್ರಯತ್ನಗಳನ್ನು ಅರ್ಥಯಿಸಿದರೆ ಸಮಂಜಸವಾದೀತು.

'ಲರಡ'ಗಳ ಪೀಡನದಿಂದ ಎಂದರೆ ಆ ವರ್ಣಗಳು ಹುಟ್ಟುವ ಸ್ಥಾನ ಕರಣಗಳನ್ನು ಬಿಗಿಗೊಳಿಸುವುದರಿಂದ 'ಳಱೞ'ಗಳು ಹುಟ್ಟುತ್ತವೆಂಬುದು ಸ್ಮೃತಿಯ ನಿರೂಪಣೆಯ ಅರ್ಥ. ಲ–ಳ, ರ–ಱ, ಡ–ೞ ಗಳನ್ನು ಏಕಸ್ಥಾನೀಯಗಳೆಂದು ದರ್ಪಣಕಾರ ಹೇಳಿರುವುದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಪೀಡನದೊಂದಿಗೆ ಪ್ರಯತ್ನವನ್ನು ನೋಡಬೇಕು. ಬಹುಶಃ ಪ್ರಯತ್ನದ ದೃಷ್ಟಿಯಿಂದಲೂ ಲ–ಳ, ರ–ಱ, ಡ–ೞ ಗಳಲ್ಲಿ ಪ್ರಾಚೀನರು ವ್ಯತ್ಯಾಸವನ್ನು ಕಂಡುಕೊಂಡಿರಬೇಕು, ಆದರೆ ಅದನ್ನು ಎಲ್ಲೂ ಪ್ರಸ್ತಾವಿಸಿರುವಂತೆ ಕಾಣುವುದಿಲ್ಲ. ಸಂಸ್ಕೃತ ವ್ಯಾಕರಣಗಳಲ್ಲಿ ಲರಡಗಳ ಪ್ರಯತ್ನ ವಿಚಾರವಿದೆಯಾದರೂ "ಳಱೞ"ಗಳ ಪ್ರಯತ್ನದ ಕುರಿತು ಅಲ್ಲಿ ನಿರೀಕ್ಷಿಸಲು ದಾರಿಯಿಲ್ಲ.

ಭೂಷಣವು ಪೀಡನವನ್ನು ಕೈಬಿಟ್ಟು 'ಪ್ರಯತ್ನಾಶ್ರಯ'ವನ್ನು ಮಾತ್ರ ಹೇಳಿರುವುದಾದರೂ ಅದರ ದೃಷ್ಟಿಯಲ್ಲಿ 'ಪೀಡನ'ವಿಲ್ಲ ಎಂದರ್ಥವಲ್ಲ. ಹಾಗೆಯೇ ದರ್ಪಣವು 'ಅತಿಪೀಡನ'ವನ್ನು ಮಾತ್ರ ಹೇಳಿದ್ದರೂ ಅದು 'ಪ್ರಯತ್ನ'ವನ್ನೂ ಒಳಗೊಂಡಿದೆಯೆಂದೇ ಅರ್ಥ. ದರ್ಪಣಕಾರನ ದೃಷ್ಟಿಯಲ್ಲಿ 'ಅತಿಪೀಡನ' ಎಂದರೆ ಬೆಟ್ಟಿತ್ತಾದ ಉಚ್ಚಾರ (ಸೂ. 28ರ ವೃತ್ತಿ). ರೇಫೆ ಡಕಾರಗಳಿಂದ ಱಕಾರ ೞಕಾರಗಳು ಹುಟ್ಟುವುದರ ಕುರಿತಾದ ಕನ್ನಡ ವೈಯಾಕರಣರ ಮೇಲಿನ ನಿರೂಪಣೆಯ ಬಗ್ಗೆ ಆಧುನಿಕ ವಿದ್ವಾಂಸರು ತೃಪ್ತಿಹೊಂದಿದ್ದಾರೆ (ಆಲೋಕ ಪು. 72). ಆದರೆ ಲಕಾರದಿಂದ 'ಳ'ಕಾರ (ಕುಳ) ಹುಟ್ಟುವುದೆಂಬುದನ್ನು ಪ್ರಾಚೀನ ಇಲ್ಲವೆ ಆಧುನಿಕ ಧ್ವನಿವಿಜ್ಞಾನದ ಹಿನ್ನೆಲೆಯಲ್ಲಿ ತರ್ಕಬದ್ಧವಾಗಿ ಒಪ್ಪಲು ಬರುವುದಿಲ್ಲ. ಬಹುಶಃ ಈ ವಿಧವಾದ ಸಂದೇಹವಿದ್ದುರಿಂದಲೇ ದರ್ಪಣವು ಸೂತ್ರದಲ್ಲಿ "ಅಂಗೀಕೃತಪದಲತ್ವಕ್ಕೆ ಸಮನೆಸಲ್ಲದ ಕುಳನುಂ" (ಸೂತ್ರ 28) ಎಂದಿರಬೇಕು. ಆದರೆ ವೃತ್ತಿಯಲ್ಲಿ "ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಕುಳಮೆಸರ ಳಕಾರಂ ಪುಟ್ಟುಗುಂ" ಎಂದು ಹೇಳಿದುದು ಬಗೆಹರಿಯದ ಸಮಸ್ಯೆಯಾಗಿದೆ. ಒಟ್ಟಿನಲ್ಲಿ 'ಅತಿಪೀಡನದಿಂ' ಎಂಬುದು ಲಕಾರಕ್ಕೆ ಅನ್ವಯವಾಗುವುದಿಲ್ಲವೆಂದು ಹೇಳಿ, ವೃತ್ತಿಯಲ್ಲಿ ಏನೋ ತಪ್ಪಿದೆ ಎಂದು ಹೇಳಿಬಿಡುವುದೇ ಮೇಲು" (ಅದೇ. ಪು. 73-74).

ರ–ಱ, ಡ–ೞ, ಲ–ಳ—ಈ ವರ್ಣದ್ವಂದ್ವಗಳನ್ನು ವರ್ಣಾವೃತ್ತಿಯಲ್ಲಿ ಬಳಸಬಹುದೆಂದೂ ಆದರೆ ಪ್ರಾಸಯಮಕಗಳಲ್ಲಿ ಬಳಸಬಾರದೆಂದೂ ಹೇಳುವ ವಿಚಾರ ದರ್ಪಣದಲ್ಲಿ ಮಾತ್ರ ಕಂಡುಬರುತ್ತದೆ.

ಲಿಪಿಯ ದೃಷ್ಟಿಯಿಂದ ವಿಚಾರಿಸಿದರೆ 'ಐಟಳ'ಗಳು 'ಎ ಒ'ಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ. ಶಾತವಾಹನ ಲಿಪಿಯಲ್ಲಿ 'ಳ' ಗೋಚರಿಸಿದರೆ ಕದಂಬ ಲಿಪಿಯಲ್ಲೇ 'ಐ, ಟ' ಗಳು ಮೂಡಿಬಂದಿವೆ.

## ಯೋಗವಾಹಗಳು

'ಯೋಗವಾಹ' ಎಂಬ ಪದದ ಮೊದಲರೂಪ 'ಅಯೋಗವಾಹ' ಎಂದಿದ್ದಂತೆ ತಿಳಿದು ಬರುತ್ತದೆ. ಆರಂಭದ ಪ್ರಾತಿಶಾಖ್ಯೆಗಳಲ್ಲಾಗಲಿ, ಅಷ್ಟಾಧ್ಯಾಯಿ–ಕಾತಂತ್ರಗಳ ಲ್ಲಾಗಲಿ 'ಅಯೋಗವಾಹ' ಎಂಬ ಪದ ಬಳಕೆಗೊಂಡಿಲ್ಲ. ವಾಜಸನೇಯಿ ಪ್ರಾತಿಶಾಖ್ಯ, ಮಹಾಭಾಷ್ಯ ಮುಂತಾದ ಗ್ರಂಥಗಳಲ್ಲಿ 'ಅಯೋಗವಾಹ' ಒಂದು ಸಂಜ್ಞೆಯಾಗಿ ಬಂದಿದೆ. ವಾಜಸನೇಯಿ ಪ್ರಾತಿಶಾಖ್ಯದಲ್ಲಿ ಅನುಸ್ವಾರ, ವಿಸರ್ಜನೀಯ, ಜಿಹ್ವಾಮೂಲೀಯ ಉಪಾಧ್ಮಾನೀಯ, ನಾಸಿಕ್ಯ ಮತ್ತು ಯಮಗಳನ್ನು ಒಟ್ಟಿಗೆ 'ಅಯೋಗವಾಹ' ಎನ್ನ ಲಾಗಿದೆ (8-18-24). ಅಕಾರದ ಸಹಾಯದಿಂದ ಮಾತ್ರ ಉಚ್ಚರಿತವಾಗತಕ್ಕವು ಎಂಬರ್ಥದಲ್ಲಿ 'ಅಯೋಗವಾಹ' ಎಂಬ ಪದ ಪ್ರಯುಕ್ತವಾಗಿದೆ. ಮುಂದೆ ಆದಿಯ ಅಕಾರ ಬಿದ್ದುಹೋಗಿ ಕೇವಲ 'ಯೋಗವಾಹ' ಎಂದಾಯಿತು (TTSG P.217). ಕ್ರಿ. ಶ. 9ನೆಯ ಶತಮಾನದ ದೌರ್ಗಸಿಂಹ ವೃತ್ತಿ ಟೀಕೆಯಲ್ಲಿ, ತ್ರಿಲೋಚನದಾಸನ ಪಂಜಿಕೆಯಲ್ಲಿ (ಕ್ರಿ. ಶ. 11ನೆಯ ಶತಮಾನದ ಕೊನೆ). ವಾಜಸನೇಯಿ ಪ್ರಾತಿಶಾಖ್ಯದ 'ಅನಂತಭಟ್ಟ ಭಾಷ್ಯ'ದಲ್ಲಿ 'ಯೋಗವಾಹ' ಎಂಬ ಪದ ಬಳಕೆಗೊಂಡಿದೆ. ಕಾತಂತ್ರ ಸಂಪ್ರದಾಯದ ಮೊದಲೆರಡು ಗ್ರಂಥಗಳನ್ನು ಅನುಸರಿಸಿಯೆ ಕನ್ನಡ ವೈಯಾಕರಣರು 'ಯೋಗವಾಹ' ಎಂಬ ಪದವನ್ನು ಬಳಕೆಗೆ ತಂದಿರಬೇಕು. 'ಅಯೋಗವಾಹ'ಕ್ಕಿಂತ 'ಯೋಗವಾಹ'ದ ಬಳಕೆ ಹೆಚ್ಚು ಔಚಿತ್ಯಪೂರ್ಣವೆಂದು ತಿಳಿದು ಕನ್ನಡ ವೈಯಾಕರಣರು 'ಯೋಗವಾಹ' ಎಂಬ ಪ್ರಯೋಗವನ್ನು ಮಾಡಿರಬೇಕೆಂದು W. S. Allen ಊಹಿಸಿ ದ್ದಾರೆ (Phonetics in Ancient India. P. 17 ಅಡಿಟಿಪ್ಪಣಿ. 4).

ಸ್ಮೃತಿ ಭೂಷಣಗಳಲ್ಲಿ 'ಯೋಗವಾಹ' ಎಂಬ ಪದದ ಬಳಕೆಯಾಗಿಲ್ಲ. ದರ್ಪಣ ದಲ್ಲಿ ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯಗಳನ್ನು 'ಯೋಗವಾಹ'ಗಳೆಂದು ಹೇಳಲಾಗಿದೆ. 'ಯೋಗವಾಹ'ವೆಂದು ಹೇಳಿಲ್ಲವಾದರೂ ಭೂಷಣದಲ್ಲಿ ಬಿಂದು ಮತ್ತು ವಿಸರ್ಗಗಳ ವಿವರಣೆಯಿದೆ.

## ಅನುಸ್ವಾರ

ಭೂಷಣವು ಅನುಸ್ವಾರ ಮತ್ತು ಬಿಂದು–ಇವೆರಡನ್ನು ಸಮಾನಾರ್ಥಕ ಪಾರಿ ಭಾಷಿಕ ಪದಗಳೆಂದು ತಿಳಿದರೆ (ಸೂ. 14), ದರ್ಪಣವು ಅದಕ್ಕೆ ಒತ್ತುಕೊಟ್ಟಿದ್ದಲ್ಲದೆ ಆ ಸಾಲಿನಲ್ಲಿ 'ಸೊನ್ನೆ'ಯನ್ನು ಸೇರಿಸಿಕೊಂಡಿದೆ (ಸೂ. 21). ಪ್ರಾತಿಶಾಖ್ಯೆಗಳು, ಅಷ್ಟಾ ಧ್ಯಾಯಿ, ಕಾತಂತ್ರ ಮುಂತಾದವುಗಳಲ್ಲಿ 'ಅನುಸ್ವಾರ' ಒಂದು ಪಾರಿಭಾಷಿಕ ಪದ.

ಸಂಸ್ಕೃತದಲ್ಲಿ ಅನುಸ್ವಾರದ ಚಾಕ್ಷುಷ ರೂಪದ ಹಿನ್ನೆಲೆಯಲ್ಲಿ 'ಬಿಂದು' ಎಂಬ ಪದವು ಬಳಕೆಗೊಂಡಿರಬೇಕು. ವರರುಚಿಯು ಪ್ರಾಕೃತ ಪ್ರಕಾಶದಲ್ಲಿ (4-12) ಬಿಂದು ಪಾರಿಭಾಷಿಕ ಪದವಾಗಿ ಪ್ರಯುಕ್ತವಾಗಿದೆ. 'ಸೊನ್ನೆ' ಎಂಬುದು "ಶೂನ್ಯ ಶಬ್ದದಪಭ್ರಂಶವಾಗಿ"ದ್ದು ಅಚ್ಚಗನ್ನಡ ಪಾರಿಭಾಷಿಕ ಪದ. ಕನ್ನಡ ವ್ಯಾಕರಣಗಳಲ್ಲಿ ದರ್ಪಣದಲ್ಲಿಯೇ ಅದು ಮೊದಲು ಕಾಣಿಸಿಕೊಂಡುದಾಗಿದೆ.

ಯೋಗವಾಹಗಳ ಚಾಕ್ಷುಷ ರೂಪವನ್ನು ತಳಹದಿಯನ್ನಾಗಿಟ್ಟುಕೊಂಡು ಅವುಗಳನ್ನು ವರ್ಣಿಸುವ ಕ್ರಮ ಸಂಸ್ಕೃತದಲ್ಲಿದೆ. ಅಲ್ಲಿಂದ ಪ್ರೇರಣೆ ಹೊಂದಿ ಕನ್ನಡ ವೈಯಾಕರಣರೂ ಯೋಗವಾಹಗಳ ಲಿಪಿ ರೂಪವನ್ನು ಹೇಳುತ್ತಾರೆ. ಸಂಸ್ಕೃತದಲ್ಲಿ "ವರ್ಣ ಶಿರೋಬಿಂದುರನುಸ್ವಾರಃ" (ಸಾ. ಪ್ರ.—ಸಂಜ್ಞಾಪ್ರಕರಣ) ಎಂಬ ವಿವರಣೆಯನ್ನು ಕಾಣಬಹುದು. ಭೂಷಣದಲ್ಲಿ "ನಿಸ್ತುಳೋದಾತ್ತ ಮುಕ್ತಾಫಲಾನುಕಾರೀ ಬಿಂದುಃ" (ಸೂ. 14ರ ವೃತ್ತಿ) ಎಂದಿದ್ದರೆ, ದರ್ಪಣವು "ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು" (ಸೂ. 21) ಎಂದು ಅದನ್ನೇ ಕನ್ನಡಕ್ಕೆ ಭಟ್ಟಿಯಿಳಿಸಿದೆ. 'ಬಿಂದು' ಎಂಬ ಪಾರಿಭಾಷಿಕ ಪದ ಒಂದೇ ಆದರೂ ಬರವಣಿಗೆಯ ರೂಪದಲ್ಲಿ ಭಿನ್ನತೆಯಿರುವುದರಿಂದ ಸಂಸ್ಕೃತದ 'ಬಿಂದು ಸ್ವರೂಪ'ವು ಕನ್ನಡದಲ್ಲಿ 'ವೃತ್ತತೆಯಿಂ ಸಂದಿದೆ'; ಕನ್ನಡ ವೈಯಾಕರಣರು ತಮ್ಮ ಕಾಲದ ಲಿಪಿ ರೂಪವನ್ನೂ ಗಮನಿಸಿದಂತಿದೆ. ಶಾಸನಗಳನ್ನು ಪರಿಶೀಲಿಸಿದಾಗ ಹಿಂದೆ ಅನುಸ್ವಾರವನ್ನು ಬಿಂದು ಸ್ವರೂಪದಲ್ಲಿ ಬರೆಯಲಾಗುತ್ತಿದ್ದಂತೆ ತಿಳಿದು ಬರುತ್ತದೆ. ಮುಂದೆ "ರಾಷ್ಟ್ರಕೂಟ ಕಾಲದಲ್ಲಿ ಬಿಂದುವು ಅತಿ ಸಣ್ಣ ವೃತ್ತದಂತೆ ಪರಿವರ್ತಿತವಾಗುವುದನ್ನು ನಾವು ನೋಡುತ್ತೇವೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ವೃತ್ತವು ಇನ್ನೂ ಸ್ವಲ್ಪ ದೊಡ್ಡದಾಗುತ್ತದೆ. ಹೊಯ್ಸಳರ ಕಾಲದಲ್ಲಿ ವೃತ್ತವು ದೊಡ್ಡದಾಗಿ ಅಕ್ಷರದ ಎಡಪಕ್ಕದಲ್ಲಿ ಅದೇ ಸಾಲಿನಲ್ಲಿ ಬರೆಯಲ್ಪಡುವುದನ್ನು ನಾವು ನೋಡುತ್ತೇವೆ" (ಕ. ಲಿ. ವಿ. ಪು. 45). ಹಾಗಾಗಿ 'ವರ್ಣ ಶಿರೋಬಿಂದು ಎನ್ನದೆ 'ವೃತ್ತತೆ' ಎಂದು ಕನ್ನಡ ವ್ಯಾಕರಣಗಳು ಹೇಳುತ್ತವೆ. ಆದರೂ ದರ್ಪಣವು "ಬಿಂದುವಿನಂತಿರ್ಪುದಱಿಂ ಬಿಂದುವೆಂದಾಯ್ತು" (ಸೂ. 21ರ ವೃತ್ತಿ) ಎಂದು ಪ್ರಾಚೀನ ಸಂಜ್ಞೆಯನ್ನು ಹೊಂದಿಸಿಕೊಳ್ಳುವ ಪ್ರಯತ್ನ ಮಾಡುವುದನ್ನು ಕಾಣಬಹುದು. "ಕವೆಯೊರಮಂ ಬೀಸಿದಂತೆ ಬಟ್ಟಿತ್ತಾಗಿ" (ಸೂ. 27ರ ವೃತ್ತಿ) ತೋರುವಲ್ಲಿ ಕವಿಕೇಶವನ ಸೂಕ್ಷ್ಮ ದೃಷ್ಟಿ ಗೋಚರಿಸುತ್ತದೆ.

### ವಿಸರ್ಗ

ಪ್ರಾತಿಶಾಖ್ಯಗಳು, ಅಷ್ಟಾಧ್ಯಾಯಿ. ಕಾತಂತ್ರ ಮೊದಲಾದ ವ್ಯಾಕರಣಗಳಲ್ಲಿ "ವಿಸರ್ಜನೀಯ" ಎಂಬ ಪದಪ್ರಯೋಗವಿದೆ. ಕಾತಂತ್ರವು ವಿಸರ್ಜನೀಯವನ್ನು 'ವಿಸೃಷ್ಟ' ಎಂದೂ ಹೇಳುತ್ತದೆ. ಅಥರ್ವ ಪ್ರಾತಿಶಾಖ್ಯೆಯಲ್ಲಿ 'ಅಭಿನಿಷ್ಠಾನ' ಎಂದು ಮಾತ್ರವಿದೆ. ಸಂಸ್ಕೃತದ ವ್ಯಾಕರಣಗಳಲ್ಲಿ 'ವಿಸರ್ಗ' ಎಂಬ ಪದದ ಬಳಕೆ ಪ್ರಪ್ರಥಮ

ವಾಗಿ ಸಿದ್ಧಹೇಮಶಬ್ದಾನುಶಾಸನದಲ್ಲಿ ಕಾಣುತ್ತೇವೆ. ಕನ್ನಡ ವ್ಯಾಕರಣಗಳು ಕೊನೆಯ ದನ್ನು ಅನುಸರಿಸಿ ವಿಸರ್ಗವನ್ನು ಬಳಸುತ್ತವೆ. ದರ್ಪಣ ವಿಸರ್ಜನೀಯವೆಂಬ ಸಂಜ್ಞೆ ಇರುವುದಾಗಿಯೂ ಹೇಳುತ್ತದೆ (ಸೂ. 21ರ ವೃತ್ತಿ). ಭೂಷಣ ದರ್ಪಣಗಳಲ್ಲಿ ವಿಸರ್ಗದ ವಿವರಣೆ ಹೀಗಿದೆ—

ಭೂಷಣ : "ಸ ಉಪರ್ಯಧಸ್ತಾಚ್ಚ ವಿಸರ್ಗಃ" ಸೂ. 15

ದರ್ಪಣ : "ಅಂತದಡಕಿಲ್ವೊಂದಿರೆ ಮಣಿಗೊಪ್ಪ
ವೋಲ್ ವಿಸರ್ಗಮೆನಿಕ್ಕುಂ" ಸೂ, 21
"ಮೇಲೆಯುಂ ಕೆಳಗೆಯುಂ ಅತೆಜದಿನಿರೆ ವಿಸರ್ಗಂ"
ಸೂ. 27ರ ವೃತ್ತಿ

"ಮಣಿಗೊಪ್ಪುವೋಲ್" ಎಂಬ ದೇಸಿ ಹೋಲಿಕೆಯನ್ನು ಬಿಟ್ಟರೆ ದರ್ಪಣದ್ದು ಪೂರ್ಣವಾಗಿ ಭೂಷಣದ ಅನುವಾದವಾಗಿದೆ. ಬಿಂದು ಒಂದರ ಮೇಲೊಂದು ನಿಂತಾಗ ವಿಸರ್ಗವಾಗುವುದೆಂಬ ಅಭಿಪ್ರಾಯ ಸಂಸ್ಕೃತದಲ್ಲಿ ಹಿಂದೆಯೇ ಇದ್ದಿರಬೇಕೆಂಬುದಕ್ಕೆ ಪ್ರಯೋಗ ರತ್ನಮಾಲೆಯ(ಕ್ರಿ. ಶ. 14ನೆಯ ಶತಮಾನ) ಹೇಳಿಕೆ ಆಧಾರವಾಗಿದೆ,

"ಊರ್ಧ್ವಾಧಸ್ಥಂ ಬಿಂದುಯುಗ್ಮಂ ವಿಸರ್ಗ ಇತಿಗೀಯತೇ" ಪ್ರ. ರ. 1-29

ಚಾಕ್ಷುಷ ರೂಪವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಸರ್ಗದ ಕೆಳಗಿನ ವಿವರಣೆ ಸಂಸ್ಕೃತ ದಲ್ಲಿ ಪ್ರಸಿದ್ಧವಾಗಿದೆ—

"ಶೃಂಗವದ್ ಬಾಲ ವತ್ಸಸ್ಯ ಕುಮಾರೀ ಸ್ತನಯುಗ್ಮವತ್
ನೇತ್ರವತ್ ಕೃಷ್ಣಸರ್ಪಸ್ಯ ಸ ವಿಸರ್ಗ ಇತಿಗೀಯತೇ" (TTSG.p. 225)

ಕನ್ನಡ ವ್ಯಾಕರಣಗಳಲ್ಲಿ ಇಂತಹ ವರ್ಣನೆಗೆ ಅವಕಾಶ ದೊರಕಿಲ್ಲ.

ಅನುಸ್ವಾರ–ವಿಸರ್ಗಗಳು ಸ್ವರಾಂಗ ಮತ್ತು ವ್ಯಂಜನಾಂಗವೆಂಬ ವಿವರಣೆ ದರ್ಪಣ ದಲ್ಲಿ ಮಾತ್ರ ಗೋಚರಿಸುತ್ತದೆ (ಸೂ.22). ಇದಕ್ಕೆ ಅಲ್ಲಿ ಕೊಡಲಾದ ಕಾರಣಗಳು ಎರಡು—

1. ಸ್ವರಪರದೊಳಿರ್ಪ ಕಾರಣ
2. ಉರುಮುಖ್ಯೋಚ್ಚಾರಣಕ್ಕೆ ಬಾರದ ಕಾರಣ

ಈ ವಿವರಣೆ ಜಿಜ್ಞಾಸೆಗೆಡೆಯಾಗಿದೆ. ಅನುಸ್ವಾರ-ವಿಸರ್ಗಗಳು ಸ್ವರದ ಪರದಲ್ಲಿ ಬರುವುದು ಸತ್ಯ. ಇವು ತಮ್ಮ ಪೂರ್ವದಲ್ಲಿ ಸ್ವರವನ್ನು ಹೊಂದಿಯೇ ಇರುತ್ತವೆಂದು ಸಂಸ್ಕೃತದಲ್ಲಿ ಹೇಳುವುದಿದೆ (ಕಾತಂತ್ರ 1-1-16ರ ಕವಿರಾಜ ಟೀಕೆ). ಸ್ವರಗಳ ಸಹಾಯ ವಿಲ್ಲದೆ ಸ್ವತಂತ್ರವಾಗಿ ಇವು ಉಚ್ಚರಿತವಾಗುವುದಿಲ್ಲವೆಂಬುದು ಪ್ರಾಚೀನರ ಹೇಳಿಕೆ ಹಾಗಾಗಿ ಇವುಗಳನ್ನು ಸ್ವರಾಂಗವೆನ್ನುವುದು ಅರ್ಥಪೂರ್ಣ. ಆದರೆ "ಇವು ವ್ಯಂಜ

ನಾಂಗವೂ ಹೇಗಾಗುತ್ತವೆ? ಈ ದೃಷ್ಟಿಯಿಂದ ನೋಡಿದರೆ ವ್ಯಂಜನಗಳೂ ಸ್ವರಾಂಗ ಗಳೇ" (ಆಲೋಕ. ಪು. 55) ಎಂದು ತೋರಲೆಡೆಯಿದೆ. ಇಲ್ಲಿ "ಉರು ಮುಖ್ಯೋಚ್ಚಾರಣಕ್ಕೆ ಬಾರದ" ಕಾರಣವನ್ನು ಮೊದಲು ಪರಿಶೀಲಿಸಿದರೆ ಸಮಾಧಾನ ದೊರಕುತ್ತದೆ.

ಪ್ರಾಚೀನರು ಹೇಳುವಂತೆ ಸ್ವತಂತ್ರವಾಗಿ ಉಚ್ಚರಿತವಾಗತಕ್ಕವು ಸ್ವರಗಳು. ಸ್ವರ ಸಹಾಯದಿಂದ ಸ್ಪಷ್ಟವಾಗಿ ಉಚ್ಚರಿಸುವುದಕ್ಕೆ ಬರುವ ವರ್ಣಗಳು ವ್ಯಂಜನಗಳು. ಇದನ್ನೇ ಪತಂಜಲಿ"ಸ್ವಯಂ ರಾಜಂತ ಇತಿಸ್ವರಾ : ಅನ್ವಗ್ಭವತಿ ವ್ಯಂಜನಂ"(1-2-29, 30) ಎಂದಿರುವನು.[7] ಬಹುಶಃ ದರ್ಪಣಕಾರನು ಈ ಹಿನ್ನೆಲೆಯಲ್ಲಿ "ಉರುಮುಖ್ಯೋಚ್ಚಾರ" ಕ್ಕೆ ಬಾರದಿರುವುದು ವ್ಯಂಜನದ ಒಂದು ಪ್ರಧಾನ ಲಕ್ಷಣವಾಗಿ ತಿಳಿದಿರಬೇಕು. ಅಂತಹ ಲಕ್ಷಣ ಅನುಸ್ವಾರ ಮತ್ತು ವಿಸರ್ಗಗಳಿಗಿರುವುದರಿಂದ ಅವನ್ನು 'ವ್ಯಂಜನಾಂಗ ವೆಂದಿರಬೇಕು. "ಸ್ವತಂತ್ರವಾಗಿ ಉಚ್ಚರಿಸಲ್ ಬಾರದುದಱಿಂ" (ಸೂ. 22ರ ವೃತ್ತಿ) ಎಂದು ಹೇಳಿರುವುದು ಈ ನಿಲುವಿಗೆ ಮತ್ತಷ್ಟು ಪುಷ್ಟಿ ನೀಡುತ್ತದೆ. ಸೂತ್ರದಲ್ಲಿರುವ "ಉರುಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ" ಎಂಬುದನ್ನು ಸರಿಯಾಗಿ ಅರ್ಥ ಯಿಸದೆ ನಿಟ್ಟೂರ ನಂಜಯ್ಯನು" ಮೋನುಸ್ವಾರಃ " ಮತ್ತು "ಸ್ರೋರ್ವಿಸರ್ಗಃ" ಎಂಬ ಸೂತ್ರಗಳ ಆಧಾರದಲ್ಲಿ ಅನುಸ್ವಾರ ವಿಸರ್ಗಗಳ ವ್ಯಂಜನಾಂಗತ್ವವನ್ನು ಹೇಳುವುದು (ದರ್ಪಣವಿಚಾರ. ಪು. 18) ಅಷ್ಟು ಯುಕ್ತಿಯುಕ್ತವಾಗಿ ತೋರುವುದಿಲ್ಲ.

ಋಗ್ವೇದ ಪ್ರಾತಿಶಾಖ್ಯೆಯಲ್ಲಿ ಅನುಸ್ವಾರವನ್ನು ಸ್ವರವೆಂದೂ ವ್ಯಂಜನವೆಂದೂ ಹೇಳಲಾಗಿದೆ (1-5) ಉವ್ವಟನು ಭಾಷ್ಯದಲ್ಲಿ ಅನುಸ್ವಾರವು ಪೂರ್ಣವಾಗಿ ಸ್ವರವೂ ಅಲ್ಲ ವ್ಯಂಜನವೂ ಇಲ್ಲ, ಆದರೆ ಅದು ಸ್ವರತ್ವವನ್ನೂ ವ್ಯಂಜನತ್ವವನ್ನೂ ಹೊಂದಿದೆ ಯೆಂದು ಹೇಳುತ್ತಾನೆ. ಹ್ರಸ್ವತ್ವ, ದೀರ್ಘತ್ವ, ಉದಾತ್ತತ್ವ,ಸ್ವರಿತತ್ವ-ಇವು ಸ್ವರದ ಲಕ್ಷಣಗಳು. ಅರ್ಧಮಾತ್ರಾಕಾಲತ್ವ ಸ್ವರ ವಶವಾಗಿ ಉದಾತ್ತಾನುದಾತ್ತ ಸ್ವರಿತತ್ವ ಹಾಗೂ ಸಂಯೋಗ ಇವು ವ್ಯಂಜನದ ಲಕ್ಷಣಗಳು. ಈ ದ್ವಿವಿಧ ಲಕ್ಷಣಗಳನ್ನು ಅನುಸ್ವಾರ ಹೊಂದುವುದರಿಂದ ಅದು ಸ್ವರವೂ ಹೌದು ವ್ಯಂಜನವೂ ಹೌದು (ಋ. ಪ್ರಾ. 1-5 ಉವ್ವಟಭಾಷ್ಯ). ದುರ್ಗಸಿಂಹನ ಕಾತಂತ್ರ ವೃತ್ತಿ ಟೀಕೆಯಲ್ಲಿ, ತ್ರಿಲೋಚನ ದಾಸನ ಪಂಜಿಕೆಯಲ್ಲಿ ಅನುಸಾರ ವಿಸರ್ಗಗಳ ಸ್ವರ-ವ್ಯಂಜನಾತ್ಮ ಕತೆಗಳನ್ನು ಹೇಳಲಾಗಿದೆ (ಕಾತಂತ್ರ 1-1-19ರ ಟೀಕೆಗಳು). ಬಹುಶಃ ಈಯೆಲ್ಲ ಹಿನ್ನೆಲೆಯಲ್ಲಿ ದರ್ಪಣಕಾರ ಅನುಸ್ವಾರ ವಿಸರ್ಗಗಳನ್ನು ಸ್ವರಾಂಗ ಮತ್ತು ವ್ಯಂಜನಾಂಗಗಳೆಂದು ಹೇಳಿರಬೇಕು. ಸ್ವರಾಂಗ ಮತ್ತು ವ್ಯಂಜನಾಂಗವೆಂದರೆ ಸ್ವರತ್ವ ಮತ್ತು ವ್ಯಂಜನತ್ವ ಎಂದು ತಿಳಿದರೆ ಹೆಚ್ಚು ಸಮರ್ಪಕ. ಒಟ್ಟಿನಲ್ಲಿ ದರ್ಪಣಕಾರನ ಅಭಿಮತದಂತೆ ಯೋಗವಾಹಗಳು ಸ್ವರದ ಪರದಲ್ಲಿ ಬರುತ್ತವೆ ಹಾಗೂ ಸ್ವರತ್ವವನ್ನು ಹೊಂದಿವೆಯಾದ್ದರಿಂದ ಸ್ವರಾಂಗ ಗಳೂ, (ಸ್ವತಂತ್ರವಾಗಿ ಉಚ್ಚರಿಸಲು ಬಾರದವು) ವ್ಯಂಜನತ್ವವನ್ನು ಹೊಂದಿವೆಯಾದ್ದರಿಂದ ವ್ಯಂಜನಾಂಗಗಳೂ ಆಗಿವೆ.

**ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯ :**

ಸ್ವರ ಮತ್ತು 'ಕ್' ಅಥವಾ 'ಖ್' ವಿನ ಮಧ್ಯದಲ್ಲಿ ಬರುವ ವಿಸರ್ಗಕ್ಕೆ ಜಿಹ್ವಾಮೂಲೀಯವೆಂದೂ ಸ್ವರ ಮತ್ತು 'ಪ್' ಇಲ್ಲವೆ 'ಫ್'ವಿನ ನಡುವಿನಲ್ಲಿ ಬರುವ ವಿಸರ್ಗಕ್ಕೆ ಉಪಾಧ್ಮಾನೀಯವೆಂದೂ ಸಂಸ್ಕೃತ ವ್ಯಾಕರಣಗಳಲ್ಲಿ ಸಂಜ್ಞೆಯನ್ನು ವಿಧಿಸಲಾಗಿದೆ. ತೈತ್ತಿರೀಯ ಪ್ರಾತಿಶಾಖ್ಯ, ವಾಜಸನೇಯಿ ಪ್ರಾತಿಶಾಖ್ಯ, ಋಕ್‌ತಂತ್ರ, ಕಾತಂತ್ರ ಮೊದಲಾದವುಗಳಲ್ಲಿ ಈಯೆರಡು ಸಂಜ್ಞೆಗಳು ಉಕ್ತವಾಗಿವೆ. ಸಾಮಾನ್ಯವಾಗಿ ಜಿಹ್ವಾಮೂಲೀಯಂದೊಡನೆ ಕಕಾರವನ್ನು ಉಪಾಧ್ಮಾನೀಯದೊಡನೆ ಪಕಾರವನ್ನು ಅನುಬಂಧಗೊಳಿಸಿ ಹೇಳುವುದು ಕ್ರಮ. ದರ್ಪಣದಲ್ಲಿ ಅದನ್ನೆ ಅನುಸರಿಸಲಾಗಿದೆ (ಸೂತ್ರ. 27).

ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯಗಳಿಗೆ ಹಿಂದೆ ಪ್ರತ್ಯೇಕವಾದ ಲಿಪಿ ಚಿಹ್ನೆಗಳಿದ್ದಂತೆ ತಿಳಿಯುತ್ತದೆ. "ಜಿಹ್ವಾಮೂಲೀಯ ಮತ್ತು ಉಪಾಧ್ಮಾನೀಯ, the two voiceless breathings had both separate characters in the alphabets of the earlier centuries A. D., but for nearly a thousand years they are obsolete. This may be the reason why our pratishakhya does not prescribe any rule for these. They are however employed in Kashmirian Sarada M. S. S." ಋಕ್‌ತಂತ್ರ ಟಿಪ್ಪಣಿ ಪು. 3) ಎಂಬ ವಿವರಣೆ ಗಮನಾರ್ಹವಾಗಿದೆ. ಕಾಲಕ್ರಮೇಣ ಲಿಪಿಯಿಂದ ಮಾಯವಾಗತೊಡಗಿದುದರಿಂದಲೇ ವೈಯಾಕರಣರು ಅವುಗಳ ಲಿಪಿರೂಪವನ್ನು ಹೇಳಿರಬೇಕೆಂದೂಹಿಸಬಹುದು. ದುರ್ಗಸಿಂಹನು ಜಿಹ್ವಾಮೂಲೀಯವನ್ನು 'ವಜ್ರಾಕೃತಿವರ್ಣ' ವೆಂದೂ ಉಪಾಧ್ಮಾನೀಯವನ್ನು "ಗಜಕುಂಭಾಕೃತಿರ್ವರ್ಣ" ವೆಂದೂ ಹೇಳುತ್ತಾನೆ (ಕಾತಂತ್ರ 1-1-17, 18ರ ವೃತ್ತಿ). ದರ್ಪಣಕಾರನು ತನ್ನ ರಸಿಕದೃಷ್ಟಿಗನುಸರಿಸಿ ಅಲ್ಪ ಮಾರ್ಪಾಟಿನೊಂದಿಗೆ ಮೇಲಿನವುಗಳನ್ನು ವರ್ಣಿಸುತ್ತಾನೆ.

ದುರ್ಗಸಿಂಹನಿಗೆ ವಿಸರ್ಜನೀಯವು "ಕುಮಾರೀಸ್ತನಯುಗಲಾಕೃತಿರ್ವರ್ಣ" (1-1-16ರ ವೃತ್ತಿ) ಯಾಗಿ ಗೋಚರಿಸಿದರೆ ಕೇಶಿರಾಜನಿಗೆ ಉಪಾಧ್ಮಾನೀಯವು "ಕುಮಾರಿಯ ಸ್ತನಯುಗಳಾಕೃತಿಯ ವರ್ಣ" (ಸೂ. 27ರ ವೃತ್ತಿ) ಯಾಗಿ ಕಾಣಿಸುತ್ತದೆ. ಜಿಹ್ವಾಮೂಲೀಯವನ್ನು ಹೇಳುವಲ್ಲಿ ದರ್ಪಣಕಾರನು "ಹಸುಂಬೆಯ ಲಚ್ಚಣದಂತಿರ್ದವರ್ಣಂ" (ಸೂ. 27ರ ವೃತ್ತಿ) ಎಂದು ತನ್ನದೇ ಆದ ರೀತಿಯಲ್ಲಿ ಹೇಳುತ್ತಾನೆ. ಹೇಳುವ ರೀತಿಯಲ್ಲಿರುವ ವ್ಯತ್ಯಾಸವನ್ನು ಗಮನಿಸಬೇಕಾಗಿದೆ. ಮೂಲಭೂತವಾಗಿ ಲಿಪಿರೂಪದಲ್ಲಿ ನಿಶ್ಚಿತತೆಯಿದ್ದರೆ ಒಬ್ಬೊಬ್ಬರಿಗೆ ಒಂದೊಂದಾಗಿ ತೋರಲೆಡೆಯಿಲ್ಲ. ಹಾಗಾಗಿ ಲಿಪಿರೂಪದಲ್ಲಿ ಖಚಿತತೆಯಿಲ್ಲದಿರುವುದೇ ಈ ವಿಧವಾದ ಅಭಿಪ್ರಾಯ ವ್ಯತ್ಯಾಸಕ್ಕೆ ಕಾರಣವೆನ್ನಬಹುದು.

**ಕನ್ನಡ ಶುದ್ಧಗೆಗಳು :**

ಕನ್ನಡ ಶುದ್ಧಗೆಗಳನ್ನು ಪಂಚವಿಧವಾಗಿ ವರ್ಗೀಕರಿಸುವ ಸಂಪ್ರದಾಯವು ಕೇಶಿರಾಜನಿಗಿಂತ ಹಿಂದೆ ಇದ್ದಿತೆಂದು ದರ್ಪಣದಿಂದ ತಿಳಿದು ಬರುತ್ತದೆ (ಸೂ. 41). ಈ ವಿಚಾರವಾಗಲೀ, ಕನ್ನಡ ಶುದ್ಧಗೆಗಳನ್ನು ಗಣನೆ ಮಾಡುವ ಪ್ರಯತ್ನವಾಗಲೀ ಸ್ಮೃತಿ ಭೂಷಣಗಳಲ್ಲಿಲ್ಲ. ಸಂಸ್ಕೃತದ ಒಟ್ಟು ವರ್ಣಮಾಲೆಯನ್ನು ಹೇಳಿ. ಅದರಲ್ಲಿಲ್ಲದ ದೇಶೀಯ ವರ್ಣಗಳನ್ನು ಸೇರಿಸಿ ಆ ಬಳಿಕ ಕನ್ನಡಕ್ಕೆ ಸಲ್ಲದ ವರ್ಣಗಳನ್ನು ಅದರಿಂದ ಕಳೆದುಹಾಕಿ ಕನ್ನಡದಲ್ಲಿ ಇಂತಿಷ್ಟೇ ಶುದ್ಧಗೆಗಳೆಂದು ಹೇಳುವ ದರ್ಪಣದ ಕ್ರಮವು ವಿಶಿಷ್ಟವಾಗಿದೆ. ಈ ವಿಧಾನಕ್ಕೆ ಬಹುಶಃ ಪ್ರಾಕೃತ ವ್ಯಾಕರಣಗಳು ಪ್ರೇರಕವಾಗಿರ ಬೇಕೆಂದು ತೋರುತ್ತದೆ. ಹೇಮಚಂದ್ರನ ಪ್ರಾಕೃತವ್ಯಾಕರಣದಲ್ಲಿ " . . . . ತೇನ ಋ -ಋ- ಌ – ೡ -ಐ ಔ-ಙ-ಞ–ಶ-ಷ-ವಿಸರ್ಜನೀಯ ಪ್ಲುತ ವರ್ಜೋ ವರ್ಣಸಮಾಮ್ನಾಯೋ ಲೋಕಾದ್ ಅವಗಂತವ್ಯ:"(8-1-1ರವೃತ್ತಿ) ಎಂದಿರುವುದನ್ನು ಲಕ್ಷಿಸಬಹುದು. ಸಂಸ್ಕೃತ ವರ್ಣಮಾಲೆಯಲ್ಲಿರುವ ವರ್ಣಗಳಲ್ಲಿ ಪ್ರಾಕೃತಕ್ಕೆ ಅನಗತ್ಯವಾದವುಗಳನ್ನು ಕಳೆದು ಹಾಕುವ ಪ್ರಯತ್ನವನ್ನಿಲ್ಲಿ ಕಾಣಬಹುದು.

ಸ್ಮೃತಿಯು ಸಂಸ್ಕೃತ ವರ್ಣಮಾಲೆಯನ್ನು ನಿರೂಪಿಸಿ ಕನ್ನಡಕ್ಕೆ ವಿಶಿಷ್ಟವಾದ ಱ, ೞ, ಳ ಕಾರಗಳನ್ನು ಸೇರಿಸಿ ವಿರಮಿಸುತ್ತದೆ. ಕನ್ನಡಕ್ಕೆ ಸಲ್ಲದ ವರ್ಣಗಳ ಬಗ್ಗೆ ಅದು ಮೌನ ತಾಳಿದೆ. ಸ್ಮೃತಿಕಾರನು "ಎ ಒ ಗಳನ್ನು ಸೇರಿಸಿಕೊಂಡು ಌ, ೡ ಗಳನ್ನು ಬಿಟ್ಟಿದ್ದಾನೆ ಎಂದು ಊಹಿಸಿಕೊಳ್ಳಬೇಕು" (ಪ್ರಾ. ಕ. ವ್ಯಾ. ಪು. 116) ಎಂದು ಹೇಳಲು ಗ್ರಂಥದಲ್ಲಿ ಯಾವ ಆಧಾರವೂ ಇಲ್ಲ. ಹಾಗಾಗಿ "ಶಬ್ದಸ್ಮೃತಿಯ ಸೂತ್ರಗಳು ವರ್ಣಮಾಲೆಯ ವಿವರಣೆಯಲ್ಲಿ ಸ್ವಯಂ ಸ್ಪಷ್ಟವಾಗಿಲ್ಲ" (ಅದೇ) ಎಂದು ನಿರ್ಣಯಿಸುವುದು ಹೆಚ್ಚು ಸಮಂಜಸ.

ಸಂಸ್ಕೃತ ವರ್ಣಮಾಲೆಯನ್ನು ಹೇಳಿ. ಅದಕ್ಕೆ ಕನ್ನಡದ (ದೇಶೀಯ) ವರ್ಣಗಳನ್ನು ಕೂಡಿಸಿ ಆ ಬಳಿಕ ಕೆಲವು ವರ್ಣಗಳು ಕನ್ನಡಕ್ಕೆ ಅನಗತ್ಯವೆಂದು ಕಳೆದು ಹಾಕುವ ಕ್ರಮ ಕನ್ನಡ ವ್ಯಾಕರಣಗಳ ಮಟ್ಟಿಗೆ ಭೂಷಣದಲ್ಲಿ ಆರಂಭವಾದಂತೆ ತೋರುತ್ತದೆ. ಈ ವಿಧಾನ ದರ್ಪಣದಲ್ಲಿ ಪೂರ್ಣಸ್ಥಿತಿಗೆ ಬಂದುಶಿದೆ. ದರ್ಪಣದ ಶುದ್ಧಕಗಳ ನಿರೂಪಣೆಯ ಚೌಕಟ್ಟಿನಲ್ಲಿ ಕನ್ನಡ ವ್ಯಾಕರಣಗಳು ಹೇಳುವ "ಸಂಸ್ಕೃತ-ಕನ್ನಡ" ವರ್ಣಮಾಲೆಯನ್ನು ಕೆಳಗಿನಂತೆ ಸಂಗ್ರಹಿಸಬಹುದು.

| | | ಸ್ವರ | ವರ್ಗ | ಅವರ್ಗ | ಯೋಗವಾಹ | ದೇಶೀಯ | ಒಟ್ಟು |
|---|---|---|---|---|---|---|---|
| ಸ್ಮೃತಿ | : | 14 | 25 | 8 | – | 3 | 50 |
| ಭೂಷಣ | : | 14 | 25 | 8 | 2 | 5 | 54 |
| ದರ್ಪಣ | : | 14 | 25 | 9 | 4 | 5 | 57 |

ಕನ್ನಡಕ್ಕೆ ಅನಗತ್ಯವಾದ ಸಂಸ್ಕೃತ ವರ್ಣಗಳ ಬಗ್ಗೆ ಭೂಷಣ ದರ್ಪಣಗಳಲ್ಲಿ ಪೂರ್ಣವಾಗಿ ಏಕಾಭಿಪ್ರಾಯವಿಲ್ಲ. ಋ, ವರ್ಣಗಳು ಶ, ಷ, ಕಾರಗಳು ಕನ್ನಡಕ್ಕೆ ಅನಗತ್ಯವೆಂಬಲ್ಲಿ ಒಮ್ಮತದ ಅಭಿಪ್ರಾಯವಿದೆ. ಜಿಹ್ವಾಮೂಲೀಯ, ಉಪಾಧ್ಮಾನೀಯ ಹಾಗೂ ೞಳದ ವಿಚಾರವನ್ನು ಭೂಷಣವು ಎತ್ತದಿರುವುದರಿಂದ ಅಲ್ಲಿ ದರ್ಪಣದೊಡನೆ ಅದು ಸಹಮತವಾಗಿದೆಯೆನ್ನಬಹುದು. ಕನ್ನಡದಲ್ಲಿ "ನಿಸರ್ಗವಾಗಿ ವಿಸರ್ಗವಿಲ್ಲ" (ಸೂ. 43ರ ವೃತ್ತಿ) ಎಂದು ದರ್ಪಣ ಹೇಳಿದರೆ ಭೂಷಣ ಆ ಬಗ್ಗೆ ಏನೂ ಹೇಳುವುದಿಲ್ಲ. ಕನ್ನಡದಲ್ಲಿ ಸಹಜವಾಗಿ ಮಹಾಪ್ರಾಣಗಳಿವೆಯೆಂದು ದರ್ಪಣ ಸಾಧಿಸುತ್ತದೆಯಾದರೆ(ಸೂ.25) ಸಾಮಾನ್ಯವಾಗಿ ಕನ್ನಡದಲ್ಲಿ ಮಹಾಪ್ರಾಣವಿಲ್ಲವೆಂದೇ ಭೂಷಣದ ಅಭಿಮತ. ಅಂತೂ ಒಟ್ಟಿನಲ್ಲಿ ಭೂಷಣ, ದರ್ಪಣಗಳು ಹೇಳುವ ಕನ್ನಡ ಶಬ್ದಗಳನ್ನು ಕೆಳಗಿನಂತೆ ತೋರಿಸಬಹುದು.

| | ಸ್ವರ | ವರ್ಗ | ಅವರ್ಗ | ಯೋಗವಾಹ | ದೇಶೀಯ | ಒಟ್ಟು |
|---|---|---|---|---|---|---|
| ಭೂಷಣ : | 10 | 15 | 6 | 2 | 5 | 38 |
| ದರ್ಪಣ : | 10 | 25 | 6 | 1 | 5 | 47 |

ದೇಶೀಯಗಳು ಸ್ವರ-ವ್ಯಂಜನಗಳಲ್ಲೇ ಅಳವಡುವುದರಿಂದ ಕೆಳಗಿನಂತೆ ಸೂಚಿಸುವುದು ಸಮರ್ಪಕ.

| | ಸ್ವರ | ವ್ಯಂಜನ | ಯೋಗವಾಹ | ಒಟ್ಟು |
|---|---|---|---|---|
| ಭೂಷಣ : | 12 | 24 | 2 | 38 |
| ದರ್ಪಣ : | 12 | 34 | 1 | 47 |

ಈ ಗಣನೆಯಂತೆ ಅಚ್ಚಗನ್ನಡ ವರ್ಣಮಾಲೆಯಲ್ಲಿ 47 ವರ್ಣಗಳಾಗುತ್ತವೆ. ಆದರೆ ವೈಯಾಕರಣರ ನಿರೂಪಣಾ ವಿಧಾನ ಹಾಗೂ ವರ್ಣನಿರ್ಣಯ ವಾದಕ್ಕೆ ಸಿಲುಕಿ ಧಾರಾಳವಾದ ಚರ್ಚೆ ನಡೆದಿದೆ. ದರ್ಪಣದ 'ಅಂತಚ್ಚಗನ್ನಡದೊಳ್ ನಾಲ್ವತ್ತೇೞಕ್ಕರಂ' (ಸೂ. 43ರ ವೃತ್ತಿ) ಎಂಬ ಹೇಳಿಕೆ ವಿಚಾರಾರ್ಹವಾಗಿದೆ. ಆಧುನಿಕ ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ನೋಡಿದರೆ ಕನ್ನಡ ವರ್ಣಮಾಲೆಯಲ್ಲಿ ನಾಲ್ವತ್ತೇೞು ವರ್ಣಗಳು ಗೋಚರಿಸುವುದಿಲ್ಲ. ಇದರಿಂದ ಭಾಷಾ ಶಾಸ್ತ್ರಜ್ಞರು ಹೇಳುವ 'ಕನ್ನಡ' ವರ್ಣಮಾಲೆಗೂ ವೈಯಾಕರಣರು ಹೇಳುವ 'ಅಚ್ಚಗನ್ನಡ' ವರ್ಣಮಾಲೆಗೂ ಮೂಲಭೂತವಾದ ಅಂತರ ವಿದ್ದಂತೆ ತಿಳಿಯಬೇಕಾಗುತ್ತದೆ. 'ಅಚ್ಚಗನ್ನಡ'ವೆಂಬ ಪ್ರಯೋಗಕ್ಕೆ ದರ್ಪಣಕಾರನೇ ಆದ್ಯನಲ್ಲ. ಆಂಡಯ್ಯನ (ಸು. ಕ್ರಿ. ಶ. 1225) ಕಬ್ಬಿಗರ ಕಾವದಲ್ಲಿ ಅಚ್ಚಗನ್ನಡವೆಂಬ ಪದಪ್ರಯೋಗವಿದೆ (ಪದ್ಯ 16). ಕಬ್ಬಿಗರ ಕಾವ ಪೂರ್ಣವಾಗಿ ಅಚ್ಚಗನ್ನಡ ಕಾವ್ಯವಷ್ಟೆ. ಆಂಡಯ್ಯನಿಗಿಂತಲೂ ಮೊದಲು ನಯಸೇನನು (ಕ್ರಿ. ಶ. 1112) 'ಸುದ್ದ

ಗನ್ನಡ' ಎಂದು ಬಳಸಿದ್ದಿದೆ (ಧರ್ಮಾಮೃತ 1-42) ಎಂದರೆ ಕೇಶಿರಾಜನಿಗಿಂತ ಹಿಂದೆಯೇ ಅಚ್ಚಗನ್ನಡದ ಬಗ್ಗೆ ಸ್ಪಷ್ಟವಾದ ಕಲ್ಪನೆ ಮೂಡಿದ್ದಿತೆಂಬುದು ಸ್ಪಷ್ಟ.

ದರ್ಪಣಕಾರನ ಪ್ರಕಾರ ಕನ್ನಡ ಕೋಶದಲ್ಲಿ ನಾಲ್ದೆರನಾದ ಶಬ್ದಗಳಿವೆ. ದೇಶೀಯ, ಅಪಭ್ರಂಶ, ಸಮಸಂಸ್ಕೃತ ಮತ್ತು ತತ್ಸಮ. ಇವುಗಳಲ್ಲಿ ದೇಶೀಯಂಗಳು ಹೇಗೂ ಅಚ್ಚಗನ್ನಡ ಶಬ್ದಗಳು. ಕೇಶಿರಾಜನ ದೃಷ್ಟಿಯಲ್ಲಿ ಅಪಭ್ರಂಶ ಶಬ್ದವೂ ಅಚ್ಚ ಗನ್ನಡವೆ. ಸಂಸ್ಕೃತದ ಹಂಗೇ ಇಲ್ಲದೆ ಚೊಕ್ಕವಾದ ಅಚ್ಚಗನ್ನಡವನ್ನು ಬಯಸುವವರ "ಕೃಪೊಕ್ಕ ನಿಧಿಯೆನಿಪಪಭ್ರಂಶ" ಎಂಬ ಮಾತು (ಸೂ.314) ಈ ಅಭಿಪ್ರಾಯವನ್ನು ದೃಢೀಕರಿಸುತ್ತದೆ. ಕಬ್ಬಿಗರ ಕಾವದಲ್ಲೂ ದೇಶೀಯ ಹಾಗೂ ಅಪಭ್ರಂಶ ಪದಗಳನ್ನೇ ಕಾಣಬಹುದು. ಹೀಗೆ ದೇಶೀಯ ಮತ್ತು ಅಪಭ್ರಂಶ ಶಬ್ದಗಳ ಅಭಿವ್ಯಕ್ತಿಗೆ ಅಗತ್ಯವೆನಿ ಸಿದ ವರ್ಣಗಳನ್ನು 'ಅಚ್ಚಗನ್ನಡ ಶಂದ್ಧಗೆ'ಗಳೆಂದು ದರ್ಪಣಕಾರನು ಭಾವಿಸಿದಂತಿದೆ. ಆದಕ್ಕೆ ಆತನ ಕಾಲದಲ್ಲಿದ್ದ ಅಚ್ಚಗನ್ನಡದ ಕಲ್ಪನೆಯೆ ಆಧಾರವೆಂಬುದು ಮುಖ್ಯ.

ಅಪಭ್ರಂಶ ಶಬ್ದಗಳೆಂದರೆ ನಿಜವಾಗಿ ಪಾಲಿ ಹಾಗೂ ಪ್ರಾಕೃತ ಭಾಷೆಗಳನ್ನು ಹಾದು ಬಂದ ಸಂಸ್ಕೃತ ಶಬ್ದಗಳಷ್ಟೆ. ಎಷ್ಟೋ ಶಬ್ದರೂಪಗಳು ಪಾಲಿ ಪ್ರಾಕೃತಗಳಲ್ಲಿ ದ್ದಂತೆಯೇ ಕನ್ನಡದಲ್ಲಿಯೂ ಆ ಕಾಲದಲ್ಲಿ ಬಳಕೆಗೊಳ್ಳುತ್ತಿದ್ದುವು. ಹಾಗಾಗಿ ಪಾಲಿ ಪ್ರಾಕೃತಗಳ ವರ್ಣಮಾಲೆಯನ್ನು ಮೊದಲು ಅವಲೋಕಿಸಬೇಕಾಗುತ್ತದೆ.

**ಪಾಲಿ ಮತ್ತು ಪ್ರಾಕೃತ ವರ್ಣಮಾಲೆ :** (ಸಿ. ಹೇ ಶ. ಮತ್ತು ಕಚ್ಚಾಯನ ವ್ಯಾಕರಣ)

**ಸ್ವರಗಳು :** ಅ, ಆ, ಇ, ಈ. ಉ, ಊ, ಎ, ಏ, ಒ ಓ –10

**ವ್ಯಂಜನಗಳು : ವರ್ಗ**

ಕ, ಖ, ಗ, ಘ : ಚ, ಛ, ಜ, ಝ : ಟ, ಠ, ಡ, ಢ, ಣ :
ತ, ಥ, ದ, ಧ, ನ: ಪ, ಫ, ಬ, ಭ, ಮ 23

**ಅವರ್ಗ** ಯ, ರ, ಲ, ವ, ಸ, ಹ 6

ಯೋಗವಾಹ : ಬಿಂದು 1

ಪಾಲಿಯಲ್ಲಿ ಙ, ಞ ಎಂಬ ಅನುನಾಸಿಕಗಳೂ, ಳ ಎಂಬ ಅವರ್ಗೀಯವೂ ಇವೆ. ಪಾಲಿ ವ್ಯಾಕರಣ (ಕಚ್ಚಾಯನ) 'ಎ' ಮತ್ತು 'ಒ' ಗಳನ್ನು ಹೇಳುವುದಿಲ್ಲ. ಮೇಲಿಂದ ಮೇಲೆ ನೋಡಿದರೆ ಪಾಲಿ ಮತ್ತು ಪ್ರಾಕೃತಗಳ ವರ್ಣಮಾಲೆ ಸಮಾನವಾಗಿದೆ. ಹಿಂದೆಯೇ ಹೇಳಿರುವಂತೆ ಕನ್ನಡ ವೈಯಾಕರಣರಿಗೆ ಋ, ೠ, ಌ, ೡ, ಶ, ಷ, ವಿಸರ್ಗ. ಜಿಹ್ವಾಮೂಲೀಯ, ಉಪಾಧ್ಮಾನೀಯಂಗಳನ್ನು ಕಳೆದು ಹಾಕುವಲ್ಲಿ ಈ ವರ್ಣಮಾಲೆ ಪ್ರೇರಕವಾಗಿದ್ದುದು ನಿಸ್ಸಂದೇಹ. ಕ್ಷಳವನ್ನು ತ್ಯಜಿಸುವಲ್ಲಿ ಪ್ರಾಕೃತ ವರ್ಣಮಾಲೆಯು

ಜೊತೆಯಲ್ಲಿ ಸಂಸ್ಕೃತ ವರ್ಣಮಾಲೆಯೂ ಕಾರಣವಾಗಿರಬೇಕೆಂದು. ಈ ಹಿನ್ನೆಲೆಯಲ್ಲಿ ದರ್ಪಣಕಾರನು ಅಚ್ಚಗನ್ನಡ ವರ್ಣಗಳೆಂದು ತಿಳಿದಿರುವ ಕೆಳಗಿನ ವರ್ಣಗಳನ್ನು ವಿಚಾರಿಸಬೇಕು.

1. ಐ ಮತ್ತು ಔ
2. ಮಹಾಪ್ರಾಣಗಳು
3. ಬಿಂದು

1. ಐ ಮತ್ತು ಔ : ಸಂಸ್ಕೃತ ವರ್ಣಮಾಲೆಯಲ್ಲಿ ಸಂಧ್ಯಕ್ಷರಗಳಾದ ಈಯೆರಡು ವರ್ಣಗಳು ಪಾಲಿ ಹಾಗೂ ಪ್ರಾಕೃತಗಳ ವರ್ಣಮಾಲೆಯಲ್ಲಿ ಪ್ರವೇಶ ಪಡೆದಿಲ್ಲ. ಸಂಸ್ಕೃತ ಶಬ್ದಗಳಲ್ಲಿನ ಐ ಔ ಕಾರಗಳು ಏ ಓ ಕಾರಗಳಾಗುವುದಾಗಿ ಪ್ರಾಕೃತ ವ್ಯಾಕರಣಗಳು ಹೇಳುತ್ತವೆ (ಪ್ರಾ. ಪ್ರ. 1-35, 1).

| ಸಂಸ್ಕೃತ | ಪ್ರಾಕೃತ |
|---|---|
| ಶೈಲ | ಸೇಲೋ |
| ಕೈಲಾಸ | ಕೇಲಾಸೋ |
| ಕೌಮುದೀ | ಕೋಮುಈ |
| ಕೌಶಾಂಬೀ | ಕೋಸಂಬೀ |

ಈ ತೆರನಾದ ಬದಲಾವಣೆ ಕನ್ನಡದಲ್ಲೂ ಇದೆ :

| ಸಂಸ್ಕೃತ | ಅಪಭ್ರಂಶ |
|---|---|
| ವೈರಂ | ಬೇರಂ |
| ವೈಶಾಖ | ಬೇಸಗೆ |
| ಸೌರಾಷ್ಟ್ರ | ಸೊರಟ |
| ಕೌಪೀನಂ | ಕೋವಣಂ |

ಕನ್ನಡದಲ್ಲಿ ಐ ಔ ಕಾರಗಳಿವೆಯೆಂಬುದೇ ವೈಯಾಕರಣರ ಒಮ್ಮತದ ಅಭಿಮತ. ಕೆಲವೊಮ್ಮೆ ಪದ ಮಧ್ಯದ ಯಕಾರ ವಕಾರಗಳಿಗೆ ಇವು ಅನುಕ್ರಮವಾಗಿ ಆದೇಶಗೊಳ್ಳುವುದಾಗಿಯೂ ಅವರು ಹೇಳುತ್ತಾರೆ (ಸ್ಮೃತಿ. ಸೂ. 67 : ಭೂಷಣ. ಸೂ. 123 : ದರ್ಪಣ. ಸೂ, 168) ಆದಕ್ಕಾಗಿ ಅವರು ಕೊಡುವ ಪ್ರಯೋಗಗಳನ್ನು ಪರಾಂಬರಿಸಿದರೆ ಕನ್ನಡದಲ್ಲಿ ಐ ಔ ಗಳ ಸರಿಯಾದ ಉಚ್ಚಾರ ಅಯ್ (ಅಯಿ) ಹಾಗೂ ಅವು ಎಂದೆನ್ನಬೇಕಾಗುತ್ತದೆ.

| | |
|---|---|
| ಕಯ್ವಾರಂ | ಕೈವಾರಂ |
| ತೇರಯಿಸಿದಂ | ತೇರ್ೈಸಿದಂ |
| ಕವುಂಗು | ಕೌಂಗು |
| ತವುಂಕಲ್ | ತೌಂಕಲ್ |

ಪ್ರಾಕೃತದಲ್ಲಿಯೂ ಸಂಸ್ಕೃತದ ಐ ಔ ಕಾರಗಳು ಅ ಇ. ಅ ಉ ಕಾರಗಳಾಗಿ ಉಚ್ಚರಿತವಾಗುತ್ತವೆ.

| | |
|---|---|
| ದೈವ | ದ ಇವಂ |
| ಭೈರವ | ಭ ಇರವಂ |
| ವೈಶಾಖ | ವ ಇಸಾಹೋ |
| ಪೌರ | ಪಉರೋ |
| ಕೌರವ | ಕಉರವೋ |
| ಪೌರುಷ | ಪಉರುಸೋ |

ಈ ಪ್ರಾಕೃತ ಹಾಗೂ ಕನ್ನಡದ 'ಅಯಿ', 'ಅವು'ಗಳ ಉಚ್ಚಾರ ಸಂಸ್ಕೃತದ ಸಂಧ್ಯಕ್ಷರಗಳಾದ ಐ ಔಗಳ ಉಚ್ಚಾರಕ್ಕಿಂತ ಭಿನ್ನವಾಗಿದೆ. ಹಾಗಾಗಿ ಐ ಔಕಾರಗಳು ಕನ್ನಡಕ್ಕೆ ಸಹಜವಲ್ಲವೆಂದೇ ಆಧುನಿಕ ವಿದ್ವಾಂಸರ ಒಕ್ಕೊರಲಿನ ಅಭಿಪ್ರಾಯ. ಪಾಲಿ ಪ್ರಾಕೃತಗಳಲ್ಲಿಯೂ ಬಳಕೆಗೊಳ್ಳದ ಈ ವರ್ಣಗಳು ಕನ್ನಡ ವರ್ಣಮಾಲೆಯಲ್ಲಿ ಹೇಗೆ ಪ್ರವೇಶ ಪಡೆದವೆಂಬುದು ಪ್ರಶ್ನೆ. ಸಂಸ್ಕೃತದಲ್ಲಿ ಐ, ಔ ಕಾರಗಳಿವೆ : ಸಂಸ್ಕೃತ ಶಬ್ದಗಳ ಬಳಕೆಗಾಗಿ ಕನ್ನಡಕ್ಕೆ ಈ ವರ್ಣಗಳು ಬಂದುವು ಎಂಬುದು ಸಮಸ್ಯೆಯನ್ನು ಬಗೆಹರಿಸುವುದಿಲ್ಲ. ಹಾಗಾದರೆ ಇದೇ ಮಾತನ್ನು ಶ, ಷ ಕಾರಗಳಿಗೂ ಹೇಳಬೇಕಲ್ಲ. ಆದ್ದರಿಂದ ಈ ವರ್ಣಗಳು ಅಚ್ಚಗನ್ನಡ ವರ್ಣಮಾಲೆಯನ್ನು ಪ್ರವೇಶಿಸುವುದಕ್ಕೆ ಅಪಭ್ರಂಶ ರೂಪಗಳೆ ಕಾರಣವಾಗಿರಬೇಕೆಂದು ಹೇಳಬಹುದು. ಸಂಸ್ಕೃತದ ಕೆಲವು ಶಬ್ದಗಳು ಕನ್ನಡಕ್ಕೆ ಅಪಭ್ರಂಶವಾಗಿ ಬರುವಲ್ಲಿ ಐ, ಔ ಕಾರಗಳನ್ನು ಉಳಿಸಿ ಯೂ ಹೊಂದಿ ಬರುವುದುಂಟು.

| ಸಂಸ್ಕೃತ | ಅಪಭ್ರಂಶ |
|---|---|
| ಶೈವಂ | ಸೈವಂ |
| ಭೈರವಂ | ಬೈರವಂ |
| ಮಹಿಷಿ | ಮ್ಯೆಸಿ |
| ಚತುಃಪದಂ | ಚೌಪದಂ |
| ಚತುರ್ದಂತಂ | ಚೌದಂತಂ |

ಪ್ರಾಚೀನರು ಈ ಅಪಭ್ರಂಶ ರೂಪಗಳಲ್ಲಿನ ಕನ್ನಡದ ಉಚ್ಚಾರದ ಕಡೆಗೆ ಗಮನವೀಯದೆ ಕೇವಲ ಲಿಪಿರೂಪಕ್ಕೆ ಪ್ರಾಧಾನ್ಯವಿತ್ತಿರಬೇಕು. ದ್ರಾವಿಡ ಲಿಪಿಯಲ್ಲಿ ಹೇಗೂ ಐ ಔ ಕಾರಗಳು ವಿಕಸಿತಗೊಂಡು ಬಂದಿದ್ದುವಷ್ಟೆ. ಒಟ್ಟಿನಲ್ಲಿ ಐ ಔ ಕಾರಗಳು ಸಂಸ್ಕೃತ

ವರ್ಣಮಾಲೆಯ ನೇರವಾದ ಅನುಕರಣದಿಂದ ಬಂದವುಗಳಲ್ಲವೆಂದೂ ಕನ್ನಡದಲ್ಲಿ ವ್ಯಾಕರಣ ಗ್ರಂಥಗಳು ಹುಟ್ಟಿಕೊಳ್ಳುವ ಕಾಲಕ್ಕಾಗಲೇ ಭಾಷೆಯಲ್ಲಿ ಬಳಕೆಗೊಳ್ಳತೊಡಗಿದ್ದ ಅಪಭ್ರಂಶ ಪದಗಳ ಮೂಲಕ ಅವು ಬಂದಿರಬೇಕೆಂದೂ ಊಹಿಸಬಹುದು.

## 2. ಮಹಾಪ್ರಾಣಗಳು

ಮಹಾಪ್ರಾಣಗಳ ವಿಚಾರ ಐ, ಔ ಕಾರಗಳಿಗಿಂತ ವ್ಯತ್ಯಸ್ತವಾಗಿದೆ. ಐ ಔ ಕಾರಗಳು ಕನ್ನಡದಲ್ಲಿ ಇವೆಯೋ ಯಾ ಇಲ್ಲವೇ ಎಂಬ ಪ್ರಶ್ನೆ ಯಾವ ಕನ್ನಡ ವೈಯಾಕರಣನಿಗೂ ಇದಿರಾಗಿಲ್ಲ. ಆದರೆ ಮಹಾಪ್ರಾಣಗಳ ಅಸ್ತಿತ್ವವನ್ನು ಕನ್ನಡದಲ್ಲಿ ಸಹಜವಾಗಿ ಕಾಣುವ ಮತ್ತು ಅಲ್ಲಗಳೆಯುವ ಈ ದ್ವಿವಿಧ ಅಭಿಪ್ರಾಯಗಳು ಹಳಗನ್ನಡ ವ್ಯಾಕರಣ ಜಗತ್ತಿನಲ್ಲಿ ಕಾಣಸಿಕೊಂಡಿವೆ.

ಸ್ಮೃತಿಯು ಸಂಖ್ಯಾವಾಚಕ ಮತ್ತು ಅನುಕರಣ ವಾಚಕಗಳಲ್ಲಿ ಮಹಾಪ್ರಾಣಗಳು ಬರುವುದಾಗಿ ಹೇಳುತ್ತದೆ (ಸೂ. 6). ಆದರೆ ಭೂಷಣವು ಸಾಧಾರಣವಾಗಿ ವರ್ಗ ದ್ವಿತೀಯ ಚತುರ್ಥಗಳು ಕನ್ನಡದಲ್ಲಿ ಬಳಕೆಗೊಳ್ಳುವುದಿಲ್ಲವೆಂದು ಹೇಳಿದರೂ ಸಂಖ್ಯಾನುಕರಣಾದಿಗಳಲ್ಲಿ ಕಾಣಸಿಕೊಳ್ಳುವ ಆ ವರ್ಣಗಳನ್ನು ಗುರುತಿಸಿದೆ (ಸೂ. 11 ಮತ್ತದರ ವೃತ್ತಿ). ("ಆದಿಗ್ರಹಣಾದನ್ಯತ್ರಾ ಪಿ–ಫು ಟಿ ಯಂ, ರಘುಳಂ, ಠಕ್ಕು, ಧೊಕ್ಕರಂ, ಧಟಂ, ಭರಂ") (ಸೂ. 11ರ ವೃತ್ತಿ) ಎಂದುದರಿಂದ ಉಳಿದೆಡೆಗಳಲ್ಲಿ ಮಹಾಪ್ರಾಣಗಳ ಸಹಜ ಪ್ರಯೋಗವನ್ನು ಅದು ಪೂರ್ಣವಾಗಿ ನಿರಾಕರಿಸುವುದಿಲ್ಲಯೆಂಬುದು ಸ್ಪಷ್ಟ. ದರ್ಪಣ ಮೊದಲು ಸ್ಮೃತಿಯ ಹೇಳಿಕೆಯನ್ನೇ ವಿಸ್ತರಿಸಿ (ಸೂ. 24) ಮುಂದಿನ ಸೂತ್ರದಲ್ಲಿ ಭೂಷಣದ ಸೂತ್ರಾರ್ಥಕ್ಕೆ ವಿರುದ್ಧವಾದ ಪ್ರತಿಕ್ರಿಯೆಯನ್ನು ನೀಡುತ್ತದೆ. "ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ಣಾಟಭಾಷೆಯೊಳ್ ಕೆಲವು ನಿಜೋಜ್ವಳಮಾಗಿ" (ಸೂ. 25) ಎಂದು ಉದ್ಘೋಷಿಸುತ್ತದೆ. ತನ್ನ ನಿಲುವನ್ನು ದೃಢೀಕರಿಸುವ ಸಲುವಾಗಿ ಸುಮಾರು 50 ಮಹಾಪ್ರಾಣಯುಕ್ತ ಶಬ್ದಗಳನ್ನು ಕೊಡುತ್ತದೆ.

ದರ್ಪಣಕಾರನ ನಿರೂಪಣೆಯನ್ನು ತಳಹದಿಯಾಗಿಟ್ಟುಕೊಂಡು ಆಧುನಿಕ ವಿದ್ವಾಂಸರು ಸಾಕಷ್ಟು ಚರ್ಚೆ ಮಾಡಿದ್ದಾರೆ. ಅದರ ಪರಿಣಾಮವಾಗಿ ಕನ್ನಡದ ನಿಜೋಜ್ವಳ ಮಹಾಪ್ರಾಣಗಳ ಮಾತಂತಿರಲಿ, ಮೂರೂ ವ್ಯಾಕರಣಗಳು ಒಮ್ಮತದಿಂದ ಹೇಳುವ ಸಂಖ್ಯಾವಾಚಕ ಹಾಗೂ ಅನುಕರಣವಾಚಕಗಳಲ್ಲಿ ಕಾಣುವ ಮಹಾಪ್ರಾಣಗಳೂ ಕನ್ನಡಕ್ಕೆ ಸಹಜವಲ್ಲವೆಂಬ ಅಭಿಪ್ರಾಯ ಹೊರಹೊಮ್ಮಿದೆ. ಮೂರೂ ಗ್ರಂಥಗಳಲ್ಲಿ ಸಂಖ್ಯಾವಾಚಕಕ್ಕೆ ಕೊಟ್ಟ ಉದಾಹರಣೆಗಳು (ನೂರ್ಛಾಸಿರ, ಇರ್ಛಾಸಿರ, ಎಣ್ಛಾಸಿರ ಮೊದಲಾದ) ಸಾಸಿರ ಉತ್ತರ ಪದವಾಗಿರುವ ಸಮಸ್ತ ಪದಗಳಾಗಿವೆ. ಸಮಸ್ತಪದವಾಗುವಲ್ಲಿ ಉತ್ತರಪದಾದಿಯ ಸಕಾರಕ್ಕೆ ಛಕಾರಾದೇಶವಾದುದರಿಂದ ಈ ರೂಪಗಳು ಸಿದ್ಧಿಸಿವೆ. ಸ್ವಾರಸ್ಯವೆಂದರೆ ಸಾಸಿರದ ಹೊರತಾಗಿ ಮತ್ತಾವುದೇ ಶಬ್ದದ ಆದಿಯ ಸಕಾರಕ್ಕೆ ಛಕಾರಾದೇಶವಾಗುವುದಿಲ್ಲ : ಚಕಾರ ಇಲ್ಲವೆ ಜಕಾರಾದೇಶವಾಗುತ್ತದೆ. ಅದು ಕನ್ನಡ

ಭಾಷೆಯ ಧ್ವನಿ ವ್ಯವಸ್ಥೆಗೆ ಸಹಜವೂ ಹೌದು. ಎಂದರೆ ಸಂಖ್ಯಾವಾಚಕಗಳಲ್ಲಿ ಆದೇಶ ವಾಗಿ ಬರುವ ಛಕಾರಕ್ಕೆ ಇನ್ನೇನೋ ಮೂಲವಿರಬೇಕೆಂದು ಅರ್ಥ. ಬಹುಶಃ ಕೆಳಗಿನಂತಹ ಸಂಸ್ಕೃತ ಸಂಧಿಯ ಪರ್ಚಸ್ಸಿನಿಂದ ಇಂತಹ ಬದಲಾವಣೆ ನಡೆದಿರಬೇಕು (ಕನ್ನಡ ಸಂಸ್ಕೃತಿ ಪು. 324).

**ಸಂಸ್ಕೃತ :** ಶ್ರೀವಂತ್ + ಶಶಾಂಕಂ = ಶ್ರೀಮಚ್ಛಶಾಂಕಂ

**ಕನ್ನಡ :** ಎಣ್ + ಸಾಸಿರ = ಎಣ್ಛಾಸಿರ

ಮಹಾಪ್ರಾಣಾಕ್ಷರಗಳುಳ್ಳ ಅನುಕರಣ ಶಬ್ದಗಳನ್ನು ಭಾಷೆಗೆ ಆಧಾರವಾಗಿಟ್ಟುಕೊಳ್ಳ ಲಾಗುವುದಿಲ್ಲ. "ಏಕೆಂದರೆ ಯಾವುದೇ ಅನುಕರಣವಾಚಕವಿದ್ದರೂ, ಅದು ಮೂಲದ ಸಮೀಪದ ಧ್ವನಿಯಾಗಿದೆಯೇ ಹೊರತು ತದ್ವತ್ತಾಗಿ ಅದೇ ಆಗಬಾರದು" (ಕ. ಭಾ. ಶಾ. ಪು. 109). ಆದ್ದರಿಂದ ಅವುಗಳನ್ನೂ ಕೈಬಿಡಬಹುದು.

ದರ್ಪಣದಲ್ಲಿ ಸಹಜ ಮಹಾಪ್ರಾಣಘಟಿತ ಶಬ್ದಗಳಿಗೆ ಕೊಟ್ಟ ಉದಾಹರಣೆ ಗಳಲ್ಲಿ ಯಾವೊಂದು ಶಬ್ದವೂ ಕನ್ನಡದ್ದಲ್ಲ. ಅವುಗಳಲ್ಲಿ ಕೆಲವು ಪ್ರಾಕೃತ ಅಥವಾ ಮರಾಠಿ ಭಾಷೆಯಿಂದ ಕನ್ನಡಕ್ಕೆ ಬಂದ ಶಬ್ದಗಳಾದರೆ (ಠಾಣ, ಥಾಪನೆ, ಭಾಸೆ ಇತ್ಯಾದಿ) ಇನ್ನು ಕೆಲವು ತಪ್ಪು ಉಚ್ಚಾರದಿಂದ ರೂಪುಗೊಂಡ ಶಬ್ದಗಳು (ಥಟ್ಟು, ಧಾಳಿ, ಭಂಗಾರ). ಇಂತಹ ಶಬ್ದಗಳ ಆಧಾರದಿಂದ ಕನ್ನಡದಲ್ಲಿ ಮಹಾಪ್ರಾಣಗಳಿವೆಯೆಂದು ಸ್ಥಾಪಿಸಲು ಸಾಧ್ಯವಿಲ್ಲವೆಂಬುದು ಭಾಷಾವಿಜ್ಞಾನಿಗಳ ಹೇಳಿಕೆ.

ದರ್ಪಣಕಾರನ ಹೇಳಿಕೆಯನ್ನು ಇನ್ನೊಂದು ವಿಧವಾಗಿ ಸಮರ್ಥಿಸುವ ಅಭಿಪ್ರಾಯ ಹುಟ್ಟಿಕೊಂಡದ್ದುಂಟು : "ಹಿಂದಿನ ಕಾಲದಲ್ಲಿಯೂ ಜೈನ ಸಮಾಜದ ಬಳಕೆಯ ಭಾಷೆಯಲ್ಲಿ ಮಹಾಪ್ರಾಣದ ಪ್ರಭಾವವು ಸಾಕಷ್ಟು ಇದ್ದಿರಬೇಕೆಂದು ತೋರುತ್ತದೆ. ಆ ಸಮಾಜದ ಇಂದಿನ ಬಳಕೆಯ ಭಾಷೆಯು ಇದನ್ನು ಪುಷ್ಟೀಕರಿಸುತ್ತದೆ .... ಈ ಕಾರಣ ದಿಂದ ಕೇಶಿರಾಜನು ಕನ್ನಡದಲ್ಲಿ ಪ್ರಾಯಿಕವಾಗಿ ಮಹಾಪ್ರಾಣಗಳು ಇರುವುದಿಲ್ಲ ಎಂಬು ದಕ್ಕೆ ಭಿನ್ನಾಭಿಪ್ರಾಯವನ್ನು ಬೆಳೆಸಿಕೊಂಡು ಬಂದನೆಂದು ತೋರುತ್ತದೆ" (ಕ. ಭಾ. ಚ. ಪು. 193). ಈ ಅಭಿಪ್ರಾಯ ತೀರಾ ಅಸಮರ್ಪಕ. ಕೇಶಿರಾಜನು ಒಂದು ಉಪ ಭಾಷೆಗೆ ವ್ಯಾಕರಣ ಬರೆದಿಲ್ಲವೆಂಬುದನ್ನು ಗಮನಿಸದೆ ಬಂದಿರುವ ಹೇಳಿಕೆಯಿದು.

"ಕನ್ನಡ ಎಂಬ ಪದದ ಅರ್ಥವ್ಯಾಪ್ತಿಯನ್ನು ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತ ಪದಗಳಿಗೂ ಅನ್ವಯಿಸಿದರೆ, ಮಹಾಪ್ರಾಣಾಕ್ಷರಗಳು ಕನ್ನಡ ವರ್ಣಮಾಲೆಯಲ್ಲಿ ಉಂಟೆಂದೇ ಒಪ್ಪಿಕೊಳ್ಳಬೇಕಾಗುತ್ತದೆ" (ಪ್ರಾ. ಕ. ವ್ಯಾ. ಪು. 129–130) ಎಂಬ ಸಮಾಧಾನದ ಮಾತೂ ಸಮರ್ಥನೀಯವಲ್ಲ. ಏಕೆಂದರೆ ದರ್ಪಣಕಾರನು ಕೊಡುವ ಪ್ರಯೋಗಗಳಲ್ಲಿ ಒಂದೇ ಒಂದು ಸಂಸ್ಕೃತ ಶಬ್ದವಿಲ್ಲ. ಮಾತ್ರವಲ್ಲ, ಮೊದಲು ಹೇಳಿ ದಂತೆ, ಶ, ಷ. ವಿಸರ್ಗಗಳಿಗೂ ಈ ಮಾತನ್ನಾಗ ಅನ್ವಯಿಸಬೇಕಾಗುತ್ತದೆ. ಆದರೆ ಅದಕ್ಕೆ ಅವಕಾಶವಿಲ್ಲ. ಸಂಸ್ಕೃತ ಶಬ್ದಗಳನ್ನು ಕನ್ನಡದಲ್ಲಿ ಬಳಸುವ ದೃಷ್ಟಿಯಿಂದ

ಅಚ್ಚಗನ್ನಡ ಶುದ್ಧಗೆಗಳ ನಿರ್ಣಯವಾಗಿಲ್ಲವೆಂಬುದು ಮೊದಲನೆಯ ಗಟ್ಟಿ ಮಾತು. ಹಾಗಾದರೆ ನಿಜೋಜ್ವಳ ಮಹಾಪ್ರಾಣಗಳ ಹಿನ್ನೆಲೆಯೇನು ?

ಸಂಖ್ಯಾನುಕರಣಾದಿಗಳಲ್ಲಿ ಮಹಾಪ್ರಾಣಗಳಿವೆಯೆಂಬ ಮಾತು ಕನ್ನಡ ವ್ಯಾಕರಣಗಳಲ್ಲಿ ಪರಂಪರಾಗತವಾಗಿ ಬಂದುದು. ಅಸವರ್ಣಕ ಸಂಧಿವಿಧಾನದಿಂದ ರೂಪಿತವಾದುದಾದರೂ ಸರಿ, ಕನ್ನಡದ ಗ್ರಾಂಥಿಕ ಭಾಷೆಯಲ್ಲಿ ನೂರ್ಛಾಸಿರ, ಎಣ್ಛಾಸಿರ ಇತ್ಯಾದಿಯಾದ ಬಳಕೆಯಿದ್ದುದು ನಿಜ. ಅವುಗಳು ಸಂಸ್ಕೃತ ಹಾಗೂ ಪ್ರಾಕೃತ ಶಬ್ದಗಳಲ್ಲವೆಂಬುದೂ ಅಷ್ಟೇ ಸತ್ಯ. ಹಾಗಾಗಿ ಅವು ಕನ್ನಡ ಶಬ್ದಗಳೆಂಬ ನಂಬಿಕೆ ದರ್ಪಣಕಾರನಿಗಿಂತ ಹಿಂದೆಯೇ ಇದ್ದುದಾಗಿದೆ.

ನಿಜೋಜ್ವಲ ಮಹಾಪ್ರಾಣಗಳನ್ನು ಸ್ಥಾಪಿಸುವಲ್ಲಿ ದರ್ಪಣಕಾರನ ದೃಷ್ಟಿಯೆಲ್ಲ ಅಪಭ್ರಂಶ (ಅಚ್ಚಗನ್ನಡ) ಪದಗಳ ಮೇಲೆ ನೆಟ್ಟಿದೆ. ಅಲ್ಲಿ ಮಹಾಪ್ರಾಣಗಳ ಬಳಕೆಯನ್ನಾತ ಗುರುತಿಸಿದ್ದಾನೆ.

| ಸಂಸ್ಕೃತ | ಅಪಭ್ರಂಶ |
|---|---|
| ಭಾಂಡಾಗಾರಂ | ಭಂಡಾರಂ |
| ಧವಳಾಗಾರಂ | ಧವಳಾರಂ |
| ಬಹಿತ್ರಂ | ಭೈತ್ರಂ |
| ಖಾತಿಗೆ | ಖಾರಿಗೆ |
| ಔಷಧಂ | ಔಸಧಂ |
| ಪ್ರಕ್ಷಾಳಂ | ಪಖ್ಖಾಳಂ |

ಸ್ವಭಾವ ಸಹಜವಾದ ಮಹಾಪ್ರಾಣಗಳ ಪಟ್ಟಿಯಲ್ಲಿ ಭಂಡಾರ, ಖಾರಿಗೆ, ಪಕ್ಖಾಳಂ ಎಂಬ ಪದಗಳಿರುವುದನ್ನು ಗಮನಿಸಬೇಕು. ಜಟಾದೇಶದ ಹೇಳುವಲ್ಲಿ (ಸೂ. 31) ಘೋಟಿಗೆ, ಥಾಟಿ, ಘೋಟಾಯ್ಲು ಎಂಬಿವುಗಳನ್ನೂ ಅಪಭ್ರಂಶವೆಂದು ಹೇಳಿದುದನ್ನು ಲೆಕ್ಕಿಸಬೇಕು (ಸೂ. 31ರ ಪ್ರಯೋಗ). ಸಹಜ ಮಹಾಪ್ರಾಣ ಘಟಿತ ಶಬ್ದಗಳಲ್ಲಿ ಹೆಚ್ಚಿನವು ಪ್ರಾಕೃತ ಶಬ್ದಗಳೆಂಬುದೂ ಮುಖ್ಯ. ಪಾಲಿ ಹಾಗೂ ಪ್ರಾಕೃತಗಳಲ್ಲಿ ಮಹಾಪ್ರಾಣದ ವಿಪುಲವಾದ ಬಳಕೆಯಿದೆ. ಸಂಸ್ಕೃತದ ಅಲ್ಪಪ್ರಾಣಗಳು ಅಲ್ಲಿ ಮಹಾಪ್ರಾಣಗಳಾಗುವುದೂ ಉಂಟು,

| ಸಂಸ್ಕೃತ | ಪ್ರಾಕೃತ | ಸಂಸ್ಕೃತ | ಪ್ರಾಕೃತ |
|---|---|---|---|
| ಅಸ್ತಿ | ಅತ್ಥಿ | ಲಕ್ಷ್ಮೀ | ಲಚ್ಛೀ |
| ಕೈಟಭಃ | ಕೇಢವೋ | ಶೀಕರಃ | ಸೀಭರೋ |
| ದುಹಿತಾ | ಧೂದಾ, ಧೀಆ | ಕಣಂ | ಥಣಂ |

ಇವೆಲ್ಲವುಗಳನ್ನು ವಿಚಾರಿಸಿದಾಗ ಅಚ್ಚಗನ್ನಡದಲ್ಲಿ ನಿಜೋಜ್ವಳ ಮಹಾಪ್ರಾಣಗಳಿವೆಯೆಂದು ಸಾಧಿಸುವಲ್ಲಿ ದರ್ಪಣಕಾರನು ಆಧಾರವಾಗಿಟ್ಟುಕೊಂಡುದು ಅಪಭ್ರಂಶ ಪದ

ಗಳನ್ನೆಂದೇ ಹೇಳಬೇಕಾಗುತ್ತದೆ. ಕೆಲವು ಅಪಭ್ರಂಶ ಶಬ್ದಗಳಲ್ಲಾದರೂ ಮಹಾಪ್ರಾಣ ಯುಕ್ತ ಮತ್ತು ಮಹಾಪ್ರಾಣರಹಿತವೆಂಬ ಎರಡೆರಡು ಪ್ರಯೋಗಗಳು ಆ ಕಾಲದಲ್ಲಿ ಇದ್ದಿರಬೇಕು :

| | |
|---|---|
| ಘೋಸಂ | ಗೋಸಂ |
| ಠಾಣಂ | ತಾಣಂ |
| ಕಂಭ | ಕಂಬ |
| ಭಾಸೆ | ಬಾಸೆ |

ಆದಕ್ಕಾಗಿಯೇ 'ಕಂಭಕ್ಕಂ ಭಾಸೆಗಂ ವಿಕಲ್ಪಂ' (ಸೂ. 25ರ ವೃತ್ತಿ) ಎಂದು ದರ್ಪಣ ಕಾರ ಹೇಳುತ್ತಾನೆ. ಬಹುಶಃ "ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟ ಭಾಷೆ ಯೊಳ್ ಕೆಲವು ನಿಜೋಜ್ವಳವಾಗಿ" ಎಂಬಲ್ಲಿನ 'ಕೆಲವು' ಈ ಅರ್ಥದಲ್ಲಿ ಬಂದಿರಬೇಕು. ಒಟ್ಟಿನಲ್ಲಿ ಅಚ್ಚಗನ್ನಡದಲ್ಲಿ ಮಹಾಪ್ರಾಣಗಳನ್ನು ಸೇರಿಸುವುದಕ್ಕೆ ಮೂಲಭೂತವಾದ ಕಾರಣ ಅಂದಿನ ಅಚ್ಚಗನ್ನಡದ ಕಲ್ಪನೆಯೆಂಬುದರಲ್ಲಿ ಸಂದೇಹವಿಲ್ಲ.

### ಬಿಂದು

ಕನ್ನಡ ವರ್ಣಮಾಲೆಯಲ್ಲಿ ಬಿಂದುವಿನ ಇರುವಿಕೆಯ ಬಗ್ಗೆ ಆಧುನಿಕ ಪಂಡಿತರಲ್ಲಿ ಇಬ್ಬಗೆಯ ಅಭಿಪ್ರಾಯವಿದೆ. ಕೆಲವರು ಸಂಸ್ಕೃತದ ಅನುಸ್ವಾರೋಚ್ಚಾರದ ಹಿನ್ನೆಲೆ ಯಲ್ಲಿ ಕನ್ನಡ ವರ್ಣಮಾಲೆಯಲ್ಲಿ ಬಿಂದುವನ್ನು ಸ್ಥಾಪಿಸುವ ಸಾಹಸ ಕೈಗೊಂಡುದುಂಟು (ಕ. ಭಾ. ಚ. ಪು. 201-204; ಸಂ. ರ. ಪು. 47), ಇನ್ನು ಕೆಲವರು ಕನ್ನಡ ಭಾಷೆಗೆ ಬಿಂದು ತೀರ ಅಸಹಜವೆಂದು ಹೇಳುತ್ತಾರೆ.[8] ಹಳಗನ್ನಡ ವೈಯಾಕರಣರಿಗಂತೂ ಬಿಂದುವಿನ ಕುರಿತು ಸಂದೇಹವಿಲ್ಲ. ಅವರ ನಿರೂಪಣೆಯ ಹಿನ್ನೆಲೆಯಲ್ಲೇ ವಿಚಾರಿಸಿ ದರೂ ಕನ್ನಡ ವರ್ಣಮಾಲೆಯಲ್ಲಿ ಬಿಂದುವಿಗೆ ಸ್ಥಾನ ದೊರಕದು.

ಕನ್ನಡದಲ್ಲಿ ಬಿಂದುವಿನಿಂದ ಶಬ್ದ ಆರಂಭಗೊಳ್ಳುವುದಿಲ್ಲ. ಬರವಣಿಗೆಯಲ್ಲಿ ಬಿಂದು ಶಬ್ದಮಧ್ಯದಲ್ಲಿ ಕಾಣಿಸಿಕೊಂಡರೂ, ಉಚ್ಚಾರದಲ್ಲಿ ಪರಿಸರಕ್ಕೆ ಹೊಂದಿಕೊಂಡು ಅದು ವರ್ಗ ಪಂಚಮಾಕ್ಷರವಾಗುತ್ತದೆ (ದರ್ಪಣ. ಸೂ. 132). ದರ್ಪಣದಲ್ಲಿ ಕೊಟ್ಟಿ ರುವ ಸಬಿಂದುಕ ಮತ್ತು ವಿಕಲ್ಪಬಿಂದುಕ ಪದಗಳಲ್ಲಿ ವರ್ಗ ಪ್ರಥಮ ತೃತೀಯಗಳ ಹಿಂದೆ ಮಾತ್ರ ಬಿಂದು ಗೋಚರಿಸುತ್ತದೆ.[9] ಅಲ್ಲೆಲ್ಲ ಬಿಂದುವಿಗೆ ನಿಶ್ಚಿತವಾದ ಒಂದೇ ಉಚ್ಚಾರವಿರದೆ ಮುಂದಿನ ವರ್ಗೀಯ ವ್ಯಂಜನಕ್ಕೆ ಹೊಂದಿಕೊಂಡು ಆಯಾ ವರ್ಗದ ಸ್ವರರಹಿತ ಅನುನಾಸಿಕದ ಉಚ್ಚಾರವನ್ನು ಅದು ಪಡೆಯುತ್ತದೆ. ಅವರ್ಗೀಯಗಳ ಹಿಂದೆ ಬಿಂದುವಿರುವ ದೇಶ್ಯ ಶಬ್ದಗಳು ಕನ್ನಡದಲ್ಲಿಲ್ಲ. ಪದಾಂತದಲ್ಲಿ ಕಾಣಿಸಿಕೊಳ್ಳುವ ಬಿಂದು ಸ್ವರರಹಿತ ಮಕಾರಗಳ ಪ್ರತಿನಿಧಿಯೆಂಬುದು ಸ್ಪಷ್ಟ. ಪರದಲ್ಲಿ ಸ್ವರವಿರಲು ಬಿಂದುವಿಗೆ ನತ್ವಮತ್ವಗಳು ಬರುವುದಾಗಿಯೂ (ಸ್ಮೃತಿ, ಸೂ. 30, ಭೂಷಣ ಸೂತ್ರ 53. ದರ್ಪಣ ಸೂ. 114) ಪದದ ಕೊನೆಯ ನತ್ವಮತ್ವಗಳಿಗೆ ಪರದಲ್ಲಿ ಸ್ವರವಿಲ್ಲ

ದಿರಲು ಬಿಂದು ಆದೇಶಗೊಳ್ಳುವುದಾಗಿಯೂ (ಸ್ಮೃತಿ. ಸೂ. 44: ಭೂಷಣ ಸೂ.112 ದರ್ಪಣ ಸೂ. 172) ಕನ್ನಡ ವ್ಯಾಕರಣಗಳು ಹೇಳುತ್ತವೆ. ಇದರಿಂದ ಪದಾಂತದಲ್ಲಿ ಕಾಣಿಸಿಕೊಳ್ಳುವ ಬಿಂದು ಸ್ವರರಹಿತ ಮಕಾರಗಳ ಪ್ರತಿನಿಧಿಯೆಂಬುದು ಖಚಿತ. ಇಲ್ಲವಾದರೆ ಸರ್ವತ್ರ ಒಂದೇ ವರ್ಣ, ಯಾವುದೇ ಪರಿಸರ ನಿರ್ದಿಷ್ಟತೆಯಿಲ್ಲದೆ ಎರಡು ವರ್ಣಗಳಿಗೆ ಆದೇಶಗೊಳ್ಳಲಾರದು. ಆಂ, ನೀಂ, ತಾಂ ಎಂಬ ಶಬ್ದಗಳನ್ನು (ಸರ್ವನಾಮಗಳು)ಸಂದರ್ಭಕ್ಕೆ ತಕ್ಕಂತೆ ಆನ್, ನೀನ್, ತಾನ್(ಏಕವಚನ), ಆಮ್, ನೀಮ್, ತಾಮ್ (ಬಹುವಚನ) ಎಂದು ತಿಳಿದುಕೊಳ್ಳಬೇಕಾಗಿ ದರ್ಪಣ ಹೇಳುತ್ತದೆ (ಸೂ. 114ರ ಪ್ರಯೋಗ). ಇದು ಹೇಗೆ ? ಭಾಷೆಯ ಅವಿಭಾಜ್ಯ ಅಂಗವಾದ ಈ ಸರ್ವನಾಮಗಳಲ್ಲಿ ವಚನಕ್ಕೆ ಹೊಂದಿಕೊಂಡು ಉಚ್ಚಾರಭೇದವಿರಬೇಡವೆ? ಮಕಾರಗಳ ಜಾಗದಲ್ಲಿ ಬಿಂದು ಪ್ರಯೋಗ ಬಂದುದರಿಂದಲೇ ಈ ಅವ್ಯವಸ್ಥೆ ತಲೆದೋರಿವೆಯೆಂಬುದು ಸ್ಪಟಿಕ ಸತ್ಯ. ಆದ್ದರಿಂದ ಈ ಅವ್ಯವಸ್ಥೆಯೇ ಕನ್ನಡದಲ್ಲಿ ಬಿಂದುವಿನ ಅಸ್ತಿತ್ವವನ್ನು ನಿರಾಕರಿಸುತ್ತದೆಯೆನ್ನಬಹುದು. ಈ ಕುರಿತು "ಆಳಕ್ಕಿಳಿದು ವಿಚಾರಿಸಿದರೆ ಕಂಡು ಬರುವುದಿಷ್ಟು. ಪದಮಧ್ಯದಲ್ಲಿ ಸ್ವರರಹಿತವಾಗಿ ಬಂದ ಅನುನಾಸಿಕಗಳ ಮತ್ತು ಪದಾಂತದಲ್ಲಿ ಬಂದ ಸ್ವರರಹಿತ ಮಕಾರಗಳ ಬರವಣಿಗೆಯ ಸೌಲಭ್ಯಕ್ಕಾಗಿ ಕನ್ನಡಿಗರು ಬಳಸಿಕೊಂಡ ಬರೆಹದ ಸಂಕೇತ, ಬಿಂದು" (ಕ.ಭಾ. 9-4. ಪು. 12). ಆದುದರಿಂದ ಕನ್ನಡದ "ಬಿಂದು ಬರೆಹದ ಸಂಕೇತಗಳ ಸಂಕೇತ" (ಅದೇ 2-1. ಪು, 70) ಎಂದು ತೀರ್ಮಾನಿಸುವುದು ಸಮುಚಿತ.

ಕನ್ನಡದ ಬರವಣಿಗೆಯಲ್ಲಿ ಬಿಂದು ತಲೆದೋರಿದುದರಿಂದ ಅಚ್ಚಗನ್ನಡ ವರ್ಣಮಾಲೆಯಲ್ಲಿ ಅದಕ್ಕೆ ಸ್ಥಾನ ದೊರಕಿದೆ. ಬಿಂದುವಿಗೆ ಸಂಬಂಧಿಸಿದಂತೆ ಸಂಸ್ಕೃತದ ಬರವಣಿಗೆಗಿಂತ ಪ್ರಾಕೃತ ಬರವಣಿಗೆಯ ಪ್ರಭಾವ ಕನ್ನಡದ ಮೇಲಾದುದು ಹೆಚ್ಚೆಂದು ಹೇಳಬಹುದು. ಕನ್ನಡ ವೈಯಾಕರಣರು ಬಿಂದುವಿನ ಬಳಕೆಯನ್ನು ಹೇಳುವಲ್ಲಿ ಪ್ರಾಕೃತ ವ್ಯಾಕರಣಗಳಿಗೆ ಬಹಳಷ್ಟು ಋಣಿಗಳಾಗಿರುವುದು ಸತ್ಯ.

ಸಂಸ್ಕೃತದ ಪದಾಂತದ ಮಕಾರ ಬಿಂದುವಾಗುವುದಾಗಿ ಪ್ರಾಕೃತ ವ್ಯಾಕರಣಗಳು ಹೇಳುತ್ತವೆ.[10]

ಪ್ರಾ. ಪ್ರ. " ಮೋ ಬಿಂದುಃ " 4-12
ಸಿ. ಹೇ. ಶ. " ಮೋನುಸ್ವಾರಃ " 8-1-23

ಕೆಳಗಿನ ಪ್ರಯೋಗಗಳು ಇದಕ್ಕೆ ನಿದರ್ಶನ :

| ಸಂಸ್ಕೃತ | ಪ್ರಾಕೃತ |
|---|---|
| ಮಿತ್ರಮ್ | ಮಿತ್ತಂ |
| ಕಲತ್ರಮ್ | ಕಲತ್ತಂ |
| ವಲ್ಕಲಮ್ | ವಕ್ಕಲಂ |
| ಯೌವನಮ್ | ಜೊವ್ವಣಂ |

ಈ ಪದಾಂತದ ಮಕಾರವನ್ನು ಬಿಂದುವಾಗಿ ಪರಿವರ್ತಿಸುವ ಪ್ರಾಕೃತದ ಸ್ವಭಾವವು ಸಂಸ್ಕೃತದ ಬರವಣಿಗೆಯ ಮೇಲೆ ಬೀರಿದ ಪರಿಣಾಮವನ್ನು ವಿದ್ವಾಂಸರು ಗುರುತಿಸಿದ್ದಾರೆ.

"Even Sanskrit Inscriptions and MSS use 'anusvara' in place of the final ' m ' against the rules of Sanskrit Grammar which allows the change only in case of 'Sandhi' with the following consonant. This is universal in South Indian records and MSS and is no doubt due to Prakrit influence" (AGPL. p. 35).

ಪ್ರಾಕೃತದಲ್ಲಿ ಅಪೂರ್ವವಾಗಿಯಾದರೂ ಪದದ ಕೊನೆಯ ನಕಾರಕ್ಕೆ ಸೊನ್ನೆ ಬರುವುದುಂಟು.[11]

| ಸಂಸ್ಕೃತ | ಪ್ರಾಕೃತ |
|---|---|
| ಅಸ್ಮಿನ್ | ಅಸ್ಸಿಂ |
| ಕಸ್ಮಿನ್ | ಕಸಿಂ, ಕಹಿಂ |
| ಭವಾನ್ | ಭವಂ |
| ಭಗವಾನ್ | ಭಅವಂ |
| ರಾಜನ್ | ರಾಯುಂ |

ಪದಾಂತದ ಮನಕಾರಗಳಿಗೆ ಬಿಂದು ಬರುವ ಮೇಲಿನ ವಿಚಾರಗಳನ್ನು ಜೊತೆಯಾಗಿಸಿಕೊಂಡು ಕನ್ನಡ ವ್ಯಾಕರಣಗಳು ನಿರೂಪಿಸುತ್ತವೆ.

ಸ್ಮೃತಿ : " ಅನುಸಂಧಿಸಿ ಕೃತ್ಸ್ನ ವ್ಯಂಜನಂಗಳಿರೆ ಮುಂದೆ
ಬಿಂದು ಪರಿವರ್ತಿಸುಗುಂ ಮನದೊಳ್" ಸೂ. 44

ಭೂಷಣ : " ಮನಯೋರ್ಬಿಂದುಃ" ಸೂ. 112

ದರ್ಪಣ : " ಮನಕಾರದ ಪರದೊಳ್ ವ್ಯಂಜನ
ಮಿರ್ದೊಡಮಿಲ್ಲದೊಡಮನುಸ್ವಾರಂ
ಸಂಜನಿಯಿಪುದು " ಸೂ. 172

ಪ್ರಾಕೃತದಲ್ಲಿ ಅಪೂರ್ವವಾಗಿರುವ ಪದಾಂತನಕಾರದ ಬಿಂದು ಕನ್ನಡದಲ್ಲಿ ವ್ಯಾಕರಣ ಗ್ರಂಥಗಳು ಹುಟ್ಟಿಕೊಳ್ಳುವ ಕಾಲಕ್ಕೆ ನಿಯಂತವಾಗಿರಬೇಕು.

ಪ್ರಾಕೃತ ವ್ಯಾಕರಣಗಳು ವ್ಯಂಜನಗಳ ಹಿಂದೆ ಬಂದ ಸ್ವರರಹಿತ ವರ್ಗಪಂಚಮಗಳು ಬಿಂದುವಾಗುವುದಾಗಿ ಹೇಳುತ್ತವೆ :

ಪ್ರಾ. ಪ. "ಙಞಣನೋಹಲಿ" ಸೂ. 4-14

ಸಿ. ಹೇ. ಶ. "ಙ ಞ ಣ ನೋವ್ಯಂಜನೇ" ಸೂ. 8-1-25

ಈ ಶಬ್ದಗಳಿಂದ ಇದು ಸ್ಪಷ್ಟವಾಗುವುದು :

| ಸಂಸ್ಕೃತ | ಪ್ರಾಕೃತ |
|---|---|
| ಪಙ್ಕ್ತಿ | ಪಂತೀ |
| ಶಙ್ಕರಃ | ಸಂಕರೋ |
| ಕಞ್ಚಿಕ | ಕಂಚಂಜ |
| ಉತ್ಕಣ್ಠಾ | ಉತ್ಕಂಠಾ |
| ಕಬನ್ಧ | ಕವಂಧೋ |
| ಕುಮ್ಭಕಾರಃ | ಕುಂಭಾರೋ |

ಈ ವಿಚಾರವನ್ನು ಕನ್ನಡ ವೈಯಾಕರಣರುಂ ಗಮನಿಸಿರುವುದಕ್ಕೆ ಕೆಳಗಿನ ಪದ್ಯ ಸಾಕ್ಷಿಯಾಗಿದೆ :

"ಬಿಙ್ಕಮೆತ್ತಸೆವಙ್ಚಿಯ
ಸಙ್ಕುಳಮುಂ ತೊಣ್ಡುಗೆಡೆವ ಶುಕಸಾರಿಕೆಯುಂ
ಸೋಙ್ಕಿ ಬಲವನ್ದು ತೀಡುವ
ತೆಙ್ಕಣ ಗಾಳಿಯುಮವೇಂ ಮನಙ್ಗೊಳಿಸಿದುವೋ"

(ಸ್ಮೃತಿ ಪದ್ಯ 18 : ದರ್ಪಣ ಸೂ. 25ರ ಪ್ರಯೋಗ)

ಇಲ್ಲಿನ ಬಿಙ್ಕ, ಅಙ್ಚಿ, ಸಙ್ಕುಳ, ಇತ್ಯಾದಿಗಳು ಕನ್ನಡದ ಆದಿಯ ಬರವಣಿಗೆಯ ರೂಪವನ್ನು ತೋರಿಸಿಕೊಡುತ್ತವೆ. ಮೇಲೆ ಹೇಳಿದ ಪ್ರಾಕೃತದ ರೀತಿಯ ಪ್ರಭಾವದಿಂದ ಕನ್ನಡದಲ್ಲಿ ಬಿಂದು ಪ್ರಯೋಗ ಕಾಲಾನುಕ್ರಮದಲ್ಲಿ ರೂಢವಾಗಿರಬೇಕು.

ಪ್ರಾಕೃತದ ಉಪರ್ಯುಕ್ತ ರೀತಿಗೆ ವ್ಯತಿರಿಕ್ತವಾದ ಕ್ರಮವೊಂದನ್ನು ವ್ಯಾಕರಣಗಳು ಹೇಳುತ್ತವೆ :

ಸಿ. ಹೇ. ಶ. "ವರ್ಗೇಂತ್ಯೋವಾ" ಸೂ. 8-4-30

ಅನುಸ್ವಾರಕ್ಕೆ ವರ್ಗೀಯ ವ್ಯಂಜನಗಳು ಪರವಾಗಲು ವಿಕಲ್ಪದಿಂದ ಆಯಾ ವರ್ಗ ಪಂಚಮಾಕ್ಷರಗಳು ಆದೇಶವಾಗುತ್ತವೆಯೆಂದೀ ಸೂತ್ರದ ತಾತ್ಪರ್ಯ. ಈ ವಿಚಾರಕ್ಕೆ ಕನ್ನಡವೂ ಒತ್ತುಕೊಡುತ್ತದೆ :

"ಆ ಬಿಂದುವಿಗಿದಿರಾಗಿ ವರ್ಗಮಿರೆ ವಿಕಲ್ಪದಿನಾ ವರ್ಗದ ಪಂಚಮಮಕ್ಕುಂ"

ದರ್ಪಣ ಸೂ. 172ರ ವೃತ್ತಿ

ಇದಕ್ಕೆ ಕೊಟ್ಟ ಪ್ರಯೋಗ :

ಅವಂ ಕಡುಂಗಲಿ — ಅವಙ್ಕಡುಂಗಲಿ
ತಾಂ ಚಲವಾದಿ — ತಾಞ್ಚಲವಾದಿ ಇತ್ಯಾದಿ

ಈ ವಿವರಣೆಯಲ್ಲಿನ 'ಬಿಂದು' ಎಂಬ ಜಾಗದಲ್ಲಿ 'ಮನ' ಕಾರಗಳನ್ನು ಸ್ಮೃತಿ ಭೂಷಣಗಳು ಹೇಳುತ್ತವೆ (ಸ್ಮೃತಿ ; ಸೂ. 44. ಭೂಷಣ, ಸೂ. 113).

ಸ್ಮೃತಿ : "ವರ್ಗಂ ಪರಮಾಗಿ ನಿಲೆ ವಿಕಲ್ಪದೆ ತದೀಯಂ ಪಂಚಮಮಕ್ಕುಂ"

ಸ್ಮೃತಿ. ಸೂ. 44

ಭೂಷಣ : "ವರ್ಗೇ ತದ್ವರ್ಗಾಂತ್ಯಃ" (ಸೂ. 122)

ಹೀಗೆ ಪ್ರಾಕೃತದಂತೆ ಕನ್ನಡದಲ್ಲಿ ಬಿಂದುವಿನ ಬಳಕೆಯಿದ್ದರೂ, ಪ್ರಾಕೃತ ವ್ಯಾಕರಣಗಳ ಅಭಿಪ್ರಾಯವನ್ನೇ ಕನ್ನಡ ವ್ಯಾಕರಣಗಳು ಹೇಳುವುದಿದ್ದರೂ ಪ್ರಾಕೃತ ಮತ್ತು ಕನ್ನಡ ದೊಳಗಿನ ಪ್ರಧಾನವಾದ ಅಂತರವೊಂದು ವಿಚಾರಾರ್ಹವಾಗಿದೆ. ಪ್ರಾಕೃತದಲ್ಲಿ ಬಿಂದು ಒಂದು ವರ್ಣ, ಶಬ್ದಗೆ. ಅಲ್ಲಿ ಅವರ್ಗೀಯ ವ್ಯಂಜನಗಳ ಹಿಂದೆಯೂ ಬಿಂದು ಬರು ತ್ತದೆ :

ಸಂಯಾದೋ, ಸಂಪ್ರದೀ, ಸಂವುದಂ, ಫಂಸೋ, ಮಂಸಂ ಇತ್ಯಾದಿ. ಕನ್ನಡದಲ್ಲಿ ಬಿಂದು ಒಂದು ವರ್ಣವಲ್ಲ : ಅದು ಬರವಣಿಗೆಯಲ್ಲಿ ಬೇರೆಬೇರೆ ವರ್ಣಗಳ ಪ್ರತಿನಿಧಿ ಯಾಗಿದ್ದು ಮೇಲು ನೋಟಕ್ಕೆ ಮಾತ್ರ ಪ್ರಾಕೃತವನ್ನು ಹೋಲುತ್ತದೆ. ಕನ್ನಡದಲ್ಲಿ ಅವರ್ಗೀಯಗಳ ಹಿಂದೆ ಬಿಂದು ಬಾರದಿರುವುದನ್ನು ಹಿಂದೆಯೇ ಪ್ರಸ್ತಾವಿಸಲಾಗಿದೆ ಯಷ್ಟೆ.

ಈ ಎಲ್ಲ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು :

1. ಕನ್ನಡದಲ್ಲಿ ಸಹಜವಾಗಿ ಬಿಂದುವಿಲ್ಲ.

2. ಕನ್ನಡದ ಬರವಣಿಗೆಯಲ್ಲಿ ಪ್ರಾಕೃತದ ಬರಹದ ಪ್ರಭಾವದಿಂದ ಸ್ವರರಹಿತ ವರ್ಗ ಪಂಚಮಗಳ ಸ್ಥಾನದಲ್ಲಿ ಬಿಂದು ತಲೆಯಿಕ್ಕಿದೆ. ಗ್ರಾಂಥಿಕ ಭಾಷೆಯನ್ನು ಆಧಾರವಾಗಿಟ್ಟುಕೊಂಡ ಕನ್ನಡ ವ್ಯಾಕರಣಗಳು ಅಚ್ಚಗನ್ನಡದಲ್ಲಿ ಬಿಂದುವನ್ನು ಹೇಳುತ್ತವೆ.

3. ಬಿಂದುವಿನ ಬಳಕೆಯನ್ನು ನಿರೂಪಿಸುವಲ್ಲಿ ಕನ್ನಡ ವ್ಯಾಕರಣಗಳು ಪ್ರಾಕೃತ ವ್ಯಾಕರಣಗಳಿಗೆ ಋಣಿಗಳಾಗಿವೆ.

ಕನ್ನಡದಲ್ಲಿ ಬಿಂದುವಿನ ಬಳಕೆಯಲ್ಲಿ ಒಂದು ವಿಧವಾದ ಬೆಳವಣಿಗೆಯಿದೆ ಯೆಂದು ಕನ್ನಡ ಶಾಸನಗಳ ಆಧಾರದಿಂದ ಹೇಳಬಹುದು. ಹಲ್ಮಿಡಿ ಶಾಸನದಲ್ಲಿ ಕನ್ನಡ ಶಬ್ದಗಳ ಮಧ್ಯದ ಸ್ವರರಹಿತ ಅನುನಾಸಿಕ ಬಿಂದುವಾಗಿಲ್ಲ :

ಸುತನ್ಗೆ, ಅಟ್ಪೊನ್ಗೆ, ಅರಸನ್ಗೆ, ಆಪತೊನ್ದಿವಿಟ್ಟಾರಕರ ಇತ್ಯಾದಿ.

ಕನ್ನಡ ಪದಾಂತದ 'ನ್' ಬಿಂದುವಾಗಿಲ್ಲ . 'ಮ್' ಬಿಂದುವಾಗಿದೆ.

ಕಳ್ದೋನ್, ಮಹಾಪಾತಕನ್, ಇತ್ಯಾದಿ

ಇರ್ವರುಂ ವಿಜಾರಸರುಂ, ಇತ್ಯಾದಿ

ಪದಾಂತದ 'ಮ್' ಒಂದೆಡೆ ಬಿಂದುವಾಗಿಲ್ಲ. ಮಹಾಪಾತಕಮ್.

ಕ್ರಿ.ಶ. 700ರ ಬಾದಾಮಿ ಶಾಸನದಲ್ಲಿ (ಕನ್ನಡ ಶಾಸನ ಸಂಪದ ಪು.3) ಪದಾಂತದ 'ನ್' ಒಂದೆಡೆ ಮಾತ್ರ ಬಿಂದುವಾಗಿದೆ :

ಕಪ್ಪೆ ಅರಭಟ್ಟನ್, ಶಿಷ್ಟಜನಪ್ರಿಯನ್,
ಕಷ್ಟಜನ ವರ್ಜಿತನ್, ಕಲಿಯುಗ ವಿಪರೀತನ್,
ಮಾಧೂರ್ಯಂ

ಕನ್ನಡ ಪದದ ಮಧ್ಯದ 'ನ್' ಒಂದೆಡೆ ಮಾತ್ರ ಬಿಂದುವಾಗಿದೆ:

....ಬನ್ದು, :...ಮಗೆನ್ದು, ಮಾಧೂರ್ಯನ್ಗೆ :....ಮಂದುಜನ್ತೆ,
ವಿಪರೀತಂಗಹಿತರ್ಕ್ಕಳ್.

ಇದೇ ಕಾಲದ ಶ್ರವಣಬೆಳಗೊಳದ ಶಾಸನವೊಂದರಲ್ಲಿ (ಅದೇ, ಪು. 4) ಪದಾಂತದ 'ಮ್' ಕಾರಗಳೆಲ್ಲ ಬಿಂದುವಾಗಿದೆ;

ಬೇಗಂ, ಪಿರಿಗುಂ, ಆಗ್ರ್ಗಂ ಪರಮಾರ್ತ್ಥಂ, ಸನ್ಯಾಸನಂ

ಪದಮಧ್ಯ ಹಾಗೂ ಪದಾಂತದ 'ನ್' ಕಾರ ಮುಂದುವರಿದಿದೆ.

....ವಾನೆನ್ದು, ಮುನಿವರನ್ದೇವಲೋಕ... ಸನ್ದಾನ್

ಕಾಲಕಳೆದಂತೆ ಪದಾಂತದ 'ಮ್' ಅಪೂರ್ವವಾಗುತ್ತದೆ. ಪದಾಂತದ 'ನ್' ಕಾರ ಸುಮಾರು ಕ್ರಿ. ಶ. 10ನೆಯ ಶತಮಾನದ ಹೊತ್ತಿಗೆ ಪೂರ್ಣವಾಗಿ ಬಿಂದುವಾದಂತೆ ತೋರುತ್ತದೆ. ಪದಮಧ್ಯದ ಸ್ವರರಹಿತ ಅನುನಾಸಿಕಗಳು ಹೆಚ್ಚು ಹೆಚ್ಚಾಗಿ ಬಿಂದುವಾಗುತ್ತಿದ್ದು ಸುಮಾರು ಕ್ರಿ. ಶ. 13ನೆಯ ಶತಕದ ಮಧ್ಯಭಾಗಕ್ಕಾಗುವಾಗ ಹೆಚ್ಚು ಕಡಿಮೆ ಪೂರ್ಣವಾಗಿ ಬಿಂದುವಾಗುತ್ತವೆ. ಹೀಗೆ ಬಿಂದು ಸ್ವರರಹಿತ ಅನುನಾಸಿಕಗಳನ್ನು ಆಕ್ರಮಿಸುವಲ್ಲಿ ಪ್ರಧಾನವಾಗಿ ಮೂರು ಹಂತಗಳನ್ನು ಗುರುತಿಸಬಹುದು.

| | | |
|---|---|---|
| 1. | ಪದಾಂತದ ಮ್ | 'ಂ' |
| 2. | ಪದಾಂತದ ನ್ | 'ಂ' |
| 3. | ಪದಮಧ್ಯದ ಙ್ | 'ಂ' |
| | " ಞ್ | 'ಂ' |
| | " ಣ್ | 'ಂ' |
| | " ನ್ | 'ಂ' |
| | " ಮ್ | 'ಂ' |

ಶಾಸನಗಳಲ್ಲಿ ಹೀಗಿದ್ದರೂ ಹಳಗನ್ನಡದಲ್ಲಿ ಗ್ರಂಥರಚನೆಯ ಆರಂಭವಾದ ಕಾಲಕ್ಕೆ ಪದಾಂತದ ಮನ ಕಾರಗಳು ಬಿಂದುವಾಗಿದ್ದಿರಬೇಕು. ಇದರಿಂದ ಪ್ರಾಕೃತ ವ್ಯಾಕರಣಗಳ ಸೂತ್ರವನ್ನು ಸಮರ್ಥವಾಗಿ ಅಳವಡಿಸಿಕೊಳ್ಳಲು ಕನ್ನಡ ವೈಯಾಕರಣರಿಗೆ ಸಾಧ್ಯವಾಗಿದೆ. ಹಾಗಾಗಿ "ಪೂರ್ವದ ಹಳಗನ್ನಡದಲ್ಲಿಯ ಪದಾಂತ ನಕಾರವು ಹಳಗನ್ನಡದಲ್ಲಿ ಅನುಸ್ವಾರವಾಗುತ್ತದೆ" (ಕ. ಭಾ. ಚ. ಪು. 237). ಎಂಬ ಹೇಳಿಕೆ ವ್ಯಾಕರಣ ಮಾರ್ಗಾನುಸಾರ ಒಪ್ಪತಕ್ಕುದಾದರೂ ಭಾಷಾ ಶಾಸ್ತ್ರೀಯ ದೃಷ್ಟಿಯಿಂದ ಸಮರ್ಥನೀಯವಲ್ಲ.

ಸಾಂಪ್ರದಾಯಿಕ ವೈಯಾಕರಣರ ಅಚ್ಚಗನ್ನಡ ದೃಷ್ಟಿಯನ್ನು ಅವಲೋಕಿಸಿದರೆ ಅಚ್ಚಗನ್ನಡದಲ್ಲಿ 47 ಸಂಧ್ಯಕ್ಷರಗಳು. ಆದರೆ ಭಾಷಾ ಶಾಸ್ತ್ರೀಯ ದೃಷ್ಟಿಯಿಂದ ವಿಚಾರಿಸಿ

ಡಾಗ ಐ,ಔ, ಮಹಾಪ್ರಾಣಗಳು ಮತ್ತು ಬಿಂದು ಹೀಗೆ ಒಟ್ಟು 13 ವರ್ಣಗಳನ್ನು ಕಳೆದು ಹಾಕಬೇಕಾಗುತ್ತದೆ. ಕನ್ನಡ ವೈಯಾಕರಣರು ಸಂಸ್ಕೃತದ ವರ್ಣಮಾಲೆಯ ಚೌಕಟ್ಟನ್ನು ಇಟ್ಟುಕೊಂಡಿದ್ದರೂ ಅನಗತ್ಯ ವರ್ಣಗಳನ್ನು ಕಳೆದುಹಾಕಿ ಸುದ್ದಗೆಗಳನ್ನು ನಿರ್ಣಯಿಸುವಲ್ಲಿ ಪ್ರಾಕೃತ ವೈಯಾಕರಣರನ್ನು ಹೆಚ್ಚಾಗಿ ಅನುಸರಿಸಿದ್ದು ಸತ್ಯ. ಹೀಗೆ ಮಾಡುವುದಕ್ಕೆ ಅವರ ಅಚ್ಚಗನ್ನಡದ ಕಲ್ಪನೆ ಪ್ರೇರಕವಾಗಿದೆ. ಆದರೆ ದೇಶ್ಯ ವರ್ಣಗಳನ್ನು ಗುರುತಿಸಿ ಕೊಡುವಲ್ಲಿ ಮಾತ್ರ ಅವರ ಸ್ವತಂತ್ರವಾದ ವ್ಯಾಕರಣ ಪ್ರಜ್ಞೆ ಮುಗಿಲು ಮುಟ್ಟಿದೆ.

ಅಡಿಟಿಪ್ಪಣಿಗಳು

1. EBP. p.153. "Sabda is an ambiguous term. It is used in the sense of sound (dhwani) as well as word.

2. Swarasidhanthachandrika. Introduction. p.4." Sabda (tone) is the origin of all sound ; of all varnas(sounds) dhwani (tone) is the root cause.

3. ನೋ. ಕ. ಭಾ. 14-1,2. ಪು. 103-104, "ಬರೆಪಂ ಬೊಕ್ಕುಚ್ಚರಿಸಲ್. ಬಾರದುವಕ್ಕರಂ-ಬರೆಯಲಿಕ್ಕೆ ಬಂದು ಉಚ್ಚರಿಸಲು ಬಾರದುವು ಅಕ್ಷರ. ಭಾಷಾವಿಜ್ಞಾನಿಗಳ ಧ್ವನಿಮಾದ ಕಲ್ಪನೆಗೆ ಈ ವ್ಯಾಖ್ಯೆ ಹೋಲುತ್ತದೆ." ಈ ಅಭಿಪ್ರಾಯ ಮುಂದಿನ ಸೂತ್ರದಲ್ಲಿ ಹೇಳುವ ಅಕ್ಷರದ ಶ್ರಾವಣ ಚಾಕ್ಷುಷ ಎಂಬ ದ್ವಿವಿಧ ರೂಪಗಳ ಪ್ರಸ್ತಾವದಿಂದ ದುರ್ಬಲ ವಾಗುತ್ತದೆ.

4. S.P. p. 68. "samamnaya means the alphabet or traditional enumeration of Phonetically independent letters generally begining with vowel 'a'.

5. ನೋ. A Descripitve catalogue of sanskrit Manuscripts in Curator's Office Library, Trivandrum. p. 1078. ಸಂಸ್ಕೃತದಲ್ಲಿ ಸ್ವರಗಳನ್ನೆಲ್ಲ ಒಟ್ಟಿಗೆ ಅವರ್ಗ ಎನ್ನುವುದಿದೆ. ಅಂತಃಸ್ಥ ಮತ್ತು ಊಷ್ಮಗಳನ್ನು ಅನುಕ್ರಮದಿಂದ ಯವರ್ಗ ಶವರ್ಗ ಎನ್ನುವುದಿದೆ.

6. ನೋ. ಋ. ಪ್ರಾ. 4-7. ತೈ. ಪ್ರಾ. 5-28 ವಾ. ಪ್ರಾ. 4-10. ಅ. ಪ್ರ. 2-35. ಕೊನೆಯದರಲ್ಲಿ ಲಕಾರವನ್ನು ಮಾತ್ರ ಹೇಳಲಾಗಿದೆ.

7. See Phonetics in Ancient India p. 80.
ವ್ಯಂಜನಂ ಕೇವಲಂ ಅವಸ್ಥಾತುಂ ನ ಶಕ್ನೋತಿ ಕಿಂತು ಸಾಪೇಕ್ಷಂ, ಸ್ವರಸ್ತು ನಿರಪೇಕ್ಷ: (ತ್ರಿಭಾಷ್ಯರತ್ನ).

8. ನೋ. ಕ. ಸಾ. ಪ. 5-3 ಪು. 206
ಕ. ಕೈ. ಪು. 317
ಕ. ಭಾ. 1-1 ಪು. 75-79
ಅದೇ. 2-1 ಪು. 70
ಅದೇ 9-4 ಪು. 8-17

9. ದುಘುಂವಿಚಿದಂ ಎಂಬುದು ದುಘುಮ್ವಿಚಿದಂ ಎಂಬುದರ ಬರವಣಿಗೆಯ ಇನ್ನೊಂದು ರೂಪ.

10. ಅಷ್ಟಾಧ್ಯಾಯಿ. 8-3-23 ; ಕಾತಂತ್ರ 2-4-44. ಸಂಸ್ಕೃತದಲ್ಲಿಯೂ ಪರಿಸರಕ್ಕೆ ಹೊಂದಿಕೊಂಡು ಪದಾಂತದ 'ಮ್' ಬಿಂದುವಾಗುತ್ತದೆ.

11. ಕಾತಂತ್ರ 2-4-44 ಸಂಸ್ಕೃತದಲ್ಲಿಯೂ ಪದಾಂತದ ನಕಾರಕ್ಕೆ ಕೆಲವು ಪರಿಸರಗಳಲ್ಲಿ ಸೊನ್ನೆ ಬರುತ್ತದೆ.

12. ಕಾತಂತ್ರ, ಸೂ. 2-4-45. ವರ್ಗೇ ವರ್ಗಾಂತಃ

# ಅಧ್ಯಾಯ 7

## ಸಂಧಿ

ಎರಡು ವರ್ಣಗಳನ್ನು ಅವಿರಾಮದಿಂದ ಕೂಡಿಸಿ ಉಚ್ಚರಿಸುವುದಕ್ಕೆ ಸಂಧಿ ಯೆಂದು ವ್ಯಾಕರಣದಲ್ಲಿ ಸಂಜ್ಞೆ.[1] ಪ್ರಾಚೀನ ಸಂಸ್ಕೃತ ವ್ಯಾಕರಣಗಳಲ್ಲಿ 'ಸಂಧಿ' ಮತ್ತು 'ಸಂಹಿತಾ' ಎಂಬೆರಡು ಪದಗಳು ಸಮಾನಾರ್ಥಕ ಸಂಜ್ಞೆಗಳಾಗಿದ್ದುವು. 'ಕೂಡಿಕೆ (Joint) ಎಂಬರ್ಥದಲ್ಲಿ ಋಗ್ವೇದವು 'ಸಂಧಿ'ಯೆಂಬ ಪದವನ್ನು ಬಳಸಿದೆ. ಸಮೀಪ ದಲ್ಲಿರಿಸುವಿಕೆ (Putting together) ಎಂಬ ಮೂಲಾರ್ಥವುಳ್ಳ ಸಂಹಿತಾ[2] ಎಂಬ ಪದವು ಸಂಧಿ ಎಂಬರ್ಥದಲ್ಲಿ ಮೊದಲ ಬಾರಿಗೆ ನಿರುಕ್ತದಲ್ಲಿ ಕಾಣಿಸಿಕೊಳ್ಳುತ್ತದೆ. ವ್ಯಾಕರಣದಲ್ಲಿ 'ಸಂಹಿತೆ'ಯು ಅರ್ಥವ್ಯಾಪ್ತಿಯ ಕುರಿತಾಗಿ ಈ ಅಭಿಪ್ರಾಯ ಗಮನಾರ್ಹ ವಾಗಿದೆ :

"From meaning words or sounds in the closest juxtaposition, 'Samhita' came to mean the modifications caused by such juxtaposition, a sense in which the word 'sandhi' is used" (T.T. S.G. p. 142).

ಎರಡು ವರ್ಣಗಳ ಉಚ್ಚಾರಗಳ ನಡುವೆ ಅರ್ಧಮಾತ್ರಾಕಾಲದ ಬಿಡುವಿಗೆ 'ಸಂಹಿತೆ'ಯೆಂದು ಕಾಶಿಕೆಯಲ್ಲಿ ಹೇಳಲಾಗಿದೆ (1-4-109). ಋಗ್ವೇದ ಪ್ರಾತಿ ಶಾಖ್ಯೆಯಲ್ಲಿ ಇದೇ ಅರ್ಥದಲ್ಲಿ ಸಂಹಿತೆ ಮತ್ತು ಸಂಧಿ-ಎರಡು ಪದಗಳೂ ಬಳಕೆ ಗೊಂಡಿವೆ. ನಿರುಕ್ತ ಮತ್ತು ಅಷ್ಟಾಧ್ಯಾಯಿಯಲ್ಲಿ ಸಂಹಿತೆ ಬಳಕೆಗೊಂಡಿದೆ. ಸಂಧಿ ಬಳಕೆಗೊಂಡಿಲ್ಲ. ಕಾಲಕ್ರಮೇಣ ಈಯೆರಡು ಪದಗಳ ಅರ್ಥದಲ್ಲಿ ಅಂತರವುಂಟಾಗಿದೆ. ಹೇಮಚಂದ್ರನು "ವಿರಾಮಾತ್ ಅನ್ಯತ್ರತು ಸಂಹಿತಾಯಾಂ ಸಂಧಿರೇವ" (1-3-52ರ ಬೃಹದ್ವೃತ್ತಿ) ಎಂದು ಹೇಳುವಲ್ಲಿ ಈ ಅಂತರ ಸ್ಪಷ್ಟವಾಗಿ ಗೋಚರಿಸುತ್ತದೆ. ಕಾತಂತ್ರ ಪರಿಶಿಷ್ಟದಲ್ಲಿ ಶ್ರೀಪತಿದತ್ತನು ಹೇಳುವಂತೆ ಪೂರ್ವೋತ್ತರ ವರ್ಣಗಳನ್ನು ಅವಿರಾಮದಿಂದ ಉಚ್ಚರಿಸುವುದು ಸಂಹಿತೆ ; ಹಾಗೆ ಉಚ್ಚರಿಸುವಲ್ಲಿ ಸ್ವರ ಇಲ್ಲವೆ ವ್ಯಂಜನ ನಡುವೆ ಸೇರಿಕೊಂಡರೆ ಅದು ಸಂಧಿ.[3] ಒಟ್ಟಿನಲ್ಲಿ ಸಂಧಿ ಮತ್ತು ಸಂಹಿತೆ ಎಂಬ ಪದಗಳು ಮೊದಲು ಸಮಾನಾರ್ಥಕಗಳಾದ ಪಾರಿಭಾಷಿಕ ಪದಗಳಾಗಿದ್ದು, ಕಾಲಕ್ರಮೇಣ ಸಂಹಿತೆಯ ಅರ್ಥ ವಿಸ್ತಾರವಾದರೂ 'ಸಂಧಿ' ಮಾತ್ರ ತನ್ನ ಮೊದಲ ಅರ್ಥದಲ್ಲೇ ಬಳಕೆಗೊಳ್ಳುತ್ತಾ ಉಳಿದು ಬಂದಿದೆಯೆಂದು ಹೇಳಬಹುದು.

ಕನ್ನಡ ವ್ಯಾಕರಣಗಳಲ್ಲಿ ಭೂಷಣ ದರ್ಪಣಗಳು ಮೇಲಿನ ಎರಡು ಪದಗಳನ್ನು ಏಕಾರ್ಥಕಗಳಾಗಿ ಬಳಸಿಕೊಂಡಿವೆ. ಸ್ಮೃತಿಯಲ್ಲಿ 'ಸಂಧಿ' ಪಾರಿಭಾಷಿಕ ಪದವಾಗಿ ಬಳಕೆಗೊಂಡಿಲ್ಲ. ಅದೇ ಅರ್ಥದಲ್ಲಿ 'ಸಂಹಿತೆ' ಮಾತ್ರ ಪ್ರಯುಕ್ತವಾಗಿದೆ. ಭೂಷಣ ದಲ್ಲಿ ಸಂಹಿತೆಯು ವಿವರಣೆಯಿದ್ದರೆ ದರ್ಪಣದಲ್ಲಿ ಸಂಧಿಯು ವಿವರಣೆಯಿದೆ. ದರ್ಪಣ ಸಂಹಿತೆಯನ್ನು ವಿವರಿಸುವುದಿಲ್ಲವಾದರೆ ಭೂಷಣ ಸಂಧಿಯನ್ನು ವಿವರಿಸುವುದಿಲ್ಲ. ಜೈನೇಂದ್ರ ವ್ಯಾಕರಣದಂತೆ 'ಸಂಧೌ' (4–3–68) ಎಂಬುದು ಭೂಷಣದಲ್ಲಿ ಸಂಧಿ ಪ್ರಕರಣದ ಅಧಿಕಾರ ಸೂತ್ರ (ಸೂತ್ರ 18). ಭೂಷಣದಲ್ಲಿ ಮಾತ್ರ ಬರುವ ಸಂಹಿತೆಯ ವಿವರಣೆಯ ಮೇಲೆ ಅಷ್ಟಾಧ್ಯಾಯಿಯ ಪ್ರಭಾವವಿದೆ.

ಭೂಷಣ : 'ಪರಸ್ಪರ ಸನ್ನಿಕರ್ಷಃ ಸಂಹಿತಾ' ಸೂ. 17

ಅಷ್ಟಾಧ್ಯಾಯಿ : 'ಪರಃ ಸನ್ನಿಕರ್ಷಃ ಸಂಹಿತಾ' ಸೂ. 1–4–109

ಸೂತ್ರದಲ್ಲಿ ಬರುವ 'ಪರಃ' ಎನ್ನುವುದಕ್ಕೆ ಅತಿಶಯವೆಂದರ್ಥ (ಕಾಶಿಕಾ : 1–4–109). ಅಷ್ಟಾಧ್ಯಾಯಿಯ ಸೂತ್ರದಲ್ಲಿ ಪರಃ ಒಮ್ಮೆ ಬಂದಿದ್ದರೆ ಭೂಷಣದ ಸೂತ್ರದಲ್ಲಿ ಅದರ ಪುನರಾವರ್ತನೆಯಾಗಿರುವುದು ಮಾತ್ರ ಅದರ ಪ್ರತ್ಯೇಕತೆಯಾಗಿದೆ. ಬಹುಶಃ ಸನ್ನಿಕರ್ಷದ ಅತಿಶಯತೆಯ ತೀವ್ರತೆಯನ್ನು ಒತ್ತಿ ಹೇಳುವ ಸಲುವಾಗಿ ಈ ಪುನರಾವರ್ತನೆಯಿದೆ.

ದರ್ಪಣದಲ್ಲಿ ಮಾತ್ರ ಕಂಡುಬರುವ ಸಂಧಿಯ ವಿವರಣೆ ಹೀಗಿದೆ.

'ಎರಡುಂ ಪಲವುಂ ವರ್ಣಂ
ಪರಸ್ಪರಂ ಕೂಡುವಂದಂ ಅದೆ ಸಂಧಿ ವಲಂ' ಸೂ. 59

ಈ ನಿರೂಪಣೆಯಲ್ಲಿ 'ವರ್ಣಂ ಪರಸ್ಪರಂ ಕೂಡುವಂದಂ' ಎಂಬುದು ಭೂಷಣದ 'ಪರಸ್ಪರ ಸನ್ನಿಕರ್ಷಃ' ಎಂಬುದನ್ನು ನೆನಪಿಗೆ ತರುತ್ತದೆ. ಮಾತ್ರವಲ್ಲ, ದುರ್ಗಸಿಂಹನ "ಸಂಧಾನಂ ಸಂಧಿಃ । ಉತ್ಕೃಷ್ಟೋ ವರ್ಣಾನಾಂ ಸನ್ನಿಕರ್ಷ ಉಚ್ಯತೇ । ತದ್ವಿಷಯಮಪಿ ಕಾರ್ಯಂ ಸಮಾನ ದೀರ್ಘಾದಿ ಸಂಧಿರಿತ್ಯಭಿಮತಂ, ಉಪಚಾರಾತ್" । (ಕಾತಂತ್ರ 1–2–18ರ ವೃತ್ತಿ) ಎಂಬ ವೃತ್ತಿಯ ಪ್ರಭಾವವೂ ಕೇಶಿರಾಜನ ಮೇಲಾಗಿರಬೇಕು. ಕೂಡುವ ವರ್ಣಗಳು ಸಂಖ್ಯೆಯಲ್ಲಿ ಎರಡು ಎಂಬುದು ಸರಿ ; ಆದರೆ ಪಲವುಂ ಎಂಬುದು ವಿಚಾರಕ್ಕೆಡೆ ಮಾಡುತ್ತದೆ. ಪರಂಪರಾಗತ ದೃಷ್ಟಿಯಿಂದ ನೋಡಿದಾಗಲೂ ಎರಡು ಸ್ವರಗಳು ಇಲ್ಲವೆ ಎರಡು ವ್ಯಂಜನಗಳು ಅಥವಾ ಒಂದು ಸ್ವರವಂತೊಂದು ವ್ಯಂಜನ, ಇವುಗಳನ್ನು ಅವಿರಾಮದಿಂದ ಕೂಡಿಸಿ ಉಚ್ಚರಿಸುವುದು ಮಾತ್ರ ಸಂಧಿಯೆನಿಸುತ್ತದೆ.[4] ಋಗ್ವೇದ ಪ್ರಾತಿಶಾಖ್ಯದ ಉವ್ವಟ ಭಾಷ್ಯದಲ್ಲಿ ಇದನ್ನು ಸ್ಪಷ್ಟೀಕರಿಸಲಾಗಿದೆ (ಋ. ಪ್ರಾ. 2-8). ಹಾಗಾಗಿ "ಪಲವುಂ ಎಂಬ ಮಾತು ಅನವಶ್ಯಕವೆಂದು (ಆಲೋಕ: ಪು.160) ತೋರುತ್ತದೆ".

ಸಾಮಾನ್ಯವಾಗಿ ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ 'ಸಂಧಿ' ಅಥವಾ 'ಸಂಹಿತೆ' ಯನ್ನು ನಿರೂಪಿಸುವ ಅಧ್ಯಾಯಗಳನ್ನು ಈ ಪದಗಳನ್ನೇ ಆಧರಿಸಿ ಹೆಸರಿಸುವುದು ರೂಢಿ :

| | | |
|---|---|---|
| ಕಾತಂತ್ರ | : | ಸಂಧಿ ಪ್ರಕರಣ (ಪ್ರಥಮಾಧ್ಯಾಯಂ) |
| ರೂಪಾವತಾರ | : | ಸಂಹಿತಾವತಾರ |
| ಪ್ರಕ್ರಿಯಾ ಸಂಗ್ರಹ | : | ಸಂಧಿ ಸಂಗ್ರಹ |
| ಕಚ್ಚಾಯನ ವ್ಯಾಕರಣ | : | ಸಂಧಿ ಕಪ್ಪ |
| ಷಡ್‌ಭಾಷಾ ಚಂದ್ರಿಕೆ | : | ಸಂಧಿ ಪ್ರಕರಣ |

ಕನ್ನಡ ವ್ಯಾಕರಣಗಳು ಈ ಪದ್ಧತಿಯನ್ನೇ ಅನುಸರಿಸಿವೆ :

| | | |
|---|---|---|
| ಸ್ಮೃತಿ | : | ಸಂಧಿ ಪ್ರಕರಣ |
| ಭೂಷಣ | : | ಸಂಧಿ ವಿಧಾನ |
| ದರ್ಪಣ | : | ಸಂಧಿ ಪ್ರಕರಣ |

ಸ್ಮೃತಿಯು ಪ್ರಕರಣಕ್ಕೆ ಸಂಧಿಯೆಂದು ಹೆಸರಿಟ್ಟರೂ ಆ ಪದವನ್ನು ಸಂಧಿ ನಿರೂಪಣೆಯಲ್ಲಿ ಪ್ರಯೋಗಿಸಿಲ್ಲವೆಂಬುದು ಗಮನಾರ್ಹ,

ಸಂಧಿಯು ನಾಲ್ಕು ಪ್ರಕಾರವೆಂದು ಉವ್ವಟನು ಹೇಳುತ್ತಾನೆ. (ಋ.ಪ್ರಾ. 2-8). ಅದು ಮುಖ್ಯವಾಗಿ ಸಂಧಿಗೊಳ್ಳುವ ವರ್ಣಗಳನ್ನು ತಳಹದಿಯಾಗಿಟ್ಟುಕೊಂಡು ಹೇಳಿದುದಾಗಿದೆ. ಕೆಳಗಿನ ನಾಲ್ಕು ಪರಿಸರಗಳನ್ನು ಸಂಧಿಯಲ್ಲಿ ಕಾಣಬಹುದು.

1. ಸ್ವರದ ಮುಂದೆ ಸ್ವರ
2. ವ್ಯಂಜನದ ಮುಂದೆ ವ್ಯಂಜನ
3. ಸ್ವರದ ಮುಂದೆ ವ್ಯಂಜನ
4. ವ್ಯಂಜನದ ಮುಂದೆ ಸ್ವರ

(ಬಿಂದು ವಿಸರ್ಗಗಳಲ್ಲಿ ಸ್ವರತ್ವವೂ ಇರುವುದರಿಂದ ಅವುಗಳನ್ನು ಈ ವಿಭಜನೆಯಲ್ಲಿ ಅಳವಡಿಸಿಕೊಳ್ಳಬಹುದು.) ಸ್ವರದ ಮುಂದೆ ಸ್ವರ ಬಂದು ನಡೆಯುವ ಸಂಧಿಯನ್ನು ಪ್ರತ್ಯಾಹಾರ ಪದ್ಧತಿಯ ವ್ಯಾಕರಣಗಳು ಅಚ್ ಸಂಧಿಯೆಂದೂ ಐಂದ್ರ ಪದ್ಧತಿಯ ವ್ಯಾಕರಣಗಳು ಸ್ವರಸಂಧಿಯೆಂದೂ ಹೇಳುವುದು ಕ್ರಮ. ಅಂತೆಯೇ ಉಳಿದ ಮೂರನ್ನು ಮೊದಲ ಪದ್ಧತಿಯ ಗ್ರಂಥಗಳು ಹಲ್ ಸಂಧಿಯೆಂದೂ ಮತ್ತಿನವು ವ್ಯಂಜನ ಸಂಧಿಯೆಂದೂ ಹೇಳುತ್ತವೆ. ವಿಸರ್ಗದ ಮುಂದೆ ಇತರ ವರ್ಣಗಳು ಬಂದಾಗ ನಡೆಯುವ ಸಂಧಿಯನ್ನು ವಿಸರ್ಜನೀಯ ಅಥವಾ ವಿಸರ್ಗ ಸಂಧಿಯೆಂದೂ ಕೆಲವು ವ್ಯಾಕರಣಗಳು ಹೇಳುತ್ತವೆ.

ಹೊಸಗನ್ನಡ ವೈಯಾಕರಣರು ಮೇಲಿನವುಗಳಲ್ಲಿ 1ಕ್ಕೆ ಸ್ವರಸಂಧಿಯೆಂದೂ 2 ಮತ್ತು 3ಕ್ಕೆ ವ್ಯಂಜನ ಸಂಧಿಯೆಂದೂ ಹೇಳುತ್ತಾರೆ. ಹಳಗನ್ನಡ ವೈಯಾಕರಣರು ಹಾಗೆ ನೇರವಾಗಿ ಹೆಸರೆತ್ತಿ ಹೇಳುವುದಿಲ್ಲ. ಅವರು 4ನೆಯದನ್ನು ಸಂಹಿತೆಯೆಂದು ಮಾತ್ರ ಹೇಳುತ್ತಾರೆ. ಸಂಧಿ ಕಾರ್ಯ ನಡೆಯುವುದಿಲ್ಲವಾದರೆ ಎರಡನೆಯದೂ ಈ ವರ್ಗಕ್ಕೆ ಸೇರುತ್ತದೆ. ಈ ವಿಚಾರದಲ್ಲಿ ಭೂಷಣವು ಮೌನ ಧರಿಸಿದೆ.

ಸ್ಮೃತಿ ; "ಪರವರ್ಣದೊಳೆಳಸಿರ್ಕುಂ
ಸ್ವರರಹಿತ ವ್ಯಂಜನಂಗಳಾ ಸಂಹಿತೆಯೊಳ್" ಸೂ. 7

ದರ್ಪಣ : "ಸ್ವರರಹಿತ ವ್ಯಂಜನನಮವು
ಪರವರ್ಣವನೆಯ್ದುತಿರ್ಪುವಾ ಸಂಹಿತೆಯೊಳ್" ಸೂ. 59

ಈ ನಿರೂಪಣೆಯಲ್ಲಿ ದರ್ಪಣ ಪೂರ್ಣವಾಗಿ ಸ್ಮೃತಿಗೆ ಋಣಿಯಾಗಿದೆ. ಸ್ಮೃತಿಯ ಹೇಳಿಕೆಯ ಮೇಲೆ ಕಾತಂತ್ರದ "ವ್ಯಂಜನಮಸ್ವರಂ ಪರಂ ವರ್ಣಂ ನಯೇತ್" (ಸೂ. 1-1-21) ಎಂಬ ಸೂತ್ರದ ಪ್ರಭಾವ ಸ್ಪಷ್ಟವಿದೆ. ದರ್ಪಣದಲ್ಲಿ ಉದಾಹರಣೆಯಾಗಿ ಜಾಣ್ + ಉಂಟು = ಜಾಣುಂಟು ; ಕುರುಳ್ + ಕೊಂಕಾಯ್ತು – ಕುರುಳ್ಕೊಂಕಾಯ್ತು ಎಂಬವನ್ನು ಕೊಡಲಾಗಿದೆ. ಇವನ್ನು ಪರಿಶೀಲಿಸಿ ಮೇಲಿನ ಸೂತ್ರವಿಚಾರ ಭಾಷೆಯ ಚಾಕ್ಷುಷ ರೂಪಗಳನ್ನು ಕುರಿತದ್ದು (ನೋ. ಆಲೋಕ. ಪು.160) ಎಂಬುದಾಗಿ ಬಂದಿರುವ ಅಭಿಪ್ರಾಯ ಸಮರ್ಪಕವಲ್ಲ. ಮೂಲಭೂತವಾಗಿ ಇದು ಉಚ್ಚಾರಕ್ಕೆ ಸಂಬಂಧಿಸಿದುದಾಗಿದೆ. ಬಿಡಿಸಿ ಹೇಳುವಲ್ಲಿ ಕಂಡುಬರುವ ವಿರಾಮ ಕೂಡಿಸಿ ಉಚ್ಚರಿಸುವಲ್ಲಿ ಕಾಣುವುದಿಲ್ಲ. ಅವಿರಾಮದಿಂದ ಪೂರ್ವೋತ್ತರ ವರ್ಣಗಳ ಉಚ್ಚಾರಕ್ಕೆ ಸಂಧಿಯೆಂದು ಹೆಸರಷ್ಟೆ.

## ಸಂಧಿ ಪ್ರಭೇದಗಳು :

ಪದಮಧ್ಯ ಮತ್ತು ಪದಾಂತ್ಯವೆಂದು ಸಂಧಿಗಳು ಇರ್ತೆರನಾಗಿವೆಯೆಂದು ದರ್ಪಣ ಹೇಳುತ್ತದೆ (ಸೂ. 60). ಪದಗಳೆರಡರ ನಡುವಿನಲ್ಲಿ ನಡೆಯುವ ಸಂಧಿಗೆ ಪದಾಂತ್ಯ ಸಂಧಿಯೆಂದೂ ಪ್ರಕೃತಿ ಪ್ರತ್ಯಯಂಗಳು ಕೂಡುವಲ್ಲಿ ನಡೆಯುವ ಸಂಧಿಗೆ–ಅದು ಪದದ ಮಧ್ಯದಲ್ಲಾಗುವ ಕಾರಣ-ಪದಮಧ್ಯ ಸಂಧಿಯೆಂದೂ ದರ್ಪಣಕಾರನ ವಿವರಣೆ. ಬಹುಶಃ ಈ ವಿವರಣೆ ಕೇಶಿರಾಜನ ಸ್ವೋಪಜ್ಞಶೀಲತೆಯಿಂದ ಹುಟ್ಟಿಕೊಂಡಿರಬೇಕು. ಸ್ಮೃತಿ ಭೂಷಣಗಳಲ್ಲಿ ಇಂತಹ ನಿರೂಪಣೆಯಿಲ್ಲ. ಸಂಸ್ಕೃತ ವ್ಯಾಕರಣಗಳೂ ಈ ತೆರನಾಗಿ ಹೇಳುವುದಿಲ್ಲ. ಋಗ್ವೇದ ಪ್ರಾತಿಶಾಖ್ಯ (2-2) ಮತ್ತು ವಾಜಸನೇಯಿ ಪ್ರಾತಿಶಾಖ್ಯದಲ್ಲಿ (3-3) ಪದಾಂತವು ಪದಾದಿಯೊಂದಿಗೆ ಸೇರುವಾಗ ಸಂಧಿಯಾಗುವುದಾಗಿ ಹೇಳಲಾಗಿದೆ. ಪದಮಧ್ಯ ಸಂಧಿಯನ್ನು ಸಂಸ್ಕೃತ ವೈಯಾಕರಣರು ಪ್ರತ್ಯೇಕವಾಗಿ ಪರಿಗಣಿಸುತ್ತಾರೆ.

ಯಾಜ್ಞವಲ್ಕ್ಯಶಿಕ್ಷಾದಲ್ಲಿ ಹೇಳಿರುವಂತೆ ಸಂಧಿಗಳು ನಾಲ್ಕು ವಿಧ. ಲೋಪ ಆಗಮ, ವಿಕಾರ ಮತ್ತು ಪ್ರಕೃತಿ ಭಾವ. ಇವೆಲ್ಲ ಪದಾಂತ–ಪದಾದಿಗಳು ಕೂಡಿ ನಡೆ

ಯುವ ಸಂಧಿಗಳು. ಪ್ರಕೃತಿಗೆ ಪ್ರತ್ಯಯಗಳು ಸೇರುವಲ್ಲಿ ನಡೆಯುವ ಸಂಧಿಗೆ 'ಸ್ವಾದಿ ಸಂಧಿ'ಯೆಂದು ಹೆಸರು.[6]

ಸ್ಮೃತಿ ಮೊದಲ್ಗೊಂಡು ಕನ್ನಡ ವ್ಯಾಕರಣಗಳಲ್ಲಿ ಸ್ವಾದಿ ಸಂಧಿಯನ್ನು ಪರಿಗಣಿಸಿದಂತಿಲ್ಲ. ಸಂಧಿಕಾರ್ಯಕ್ಕೆ ಕೊಡುವ ಲಕ್ಷ್ಯಗಳಿಂದ ಇದು ಖಚಿತವಾಗುತ್ತದೆ. ದರ್ಪಣಕಾರನು ಅದನ್ನೇ (ಪದಮಧ್ಯ ಸಂಧಿ) ಎತ್ತಿಹೇಳುವುದರೊಂದಿಗೆ ಸಂಸ್ಕೃತ ವ್ಯಾಕರಣಕ್ಕಿಂತ ಭಿನ್ನವಾದ ವಿಚಾರವನ್ನು ಸ್ಪಷ್ಟೀಕರಿಸಿದ್ದಾನೆಂದು ಹೇಳಬಹುದು.

'ಸಂಧಿ' ಎಂಬುದರೊಂದಿಗೆ 'ಸಂಧಿಕಾರ್ಯ' ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಸಂಧಿಯಾಗುವಲ್ಲಿ ನಡೆಯುವ ಲೋಪಾಗಮಾದಿ ಬದಲಾವಣೆಗಳಿಗೆ —ಕೆಲವೊಮ್ಮೆ ಬದಲಾವಣೆಯಿಲ್ಲದಿರಲೂಬಹುದು, ಪ್ರಕೃತಿಭಾವದಲ್ಲಿರುವಂತೆ—ಸಂಧಿಕಾರ್ಯವೆಂದು ಹೆಸರು. ಸಾಮಾನ್ಯವಾಗಿ ಸಂಧಿಪ್ರಕರಣಗಳಲ್ಲಿ ಈ ಸಂಧಿಕಾರ್ಯಗಳನ್ನೇ ವಿವರಿಸುತ್ತಾರೆ. ಮೇಲೆ ಉಲ್ಲೇಖಿಸಿದ ಚತುರ್ವಿಧವಾದ ಸಂಧಿಗಳ ವಿಂಗಡಣೆ ಸಂಧಿಕಾರ್ಯವನ್ನು ತಳಹದಿಯಾಗಿಟ್ಟುಕೊಂಡು ಹೇಳಿದುದಾಗಿದೆ.

## ಕನ್ನಡ ಸಂಧಿಗಳು

ಲೋಪಾಗಮಾದೇಶಾದಿಗಳನ್ನು ತಳಹದಿಯಾಗಿಟ್ಟುಕೊಂಡು ಕನ್ನಡ ವ್ಯಾಕರಣಗಳು ಸಂಧಿಗಳನ್ನು ಹೇಳುತ್ತವೆ. ದರ್ಪಣವು ಸಂಧಿದೋಷ, ಶ್ರುತಿಕಷ್ಟ ಸಂಧಿ, ಅಸಹ್ಯೋಕ್ತಿ ಸಂಧಿಗಳನ್ನು ಹೇಳುವಾಗ ಸಂಧಿಕಾರ್ಯದೆಡೆಗೆ ಗಮನವೀಯದೆ ಕೇವಲ 'ಕೂಡಿಸಿ ಉಚ್ಚರಿಸುವುದು ಸಂಧಿ' ಎಂಬ ನೆಲೆಯಲ್ಲಿ ನಿರೂಪಿಸುತ್ತದೆ. ಕನ್ನಡ ವ್ಯಾಕರಣಗಳಲ್ಲಿ ಸಂಧಿಗಳ ಅನುಕ್ರಮ ನಿರೂಪಣೆ ಹೀಗಿದೆ :

'ಲೋಪ–ಆಗಮ–ಪ್ರಕೃತಿಭಾವ–ಆದೇಶ–ದ್ವಿತ್ವ'

ದರ್ಪಣದಲ್ಲಿ ಪ್ರಕೃತಿಭಾವ ಮತ್ತು ಆದೇಶ ಸಂಧಿಯ ನಡುವೆ ಸಂಧಿದೋಷ, ಸಂಧಿವಿಕಲ್ಪ, ಅಸಹ್ಯೋಕ್ತಿ ಸಂಧಿ, ಶ್ರುತಿಕಷ್ಟ ಸಂಧಿಗಳನ್ನು ನಿರೂಪಿಸಲಾಗಿದೆ. ಸ್ಮೃತಿ ಭೂಷಣ ದರ್ಪಣಗಳ ಸಂಧಿ ಪ್ರಕರಣಗಳಲ್ಲಿ ಮೇಲಿನ ಕ್ರಮದಲ್ಲಿ ಸಂಧಿಗಳು ನಿರೂಪಿತವಾಗಿದ್ದರೂ ಅವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೆಸರೆತ್ತಿ (ಲೋಪಸಂಧಿ, ಆಗಮ ಸಂಧಿ ಇತ್ಯಾದಿಯಾಗಿ) ಹೇಳಿಲ್ಲವೆಂಬುದನ್ನು ಗಮನಿಸಬೇಕು.

ಸಂಸ್ಕೃತ ಮತ್ತು ಕನ್ನಡದ ಸಂಧಿಕಾರ್ಯಗಳಲ್ಲಿ ಸಾಮ್ಯಕ್ಕಿಂತ ವೈಷಮ್ಯವೇ ಹೆಚ್ಚು. ಸಂಸ್ಕೃತ ವ್ಯಾಕರಣಗಳ ಕೆಲವು ಪಾರಿಭಾಷಿಕ ಪದಗಳ ಮೂಲಕ ಕನ್ನಡ ಸಂಧಿಗಳನ್ನು ನಿರೂಪಿಸಲಾಗಿದೆ. ಹಾಗಾಗಿ ಸಾಮ್ಯವಿರುವುದು ಪಾರಿಭಾಷಿಕ ಪದಗಳಲ್ಲಿ ಮಾತ್ರವಾಗಿದೆ. ಸಂಸ್ಕೃತ ವ್ಯಾಕರಣಗಳಲ್ಲಿ ಸಂಧಿಕಾರ್ಯಗಳ ನಿರೂಪಣೆಯಲ್ಲಿ ಬಳಕೆಗೊಳ್ಳದ ಪಾರಿಭಾಷಿಕ ಪದಗಳೂ ಕನ್ನಡ ವ್ಯಾಕರಣಗಳಲ್ಲಿ ಬಳಕೆಗೊಂಡುದನ್ನು ಆಯಾ ಸಂದರ್ಭಗಳಲ್ಲಿ ಪರಿಗಣಿಸಬೇಕಾಗುತ್ತದೆ.

## ಸ್ವರ ಸಂಧಿಗಳು

ಲೋಪ ಮತ್ತು ಆಗಮ ಕನ್ನಡದ ಸ್ವರಸಂಧಿಗಳು.

### ಲೋಪ

ಲೋಪಸಂಧಿಯ ವಿವರಣೆ ಸ್ಮೃತಿ ಭೂಷಣ ದರ್ಪಣಗಳಲ್ಲಿ ಹೆಚ್ಚು ಕಡಿಮೆ ಸಮಾನವಾಗಿದೆ. ದರ್ಪಣದಲ್ಲಿ ಮಾತ್ರ ಹೆಚ್ಚು ವಿಸ್ತಾರವಾಗಿದೆ. ಪದಾಂತಸ್ವರಕ್ಕೆ ಸ್ವರ ಪರವಾದಾಗ ಪೂರ್ವಸ್ವರ ಲೋಪವಾಗುವುದಾಗಿಯೂ ಪ್ರಕೃತಿಯ ಕೊನೆಯ ಉಕಾರ ಎಕಾರಗಳಿಗೆ ಸ್ವರ ಪರವಾದಾಗ ಅವಿನಷ್ಟನಾಮಭಾಗ ಸ್ಥಿತಿಯಲ್ಲಿ ಮಾತ್ರವೆ ಪೂರ್ವಸ್ವರ ಲೋಪಹೊಂದುವುದಾಗಿಯೂ ಸ್ಮೃತಿ ಹೇಳುತ್ತದೆ (ಸೂ. 8) ಆಕಾರಾಂತ ಮತ್ತು ಇಕಾರಾಂತ ಪ್ರಕೃತಿಗಳಿಗೆ ಸ್ವರ ಪರವಾಗಲು ಲೋಪವಾಗುವುದೇ ಯಾ ಇಲ್ಲವೆ ಎಂಬುದರ ಬಗ್ಗೆ ಸ್ಮೃತಿ ಚಕಾರವೆತ್ತಿಲ್ಲ. ವಿಭಕ್ತಿಯ ಕೊನೆಯ ಯಾವುದೇ ಸ್ವರಕ್ಕೆ ಲೋಪವಿದೆ, ಪ್ರಕೃತಿಯ ಕೊನೆಯ ಇಕಾರ ಉಕಾರಗಳನ್ನು ಲೋಪಿಸುವಲ್ಲಿ ನಾಮಹಾನಿ ಬಾರದಂತೆ ನೋಡಿಕೊಳ್ಳಬೇಕು ಎಂಬುದು ಸ್ಮೃತಿಯ ಸಾರಾಂಶ.

ಭೂಷಣದಲ್ಲಿ ಸ್ಮೃತಿಯ ವಿಚಾರಗಳನ್ನು ಯಥಾವತ್ತಾಗಿ ಸ್ವೀಕರಿಸಲಾಗಿದೆ (ಸೂ. 19, 20, 21) ಮೊದಲ ಸೂತ್ರದಲ್ಲಿ ಪ್ರಕೃತಿ ಯಾ ವಿಭಕ್ತಿಯ ಸ್ವರವೆಂದು ಪ್ರತ್ಯೇಕಿಸದಿರುವುದು ಭೂಷಣದ ಪ್ರತ್ಯೇಕತೆ. ಆದರೆ ಮುಂದಿನ ಸೂತ್ರದ ವೃತ್ತಿಯಲ್ಲಿ ''ಪ್ರಕೃತೇಃ ಸಂಬಂಧಿನಃ ಸ್ವರಸ್ಯ ಲೋಪೋ ಯದಿಸ್ಯಾತ್ ತದುಕಾರೈಕಾರಯೋರೇವ। ನಾನ್ಯಸ್ಯ'' (ಸೂ. 20ರ ವೃತ್ತಿ) ಎಂದು ಹೇಳಿರುವುದು ಗಲಿಬಿಲಿಯನ್ನುಂಟು ಮಾಡುತ್ತದೆ. ಲೋಪಸಂಧಿಯಲ್ಲಿ ಪ್ರಕೃತಿಯ ಕೊನೆಯ ಅಕಾರ ಇಕಾರಗಳು ಲೋಪಹೊಂದುವ ಪ್ರಸಕ್ತಿಯೇ ಇಲ್ಲವೆಂದು ಇದರ ಅರ್ಥವಾಗುತ್ತದೆ.[7] ಮತ್ತಿನ ಸೂತ್ರದಿಂದ 'ನಾಮಭಾಗ ಪ್ರಧ್ವಂಸ'ದ ವಿಚಾರ ಉಕಾರಾಂತ ಎಕಾರಾಂತ ಪ್ರಕೃತಿಗಳಿಗಷ್ಟೇ ಸೀಮಿತ ಎಂಬುದೂ ಖಚಿತವಾಗುತ್ತದೆ.

ದರ್ಪಣದ ಲೋಪ ಸಂಧಿಯ ವಿವರಣೆಯನ್ನು ಸಮೀಕ್ಷಿಸಿದಾಗ ಕೆಳಗಿನಂತೆ ಅರ್ಥವಾಗುತ್ತದೆ.

| ಸ್ವರಂ | ಇದಿರೊಳ್ | ಇರೆ | ಸಂಸ್ಕೃತ | ವಿಭಕ್ತಿ | ಸ್ವರಕಂ | ಲೋಪಂ |
|---|---|---|---|---|---|---|
| ,, | ,, | ,, | ಕರ್ನಾಟಕ | ,, | ,, | ,, |
| ,, | ,, | ,, | ಸಂಸ್ಕೃತ | ಪ್ರಕೃತಿ | ,, | ,, ನಾಮರೂಢಿಯಳಿಯದ ಪಕ್ಷಂ. |
| ,, | ,, | ,, | ಕರ್ನಾಟಕ | ,, | ,, | ,, |

ಪೂರ್ವಸ್ವರವನ್ನು ಪ್ರಕೃತಿಸ್ವರ ಮತ್ತು ವಿಭಕ್ತಿ ಸ್ವರವೆಂದು ಪ್ರತ್ಯೇಕಿಸಿ, ಲೋಪ ಸಾಧ್ಯತೆ ಮತ್ತು ನಾಮರೂಢಿಯಂಟಿಯಂವ ವಿಚಾರವನ್ನು ಎಲ್ಲಾ ಪ್ರಕೃತಿ ಸ್ವರಗಳಿಗೂ ವ್ಯಾಪಕಗೊಳಿಸಿ ಹೇಳಿದ್ದು ದರ್ಪಣದ ವೈಶಿಷ್ಟ್ಯವಾಗಿದೆ. ವಿಭಕ್ತಿ ಸ್ವರವನ್ನು ಸಂಸ್ಕೃತ ಮತ್ತು ಕರ್ಣಾಟಕ ಎಂದು ವಿಭಾಗಿಸಿರುವಲ್ಲಿ ಏನೂ ಹುರುಳಿಲ್ಲ, ಏಕೆಂದರೆ ಪ್ರಕೃತಿ ಸಂಸ್ಕೃತವಿರಲಿ ಕನ್ನಡವಿರಲಿ ಬರುವ ವಿಭಕ್ತಿ ಕನ್ನಡದ್ದಷ್ಟೇ! ಆದರೆ ಪ್ರಕೃತಿ ಸ್ವರವನ್ನು ಕನ್ನಡ, ಸಂಸ್ಕೃತವೆಂದು ವಿಂಗಡಿಸಿದ್ದು ಅರ್ಥವತ್ತಾಗಿದೆ.

ಸ್ಮೃತಿಯು ಹೇಳುವ ನಾಮಭಾಗದ ನಾಶ, ಭೂಷಣದ ನಾಮಭಾಗ ಪ್ರಧ್ವಂಸ ಮತ್ತು ದರ್ಪಣದ ನಾಮರೂಢಿಯಂಟಿವು–ಇವೆಲ್ಲ ಒಂದೇ ಅರ್ಥವನ್ನು ಕೊಡುತ್ತವೆ. ಶಬ್ದರೂಪ (ಊಹಿಸಿಕೊಳ್ಳಲಾರದ ಹಾಗೆ) ಕೆಟ್ಟು ಹೋಗುವುದು ಎಂಬುದಿಲ್ಲಿನ ಅರ್ಥ. ಪೂರ್ವಸ್ವರ ಲೋಪದಿಂದ ಶಬ್ದರೂಪಕ್ಕೆ ಹಾನಿ ಬಂದು ತನ್ಮೂಲಕ ಉದ್ದಿಷ್ಟ ಅರ್ಥಕ್ಕೆ ಹಾನಿ ಬರಬಾರದೆಂಬುದು ಈ ಹೇಳಿಕೆಯ ಉದ್ದೇಶವಾಗಿದೆ. ಕನ್ನಡ ವೈಯಾಕರಣರು ಕಂಡುಕೊಂಡ ಕನ್ನಡ ಭಾಷೆಯ ಮೂಲಭೂತ ತತ್ವಗಳಲ್ಲಿ ಇದೂ ಒಂದು.

ಸಂಸ್ಕೃತ ವ್ಯಾಕರಣಗಳಲ್ಲಿ 'ಲೋಪಸಂಧಿ'ಯೆಂಬ ಸಂಧಿಯೊಂದು ಉಕ್ತವಾಗಿಲ್ಲ. ಸ್ವರದ ಮುಂದೆ ಸ್ವರ ಬಂದಾಗ ಕನ್ನಡದಲ್ಲಿ ಪೂರ್ವಸ್ವರ ಲೋಪಗೊಳ್ಳುವಂತೆ ಸಂಸ್ಕೃತದಲ್ಲಿ ಲೋಪಗೊಳ್ಳುವುದೂ ಇಲ್ಲ. ಇತರ ಸಂದರ್ಭಗಳಲ್ಲಿ ನಡೆಯುವ ಲೋಪವನ್ನು ತಿಳಿಸುವ ಪಾರಿಭಾಷಿಕ ಪದವಾಗಿ 'ಲೋಪ'ವು ನಿರುಕ್ತ ಮೊದಲ್ಗೊಂಡು ಪ್ರಾತಿಶಾಖ್ಯ ಹಾಗೂ ಸಂಸ್ಕೃತದ ಬೇರೆ ಬೇರೆ ವ್ಯಾಕರಣ ಸಂಪ್ರದಾಯಗಳಲ್ಲಿ ಕಾಣಿಸಿಕೊಂಡಿದೆ. ಪ್ರಾತಿಶಾಖ್ಯೆಯಲ್ಲಿ ಕೆಲವು ವ್ಯಂಜನಗಳು ಹಾಗೂ ಸ್ವರಗಳು ಸಂಹಿತೆಯಲ್ಲಿ ಲೋಪ ಹೊಂದುವ ವಿಚಾರವಿದೆ (ತೈ. ಪ್ರಾ. 5-11-19). ಕಾತಂತ್ರದಲ್ಲಿ ಸವರ್ಣದೀರ್ಘವನ್ನು ವಿವರಿಸುವಾಗ ಮುಂದಿನ ಸ್ವರವು ಲೋಪ ಹೊಂದುವುದಾಗಿ ಹೇಳಲಾಗಿದೆ (ಸೂ. 1-2-1). ಆದರೂ 'ಲೋಪಸಂಧಿ' ಎಂಬ ಹೆಸರು ಅಲ್ಲಿ ಪ್ರಯುಕ್ತವಾಗಿಲ್ಲ.

ಪ್ರಾಕೃತ ವ್ಯಾಕರಣಗಳು ಸ್ವರದ ಮುಂದೆ ಸ್ವರ ಬಂದಾಗ ಕೆಲವೊಮ್ಮೆ ಪೂರ್ವಸ್ವರ ಲೋಪ ಹೊಂದುವುದಾಗಿ ಹೇಳುತ್ತವೆ (ಪ್ರಾ. ಪ್ರ. 4–1). ಉವಿಂದೋ (ಉವ್‌ಇಂದೋ), ದೀವುಜ್ಜಲೋ (ದೀವಉಜ್ಜಲೋ), ರಾಉಲು (ರಾಅಉಲು) ಇತ್ಯಾದಿಗಳು ಇದಕ್ಕೆ ಲಕ್ಷ್ಯಗಳು. ಅಲ್ಲಿಯೂ 'ಲೋಪ ಸಂಧಿ'ಯೆಂದು ಪ್ರತ್ಯೇಕವಾಗಿ ವಿವರಿಸಿಲ್ಲ.

ಕಚ್ಚಾಯನ ವ್ಯಾಕರಣದಲ್ಲಿ ಸ್ವರಕ್ಕೆ ಸ್ವರ ಪರವಾಗಲು ಪೂರ್ವಸ್ವರ ಲೋಪ ಹೊಂದುವ ವಿಚಾರ ನಿರೂಪಿತವಾಗಿದೆ :

"ಸರಾ ಸರೇ ಲೋಪಂ" ಸೂ. 1-2-1

ಭೂಷಣದ "ಸ್ವರೇ ಸ್ವರಸ್ಯ ಲೋಪಃ" (ಸೂ. 19) ಎಂಬ ಸೂತ್ರದ ಮೇಲೆ ಮೇಲಿನ ಸೂತ್ರದ ಪ್ರಭಾವವಿದ್ದಂತಿದೆ. ಸ್ವರದ ಮುಂದೆ ಸ್ವರ ಬಂದಾಗ ಕೆಲವೊಮ್ಮೆ ಪರಸ್ಪರ ಲೋಪವಾಗುವುದಾಗಲಿ, ಪರಸ್ಪರ ಲೋಪಹೊಂದಿದ ಬಳಿಕ ಪೂರ್ವಸ್ವರ ದೀರ್ಘವಾಗು

ವುದಾಗಲೀ ಪಾಲೀ ವ್ಯಾಕರಣಗಳಲ್ಲಿ ನಿರೂಪಿತವಾಗಿದೆ. ಅಪಭ್ರಂಶದಲ್ಲಿ ಮುಕ್ಕಾಲು ಮೂರುಪಾಲು ಪೂರ್ವಸ್ವರ ಲೋಪಹೊಂದುವ ಸಂಧಿ ಗೋಚರಿಸುತ್ತದೆ. ಇದು ಅಪಭ್ರಂಶ ಸಂಧಿಪ್ರಕ್ರಿಯೆಯ ಮೇಲೆ ಕನ್ನಡದ ಪ್ರಭಾವವೆಂದು ತಿಳಿಯಲಾಗಿದೆ (ಶ್ರೀಕಂಠ ತೀರ್ಥ : ಪು. 601). ಕೇವಲ ಸಂಧಿ ಪ್ರಕ್ರಿಯೆಯನ್ನು ವಿವರಿಸುವ ಪಾರಿಭಾಷಿಕ ಪದವಾಗಿ ಲೋಪವು ಕನ್ನಡ ವ್ಯಾಕರಣಗಳಲ್ಲಿ ಪ್ರಯುಕ್ತವಾಗಿಲ್ಲವೆಂಬುದು ಗಮನಾರ್ಹ.

**ಆಗಮ**

ಆಗಮ ಸಂಧಿಯಲ್ಲಿ ಯಕಾರಾಗಮ ಮತ್ತು ವಕಾರಾಗಮ ಎಂಬೆರಡು ಭೇದಗಳಿವೆ.

**ಯಕಾರಾಗಮ**

ಸ್ಮೃತಿ, ಭೂಷಣ, ದರ್ಪಣಗಳಲ್ಲಿ ನಿರೂಪಿತವಾದ ಯಕಾರಾಗಮದ ಲಕ್ಷಣ ಹೆಚ್ಚು ಕಡಿಮೆ ಏಕರೂಪವಾಗಿದೆ. ಅ, ಇ, ಈ, ಎ ಎಂಬ ಸ್ವರಗಳಿಗೆ ಸ್ವರಪರವಾಗಲು ನಡುವೆ ಯತ್ವ ಬರುವುದಾಗಿ ಮೂರು ಗ್ರಂಥಗಳು ಒಮ್ಮತದಿಂದ ಹೇಳುತ್ತವೆ. (ಸ್ಮೃತಿ ಸೂ. 9 ; ಭೂಷಣ ಸೂ. 22, ದರ್ಪಣ ಸೂ. 63) 'ಆತನಯೆ'–ಇಂತಹ ಸಂಧಿಯನ್ನು ಸ್ಮೃತಿ ಗುರುತಿಸಿದೆ (ಪದ್ಯ 43). ಆಕಾರಾಂತ ಶಬ್ದದ ಮುಂದೆ ಅವಧಾರಣೆಯ ಎಕಾರ ಬಂದಾಗ ಯತ್ವ ಬರುವುದಾಗಿ ಭೂಷಣ ಹೇಳುತ್ತದೆ (ಸೂ. 23). ಷಷ್ಠೀ ವಿಭಕ್ತಿಯ ಅಕಾರದ ಮುಂದೆ ಎ ವರ್ಣ ಬರಲು ಯತ್ವ ಬರುವುದಾಗಿ ದರ್ಪಣ ಹೇಳುತ್ತದೆ (ಸೂ. 63). ಸ್ಮೃತಿ ಗುರುತಿಸಿದ್ದನ್ನು ಭೂಷಣ ಸ್ವಲ್ಪ ವಿಸ್ತರಿಸಿದರೆ ದರ್ಪಣ ಅದನ್ನು ಮತ್ತಷ್ಟು ಸ್ಪಷ್ಟೀಕರಿಸಿದೆ. ಮೂರೂ ಗ್ರಂಥಗಳು ಕೊಡುವ ಲಕ್ಷ್ಯಗಳಲ್ಲಿ 'ಆತನಯೆ' ಎಂಬ ಪ್ರಯೋಗ ಸಾಮಾನ್ಯವಾಗಿರುವುದು ಗಮನಾರ್ಹ. ಓಕಾರ ಐಕಾರಗಳಿಗೆ ಸ್ವರ ಪರವಾಗಲು, ಸಂಸ್ಕೃತ ಹಾಗೂ ಕನ್ನಡದ ಅದಂತ ಪ್ರಕೃತಿಗಳಿಗೆ ಇಸು ಪ್ರತ್ಯಯ ಪರವಾಗಲು, ಅನುಕೃತಿ ಸ್ವರ ಬರಲು ಯತ್ವ ಬರುವ ವಿಚಾರ ದರ್ಪಣದಲ್ಲಿ ಮಾತ್ರ ನಿರೂಪಿತವಾಗಿದೆ.

**ವಕಾರಾಗಮ**

ಉವರ್ಣ ಋವರ್ಣಗಳ ಮುಂದೆ ಸ್ವರ ಬರಲು ವತ್ವ ಬರುವ ವಿಚಾರ ಸ್ಮೃತಿ (ಸೂ. 9), ಭೂಷಣ (ಸೂ. 24) ಮತ್ತು ದರ್ಪಣದಲ್ಲಿ (ಸೂ. 65) ಏಕಾಭಿಪ್ರಾಯದಿಂದ ನಿರೂಪಿತವಾಗಿದೆ. ಓತ್ವ ಔತ್ವಗಳ ಮುಂದೆ ಸ್ವರ ಬಂದಾಗ ವತ್ವ ಬರುವ ವಿಚಾರ ದರ್ಪಣದಲ್ಲಿ ಹೆಚ್ಚಿನದಾಗಿದೆ. ಅಕಾರಕ್ಕೆ ಸ್ವರ ಪರವಾಗಲು ಯತ್ವವೇ? ಅಲ್ಲ ವತ್ವವೇ? ಈ ಬಗ್ಗೆ ಮೂರೂ ಗ್ರಂಥಗಳು ಮೌನ ತಾಳಿವೆ. ಬಹುಶಃ ಅಲ್ಲಿ ಲೋಪ ನಿತ್ಯವೆಂಬ ಅಭಿಪ್ರಾಯವಿದ್ದಿರಬೇಕು.

ಹೊಸಗನ್ನಡ ವ್ಯಾಕರಣಗಳಲ್ಲಿ ಆಗಮಸಂಧಿ, ಯಕಾರಾಗಮ ಸಂಧಿ, ವಕಾರಾಗಮ ಸಂಧಿ-ಹೀಗೆ ಹೇಳುವುದು ರೂಢಿ. ಆದರೆ ಹಳೆಗನ್ನಡ ವ್ಯಾಕರಣಗಳು ಯತ್ವ ವತ್ವಗಳನ್ನು ಹೇಳುವಲ್ಲಿ 'ಆಗಮ' ಎಂಬ ಪಾರಿಭಾಷಿಕ ಪದವನ್ನು ಬಳಸದಿರುವುದನ್ನು ಗಮನಿಸಬೇಕು. ಸಂಸ್ಕೃತದಲ್ಲಿ 'ಆಗಮಸಂಧಿ' ಯೆಂಬ ಒಂದು ಸಂಧಿಯಿಲ್ಲ. ಸಂಧಿಗೊಳ್ಳುವಲ್ಲಿ ಯತ್ವ ಇಲ್ಲವೆ ವತ್ವ ಬರುವ ಸಂದರ್ಭವೂ ಅಲ್ಲಿಲ್ಲ. 'ಆಗಮ'ವು ಅಲ್ಲಿ ಪದ ನಿರ್ಮಾಣದಲ್ಲಿ ಬರುವ ಆಗಮದ ಒಂದು ಸಂಜ್ಞೆಯಾಗಿದೆ,[8] ಕನ್ನಡ ವ್ಯಾಕರಣಗಳು ಪ್ರಕೃತಿಗೆ ಪ್ರತ್ಯಯಗಳು ಸೇರುವಲ್ಲಿ ನಾಗಮ, ದಾಗಮ ಮೊದಲಾದ ಪ್ರಯೋಗವನ್ನು ಸಂಸ್ಕೃತದ ಈ ಹಿನ್ನೆಲೆಯಲ್ಲಿ ಮಾಡುತ್ತವೆ. ಯಕಾರ ವಕಾರಾಗಮಗಳನ್ನು ಹೇಳಬೇಕಾದಲ್ಲಿ ಸ್ಮೃತಿ ಭೂಷಣಗಳಲ್ಲಿ 'ವ್ಯವಧಾಯಕ' ಎಂಬ ಪದ ಪ್ರಯೋಗ ಕಂಡುಬರುತ್ತದೆ. ಆಗಮ ಮತ್ತು ವ್ಯವಧಾಯಕಗಳಲ್ಲಿ ಅಂತರವಿದೆ. "Causing an intervention, intervener which is required to be of a different kind" (D.S.G. p. 349) ಎಂದು ವ್ಯವಧಾಯಕಕ್ಕೆ ಅರ್ಥ ಕೊಡುತ್ತಾರೆ. ಮಹಾಭಾಷ್ಯದಲ್ಲಿ "ಅತಜ್ಜಾತೀಯಕಂ ವ್ಯವಧಾಯಕಂ ಭವತಿ" (1-1-7ವಾರ್ತಿಕ) ಎಂಬ ವಿವರಣೆಯಿದೆ. ದರ್ಪಣದಲ್ಲಿ ಯಮವಕಾರಾಗಮಗಳನ್ನು ಯತ್ವ ಸಂಧಿ ವತ್ವ ಸಂಧಿ ಎಂಬಂತೆ ತಿಳಿಯಲಾಗಿದೆ (ಸೂ.118). ಮೊತ್ತದಲ್ಲಿ ಹಳಗನ್ನಡ ವೈಯಾಕರಣರು 'ಆಗಮ'ವನ್ನು ವಿಶಿಷ್ಟ ಪಾರಿಭಾಷಿಕವಾಗಿ ಪ್ರಯೋಗಿಸಿರುವರೆಂದೂ ಸಂಧಿಗಿಂತ ಹೊರತಾದ ಸಂದರ್ಭಗಳಲ್ಲಿ ಮಾತ್ರವೆ ಅದನ್ನು ಬಳಸಿರುವರೆಂದೂ ತಿಳಿಯಬೇಕಾಗುತ್ತದೆ.

## ಪ್ರಕೃತಿಭಾವ :

ಪ್ರಾತಿಶಾಖ್ಯಗಳು ಹಾಗೂ ಅಷ್ಟಾಧ್ಯಾಯಿಯಲ್ಲಿ 'ಪ್ರಗೃಹ್ಯ' ಎಂಬ ಸಂಜ್ಞೆಯೊಂದು ಪ್ರಯುಕ್ತವಾಗಿದೆ. ಆ ಸಂಜ್ಞೆಯನ್ನು ಹೊಂದಿದ ಸ್ವರಗಳು ಸಂಧಿನಿಯಮಕ್ಕೆ ಒಳಪಡದೆ ತಮ್ಮ ನಿಜಸ್ವರೂಪದಲ್ಲೇ ಉಳಿದುಕೊಳ್ಳುತ್ತವೆ. ಹಾಗೆ ಉಳಿದು ಬಿಡುವುದಕ್ಕೆ 'ಪ್ರಕೃತಿಭಾವ' ವೆಂದು ಹೆಸರು. ಮಹಾಭಾಷ್ಯದಲ್ಲಿ 'ಪ್ರಕೃತಿಭಾವ' ಎಂಬ ಪ್ರಯೋಗ ವಿದೆ. ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಪ್ರಕೃತಿಭಾವವನ್ನು ಸ್ವರಸಂಧಿಯ ಅಂಗವಾಗಿ ತಿಳಿಯಲಾಗುತ್ತದೆ. ಸ್ವರಸಂಧಿ ಮತ್ತು ವ್ಯಂಜನಸಂಧಿಯ ನಡುವಿನಲ್ಲಿ ಪ್ರಕೃತಿಭಾವವನ್ನು ನಿರೂಪಿಸಲಾಗುತ್ತದೆ. ಅಷ್ಟಾಧ್ಯಾಯಿಯಲ್ಲಿ ಪ್ರಗೃಹ್ಯದ ವಿವರಣೆ ಸ್ವರಸಂಧಿಯ ಅಂಗವಾಗಿ ಬಂದಿಲ್ಲವೆಂಬುದು ಗಮನಾರ್ಹ. ಕಾತಂತ್ರದಲ್ಲಿ ಸ್ವರಸಂಧಿಗಳನ್ನು ಹೇಳಿದ ಬಳಿಕ ಒಂದು ಪಾದದಲ್ಲಿ (1-3) ಪ್ರಕೃತಿಭಾವವನ್ನು ನಿರೂಪಿಸಲಾಗಿದೆ. ಪ್ರಾತಿಶಾಖ್ಯಗಳಲ್ಲೂ ಪ್ರಕೃತಿಭಾವ ಸ್ವರಸಂಧಿಯ ಅಂಗವಾಗಿದೆ. ಸಾರಸ್ವತ ಪ್ರಕ್ರಿಯೆಯಲ್ಲಿ 'ಪ್ರಕೃತಿಭಾವ' ವೆಂದು ಒಂದು ಪ್ರಕ್ಕರಣಕ್ಕೇ ಹೆಸರಿದೆ. ಸಿದ್ಧಹೇಮಶಬ್ದಾನುಶಾಸನವು 'ಅಸಂಧಿ' ಯೆಂದು ಪ್ರಕೃತಿಭಾವವನ್ನು ಹೆಸರಿಸಿದೆ.

ಸಂಸ್ಕೃತದ ಪ್ರಕ್ರಿಯಾಗ್ರಂಥಗಳ ಮಾದರಿಯಲ್ಲಿ ಕನ್ನಡ ವ್ಯಾಕರಣಗಳು ಪ್ರಕೃತಿಭಾವವನ್ನು ಸ್ವರಸಂಧಿಯ ಅಂಗವಾಗಿ ನಿರೂಪಿಸುತ್ತವೆ. ಸ್ವರಕ್ಕೆ ಸ್ವರ ಪರವಾಗಿ ಬಂದು ಸಂಧಿಗೊಳ್ಳುವ ಲಕ್ಷಣಗಳಿದ್ದೂ ಸಂಧಿಯಾಗದಿರುವ ಸ್ಥಿತಿಯನ್ನು ಕನ್ನಡ ವ್ಯಾಕರಣಗಳು ಹೇಳುತ್ತವೆ. ಆದರೆ 'ಪ್ರಕೃತಿಭಾವ' ಅಥವಾ 'ಪ್ರಗೃಹ್ಯ' ಎಂಬ ಪದಗಳನ್ನು ಬಳಸುವುದಿಲ್ಲ. ಸ್ಮೃತಿಯು "ಸ್ವರೂಪದಿಂ ನಿಲ್ಕುಂ ಅವಿಕೃತಂಗಳ್" (ಸೂತ್ರ 10) ಎಂದು ವರ್ಣನಾತ್ಮಕವಾಗಿ ಹೇಳುತ್ತದೆ. ಭೂಷಣದ 'ಏದೋದಂತಾ ನಿಪಾತಾಃ ಸ್ವರೇ ಪರೇ ಪ್ರಕೃತ್ಯಾ" (ಸೂ. 25) ಎಂಬ ಸೂತ್ರದ ಮೇಲೆ ಕಾತಂತ್ರದ "ಓದಂತಾ ಅ-ಇ-ಉ ನಿಪಾತಾಃ ಪರೇ ಪ್ರಕೃತ್ಯಾ (1-3-1) ಎಂಬ ಸೂತ್ರದ ಆಂಶಿಕ ಛಾಯೆ ಬಿದ್ದಂತಿದೆ. 'ಪ್ರಕೃತ್ಯಾ' ಎಂಬುದಿಲ್ಲಿ ಗಮನಾರ್ಹ. ದರ್ಪಣವು 'ವ್ಯವಹರಿಸದು ಸಂಧಿ' (ಸೂತ್ರ 66) 'ಸಂಧಿಯಾಗವು' (ಸೂತ್ರ 68) ಮೊದಲಾಗಿ ಪ್ರಕೃತಿಭಾವವನ್ನು ಸೂಚಿಸುತ್ತದೆ.

ಪ್ರಕೃತಿಭಾವದ ತಾಣಗಳ ವಿಚಾರದಲ್ಲಿ ಸ್ಮೃತಿ (ಸೂ. 10), ಭೂಷಣ (ಸೂ.25 26, 27) ದರ್ಪಣಗಳ (ಸೂತ್ರ 66) ನಿರೂಪಣೆಗಳಲ್ಲಿ ಸಮಾನತೆಯಿದೆ. ದರ್ಪಣವು ಉಳಿದೆರಡಕ್ಕಿಂತ ಹೆಚ್ಚಿನ ಸಂದರ್ಭಗಳನ್ನು ವಿವರಿಸುತ್ತದೆ (ಸೂ. 67, 68) ಒಟ್ಟಿನಲ್ಲಿ ಏವರ್ಣ ಹಾಗೂ ಒವರ್ಣ ಅಂತವಾಗುಳ್ಳ ನಿಪಾತ, ಅವಧಾರಣೆ, ವಿಶಂಕೆ, ಪ್ಲುತ-ಇವುಗಳಿಗೆ ಸ್ವರ ಪರವಾದಾಗ ಸಂಧಿಯಾಗದೆಂಬುದು ಈ ಗ್ರಂಥಗಳ ಹೇಳಿಕೆಯ ಸಾರವಾಗಿದೆ.

## ವ್ಯಂಜನ ಸಂಧಿಗಳು

ಸ್ವರ ಇಲ್ಲವೆ ವ್ಯಂಜನಕ್ಕೆ ವ್ಯಂಜನಪರವಾದಾಗ ನಡೆಯುವ ಸಂಧಿಗೆ ವ್ಯಂಜನ ಸಂಧಿಯೆಂದು ಹೆಸರು. ಕನ್ನಡದಲ್ಲಿ ಪರ ವ್ಯಂಜನದ ಮೇಲೆ ಸಂಧಿಕಾರ್ಯದ ಪ್ರಭಾವ ಬೀಳುತ್ತದೆ. ಎಂದರೆ ಪರಪದಾದಿಯ ಕ ತ ಪ ಗಳಿಗೆ ಗ ದ ಬ ಗಳು, ಪ ಬ ಮ ಗಳಿಗೆ ವಕಾರ, ಸಕಾರಕ್ಕೆ ಚಕಾರ ಯಾ ವಕಾರ ಇಲ್ಲವೆ ಜಕಾರ-ಇವು ಸಾಮಾನ್ಯವಾಗಿ ಆದೇಶವಾಗಿ ಬರುತ್ತವೆ. ಈ ವಿಚಾರದಲ್ಲಿ ಸ್ಮೃತಿ ಭೂಷಣ ದರ್ಪಣಗಳು ಏಕಾಭಿಪ್ರಾಯ ಹೊಂದಿವೆ(ಸೂ. ಸ್ಮೃತಿ: 11, 12, 13; ಭೂಷಣ : ಸೂ. 28-33 ; ದರ್ಪಣ ಸೂ. 75-78). ಈ ಸಂಧಿಗಳು ಸಮಾಸದಲ್ಲಿ ನಡೆಯುತ್ತವೆ, ಎಂದೂ ಅವು ಒಮ್ಮತದಿಂದ ಹೇಳುತ್ತವೆ.

ಸಂಸ್ಕೃತ ವ್ಯಂಜನ ಸಂಧಿಗಳಿಗೂ ಕನ್ನಡ ವ್ಯಂಜನ ಸಂಧಿಗಳಿಗೂ ಸಾಕಷ್ಟು ಅಂತರವಿದೆ. ಸಂಸ್ಕೃತ ಸಂಧಿಗಳಲ್ಲಿ ಛತ್ವಸಂಧಿ (ಅಪ್+ಶಾಂತಿ=ಅಪ್ಛಾಂತಿ) ಮತ್ತು ಪೂರ್ವ ಸವರ್ಣಾದೇಶ ಸಂಧಿ (ಉತ್+ಹಾರ=ಉದ್ಧಾರ)ಗಳನ್ನು ಬಿಟ್ಟರೆ ಮತ್ತೆ ಸರ್ವತ್ರ ಪೂರ್ವ ವ್ಯಂಜನಕ್ಕೆ ಆದೇಶವಾಗುವುದನ್ನು ಕಾಣಬಹುದು. ಅಲ್ಲಿನ ವ್ಯಂಜನ ಸಂಧಿಯ ಪರಿಸರ ಹೆಚ್ಚಾಗಿ ವ್ಯಂಜನ+ವ್ಯಂಜನವಾಗಿದೆ. ವ್ಯಂಜನ+ಸ್ವರ : ಜಶ್ತ್ವ ಸಂಧಿಯಲ್ಲಿ ಮಾತ್ರ ಕಂಡು ಬರುತ್ತದೆ :

ವಾಕ್+ಈಶ=ವಾಗೀಶ ; ಚಿತ್+ಆನಂದ=ಚಿದಾನಂದ ಇತ್ಯಾದಿ

ವ್ಯಂಜನ ಸಂಧಿಯ ನಿರೂಪಣೆಯಲ್ಲಿ ಪಾರಿಭಾಷಿಕ ಪದದ ಬಳಕೆಯ ದೃಷ್ಟಿಯಿಂದ

ಸ್ಮೃತಿ ಭೂಷಣಗಳದ್ದು ಒಮ್ಮತದ ಹಾದಿಯಾಗಿದ್ದು, ದರ್ಪಣ ಅವುಗಳಿಂದ ದೂರ ನಿಲ್ಲುತ್ತದೆ. ಮೊದಲಿನ ಗ್ರಂಥಗಳಲ್ಲಿ ವ್ಯಂಜನ ಸಂಧಿಯಲ್ಲಿ ಒಂದು ವ್ಯಂಜನದ ಸ್ಥಾನ ದಲ್ಲಿ ಅದನ್ನೋಡಿಸಿ ಇನ್ನೊಂದು ವ್ಯಂಜನ ಬರುವುದನ್ನು 'ಆದೇಶ'ವೆಂದು ತಿಳಿಯ ಲಾಗಿದೆ. ಸ್ಮೃತಿ ಒಮ್ಮೆಯೂ (ವಾದೇಶಂ–ಸೂ. 12), ಭೂಷಣ ಮೂರೆಡೆಗಳಲ್ಲೂ (ಸೂ. 31, 32, 33ರ ವೃತ್ತಿಗಳಲ್ಲಿ) 'ಆದೇಶ' ಸಂಜ್ಞೆಯನ್ನು ಬಳಸಿದೆ. ಆದರೆ ದರ್ಪಣ ವ್ಯಂಜನ ಸಂಧಿಯ ನಿರೂಪಣೆಯಲ್ಲಿ ಒಮ್ಮೆಯೂ 'ಆದೇಶ'ವನ್ನು ಬಳಸಿ ಕೊಂಡಿಲ್ಲ. ಹಾಗಾಗಿ ದರ್ಪಣಕ್ಕೆ ಸಮಾಸ ಪ್ರಕರಣದ ಆರಂಭದಲ್ಲಿ 'ಅಟಿದಿರ್ಪುದರಿಯಂಪೋಲಾದೇಶಂ' (ಸೂ. 174) ಎಂದು ಸಮಾಸದಲ್ಲಿ ಬರುವ ಆದೇಶವನ್ನು ಪ್ರತ್ಯೇಕವಾಗಿ ಹೇಳಲು ಸಾಧ್ಯವಾಗಿದೆ.

ಸಂಸ್ಕೃತ ವ್ಯಾಕರಣಗಳಲ್ಲಿ 'ಆದೇಶ' ಮತ್ತು 'ವಿಕಾರ' ಎಂಬೆರಡು ಪದಗಳು ಹೆಚ್ಚು ಕಡಿಮೆ ಸಮಾನಾರ್ಥದಲ್ಲಿ ಬಳಕೆಗೊಳ್ಳುತ್ತವೆ. "ಏಕವರ್ಣಕಾರ್ಯಂ ವಿಕಾರಃ ಅನೇಕ ವರ್ಣಕಾರ್ಯ ಮಾದೇಶ ಇತ್ಯಾಪಿಶಲೀಯಂ ಮತಂ" T. T. S. G. p. 274) ಎಂಬುದನ್ನು ನೋಡಿದರೆ ಒಂದು ಕಾಲದಲ್ಲಿ ಇವುಗಳ ಕಾರ್ಯದಲ್ಲಿ ಸ್ಪಷ್ಟ ಅಂತರ ವಿದ್ದಂತೆ ಗೋಚರಿಸುತ್ತದೆ. ಆದೇಶ ಸಂಧಿಯಲ್ಲಿ ಏಕವರ್ಣಕಾರ್ಯವಿದೆ. ಯಾಜ್ಞವಲ್ಕ್ಯ ಶಿಕ್ಷಾದಲ್ಲಿ ಲೋಪ, ಆಗಮ, ವಿಕಾರ ಎಂದು ಸಂಧಿಗಳನ್ನು ಹೆಸರಿಸಿರುವುದೂ ಗಮನಾರ್ಹ. ಬಹುಶಃ ದರ್ಪಣಕಾರನು ಈ ಹಿನ್ನೆಲೆಯಲ್ಲಿ ವ್ಯಂಜನ ಸಂಧಿಯ ನಿರೂಪಣೆಯಲ್ಲಿ 'ಆದೇಶ'ವನ್ನು ಒಂದು ಸಂಜ್ಞೆಯಾಗಿ ಬಳಸಿಲ್ಲವೆಂದು ತೋರುತ್ತದೆ. ಉಳಿದ ಸಂದರ್ಭಗಳಲ್ಲಿ 'ಆದೇಶ'ವನ್ನು ಅಷ್ಟು ಕಟ್ಟುನಿಟ್ಟಾದ ಅರ್ಥದಲ್ಲಿ ಆತನು ಬಳಸಿಲ್ಲ. ಕಾಶಿಕಾ ಮೊದಲಾದವುಗಳಲ್ಲಿ ಏಕವರ್ಣಕಾರ್ಯವನ್ನು ಆದೇಶವೆನ್ನಲಾಗಿದೆ. ಆ ಪರಂಪರೆಯಲ್ಲಿ ಸ್ಮೃತಿ ಭೂಷಣಗಳು ವಾದೇಶ, ಚಕಾರಾದೇಶ–ಹೀಗೆ ಬಳಸಿರಬೇಕು.

ಣಕಾರಕ್ಕೆ ನಕಾರ ಪರವಾಗಲು ಆ ನಕಾರವನ್ನು ಣಕಾರವನ್ನಾಗಿ ಉಚ್ಚರಿಸುವುದು ಕನ್ನಡದ ಕ್ರಮ. ಏಕೆಂದರೆ ಇದನ್ನು ಇದ್ದಂತೆಯೇ ಉಚ್ಚರಿಸುವುದು ದುಷ್ಕರ. ಹಳ ಗನ್ನಡ ವೈಯಾಕರಣರು ಇದನ್ನು ಗುರುತಿಸಿದ್ದಾರೆ (ಸ್ಮೃತಿ ಸೂ. 67 ; ಭೂಷಣ ; ಸೂ. 115 ; ದರ್ಪಣ : ಸೂ. 169)

ಉದಾ : ತಣ್+ನೆಟಿಲ್=ತಣ್ಣೆಟಿಲ್

ಕಣ್+ನೀರ್ = ಕಣ್ಣೀರ್

ಇದನ್ನು ವೈಯಾಕರಣರು ಸಂಧಿಕಾರ್ಯವೆಂದು ಏಕೆ ಪರಿಗಣಿಸಲಿಲ್ಲವೋ ತಿಳಿಯದು.[9] ವ್ಯಂಜನ ಸಂಧಿಯ ಎಲ್ಲಾ ಪರಿಸರಗಳನ್ನು ಹೊಂದಿಯೂ (ವ್ಯ+ವ್ಯ) ಇದನ್ನು ಸಂಧಿ ಪ್ರಕರಣದಲ್ಲಿ ಪ್ರಸ್ತಾಪಿಸಿಲ್ಲ. ಸ್ಮೃತಿಯ ಸಮಾಸ ಪ್ರಕರಣದಲ್ಲೂ, ಭೂಷಣದ ಯುಷ್ಮದಾದಿ ವಿಧಾನದಲ್ಲೂ ದರ್ಪಣದ ನಾಮಪ್ರಕರಣದಲ್ಲೂ ಈ ಸಂಧಿ ನಿರೂಪಿತ ವಾಗಿದೆ. ಕನ್ನಡದ ಇತರ ವ್ಯಂಜನ ಸಂಧಿಗಳಲ್ಲಿ ಪೂರ್ವ ವರ್ಣವೊಂದು ಪರವರ್ಣಕ್ಕೆ

ಆದೇಶವಾಗಿ ಬರುವ ಕ್ರಮವಿಲ್ಲ. ಬಹುಶಃ ಈ ಕಾರಣಕ್ಕಾಗಿ ಇದನ್ನು ಸಂಧಿಕಾರ್ಯವೆಂದು ಪರಿಗಣಿಸಿಲ್ಲವೆಂದು ತೋರುತ್ತದೆ. ಕ್ರಿಯಾಪದ ನಿರ್ಮಾಣದಲ್ಲೂ ಪೂರ್ವ ವರ್ಣವು ಪರವರ್ಣಕ್ಕೆ ಆದೇಶವಾಗಿ ಬರುವುದಿದೆ. ಉದಾ : ಬಿಡು–ಬಿಟ್ಟು ; ಪುಗು–ಪೊಕ್ಕು ಇತ್ಯಾದಿ. ಇವನ್ನೂ ಪದಮಧ್ಯ ಸಂಧಿಯೆಂದು ವ್ಯಂಜನ ಸಂಧಿಯಲ್ಲಿ ಪ್ರಸ್ತಾಪಿಸಬಹುದಿತ್ತು. ಆದರೆ ಹಾಗೆ ಮಾಡಿಲ್ಲ.

## ದ್ವಿತ್ವ ಸಂಧಿ

ಹ್ರಸ್ವಾದಿಯಾದ ಏಕಾಕ್ಷರಿಗಳ ಕೊನೆಯ ನಣಲಯಳಕಾರಗಳಿಗೆ ಸ್ವರಪರವಾದಾಗ ಸಾಮಾನ್ಯವಾಗಿ ದ್ವಿತ್ವ ಬರುವುದೆಂದೂ ಸ್ಮೃತಿ (ಸೂ. 14), ಭೂಷಣ (ಸೂ. 34, 35, 36) ದರ್ಪಣಗಳಲ್ಲಿ (ಸೂ. 79, 80) ನಿರೂಪಿಸಲಾಗಿದೆ. ಉದಾ : ಮಣ್+ಎಲ್ಲಂ = ಮಣ್ಣೆಲ್ಲಂ ; ಪುಲ್+ಇಲ್ಲಂ=ಪುಲ್ಲಿಲ್ಲಂ ಇತ್ಯಾದಿ. ಸ್ಮೃತಿ ದ್ವಿತ್ವ ವೃತ್ತಿಯೆಂದೂ ಭೂಷಣ ದ್ವಿ: ದ್ವಿರ್ಭಾವವೆಂದೂ, ದರ್ಪಣ ದ್ವಿತ್ವವೆಂದೂ ಇದನ್ನು ಕರೆದಿವೆ. ಪರಿಸರ ಭಿನ್ನವಾದರೂ ದ್ವಿತ್ವ ವೃತ್ತಿ ಸಂಸ್ಕೃತದಲ್ಲಿಯೂ ಗೋಚರಿಸುತ್ತದೆ. ತೈತ್ತಿರೀಯ ಪ್ರಾತಿಶಾಖ್ಯೆ (2–2–1)ಯಲ್ಲಿ ದ್ವಿವರ್ಣವೆಂದೂ, ಕಾತಂತ್ರದಲ್ಲಿ ದ್ವಿರ್ಭಾವವೆಂದೂ (1–5–18) ಪದ ಪ್ರಯೋಗಗಳಿವೆ. ದ್ವಿತ್ವ ಮತ್ತು ದ್ವಿರ್ಭಾವ–ಎರಡೂ ಸಮಾನಾರ್ಥಕಗಳು. ಒತ್ತು ಎಂಬ ಅರ್ಥದಲ್ಲೂ 'ದ್ವಿತ್ವ' ಪದಪ್ರಯೋಗವಿದೆ. ಶಿಥಿಲ ದ್ವಿತ್ವವೆಂಬಲ್ಲಿ ನಾವಿದನ್ನೇ ಕಾಣುತ್ತೇವೆ.

ಕನ್ನಡ ವ್ಯಾಕರಣಗಳ ಸಂಧಿ ಪ್ರಕರಣದ ಮೇಲೆ ಕಣ್ಣೋಡಿಸಿದರೆ ಪ್ರಧಾನವಾಗಿ ಪಾರಿಭಾಷಿಕ ಪದಗಳಿಗೆ ಕನ್ನಡ ವ್ಯಾಕರಣಗಳು ಸಂಸ್ಕೃತ ವ್ಯಾಕರಣಕ್ಕೆ ಋಣಿಯಾಗಿರುವುದು ಗೋಚರಿಸುತ್ತದೆ. ಅವುಗಳ ಅರ್ಥದಲ್ಲಿ ಸಾಕಷ್ಟು ಅಂತರ ತಂದುಕೊಂಡದ್ದಿದೆ. ಆದರೆ ಸಂಸ್ಕೃತದ ಸಂಧಿ ಪ್ರಕ್ರಿಯೆಯನ್ನು ಎಲ್ಲಿಯೂ ಕಣ್ಣುಮುಚ್ಚಿ ಕನ್ನಡ ವ್ಯಾಕರಣಗಳು ಅನುಸರಿಸಿಲ್ಲವೆನ್ನುವುದು ಗಮನಾರ್ಹ.

ಅಡಿಟಿಪ್ಪಣಿಗಳು

1. ನೋ : ಪ್ರ. ಸಂ: ಸಂಧಿಸಂಗ್ರಹ "ಪೂರ್ವೋತ್ತರ ವರ್ಣಾನಾಂ ಅವಿರಾಮೇಣ ಉಚ್ಚಾರಣಂ ಸಂಧಾನಂ ಸಂಧಿ: । ಸಂಹಿತೇತಿ ಯಾವತ್" ।

2. S.E.D. p: 1123 "Samhita= The junction or combination of letters according to euphonic rules ( =Sandhi, but some times considered rather as the state preparatory to the actual junction than the junction itself).

3. T,T.S.G. p:146 "He holds that the coming together of two letters without any intervening vowel or consonant and the pronouncing of the one immediately after the other without any interval of even half mora is 'Samhita'. And when letters come together in this way 'Sandhi' takes place."

4. D.S.G. p:351 "Phonetic combination of two vowels or two consonants or one vowel and one consonant resulting from their close utterence."

5. ಮುಗ್ಧಬೋಧ ವ್ಯಾಕರಣದಲ್ಲಿ 'ವಿ-ಸಂಧಿ' ಎನ್ನಲಾಗಿದೆ.

6. T.T.S.G. p: 151 "From an early period, however, the 'Sandhi' of case terminations was regarded as a separate category as is clear from the Tolkappiyam, and so, in the Rupavatara, Prakriya Kaumudi, Siddhanta Kaumudi and works of this type we find a separate section entitled "Swadi Sandhi."

6. ಅ) ಕಾವ್ಯಾವಲೋಕನದ ಎರಡನೆಯ ಅಧಿಕರಣದಲ್ಲಿ ವಿಸಂಧಿ ಶ್ರುತಿಕಷ್ಟಸಂಧಿಗಳ ಪ್ರಸ್ತಾವ ವಿದೆ (ಸೂ: 102, 103).

7. ನೋ: ದರ್ಪಣ: ಸೂ: 62ರ ಪ್ರಯೋಗ. ದೇವರ್ (ದೇವ+ಅರ್) ಅರಸಾಳ್ (ಅರಸ+ಆಳ್) ಮೊದಲಾದೆಡೆಗಳಲ್ಲಿನ ಸ್ವರ ಲೋಪಕ್ಕೆ ಭೂಷಣದಲ್ಲಿ ಸಮಾಧಾನವಿಲ್ಲ.

8. D.S.G. p:51 "augment, accrement, a word element which is added to the primitive or basic word during the process of the formation of a complete word or 'Pada' "
ಸಂಸ್ಕೃತದಲ್ಲಿ 'ಪ್ರಕೃತಿಂ ಪ್ರತ್ಯಯಂಚಾಪಿ ಯೋ ನ ಹಂತಿ ಸ ಆಗಮಃ' ಎಂಬ ಉಕ್ತಿ ಪ್ರಸಿದ್ಧ ವಿದೆ.

9. ಸಂಸ್ಕೃತದಲ್ಲಿಯೂ 'ಣ' ಕಾರದ ಮುಂದೆ ಬಂದ 'ನ' ಕಾರ 'ಣ' ಕಾರವಾಗಿ ಮಾರ್ಪಾಟನ್ನು ಹೊಂದುತ್ತದೆ:

ಷಟ್ + ನವತಿ = ಷಣ್ಣವತಿ

ಷಟ್ + ನಗರೀ = ಷಣ್ಣಗರೀ

# ಅಧ್ಯಾಯ 8

## ನಾಮ

ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಎಂಬುದಾಗಿ ಪದಗಳು ಚತುರ್ವಿಧವೆಂದು ತಿಳಿಯಲಾಗಿವೆ.[1] ನಾಮವಿಭಕ್ತಿಗಳನ್ನು ಪಡೆದಿರುವ ರೂಪಗಳೆಲ್ಲ ನಾಮಪದಗಳು ; ನಾಮಪ್ರಕೃತಿಗೆ ಲಿಂಗ ಮತ್ತು ವಚನ ಸೂಚಕಾಂಶಗಳೂ ವಿಭಕ್ತಿಗಳೂ ಸೇರುವುದರಿಂದ[2] ಇವೆಲ್ಲವುಗಳ ವಿವರಣೆ 'ನಾಮಪ್ರಕರಣ'ದಲ್ಲಿ ಬರುತ್ತದೆ. ನಾಮ ಪ್ರಕೃತಿಯ ಸ್ವರೂಪ ವೈವಿಧ್ಯಗಳು, ಲಿಂಗ ವಚನ ಸೂಚಕಗಳು, ವಿಭಕ್ತಿ ಹಾಗೂ ವಿಭಕ್ತ್ಯರ್ಥಗಳು (ಕಾರಕಗಳು) ನಾಮ ಪ್ರಕರಣದಲ್ಲಿ ಪ್ರತಿಪಾದಿತವಾಗುವ ಮುಖ್ಯ ವಿಚಾರಗಳು.

ಸಂಸ್ಕೃತದ ಅಧ್ಯಾಯ ಮತ್ತು ಪಾದ ವ್ಯವಸ್ಥೆಯಿರುವ ವ್ಯಾಕರಣಗಳಲ್ಲಿ ಮೇಲಿನ ಎಲ್ಲ ವಿಷಯಗಳನ್ನು 'ನಾಮ ಪ್ರಕರಣ'ವೆಂಬ ಪ್ರತ್ಯೇಕವಾದ ಒಂದು ಅಧ್ಯಾಯದಲ್ಲಿ ನಿರೂಪಿಸುವುದಿಲ್ಲ. ಕಾತಂತ್ರದಲ್ಲಿ ವಿಭಕ್ತಿ, ಸರ್ವನಾಮ, ಕಾರಕ, ಸಮಾಸ ಮತ್ತು ತದ್ಧಿತಗಳನ್ನು ನಿರೂಪಿಸುವ ಎರಡನೆಯ ಅಧ್ಯಾಯಕ್ಕೆ 'ನಾಮ್ನಿ ಚತುಷ್ಟಯ ಪ್ರಕರಣ' ವೆಂದು ಹೆಸರು. ಕಚ್ಚಾಯನ ವ್ಯಾಕರಣದಲ್ಲಿ ಈ ಭಾಗ 'ನಾಮಕಪ್ಪ'ವಾಗಿರುವಲ್ಲಿ ಕಾತಂತ್ರದ ಪೂರ್ಣ ಪ್ರಭಾವ ಸ್ಪಷ್ಟವಾಗುತ್ತದೆ. ಸಂಸ್ಕೃತದ ಇತರ ಕೆಲವು ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ವಿಭಕ್ತಿ, ಕಾರಕಗಳ ವಿಚಾರ ಬೇರೆ ಬೇರೆ ಅಧ್ಯಾಯಗಳಲ್ಲಿ ನಿರೂಪಿತವಾಗಿದೆ :

| | | |
|---|---|---|
| ರೂಪಾವತಾರ | : | ವಿಭಕ್ತ್ಯವತಾರ, ಕಾರಕಾವತಾರ. |
| ಪ್ರಕ್ರಿಯಾ ಸಂಗ್ರಹ | : | ಸುಬಂತ ಸಂಗ್ರಹ, ಕಾರಕ (ವಿಭಕ್ತ್ಯರ್ಥ) ಸಂಗ್ರಹ. |
| ಬಾಲಶಿಕ್ಷೆ | : | ಸ್ಯಾದಿ ಪ್ರಕ್ರಮ, ಕಾರಕ ಪ್ರಕ್ರಮ. |

ಸಾರಸ್ವತ ಪ್ರಕ್ರಿಯೆ, ರೂಪಮಾಲೆ, ಸಿದ್ಧಾಂತ ಕೌಮುದಿ ಮೊದಲಾದ ಗ್ರಂಥ ಗಳಲ್ಲಿ ಸ್ವರಾಂತ, ವ್ಯಂಜನಾಂತ ಶಬ್ದಗಳ, ಪುಂಸ್ತ್ರೀ ನಪುಂಸಕ ಲಿಂಗಗಳ ತಳಹದಿಯಲ್ಲಿ ಅಜಂತ ಪುಲ್ಲಿಂಗ, ಸ್ವರಾಂತ ಪುಲ್ಲಿಂಗ ಇತ್ಯಾದಿಯಾಗಿ ಅಧ್ಯಾಯಗಳನ್ನು ಹೆಸರಿಸಿ ವಿಭಕ್ತಿಗಳನ್ನು ನಿರೂಪಿಸುತ್ತಾರೆ. ಈ ಗ್ರಂಥಗಳು ಕಾರಕಗಳನ್ನು ಪ್ರತ್ಯೇಕ ಅಧ್ಯಾಯ ದಲ್ಲಿ ವಿವರಿಸುತ್ತವೆ.

ಸ್ಮೃತಿ ದರ್ಪಣಗಳು ಸಮಾಸ, ತದ್ಧಿತಗಳನ್ನು ಬಿಟ್ಟು ಉಳಿದವುಗಳನ್ನು 'ನಾಮ ಪ್ರಕರಣ'ದಲ್ಲಿ ನಿರೂಪಿಸುತ್ತವೆ. ಭೂಷಣದಲ್ಲಿ 'ನಾಮ ಪ್ರಕರಣ'ವೆಂಬ ಅಧ್ಯಾಯ ವಿಲ್ಲ. ಅದು ವಿಭಕ್ತಿ, ಕಾರಕ, ಸರ್ವನಾಮಗಳನ್ನು ಬೇರೆ ಬೇರೆ ಅಧ್ಯಾಯ (ವಿಧಾನ) ಗಳಲ್ಲಿ ನಿರವಿಸುತ್ತದೆ.

ಲಿಂಗ (Nominal base)

ನಾಮಪದದಲ್ಲಿ ವಿಭಕ್ತಿಯ ಹಿಂದಿರುವ ಪ್ರಕೃತಿಗೆ 'ಲಿಂಗ' ಎಂಬ ಸಂಜ್ಞೆ ಸಂದಿದೆ (ದರ್ಪಣ ಸೂತ್ರ 45ರ ವೃತ್ತಿ). ಲಿಂಗವೆಂದರೆ ನಾಮಪ್ರಕೃತಿ (Nominal base, Stem). ಈ ಅರ್ಥದಲ್ಲಿ ಸಂಸ್ಕೃತ ವ್ಯಾಕರಣಗಳು ವಿಭಿನ್ನ ಪಾರಿಭಾಷಿಕ ಪದಗಳನ್ನು ಬಳಸಿವೆ. ಗೋಪಥ ಬ್ರಾಹ್ಮಣ ಮತ್ತು ಅಷ್ಟಾಧ್ಯಾಯಿ 'ಪ್ರಾತಿಪದಿಕ'ವೆಂದುವನ್ನೇ ನಿರುಕ್ತ, ಪ್ರಾತಿಶಾಖ್ಯ, ಬೃಹದ್ದೇವತಾ (ಶೌನಕ), ಸಿದ್ಧಹೇಮ ಶಬ್ದಾನುಶಾಸನಗಳು 'ನಾಮನ್' ಎಂದಿವೆ. ಕಾತಂತ್ರದಲ್ಲಿ 'ಲಿಂಗ', ಚಾಂದ್ರದಲ್ಲಿ 'ಶಬ್ದ', ಮುಗ್ಧಬೋಧದಲ್ಲಿ 'ಲಿ', ಜೈನೇಂದ್ರದಲ್ಲಿ 'ಮೃತ್' ಎಂಬ ಪಾರಿಭಾಷಿಕ ಪದಗಳು ಅದೇ ಅರ್ಥದಲ್ಲಿ ಬಳಕೆ ಗೊಂಡಿವೆ. ಈ ವಿಚಾರದಲ್ಲಿ ಕನ್ನಡ ವ್ಯಾಕರಣಗಳು ಪೂರ್ಣವಾಗಿ ಕಾತಂತ್ರವನ್ನು ಅನುಸರಿಸಿರುವುದರಿಂದ ಇಲ್ಲಿ 'ಲಿಂಗ' ಎಂಬ ಪದವೇ ಪ್ರಯುಕ್ತವಾಗಿದೆ. ಆದರೂ ಕೆಲವೊಮ್ಮೆ 'ಶಬ್ದ' ಎಂಬ ಪದವೂ ಬಳಕೆಯಾದುದುಂಟು.

ಭೂಷಣ : ''ಆತಃ ಅಕಾರಾಂತಾತ್ ಶಬ್ದಾತ್ ಪರಯೋಃ ಪ್ರಥಮಾ ದ್ವಿತೀಯಯೋ ಅಲ್ ವಾ ಭವತಿ'' ಸೂತ್ರ 45ರ ವೃತ್ತಿ

ದರ್ಪಣ : ''ಪಗಲಿರುಳೆಂಬೆರಡುಂ ವ್ಯಂಜನಾಂತ ಶಬ್ದಂಗಳೊಳ್ ಇನಾಗಮಂ ವಿಕಲ್ಪದಿಂದಪ್ಪುದು'' ಸೂತ್ರ 119ರ ವೃತ್ತಿ

ನಾಮ ಪ್ರಕೃತಿಯನ್ನು 'ಲಿಂಗ'ವೆಂದು ಕರೆದರೂ ನಾಮಾ ವಿಭಕ್ತಿಗಳನ್ನು ಎಲ್ಲಿಯೂ ''ಲಿಂಗ ವಿಭಕ್ತಿ''ಗಳೆಂದು ಕರೆಯುವುದಿಲ್ಲ. ದರ್ಪಣ ಒಂದೆಡೆ ''ನಾಮಾಖ್ಯಾತ ವಿಭಕ್ತಿ ಗಳ್'' (ಸೂ. 45ರ ವೃತ್ತಿ) ಎಂದಿದೆ. ಇದರ ಮೇಲೆ ನಿರುಕ್ತದ ನಾಮವಿಭಕ್ತಿ (7–1) ಎಂಬುದರ ಮತ್ತು ಬೃಹದ್ದೇವತಾದ ''ನಾಮಾಖ್ಯಾತ ವಿಭಕ್ತಿಷು'' ಎಂಬ ಹೇಳಿಕೆಯ ಛಾಯೆ ಬಿದ್ದಿರುವಂತಿದೆ.

ಸ್ಮೃತಿ ಭೂಷಣ ದರ್ಪಣಗಳಲ್ಲಿ ಲಿಂಗದ ವ್ಯಾಖ್ಯೆ ಕೆಳಗಿನಂತಿದೆ.

ಸ್ಮೃತಿ : ''ಧಾತುವಿವರ್ಜಿತಮರ್ಥೋಪೇತಂ ಲಿಂಗಂ'' ಸೂ. 15

ಭೂಷಣ : ''ಅರ್ಥವದಕ್ರಿಯಾವಾಚಿ ಕೃದಂತಂಚ ಲಿಂಗಂ'' ಸೂ. 37

ದರ್ಪಣ : ''ಕ್ರಿಯೆಯುಂ ನುಡಿಯುದುದುಂ ವಿಭಕ್ತಿಯ ನಿಲ್ಲದುದುಂ ಅರ್ಥಮುಳ್ಳುದಂತದು ಲಿಂಗಂ'' ಸೂ. 82

ಮೇಲಿನ ನಿರೂಪಣೆಗಳು ಕಾತಂತ್ರದ "ಧಾತುವಿಭಕ್ತಿವರ್ಜಮರ್ಥವಲ್ಲಿಂಗಂ" (2-2-1) ಎಂಬ ಹೇಳಿಕೆಯ ನೆರಳಿನಲ್ಲಿ ಹುಟ್ಟಿಕೊಂಡವೆಂಬುದು ಸ್ಪಷ್ಟ. ಆದರೂ ಅವುಗಳನ್ನು ಪರಸ್ಪರ ಹೋಲಿಸಿದಾಗ ಅಂತರ ಕಾಣದಿಲ್ಲ. ಕಾತಂತ್ರ ಹೇಳುವ "ವಿಭಕ್ತಿವರ್ಜಮ್" ಎಂಬುದನ್ನು ಸ್ಮೃತಿಭೂಷಣಗಳು ಕೈಬಿಟ್ಟಿವೆ. ದರ್ಪಣ ಮಾತ್ರ ಕಾತಂತ್ರದ ನಿರೂಪಣೆಯನ್ನು ಅರಕ್ಷಶಃ ಅನುವಾದಿಸಿದೆ. ಮೇಲಿನ ಹೇಳಿಕೆಗಳನ್ನು ಸಂಗ್ರಹಿಸಿ ಹೇಳುವುದಾದರೆ ಶಬ್ದವೊಂದು ಲಿಂಗವೆನಿಸಿಕೊಳ್ಳಲು–

1. ಅದು ಕ್ರಿಯಾರ್ಥಕವಾದ ಧಾತುವಾಗಿರಬಾರದು. (ಈ ವಿಚಾರದಲ್ಲಿ ಮೂರು ಗ್ರಂಥಗಳೂ ಸಹಮತವಾಗಿವೆ.)
2. ಅದಕ್ಕೆ ನಾಮವಿಭಕ್ತಿ ಹತ್ತಿರಬಾರದು (ಇದನ್ನು ದರ್ಪಣ ಮಾತ್ರ ಹೇಳುತ್ತದೆ.)
3. ಅದು ಅರ್ಥವತ್ತಾದ ಶಬ್ದವಾಗಿರಬೇಕು. (ಈ ವಿಚಾರದಲ್ಲಿ ಮೂರು ಕೃತಿಗಳೂ ಏಕಾಭಿಪ್ರಾಯ ಹೊಂದಿವೆ.)

ದರ್ಪಣಕಾರ ಹೇಳುವ ಧಾಟಿ ನೋಡಿದರೆ ಈ ಮೂರೂ ಅಂಶವನ್ನು ಹೊಂದಿರುವ ಒಂದು ಶಬ್ದ ಮಾತ್ರ ಲಿಂಗವೆನ್ನಿಸಿಕೊಳ್ಳಲು ಅರ್ಹವಾಗುತ್ತದೆ. ಅಷ್ಟಾಧ್ಯಾಯಿಯ "ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಂ" (1–2–45) ಎಂಬ ನಿರೂಪಣೆಯಲ್ಲಿನ 'ಪ್ರಾತಿಪದಿಕ' ಎಂಬ ಪದವನ್ನು ಬಿಟ್ಟರೆ ಉಳಿದ ವಿಚಾರಗಳು ದರ್ಪಣದ ಅಭಿಪ್ರಾಯಕ್ಕೆ ಸರಿ ಹೊಂದುತ್ತವೆ. ಮೇಲಿನ ಮೂರು ಅವಶ್ಯಕತೆಗಳಲ್ಲಿ ಕೆಲವನ್ನು ಬಿಟ್ಟೂ ಲಿಂಗದ ನಿರ್ವಚನವನ್ನು ಕೊಡುವುದುಂಟು. ಸ್ಮೃತಿ ಭೂಷಣಗಳು ಆ ದೃಷ್ಟಿಯಿಂದಲೇ "ವಿಭಕ್ತಿ ವರ್ಜಮ್" ಎಂಬುದನ್ನು ಹೇಳಿಲ್ಲ. ಬಹುಶಃ ಇವುಗಳ ಮೇಲೆ ಜೈನೇಂದ್ರದ ಮಹಾವೃತ್ತಿಯ ಪ್ರಭಾವಿದ್ದಿರಬೇಕು. "ಅಧುಮೃತ್" ಎಂದು ಜೈನೇಂದ್ರ ಹೇಳುವಲ್ಲಿ (1–1–5) "ಮೃತ್" ಆಗಲು ಅಧಾತುವಾಗಿದ್ದರೆ ಸಾಕು. ಸೂತ್ರದ ಮಹಾವೃತ್ತಿಯಲ್ಲಿ "ಧುವರ್ಜಿತಮರ್ಥವಚ್ಛಬ್ದರೂಪಂ ಮೃತ್ ಸಂಜ್ಞಂ ಭವತಿ" ಎಂದು ಅರ್ಥವತ್ತಾಗಿರುವಿಕೆಯನ್ನು ಸೇರಿಸಿಕೊಳ್ಳಲಾಗಿದೆ.

ಭೂಷಣದ ಲಿಂಗದ ವ್ಯಾಖ್ಯೆ ಸ್ಮೃತಿ ದರ್ಪಣಗಳಿಗಿಂತ ಭಿನ್ನವಾಗಿದೆ. ಅದು ಸ್ಮೃತಿಯ ವ್ಯಾಖ್ಯೆಯೊಂದಿಗೆ ದನಿಗೂಡಿಸಿದುದಲ್ಲದೆ ಮುಂದುವರಿದು ಕೃದಂತವನ್ನೂ ಲಿಂಗವನ್ನಾಗಿ ಹೇಳುತ್ತದೆ. ಸೂತ್ರದ ವೃತ್ತಿಯನ್ನು (ಸೂ. 33) ನೋಡಿದರೆ 'ಕೃದಂತ'ಕ್ಕೆ ಕೃತ್ಪ್ರತ್ಯಯಾಂತವೆಂದೇ ಅರ್ಥವಾಗುತ್ತದೆ. ಭೂಷಣಕ್ಕೆ ಹಿನ್ನೆಲೆಯನ್ನೊದಗಿಸಿದ ಸಂಸ್ಕೃತ ವ್ಯಾಕರಣಗಳಲ್ಲೆಲ್ಲ ಕೃದಂತ ತದ್ಧಿತಾಂತಗಳೆರಡನ್ನೂ ಲಿಂಗವೆಂದು (ಇಲ್ಲವೆ ಪ್ರಾತಿಪದಿಕ ಇತ್ಯಾದಿಯಾದ ಲಿಂಗದ ಸಂವಾದೀ ಸಂಜ್ಞೆಗಳು) ಹೇಳಿರುವಾಗ ಭೂಷಣವು ತದ್ಧಿತವನ್ನು ಕೈಬಿಟ್ಟು ಕೃದಂತಕ್ಕೆ ಮಾತ್ರ ಲಿಂಗ ಸಂಜ್ಞೆಯನ್ನು ಏಕೆ ವಿಧಿಸಿತೋ ತಿಳಿಯದು. ಬಹುಶಃ ಭೂಷಣಕಾರನ ದೃಷ್ಟಿ ಸ್ಮೃತಿಕಾರನದಕ್ಕಿಂತ ಭಿನ್ನವಾಗಿರಬೇಕು.

ಆಧುನಿಕರ ಮತದಂತೆ ನಾಮ ವಿಭಕ್ತಿಯನ್ನು ಸ್ವೀಕರಿಸುವ ರೂಪಗಳೆಲ್ಲ ನಾಮ ಪ್ರಕೃತಿಗಳು (ಲಿಂಗಗಳು) (K.S.D. p. 109). ಕೇಶಿರಾಜನ ನಿರೂಪಣೆಯೂ ಇದನ್ನೇ ಧ್ವನಿಯಿಸುತ್ತದೆ. ಹಾಗಿದ್ದೂ ದರ್ಪಣದ ಲಿಂಗದ ವ್ಯಾಖ್ಯೆ ಟೀಕೆಗೆಡೆಯಾಗಿದೆ. 'ಶಾಸನ'ದಲ್ಲಿ 'ಅರ್ಥವಲ್ಲಿಂಗಂ' (ಸೂ. 8) ಎಂಬುದನ್ನು ಗಮನಿಸಿ ಧಾತುವಿಗೂ ಲಿಂಗ ಸಂಜ್ಞೆಯನ್ನು ವಿಧಿಸಬೇಕಾಗಿತ್ತು ಎಂಬ ಅಭಿಪ್ರಾಯ ಹೊರಹೊಮ್ಮಿದೆ (ಅದೇ ಪು. 110). ಕೇಶಿರಾಜನ ನಿರೂಪಣೆಗೆ ಅವನು ಅನುಸರಿಸಿದ ಪ್ರಾಚೀನ ವ್ಯಾಕರಣಗಳೇ ಕಾರಣವಾಗಿವೆ. ಸಂಸ್ಕೃತದಲ್ಲಿಯೂ ವಿಭಿನ್ನ ವ್ಯಾಕರಣ ಸಂಪ್ರದಾಯಗಳು ನಾಮ ಪ್ರಕೃತಿಯ ವ್ಯಾಖ್ಯೆಯನ್ನು ವಿಭಿನ್ನ ರೀತಿಯಲ್ಲಿ ಕೊಡುವುದನ್ನು ಹಿಂದೆಯೇ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮೇಲಿನ ಟೀಕೆ ಅನವಶ್ಯಕವಾಗಿದೆ.

## ಲಿಂಗ ಪ್ರಭೇದಗಳು

ಲಿಂಗ ಪ್ರಭೇದಗಳ ನೇರವಾದ ಪ್ರಸ್ತಾಪ ಕಾತಂತ್ರದಲ್ಲಾಗಲಿ ಸ್ಮೃತಿ ಭೂಷಣಗಳಲ್ಲಾಗಲಿ ಬಂದಿಲ್ಲ. ದರ್ಪಣದಲ್ಲಿ "ನಿಯತ ಚತುರ್ಭೇದಂ ಆದಾರಯೆ ಕೃತ್ತದ್ಧಿತ ಸಮಾಸ ನಾಮಸ್ಥಿತಿಯಿಂ" (ಸೂ. 82) ಎಂದು ನಾಲ್ಕು ವಿಧವಾದ ಲಿಂಗಗಳನ್ನು ಹೇಳಲಾಗಿದೆ. ಅಷ್ಟಾಧ್ಯಾಯಿಯಲ್ಲಿ ಪ್ರಾತಿಪದಿಕ ಲಕ್ಷಣವನ್ನು ತಿಳಿಸಿ "ಕೃತ್ತದ್ಧಿತ ಸಮಾಸಾಶ್ಚ" (1-2-46) ಎಂದು ಹೇಳಿದರೆ ಜೈನೇಂದ್ರದಲ್ಲಿ "ಮೃತ್" ಸಂಜ್ಞೆಯನ್ನು ತಿಳಿಸಿ ಮುಂದೆ "ಕೃತ್ಧೃತ್ಸಾಃ" (1-1-6) ಎನ್ನಲಾಗಿದೆ. ಪಾರಿಭಾಷಿಕ ಪದಗಳನ್ನು ಬಿಟ್ಟರೆ ಜೈನೇಂದ್ರ ಮತ್ತು ಅಷ್ಟಾಧ್ಯಾಯಿಯ ಅಭಿಪ್ರಾಯದಲ್ಲಿ ಅಂತರವಿಲ್ಲ (TTSG. p. 160). ದರ್ಪಣದ ನಿರೂಪಣೆಯ ಮೇಲೆ ಮೇಲಿನ ಸೂತ್ರಗಳ ಪ್ರಭಾವ ಸ್ಪಷ್ಟವಾಗಿದೆ. ಆದರೆ 'ನಾಮಲಿಂಗ'ವೆಂಬ ಪ್ರತ್ಯೇಕ ಪ್ರಕಾರ ದರ್ಪಣಕಾರನ ಸ್ವತಂತ್ರ ಸೃಷ್ಟಿಯಾಗಿದೆ.

ನಾಮಲಿಂಗದ ಆಂತರಿಕ ಪ್ರಭೇದಗಳಾದ ರೂಢ ಅನ್ವರ್ಥ, ಅಂಕಿತ, ಸಮುಪಾತ್ತ ಕ್ರಿಯೆ ಮತ್ತು ವಾಕ್ಯಮಾಲೆ-ಇವುಗಳ ಪ್ರಸ್ತಾಪ ಕನ್ನಡ ವ್ಯಾಕರಣಗಳಲ್ಲಿ ಮೊತ್ತಮೊದಲು ಕಂಡುಬರುವುದು ದರ್ಪಣದಲ್ಲಾಗಿದೆ. ಉಳಿದವುಗಳನ್ನು 'ಲಿಂಗ'ವೆಂದು ಹೇಳದೆ ಸ್ಮೃತಿ ಭೂಷಣಗಳು ವಿವರಿಸುತ್ತವೆ. ಸ್ಮೃತಿ 'ಗುಣೋಕ್ತಿ'ಯನ್ನು ಲಿಂಗವೆಂದು ಒಮ್ಮೆ ಮಾತ್ರ ಹೇಳದೆ (ಸೂ. 21) ಸ್ಮೃತಿ, ಭೂಷಣ, ದರ್ಪಣಗಳಲ್ಲಿ ನಾಮ, ಸಮಾಸ, ತದ್ಧಿತಗಳ ವಿವರವಾದ ನಿರೂಪಣೆಗೆ ಪ್ರತ್ಯೇಕವಾದ ಪ್ರಕರಣ ಯಾ ವಿಧಾನಗಳು ಮೀಸಲಾಗಿವೆ. ಕೃತ್ತನ್ನು ದರ್ಪಣ ಮಾತ್ರ ನಾಮ ಪ್ರಕರಣದಲ್ಲಿ ಎಷ್ಟೋ ಅಷ್ಟು ವಿವರಿಸುತ್ತದೆ.

ದರ್ಪಣ ಚತುರ್ವಿಧ ಲಿಂಗಗಳೆಂದು ಲೆಕ್ಕ ಮಾಡಿ ಹೇಳಿದರೂ ಮುಂದೆ ಮತ್ತೂ ಕೆಲವು ಲಿಂಗಗಳನ್ನು ಗುರುತಿಸಿದೆ. ಅವೆಲ್ಲ ಮುಖ್ಯವಾದ ನಾಲ್ಕು ಲಿಂಗಗಳ ಒಳಗುಂಪುಗಳೆಂಬ ಅಭಿಪ್ರಾಯ ದರ್ಪಣಕಾರನಿಗಿದ್ದಂತಿದೆ. ಆ ಒಳಗುಂಪುಗಳನ್ನು ನಿರೂಪಿಸುವಲ್ಲಿ

ಕೇಶಿರಾಜನಿಗಿದ್ದ ಸಂಸ್ಕೃತ ವ್ಯಾಕರಣದ ಗಾಢವಾದ ಪರಿಚಯದೊಂದಿಗೆ ಅವನ ಸ್ವೋಪಜ್ಞಶೀಲತೆಯೂ ಸ್ಫುಟವಾಗುತ್ತದೆ. ಕೇಶಿರಾಜನು ಹೇಳುವ ಲಿಂಗ ಪ್ರಭೇದಗಳನ್ನು ಕೆಳಗಿನಂತೆ ಸಂಕ್ಷೇಪಿಸಬಹುದು :

ಲಿಂಗ—
- —ಕೃತ್[3]
- —ತದ್ಧಿತ
- —ಸಮಾಸ : ತತ್ಪುರುಷ, ಕರ್ಮಧಾರಯ, ದ್ವಿಗು, ದ್ವಂದ್ವ, ಅವ್ಯಯೀಭಾವ, ಬಹುವ್ರೀಹಿ, ಕ್ರಿಯಾ, ಗಮಕ
- —ನಾಮ : ರೂಢ, ಅನ್ವರ್ಥ, ಅಂಕಿತ, ಸಮುಪಾತ್ತಕ್ರಿಯೆ, ವಾಕ್ಯಮಾಲೆ, ಗುಣವಚನ, ಸರ್ವನಾಮ, ಸಮಸಂಸ್ಕೃತ

## ನಾಮಲಿಂಗ

ಭಾಷೆಯಲ್ಲಿ ಬಳಕೆಗೊಳ್ಳುವ ನಾನಾ ವಿಧವಾದ ಹೆಸರುಗಳು[4] (ಸಂಜ್ಞೆಗಳು) ನಾಮಲಿಂಗವೆನಿಸುತ್ತವೆ. ಮರ, ದೇವ ಇತ್ಯಾದಿ ಶಬ್ದಗಳನ್ನು ನೇರವಾಗಿ 'ನಾಮಲಿಂಗ' ವೆಂದು ದರ್ಪಣಕಾರ ಹೇಳುತ್ತಾನೆ (ದರ್ಪಣ ಸೂ. 45ರ ಪ್ರಯೋಗ). ರೂಢ, ಅನ್ವರ್ಥ, ಅಂಕಿತವೆಂಬ ನಾಮದ ತ್ರಿವಿಧ ವಿಂಗಡಣೆ ದರ್ಪಣದ (ಸೂತ್ರ 86) ವೈಶಿಷ್ಟ್ಯಗಳಲ್ಲೊಂದು.[5] ರೂಢಿಯಲ್ಲಿ ಬಂದುದು ರೂಢನಾಮ (ನೆಲ, ಪೊಲ, ಇತ್ಯಾದಿ); ಹೆಸರಿಡುವವನ ಇಚ್ಛೆಯಂತೆ ಎಂತಾದರೂ ಇರುವುದು ಅಂಕಿತನಾಮ (ಕಸವ, ತಿಪ್ಪ ಇತ್ಯಾದಿ). ರೂಢನಾಮಕ್ಕೆ ಇನ್ನೊಂದು ಹೆಸರು ದಿಟದ ನಾಮ. ದರ್ಪಣಕಾರನ ಅಭಿಮತದಂತೆ ರೂಢನಾಮ ಸಮಾಸರಹಿತವಾಗಿ[6] ಒಂದಕ್ಷರ ಮೊದಲ್ಗೊಂಡು ಐದಕ್ಷರದ ವರೆಗೆ ಇರುವುದಿದೆ. ಯಾವ ಸಂಸ್ಕೃತ ವ್ಯಾಕರಣಗಳಲ್ಲೂ ಕಾಣದ ಮೇಲಿನ ತ್ರಿವಿಧ ವಿಂಗಡಣೆ ಕೇಶಿರಾಜನ ಸ್ವಂತಿಕೆಗೆ ಸಾಕ್ಷಿ ನುಡಿಯುತ್ತದೆ. ಬಹುಶಃ ಕೇಶಿರಾಜನು ಮಹಾಭಾಷ್ಯ, ದುರ್ಗಸಿಂಹನ ವೃತ್ತಿ (2-4-17) ಹಾಗೂ ಭರ್ತೃಹರಿಯಿಂದ ಪ್ರಭಾವಿತನಾಗಿ ಈ ವಿಭಜನೆ ಮಾಡಿರಬೇಕೆಂದು ತೋರುತ್ತದೆ. ಮಹಾಭಾಷ್ಯದಲ್ಲಿ 'ಅನ್ವರ್ಥ ಸಂಜ್ಞಾ' (1-4-23) ಎಂಬ ಪ್ರಯೋಗವಿದೆ. ಭರ್ತೃಹರಿಯ ವಾಕ್ಯಪದೀಯದಲ್ಲಿ ಬರುವ "ಅನ್ವಾಖ್ಯೇಯ" (1-24) ಮತ್ತು "ಪ್ರತಿಪಾದಕ" (2-176) ಎಂಬ ಪದಗಳು ಅನುಕ್ರಮವಾಗಿ ಅನ್ವರ್ಥ ಮತ್ತು ರೂಢಕ್ಕೆ ಸಂವಾದಿಯಾಗಿವೆ.[7]

## ಸಮುಪಾತ್ತ ಕ್ರಿಯಾಲಿಂಗ

ಸಮುಪಾತ್ತ ಕ್ರಿಯೆ ಎಂದರೆ ಮುಗಿದು ಹೋದ ಕ್ರಿಯೆಯನ್ನು ಹೇಳುವ ಶಬ್ದ (ಪೀ.ಲೇ.ಪು. 813). ಅಂತಹ ಪ್ರಸಿದ್ಧ ಕ್ರಿಯೆಯೊಂದು ಕವೀಶ್ವರರಿಂದ ನಾಮ ವಾಚಕವಾಗಿ ಬಳಸಲ್ಪಡುವುದಿದೆ. ಆ ಸಂದರ್ಭದಲ್ಲಿ ಅದು 'ಲಿಂಗ'ವಾಗಲೇಬೇಕು, ಅದೇ ಸಮುಪಾತ್ತ ಕ್ರಿಯಾಲಿಂಗ. ದರ್ಪಣಕಾರ ಕೊಡುವ ಪ್ರಯೋಗ "ನಮೋಸ್ತು ಗಳಿರ್ಪಂದದೊಳಿರ್ದಂ ನಮೋಸ್ತುಗಳೆಂದು ಸಮಣರ್ಗೆ ಹೆಸರಾಯ್ತು" (ಸೂ. 85ರ ಪ್ರಯೋಗ) ಎಂಬಲ್ಲಿ ನಮೋಸ್ತುವೆಂಬ ಪ್ರಸಿದ್ಧ ಕ್ರಿಯೆಯನ್ನು ಲಿಂಗವಾಗಿಸಿ ಬಳಿಕ ನಾಮಪದವನ್ನಾಗಿ ಮಾಡಲಾಗಿದೆ. ನಮೋಸ್ತು ಎಂದರೆ 'ನಮೋಸ್ತು' ಎಂದು ಹೇಳು ವವನು, ಜೈನ ಸನ್ಯಾಸಿ ಎಂದರ್ಥ. ಪ್ರಯೋಗವನ್ನು ಪರಿಶೀಲಿಸಿದಾಗ ಸಂದೇಹವೊಂದು ಹುಟ್ಟಿಕೊಳ್ಳುತ್ತದೆ. ಸಮುಪಾತ್ತ ಕ್ರಿಯಾಲಿಂಗವೆಂಬ ಸಂಜ್ಞೆ ಸಂಸ್ಕೃತದಿಂದ ಎತ್ತಿ ಕೊಂಡ ಪೂರ್ಣ ಕ್ರಿಯೆಗಳಿಗೆ ಮಾತ್ರ ಸಂಬಂಧಿಸಿದುದೇ ? ಅಲ್ಲ, ಕನ್ನಡದ ಪೂರ್ಣ ಕ್ರಿಯೆಗಳೂ ಲಿಂಗವಾಗಬಲ್ಲುವೆ ? "ಇವು ಪ್ರಮಾಣ ಪುರುಷರ ಪ್ರಯೋಗದ ಕಾಣ ಪಟ್ಟಿರ್ಕುಂ" (ಸೂ. 85ರ ವೃತ್ತಿ) ಎಂದು ಹೇಳಿಕೊಟ್ಟಿದು ಒಂದೇ ಒಂದು ಪ್ರಯೋಗ ವಾಗಿರುವುದರಿಂದ ಖಚಿತವಾಗಿ ಹೇಳಲು ಬರುವುದಿಲ್ಲ. ಆದರೆ ಹಳಗನ್ನಡದ ಪ್ರಥಮ ಪುರುಷ ಕ್ರಿಯಾರೂಪಗಳು (ಮಾಡಿದಂ, ಮಾಡಿದರೆ ಇತ್ಯಾದಿ) ಮತ್ತು ಕೃನ್ನಾಮದ ಪ್ರಥಮಾ ವಿಭಕ್ತ್ಯಂತ ರೂಪಗಳು (ಮಾಡಿದಂ, ಮಾಡಿದರ್ ಇತ್ಯಾದಿ) ಸಮಾನವಾಗಿರು ವುದರಿಂದ ಕನ್ನಡದ ಸಮುಪಾತ್ತಕ್ರಿಯೆ ಕೃನ್ನಾಮವಾಗಿಯೇ ವ್ಯವಹರಿಸುವಂತೆ ತೋರುತ್ತದೆ. ಹಾಗಾಗಿ ದರ್ಪಣಕಾರ ಹೇಳುವ ಸಮುಪಾತ್ತಕ್ರಿಯಾಲಿಂಗ ಸಂಸ್ಕೃತದ ಪೂರ್ಣ ಕ್ರಿಯೆಗಳಿಗಷ್ಟೇ ಸಂಬಂಧಿಸಿದುದೆಂದೂಹಿಸಬಹುದು.

## ವಾಕ್ಯಮಾಲಾಲಿಂಗ

ಪ್ರಮಾಣ ಪುರುಷರ ಪ್ರಯೋಗಗಳಿಂದ ತಿಳಿಯುವಂತೆ ಕೆಲವೊಮ್ಮೆ ವಾಕ್ಯಮಾಲೆ ಗಳು ನಾಮಗಳಾಗಿ ಪ್ರಯುಕ್ತವಾಗುತ್ತವೆ. ಹಾಗೆ ನಾಮಗಳಾಗುವುದರಿಂದ ಅವು ವಿಭಕ್ತಿಗಳನ್ನು ಸ್ವೀಕರಿಸಲು ಅರ್ಹವಾಗಿ ಲಿಂಗವಾಗುತ್ತವೆ. ಆಗ ಅವು ವಾಕ್ಯಮಾಲಾ ಲಿಂಗವೆಂಬ ಸಂಜ್ಞೆಯನ್ನು ಹೊಂದುತ್ತವೆ (ದರ್ಪಣ ಸೂತ್ರ 84). ದರ್ಪಣಕಾರ ಇದಕ್ಕೆ ಪ್ರಯೋಗಗಳನ್ನು ಕೊಡುವಲ್ಲಿ "ತತ್ಸವಿತುರ್ವರೇಣ್ಯರಟಿದರ್", "ಗುಣಕ್ಕೆ ನಲ್ಲ ಗಣೇಶಂ", "ಸೊರ್ಕಾನೆಗಳ್ಗಾಲಾನಂ" ಇತ್ಯಾದಿ ಸಂಸ್ಕೃತ ಮತ್ತು ಕನ್ನಡದ ವಾಕ್ಯ ಗಳನ್ನು ಕೊಟ್ಟಿರುವುದು ಗಮನಾರ್ಹ.

ಸಮುಪಾತ್ತ ಕ್ರಿಯೆ ಮತ್ತು ವಾಕ್ಯಮಾಲೆಗಳು "ಸಂಕವಿರಚಿತ ನಾಮಮಂದಾ ದಂದು" ಮಾತ್ರವೇ ಲಿಂಗಗಳಾಗುವುವು. 'ನಾಮ' ಎಂಬ ಪದ ಪ್ರಯುಕ್ತ ವಾದುದರಿಂದ ಇವೆರಡನ್ನು ನಾಮಲಿಂಗದ ಒಳ ಗುಂಪಾಗಿ ತಿಳಿಯುವುದು ಸೂಕ್ತ.

**ಗುಣವಚನ**

ನಾಮದ ಗುಣ ವಿಶೇಷತೆಯನ್ನು ಹೇಳುವ ಪದಗಳಿಗೆ ವ್ಯಾಕರಣದಲ್ಲಿ ಗುಣವಚನ ಇಲ್ಲವೆ ವಿಶೇಷಣ ಎಂಬ ಸಂಜ್ಞೆ ಬಳಕೆಯಲ್ಲಿದೆ. ಇವೆರಡೂ ಸಾರ್ಥಕ ಸಂಜ್ಞೆಗಳು. ಅಷ್ಟಾಧ್ಯಾಯಿಯಲ್ಲಿ ಇವೆರಡನ್ನೂ ಕಾಣಬಹುದು. ಕಾತಂತ್ರ ಮತ್ತು ಜೈನೇಂದ್ರದಲ್ಲಿ "ವಿಶೇಷಣ" ಬಳಕೆಗೊಂಡಿದೆ. ಕನ್ನಡದ ವ್ಯಾಕರಣಗಳಲ್ಲಿ ಈ ಕುರಿತು ಬಂದ ಪಾರಿಭಾಷಿಕ ಪದಗಳು ಕೆಳಗಿನಂತಿವೆ.

ಸ್ಮೃತಿ : ಗುಣವಚನ, ಗುಣೋಕ್ತಿ, ವಿಶೇಷಣ (ಸೂ. 17, 73, 21, 33).

ಭೂಷಣ : ಗುಣವಚನ, ಗುಣೋಕ್ತಿ, ವಿಶೇಷಣ (ಸೂ. 55, 190, 47, 155ರ ವೃತ್ತಿ)

ದರ್ಪಣ : ಗುಣವಚನ, ಗುಣೋಕ್ತಿ, ಗುಣವಾಚಿ, ವಿಶೇಷಣ (ಸೂ. 99, 87, 230, 148).

ಕವಿರಾಜಮಾರ್ಗದಲ್ಲೂ "ವಿಶೇಷಣ" ಎಂಬ ಪದ ಬಳಕೆಯಾಗಿದೆ (1-122). ಸ್ಮೃತಿ ಗುಣೋಕ್ತಿಯನ್ನೂ ಲಿಂಗವೆಂದಿದೆ (ಸೂತ್ರ. 21). ಸ್ಮೃತಿಯ ಪ್ರಯೋಗವನ್ನು ಪರಾಂಬರಿಸಿದರೆ ವಿಶೇಷಣ ಮತ್ತು ಗುಣವಚನಗಳ ಅರ್ಥವ್ಯಾಪ್ತಿಯಲ್ಲಿ ಅಂತರವಿದ್ದಂತೆ ತೋರುತ್ತದೆ. ಕನ್ನಡ ಗುಣವಾಚಕಗಳನ್ನು "ಗುಣವಚನ" ಅಥವಾ 'ಗುಣೋಕ್ತಿ' (ಸೂತ್ರ 21)ಯೆಂದು ಹೇಳಿದರೆ ಸಂಸ್ಕೃತದ ನಾಮವೊಂದು ಕನ್ನಡ ನಾಮದ ಗುಣ ವಿಶೇಷವನ್ನು ಹೇಳಲು ಬಂದಾಗ ಅದನ್ನು "ವಿಶೇಷಣ" (ಸೂ. 33) ಎಂದು ಕರೆದಂತಿದೆ. ಭೂಷಣದಲ್ಲಿ "ಗುಣವಚನ" ಮತ್ತು "ಗುಣೋಕ್ತಿ" ಸರಾಗವಾಗಿ ಬಳಕೆಗೊಂಡಿವೆ. ಒಮ್ಮೆ ವೃತ್ತಿಯಲ್ಲಿ ಮಾತ್ರ ಬಂದ 'ವಿಶೇಷಣ' ಗುಣವಚನದ ಪರ್ಯಾಯವಾಚಿಯಾಗಿದೆ. ಸಂಸ್ಕೃತದ ನಾಮವೊಂದು ವಿಶೇಷಣವಾಗಿ ಬಳಕೆಗೊಂಡ ಉದಾಹರಣೆ ಭೂಷಣದಲ್ಲಿಲ್ಲ. ದರ್ಪಣದಲ್ಲಿ ಸಾಮಾನ್ಯವಾಗಿ ಕನ್ನಡ ಗುಣವಾಚಕಗಳನ್ನು ಗುಣವಚನವೆಂದೂ ಸಂಸ್ಕೃತದ ನಾಮಗಳೂ ವಿಶೇಷಣಗಳಾಗಿ ಬಂದಾಗ 'ವಿಶೇಷಣ', "ಸಂಸ್ಕೃತ ಗುಣೋಕ್ತಿ" ಇಲ್ಲವೆ "ಸಂಸ್ಕೃತ ಗುಣವಚನ" (ಸೂ. 230) ಎಂದೂ ಬಳಕೆಯಾಗಿದೆ. ಕನ್ನಡದ ಗುಣ ವಚನಗಳನ್ನು ಪಟ್ಟಿಹಾಕುವಾಗ (ಸೂ. 87) 'ಗುಣವಾಚಿ' ಎನ್ನಲಾಗಿದೆ. ಮುಂದೆ "ಗುಣವಚನ" ಎಂದು ಬಳಸಿದಾಗಲೆಲ್ಲ (ದರ್ಪಣ ಸೂ. 99, 106, 163, 179, 230). ಕನ್ನಡ ಗುಣವಾಚಕಗಳನ್ನೇ ಕೊಡುವುದನ್ನು ಕಾಣಬಹುದು. ಹೀಗಿದ್ದೂ "ಇಂತುಟು (ಸೂ. 149), ಸೇರಿದುವು, ತೋರಿದುವು, ಬಟ್ಟಿದುವು" (ಸೂ. 150) ಇವುಗಳನ್ನು ವಿಶೇಷಣವೆಂದು ಕರೆದಿರುವುದರಿಂದ ದರ್ಪಣಕಾರ ಮೇಲಿನಂತೆ ಭಿನ್ನಾರ್ಥದಲ್ಲಿ ಗುಣವಚನ ಮತ್ತು ವಿಶೇಷಣವನ್ನು ಬಳಸಿರುವನೆನ್ನಲು ಸಾಧ್ಯವಾಗುವುದಿಲ್ಲ. ಈ ಉದಾಹರಣೆಯನ್ನು ಸ್ಮೃತಿಯ ಹಿನ್ನೆಲೆಯಲ್ಲಿ ಅಪವಾದವೆಂದಿಟ್ಟುಕೊಂಡರೆ ಮೇಲಿನಂತೆ ತೀರ್ಮಾನ ಮಾಡಬಹುದು.

'ಗುಣವಚನ ಲಿಂಗ'ವೆಂಬ ಪ್ರಯೋಗ ಒಮ್ಮೆಯಾದರೂ ಕನ್ನಡ ವ್ಯಾಕರಣಗಳಲ್ಲಿ ತಲೆದೋರಿಲ್ಲ.

**ಸರ್ವನಾಮ**

ಮಹಾಭಾಷ್ಯದಲ್ಲಿ "ಸರ್ವೇಷಾಂಯಂನ್ನಾಮ-ತತ್ಸರ್ವನಾಮ"(1-1-27) ಎಂದು ಸರ್ವನಾಮದ ವಿವರಣೆಯಿದೆ. "ಸಮಸ್ತ ವಸ್ತುವಾಚಕ" (ಕರ್ನಾಟಕ ವ್ಯಾಕರಣ ಸಾರ: ಪು. 13ರ ಅಡಿಟಿಪ್ಪಣಿ)—ಎಂದು ವಿದ್ವಾಂಸರು ಸರ್ವನಾಮವನ್ನು ಅರ್ಥವಿಸುತ್ತಾರೆ. ಅಷ್ಟಾಧ್ಯಾಯಿ (1-1-27), ಕಾತಂತ್ರ (2-1-82), ಜೈನೇಂದ್ರ (1-1-35) ಮೊದಲಾದ ವ್ಯಾಕರಣಗಳು 'ಸರ್ವನಾಮ' ಎಂಬ ಸಂಜ್ಞೆಯನ್ನು ಬಳಸಿವೆ. ಪ್ರಾಚೀನ ಸಂಸ್ಕೃತ ವೈಯಾಕರಣರು ಪುರುಷದ ಆಧಾರದಲ್ಲಿ ಸರ್ವನಾಮಗಳನ್ನು ವರ್ಗೀಕರಿಸಿಲ್ಲ (T.T.S.G: p. 129). ಅವರು ಗಣಪಾಠದಲ್ಲಿ ಬರುವ ಸರ್ವಾದಿಗಣವನ್ನು ಒಟ್ಟಿಗೆ ಸರ್ವನಾಮವೆಂದು ಕರೆದಿದ್ದಾರೆ. ಸರ್ವಾದಿ ಗಣದಲ್ಲಿ ಕೊನೆಯ ಹನ್ನೆರಡು ಶಬ್ದಗಳಿಗೆ ತ್ಯದಾದಿಯೆಂದು ಹೆಸರು. ಆ ಹನ್ನೆರಡು ಶಬ್ದಗಳಲ್ಲಿ ಯುಷ್ಮದ್ ಮತ್ತು ಅಸ್ಮದ್ ಶಬ್ದಗಳೂ ಸೇರಿವೆ.

ಸ್ಮೃತಿ ಭೂಷಣ ದರ್ಪಣಗಳು "ಸರ್ವನಾಮ"ವನ್ನು ಒಂದು ಪಾರಿಭಾಷಿಕ ಪದವಾಗಿ ಬಳಸುವುದರಲ್ಲಿ ಮತ್ತು ಪುರುಷದ ತಳಹದಿಯಲ್ಲಿ ಸರ್ವನಾಮಗಳ ವರ್ಗೀಕರಣ ಮಾಡದಿರುವಲ್ಲಿ ಸಂಸ್ಕೃತ ವ್ಯಾಕರಣಗಳನ್ನು ನೇರವಾಗಿ ಅನುಸರಿಸಿವೆ. ಸ್ಮೃತಿ ಅದು, ಇದು, ಉದುಗಳನ್ನು ನೇರವಾಗಿ ಸರ್ವನಾಮವೆಂದಿದೆ (ಸೂತ್ರ. 80). ಭೂಷಣವು ಸರ್ವನಾಮಗಳ ಪಟ್ಟಿಯನ್ನು ಕೊಟ್ಟಿಲ್ಲ. ಆದರೆ ಅದರ ನಿರೂಪಣೆಯ ಧಾಟಿಯಿಂದ ಅದು, ಇದು, ಉದು ಮತ್ತು ಎಲ್ಲದು ಎಂಬ ಶಬ್ದಗಳನ್ನು ಸರ್ವನಾಮವೆಂದು ಹೇಳುವಂತೆ ಭಾಸವಾಗುತ್ತದೆ (ಸೂ. 41, 48, 95). ದರ್ಪಣದಲ್ಲಿ ಸರ್ವನಾಮಗಳನ್ನು ಪಟ್ಟಿಮಾಡಿ ಕೊಡಲಾಗಿದೆ.

> "ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು ಎನಿಪ್ಪ ಶಬ್ದಂಗಳಾದಿಯಾದುವು ಸರ್ವನಾಮಂಗಳ್" (ಸೂತ್ರ 88ರ ವೃತ್ತಿ).

ಬಹುವಚನ ಪ್ರತ್ಯಯಗಳನ್ನು ಪಡೆದು ಮೇಲಿನ ಸರ್ವನಾಮಗಳು ಹೇಗೆ ಬಹುವಚನಾರ್ಥವನ್ನು ಕೊಡುವ ರೂಪಗಳಾಗುತ್ತವೆಯೆಂಬುದರ ವಿವರಣೆಯಲ್ಲಿ ಕನ್ನಡ ವ್ಯಾಕರಣಗಳು ಸಹಮತವಾಗಿವೆ. ಆನ್, ನೀನ್, ತಾನ್‌ಗಳು ಏಕವಚನ ರೂಪಗಳೆಂದೂ ಆವ್, ನೀವ್, ತಾವ್ ಎಂಬಿವು ಅವುಗಳ ಬಹುವಚನ ರೂಪಗಳೆಂದೂ ಕನ್ನಡ ವೈಯಾಕರಣರು ಹೇಳುತ್ತಾರೆ. ಸಂಸ್ಕೃತದಲ್ಲಿ ಸರ್ವನಾಮಗಳ ಪಟ್ಟಿಯಲ್ಲಿ ಬರುವ ಯುಷ್ಮದ್, ಅಸ್ಮದ್ ಮತ್ತು ಅನ್ಯ ಎಂಬ ಶಬ್ದಗಳನ್ನು ಆಧರಿಸಿ ಕನ್ನಡ ವೈಯಾಕರಣರು 'ನೀಂ, ಆಂ, ತಾಂ' ಗಳನ್ನು ವಿವರಿಸುತ್ತಾರೆ.[8]

ಸ್ಮೃತಿಯು ನೀಂ, ಆಂ. ತಾಂಗಳನ್ನು "ಯುಷ್ಮದಸ್ಮದನ್ಯೋಕ್ತಿ" (ಸೂತ್ರ. 36) ಗಳೆಂದು ಹೇಳುತ್ತದೆ. ಭೂಷಣ ಸ್ಮೃತಿಯನ್ನನುಸರಿಸಿ "ಯುಷ್ಮದಸ್ಮದನ್ಯದರ್ಥ" (ಸೂ. 92ರ ವೃತ್ತಿ) ವೆಂದು ಹೇಳುತ್ತದೆ. ದರ್ಪಣ ಮೇಲಿನ ಸಂಸ್ಕೃತ ಶಬ್ದಗಳನ್ನು ಕನ್ನಡಕ್ಕೆ "ನೀಂ, ಆಂ, ತಾಂ ಅರ್ಥ" ಎಂದು ಅನುವಾದಿಸಿಕೊಂಡಿದೆ. ಆದ್ದರಿಂದ ನೀಂ, ಆಂ, ತಾಂಗಳನ್ನು ಹೇಳಬೇಕಾದಲ್ಲಿ "ನೀನಾಂ ತಾನೆಂಬುಕ್ತಿಗಳ್" (ಸೂ. 99) ಎಂದಾಗಲಿ "ತಾಂ ನೀನಾನೆಂಬರ್ಥಳುಂಬಿಗಳ್" (ಸೂ. 235) ಎಂದಾಗಲಿ ಬಳಸುವು ದನ್ನು ಕಾಣಬಹುದು. ಸರ್ವನಾಮದ ಕುರಿತು ಸಂಸ್ಕೃತವನ್ನನುಸರಿಸಿಯೂ "ನೀಂ ಆಂ ತಾಂ"ಗಳಿಗೆ "ಸರ್ವನಾಮ" ಎಂಬ ಸಂಜ್ಞೆಯನ್ನು ಕನ್ನಡ ವ್ಯಾಕರಣಗಳು ಕೊಡ ದಿರುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಈ ವಿಚಾರದಲ್ಲಿ ಅದೇಕೋ ಅವು ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸಿಲ್ಲ. ಸ್ಮೃತಿ ಭೂಷಣಗಳಲ್ಲಿ ಉದಾಹರಣೆಗಳ ಮೂಲಕ "ನೀಂ" ಎಂಬುದನ್ನು ಸರ್ವನಾಮವೆಂದು ಧ್ವನಿಯಿಸಲಾಗಿದೆ.

ಸ್ಮೃತಿ : "ನೀಂಗಳ ಕಾಲ್ಗರ್ಚಿದ ನೀರುಂ...." (ಸೂತ್ರ 17ರ ಪ್ರಯೋಗ)

ಭೂಷಣ : "ನೀಂಗಳ್" (ಸೂತ್ರ 41ರ ಪ್ರಯೋಗ)

ದರ್ಪಣ ಈ ವಿಚಾರದಲ್ಲಿ ಸ್ಮೃತಿ ಭೂಷಣಗಳನ್ನು ಪೂರ್ಣವಾಗಿ ನಿರಾಕರಿಸಿದೆ. "ಸರ್ವ ನಾಮಗಳ ಪಟ್ಟಿಯಲ್ಲಿ ನೀನ್, ಆನ್, ತಾನ್ ಎಂಬಿವುಗಳನ್ನು ಕೇಶಿರಾಜನೂ ನಾಗವರ್ಮ ಭಟ್ಟಾಕಳಂಕರೂ ಸೇರಿಸಿಲ್ಲವೆಂಬುದನ್ನು" ವಿದ್ವಾಂಸರು ಎತ್ತಿ ತೋರಿಸಿದ್ದಾರೆ (ಶ್ರೀಕಂಠ ತೀರ್ಥ : ಪು. 577). ಸ್ಮೃತಿ ಭೂಷಣಗಳು 'ನೀಂ' ಎಂಬುದನ್ನಾದರೂ ಲಕ್ಷ್ಯಗಳ ಮೂಲಕ ಸರ್ವನಾಮವೆಂದು ಒಪ್ಪಿರುವುದನ್ನು ನೋಡಿದರೆ ಆಂ, ನೀಂ. ತಾಂ ಎಂಬ ಸರ್ವನಾಮಗಳು "ಸರ್ವನಾಮ" ಸಂಜ್ಞೆಗೆ ಅರ್ಹವಲ್ಲವೆಂಬ ಭಾವನೆ ಕಾಲಾನುಕ್ರಮದಲ್ಲಿ ಕನ್ನಡ ವ್ಯಾಕರಣಗಳಲ್ಲಿ ಹುಟ್ಟಿ ಬೆಳೆದಿರಬೇಕೆಂದು ತೋರುತ್ತದೆ. ಸಂಸ್ಕೃತ ವ್ಯಾಕರಣ ಗಳು ಮತ್ತು ದರ್ಪಣದ ಭಿನ್ನ ವಿಚಾರಗಳ ನಡುವಿನ ಸ್ಥಿತಿಯನ್ನು ಸ್ಮೃತಿಭೂಷಣಗಳು ಧ್ವನಿಸುತ್ತವೆಯೆನ್ನಬಹುದು.

ಕನ್ನಡ ವೈಯಾಕರಣರು ಮಧ್ಯಮೋತ್ತಮ ಪುರುಷ ವಾಚಕಗಳನ್ನು (ನೀಂ, ಆಂ, ತಾಂ) ಸರ್ವನಾಮಗಳ ಪಂಕ್ತಿಯಲ್ಲಿ ಸೇರಿಸದಿರುವುದು ಅರ್ಥವತ್ತಾಗಿದೆಯೆಂಬ ಅಭಿಪ್ರಾಯವಿದೆ. ಇತರ ಸರ್ವನಾಮಗಳಂತೆ ಬೇರೆ ನಾಮಪದಗಳನ್ನು ಸ್ಥಾನಾಂತರಿಸಿ (substitute) ನಿಲ್ಲಲು ಈ ಸರ್ವನಾಮಗಳಿಗೆ ಅಸಾಧ್ಯವಾಗಿರುವುದೇ ಈ ನಿಲುವಿಗೆ ಕಾರಣವಾಗಿದೆ. "ನೀಂ" ಮತ್ತು "ಆಂ" ಎಂಬಿವುಗಳ ಬಗ್ಗೆ ಮೇಲಿನ ಅಭಿಪ್ರಾಯ ಸಮರ್ಪಕವಾಗಿದೆಯಾದರೂ "ತಾಂ" ಎಂಬುದರ ಬಗ್ಗೆ ಆ ಸಮಾಧಾನ ಹೇಳಲು ಸಾಧ್ಯವಿಲ್ಲ (ಅದೇ ಪುಟ. 582).

'ಸರ್ವನಾಮ ಲಿಂಗ' ಎಂಬ ಪ್ರಯೋಗ ದರ್ಪಣದ ಪ್ರತ್ಯೇಕತೆ. ಭೂಷಣ ಅದು, ಇದು, ಉದುಗಳನ್ನು "ಪ್ರಕೃತಿ ವಿಶೇಷ"ವೆಂದು (ಸೂತ್ರ 95ರ ವೃತ್ತಿ) ಹೇಳಿದೆ.

ಸರ್ವನಾಮಂಗಳ ಮೂಲದ ಬಗ್ಗೆ ಮತ್ತು ಅವುಗಳ ಪುಂಸ್ತ್ರೀಲಿಂಗ ರೂಪಗಳ ಬಗ್ಗೆ ಮೂರೂ ಗ್ರಂಥಗಳು ಏಕಾಭಿಪ್ರಾಯ ತಾಳಿವೆ. ರೂಪಸಿದ್ಧಿಯ ಕುರಿತು ಮಾತ್ರ ಕೆಲವೆಡೆ ಭಿನ್ನಾಭಿಪ್ರಾಯವಿದೆ. ಸ್ಮೃತಿ (ಸೂ. 37) ಪುಂಸ್ತ್ರೀ ನಪುಂಸಕ ರೂಪಗಳನ್ನೇ ಕೊಟ್ಟರೆ ಭೂಷಣ ದರ್ಪಣಗಳು ನಪುಂಸಕ ರೂಪದಿಂದ ಪುಂಸ್ತ್ರೀ ರೂಪಗಳನ್ನು ಸಾಧಿಸುವ ವಿಚಾರವನ್ನು ಹೇಳುತ್ತವೆ (ಭೂಷಣ : ಸೂ. 95, 96 ದರ್ಪಣ. ಸೂ. 161, 165). ಏನ್ ಎಂಬ ಸರ್ವನಾಮದ ವಿವಿಧ ರೂಪಗಳ ಕುರಿತು ಸ್ಮೃತಿ ಭೂಷಣಗಳು ಮೌನ ತಾಳಿವೆ. ದರ್ಪಣ ಮಾತ್ರ ವಿವರಣೆ ಕೊಟ್ಟಿದೆ (ಸೂತ್ರ 122).

### ಸಮಸಂಸ್ಕೃತ

ಸಮಸಂಸ್ಕೃತ ಎಂಬ ಸಂಜ್ಞೆಯು ಬಳಕೆ ಸಂಸ್ಕೃತದಲ್ಲಿರಲೆಡೆಯಿಲ್ಲ. ಕವಿರಾಜ ಮಾರ್ಗ ಮೊದಲ್ಗೊಂಡು ಕನ್ನಡದ ಎಲ್ಲ ವ್ಯಾಕರಣಗಳಲ್ಲೂ ಈ ಪದವನ್ನು ಕಾಣ ಬಹುದು. ಇದಕ್ಕೆ ಮೂಲವೆಲ್ಲಿ ? ಎಂಬುದು ತಿಳಿಯುವುದಿಲ್ಲ. ಪ್ರಾಕೃತ ವ್ಯಾಕರಣ ಗಳಲ್ಲೂ ಇದು ಬಳಕೆಯಾದಂತೆ ತೋರುವುದಿಲ್ಲ. ತೆಲುಗಿನ ವ್ಯಾಕರಣಗಳಲ್ಲಿ ಬಳಸಲಾದ "ಸಂಸ್ಕೃತಸಮ" ಮತ್ತು ಮಲೆಯಾಳ ವ್ಯಾಕರಣಗಳಲ್ಲಿ ಹೇಳುವ "ಸಂಸ್ಕೃತ ರೂಪಾ" (ಲೀಲಾತಿಲಕ : ಸೂ. 16) ಎಂಬೆರಡು ಸಂಜ್ಞೆಗಳು ಹೆಚ್ಚು ಕಡಮೆ ಸಮಸಂಸ್ಕೃತಕ್ಕೆ ಸಂವಾದಿಯಾಗಿವೆ.

ಕನ್ನಡ ವ್ಯಾಕರಣಗಳಲ್ಲಿ 'ಸಮಸಂಸ್ಕೃತ ಲಿಂಗ' ಎಂಬ ಸಂಜ್ಞೆ ದರ್ಪಣದಲ್ಲಿ ಮಾತ್ರ ಕಂಡು ಬರುತ್ತದೆ (ದರ್ಪಣ ಸೂ. 91–97). ಆದರೆ ಭೂಷಣ ಮತ್ತು ದರ್ಪಣದಲ್ಲಿ ಸಮಸಂಸ್ಕೃತದ ಸ್ವರೂಪವೇನೆಂಬುದರ ಬಗ್ಗೆ ವಿವರಣೆಯಿದೆ. ಭೂಷಣದ ವಿವರಣೆ ಅತಿ ಸಂಕ್ಷಿಪ್ತವಾಗಿದ್ದರೆ ದರ್ಪಣದ ವಿವರಣೆ ವಿಸ್ತಾರವಾಗಿದ್ದು ಸರಳ ಹಾಗೂ ಸ್ಪಷ್ಟವಾಗಿದೆ. ಪ್ರಯೋಗಗಳ ಬಲದಿಂದ ಹೇಳುವುದಾದರೆ ಕವಿರಾಜಮಾರ್ಗ ಮತ್ತು ದರ್ಪಣದ ಸಮಸಂಸ್ಕೃತ ಕಲ್ಪನೆ ಒಂದು ವಿಧವಾಗಿಯೂ ಸ್ಮೃತಿ ಭೂಷಣಗಳದು ಇನ್ನೊಂದು ವಿಧವಾಗಿಯೂ ಇದೆಯೆನ್ನಬಹುದು.

ಕವಿರಾಜಮಾರ್ಗದಲ್ಲಿ ಒಟ್ಟು ಹನ್ನೊಂದು ಪದ್ಯಗಳಲ್ಲಿ (1–51–1–61) ಸಮಸಂಸ್ಕೃತಕ್ಕೆ ಸಂಬಂಧಿಸಿದಂತೆ ಮೂರು ವಿಚಾರಗಳನ್ನು ಹೇಳಲಾಗಿದೆ.

1. ಕನ್ನಡ ವಿಭಕ್ತಿಯನ್ನು ಸಮಸಂಸ್ಕೃತಕ್ಕೆ ಹಚ್ಚಬಹುದಲ್ಲದೆ ಸಂಸ್ಕೃತ ಪದಕ್ಕೆ ಹಚ್ಚ ಬಾರದು.
2. ಸಂಸ್ಕೃತಾವ್ಯಯಂಗಳು ಸಂಸ್ಕೃತದಲ್ಲಿ ಸಮಸ್ತವಾದರೆ ಮಾತ್ರ ಕನ್ನಡಕ್ಕೆ ಸಮ ಸಂಸ್ಕೃತವಾಗಿ ಬರಬಲ್ಲುವು.
3. ಸಮಾಸದಲ್ಲಿ ಸಮಸಂಸ್ಕೃತ–ಕನ್ನಡ ಪದಗಳ ಬೆರಕೆ ಸಾಧುವಲ್ಲ.

ಈ ಕುರಿತಾಗಿರುವ ಕವಿರಾಜಮಾರ್ಗದ ನಿರೂಪಣೆಯನ್ನು ಕೆಳಗಿನಂತೆ ಸಂಗ್ರಹಿಸ ಬಹುದು.

1. ಸಮಸಂಸ್ಕೃತಗಳೊಂದಿಗೆ ಕನ್ನಡವನ್ನು ಹೊಂದಿಕೆಯಾಗುವಂತೆ[10] ತಿಳಿದು ಹೇಳುವುದು 'ಆಗಮಕೋವಿದನಿಗದಿತಮಾರ್ಗ' ಎಂದರೆ ಸಮಸಂಸ್ಕೃತಗಳಿಗೆ ಕನ್ನಡ ನಾಮವಿಭಕ್ತಿಗಳನ್ನು ತಿಳಿದು ಹಚ್ಚುವುದು ಸ್ವೀಕೃತಮಾರ್ಗ ಎಂದಭಿಪ್ರಾಯ. ಆದರೆ ಸಂಸ್ಕೃತ ಪದಕ್ಕೆ ಕನ್ನಡ ವಿಭಕ್ತಿಗಳನ್ನು ಹಚ್ಚುವುದು ಅಮಾರ್ಗ (1-51).

2. ಅಹರಹಃ ಉಚ್ಚೈಃ....ಇತ್ಯಾದಿ ಅವ್ಯಯಗಳು ಅಸಹಾಯಿಗಳು ಎಂದರೆ ಅವು ನೇರವಾಗಿ ಕನ್ನಡ ವಿಭಕ್ತಿಗಳನ್ನು ಪಡೆಯಲಾರವು (1-52).
ಒಂದು ವೇಳೆ ಆ ಅವ್ಯಯಗಳನ್ನು ನೇರವಾಗಿ, ಇಲ್ಲವೆ ಕನ್ನಡ ವಿಭಕ್ತಿಗಳನ್ನು ಹಚ್ಚಿ ಬಳಸಿದರೆ ಕಾವ್ಯರಚನೆ ಬಂಧುರವಾಗದು ಎಂದು ಮಾತ್ರವಲ್ಲ, ಒತ್ತುಗ ರಡೆಯ ಮದ್ದಳೆಯ ಜರ್ಝರ ಧ್ವನಿಗಳಂತೆ ಪರುಷತರವಾದೀತು (1-53). ಬಹಿರಂತರುಪವನಂಗಳೊಳ್, ಅಹರಹಂ, ಸಹಸಾ ಇತ್ಯಾದಿ ಪ್ರಯೋಗಗಳು ಇದಕ್ಕೆ ನಿದರ್ಶನ (1-54). ಈ ಅವ್ಯಯಗಳು ಸಮಸಂಸ್ಕೃತದೊಂದಿಗೆ ಸೇರಿ ಸಮಸ್ತವಾಗಿ ಕನ್ನಡ ವಿಭಕ್ತಿಗಳನ್ನು ಪಡೆದು ಬಳಕೆಯಾದರೆ ಕಾವ್ಯರಚನೆ ಬಂಧುರವಾಗಿ ಮೃದಂಗ ಸಂಗೀತಕಾದಿ ಮಧುರರವಗಳಂತೆ ಮುದಪ್ರದವಾಗುವುವು (1-55). ಬಹಿರುದ್ಯಾನಾಂತರದೊಳ್, ಮುಹುರಾಕರ್ಣಿಸೆ, ಅಹರ್ನಿಶಂ.... ಇತ್ಯಾದಿ ಪ್ರಯೋಗಗಳು ಇದಕ್ಕೆ ಲಕ್ಷ್ಯಗಳು (1-56).

3. ಸಮಸಂಸ್ಕೃತ ಪದಗಳಲ್ಲಿ(ನೆಗಳ್ದಿರ್ದ ಕನ್ನಡಂಗಳೊಳ್) ಸಮಾಸವೆಸಗಬೇಕಾದಲ್ಲಿ ಅಗಣಿತ ಗುಣ ವಿದಿತ ಸಂಸ್ಕೃತೋಕ್ತ ಕ್ರಮವನ್ನು ಬಗೆಯಬೇಕು. ಎಂದರೆ, ಮೂಲಭೂತವಾಗಿ ಸಂಸ್ಕೃತ ಶಬ್ದಗಳೇ ಆಗಿರುವ ಸಮಸಂಸ್ಕೃತಗಳನ್ನು ಸಂಸ್ಕೃತ ವ್ಯಾಕರಣೋಕ್ತ ಕ್ರಮದಲ್ಲಿ ಸಮಾಸ ಮಾಡಬೇಕೆಂದು ಅಭಿಪ್ರಾಯ. ಹಾಗೆ ನಿರ್ಮಾಣವಾದ ಸಮಸ್ತ ಪದವು ಕನ್ನಡ ವಿಭಕ್ತಿಯನ್ನು ಹೊಂದಿ ಪ್ರಯುಕ್ತ ವಾಗಲು ಕನ್ನಡ ಕಾವ್ಯಬಂಧ ಅನಿಂದ್ಯವಾಗಿ ಸೊಗಯಿಸುತ್ತದೆ (1-57). ಹಾಗೆಂದು ಸಕ್ಕದವನ್ನೂ (ಸಮಸಂಸ್ಕೃತವನ್ನು) ಕನ್ನಡವನ್ನೂ ಸೇರಿಸಿ ಸಮಾಸ ಮಾಡಿ ನಿರ್ಮಾಣಗೊಂಡ ಸಮಸ್ತಪದಕ್ಕೆ ಕನ್ನಡ ವಿಭಕ್ತಿಯನ್ನು ಹಚ್ಚಿದರೆ (ಕನ್ನಡದಲ್ಲಿ ಬಳಸಿದರೆ ಎಂದರ್ಥ) "ಮಜ್ಜಿಗೆಯ ಪಾಲ್ಗೆ ಅಳೆಯುಪನಿಗಳು ಬೆರೆಸಿ" ದಂತೆ ವಿರಸವಾಗುವುದು (1-58). ಅರಸುಕುಮಾರನು, ಆಯತತರ ಕಡೆ ಗಣ್ಣಿಂದ, ಮುಖತಾವರೆಯು ಇತ್ಯಾದಿ ಪ್ರಯೋಗಗಳಲ್ಲಿ ಅಂತಹ ವಿರಸತೆಯಿದೆ (1-59). ಈ ಸಮಸ್ತಪದಗಳನ್ನು "ಅಗಣಿತ ಗುಣವಿದಿತ ಸಂಸ್ಕೃತೋಕ್ತ ಕ್ರಮ"ವನ್ನು ಬಗೆದು ನರಪತಿ ತನಯನು, ಆಯತತರಳಾಪಾಂಗದೊಳೆ, ಮುಖ ಸರಸಿಜವು, ಇತ್ಯಾದಿಯಾಗಿ ಹೇಳಿದರೆ ಸಮರ್ಪಕ (1-60). ಹೀಗೆ ನಿರ್ಮಿಸಿದ ಸಂಸ್ಕೃತ ಸಮಸ್ತಪದಗಳನ್ನು ಕನ್ನಡ ಸಮಸ್ತಪದಗಳನ್ನು (ಬೆರಸಿ) ಬಳಸಿದರೆ ಕನ್ನಡ ಕಾವ್ಯಬಂಧವು, ಕನಕರಚನೆಯಲ್ಲಿ ಮಣಿನಿಕರವು ಶೋಭಿಸುವಂತೆ, ಸುಂದರವಾಗುತ್ತದೆ (1-61).

ಸಮಸಂಸ್ಕೃತದ ಕುರಿತಾಗಿ ಹೇಳುವಲ್ಲಿ ಮಾರ್ಗಕಾರ ಬಳಸುವ "ಇದು ಬೆರಸಲ್ಕೆ" (1-51), ಬೆರಸಿರೆ ಕನ್ನಡದೊಳ್ (1-53), ಬೆರಸಿದರೆ ಕನ್ನಡದೊಳ್ (1-55), ಬೆರಸಿದೊಡೆ (1-58) ಮುಂತಾದ ಪದಗಳು ಒಂದು ವಿಶಿಷ್ಟಾರ್ಥದಲ್ಲಿ ಬಂದಂತೆ ಭಾಸವಾಗುತ್ತದೆ. ಇಲ್ಲಿ "ಬೆರಸುವಿಕೆ-ಸಮಾಸ" (ಕ. ಮಾ. ವಿ. : ಪು. 130) ಎಂದು ಅಭಿನ್ನಾರ್ಥವನ್ನು ಹೇಳುವುದು ಸರಿಯಲ್ಲ. 'ಬೆರಸು' ಎಂಬ ಕ್ರಿಯೆಯೊಡನೆ 'ಕನ್ನಡ' ಎಂಬ ಪದವನ್ನು ಅವಗಾಹಿಸಬೇಕಾಗುತ್ತದೆ. ಆಗ ಮೇಲಿನ ಪ್ರಯೋಗಗಳಿಗೆ'ಕನ್ನಡವನ್ನು ಬೆರಸುವುದು' ಎಂದರೆ ಕನ್ನಡದಲ್ಲಿ ಬಳಸುವುದು ಅರ್ಥಾತ್ ಕನ್ನಡ ನಾಮ ವಿಭಕ್ತಿಗಳನ್ನು ಹಚ್ಚುವುದು ಎಂದರ್ಥಯಿಸಿದರೆ ಸಮರ್ಪಕವಾದೀತು. ಕನ್ನಡ ಸಕ್ಕದಗಳ ಸಮಾಸದ ಕುರಿತು ಹೇಳುವಲ್ಲಿ "ಸಮಾಸೋಕ್ತಿಗಳೊಳ್ ಕುಜಿತು ಬೆರೆಸಿದೊಡೆ" (1-58) ಎಂಬ ಸ್ಪಷ್ಟವಾದ ಹೇಳಿಕೆ ಈ ನಿಲುವಿಗೆ ಪುಷ್ಟಿ ನೀಡುತ್ತದೆ. "ಆ ಸಮಸಂಸ್ಕೃತ ಪದಂಗಳನಚ್ಚ ಗನ್ನಡದೊಳ್ ಬೆರೆಸಿ ಸಮಾಸಮಂ ಮಾಡಲಾಗದು" (ಸೂತ್ರ 90ರ ಪ್ರಯೋಗ) ಎಂಬ ದರ್ಪಣದ ಹೇಳಿಕೆಯನ್ನು ಈ ದೃಷ್ಟಿಯಿಂದ ನೋಡಬೇಕು. ಒಂದೇ ಮಾತಿನಲ್ಲಿ ಸಮಾಸ ಮತ್ತು ಬೆರಸು ಎಂಬೆರಡು ಶಬ್ದಗಳೂ ಬಂದಿರುವುದು ಮುಖ್ಯ. 'ಬೆರಸು' ವಿಗೆ ಮೇಲಿನ ಅರ್ಥವನ್ನು ಹೇಳಿದಾಗ 'ಸಮಸಂಸ್ಕೃತವೆಂದರೆ ಕನ್ನಡ ಪ್ರತ್ಯಯಗಳಿಂದ ಕೂಡಿದ ಸಂಸ್ಕೃತಪದ" (ಅದೇ. ಪು. 127) ಎಂಬ ಅಭಿಪ್ರಾಯ ಹೆಚ್ಚು ಸಮರ್ಪಕ ವಾಗುತ್ತದೆ.

ಕವಿರಾಜ ಮಾರ್ಗದಲ್ಲಿ 'ಸಮಸಂಸ್ಕೃತ' ಸಂಬಂಧವಾಗಿ ಬರುವ ನಿರೂಪಣೆಯಲ್ಲಿ ಪ್ರಯುಕ್ತವಾದ ಸಂಸ್ಕೃತ ಮತ್ತು ಸಮಸಂಸ್ಕೃತ ಪದಗಳೊಳಗೆ ಅರ್ಥಭಿನ್ನತೆಯಿಲ್ಲ. "ಕನ್ನಡ ಪ್ರತ್ಯಯ ಹತ್ತುವಲ್ಲಿ ಅಂತ್ಯ ವ್ಯತ್ಯಾಸಗೊಳ್ಳುವ ಸಂಸ್ಕೃತ ನಾಮ ಪ್ರಕೃತಿಗಳು 'ಸಂಸ್ಕೃತ', ವ್ಯತ್ಯಾಸಗೊಳ್ಳದ ಸಂಸ್ಕೃತ ನಾಮಪ್ರಕೃತಿಗಳು ಸಮಸಂಸ್ಕೃತವೆಂದು (ಕ.ಪ. ಕ.ಸಾ.ಪು. 95) ಅರ್ಥಯಿಸಲು ಮಾರ್ಗಕಾರ ಎಡೆಗೊಡುವುದಿಲ್ಲ. 1-51ರಲ್ಲಿ ಬಂದ 'ಸಕ್ಕದ' ಶಬ್ದಕ್ಕೆ ಮಾತ್ರ ಸಂಸ್ಕೃತ ವಿಭಕ್ತ್ಯಂತ ಪದ ಇಲ್ಲವೆ "ಸಮಸಂಸ್ಕೃತ" ವಿಧಾನ ವನ್ನು ಹೊಂದದ ಸಂಸ್ಕೃತ ಪದವೆಂಬ ಅರ್ಥವಾದರೆ 1-58 ಮತ್ತು 1-61ರಲ್ಲಿ ಬಂದ "ಸಕ್ಕದ" ಕ್ಕೆ "ಸಮಸಂಸ್ಕೃತ"ವೆಂದೇ ಅರ್ಥ. ಆದ್ದರಿಂದ ಸಂಸ್ಕೃತ, ಸಕ್ಕದ ಮತ್ತು ಸಮಸಂಸ್ಕೃತಗಳು ಪರ್ಯಾಯವಾಚಿಗಳು. ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತ ಪದ ಕ್ಕಿರುವ ಒಂದು ಸಂಜ್ಞೆ ಮಾತ್ರ "ಸಮಸಂಸ್ಕೃತ". ಈ ಸಂಜ್ಞೆಗೆ ಅರ್ಹವಾಗಬೇಕಾದರೆ ಕೆಲವೊಮ್ಮೆ ವಿಶಿಷ್ಟವಾದ ಸಂಸ್ಕಾರವನ್ನು ಹೊಂದಬೇಕಾಗುತ್ತದೆ (ಲಾಕ್ಷಣಿಕನಾದ ಮಾರ್ಗಕಾರ ಆ ಸಂಸ್ಕಾರದ ಕುರಿತು ಹೇಳಿಲ್ಲವಾದರೂ ವೈಯಾಕರಣನಾದ ದರ್ಪಣಕಾರ ಹೇಳುತ್ತಾನೆ). ಒಮ್ಮೆ ಆ ಸಂಜ್ಞೆಯ ವಿಚಾರವನ್ನು ದೃಢೀಕರಿಸಿದ ಬಳಿಕ ಅದನ್ನು ಸಮಸಂಸ್ಕೃತವೆಂದರೂ ಸರಿ, ಸಕ್ಕದ ಇಲ್ಲವೆ ಸಂಸ್ಕೃತವೆಂದರೂ ಸರಿ ('ಸಮಸಂಸ್ಕೃತ' ಸಂಜ್ಞೆಯನ್ನು ಹೊಂದುವ ಪದ ಮೂಲಭೂತವಾಗಿ ಸಂಸ್ಕೃತವಷ್ಟೆ). ದರ್ಪಣದಿಂದ ಈ ವಿಚಾರ ಮತ್ತಷ್ಟು ಸ್ಫುಟವಾಗುತ್ತದೆ. ಮಾರ್ಗಕಾರನ 'ಸಕ್ಕದ' ದರ್ಪಣಕಾರನಿಗೆ

ಒಮ್ಮೆ 'ಸಮಸಂಸ್ಕೃತ'ವಾಗಿ ಇನ್ನೊಮ್ಮೆ "ಸಂಸ್ಕೃತ"ವಾಗಿದೆ. ಕವಿರಾಜ ಮಾರ್ಗದಲ್ಲಿ ಸಕ್ಕದ ಮತ್ತು ಕನ್ನಡಗಳ ಮಿಶ್ರಸಮಾಸಕ್ಕೆ ಉದಾಹರಿಸಿದ ಅರಸುಕುಮಾರ ಇತ್ಯಾದಿ ಯಾದ ಪ್ರಯೋಗಗಳು ದರ್ಪಣದಲ್ಲಿ ಒಂದೆಡೆ ಸಮಸಂಸ್ಕೃತ-ಕನ್ನಡ ಪದಗಳ ಬೆರಕೆಯ ಸಮಾಸಕ್ಕೆ ಲಕ್ಷ್ಯವಾಗಿ ಬಂದರೆ (ಸೂತ್ರ 90ರ ಪ್ರಯೋಗ) ಇನ್ನೊಂದೆಡೆ ಕನ್ನಡ-ಸಂಸ್ಕೃತಗಳ ಪದವಿಧಿಗೆ (ಸೂತ್ರ 185ರ ಪ್ರಯೋಗ) ಉದಾಹರಣೆಯಾಗಿವೆ. ಇದನ್ನು ನೋಡಿದರೆ ಸಕ್ಕದ-ಕನ್ನಡಗಳ ಬೆರಕೆಯೆಂದರೆ ಸಮಸಂಸ್ಕೃತ-ಕನ್ನಡಗಳ ಬೆರಕೆಯೆಂಬ ಅಭಿಪ್ರಾಯ ಹಿಂದೆ ಇದ್ದಿತೆಂದು ಹೇಳಬೇಕಾಗುತ್ತದೆ. "ಸಮಸಂಸ್ಕೃತ"ದ ಕಲ್ಪನೆ ಬಹಳ ಹಿಂದಿನಿಂದಲೇ ಬಂದುದೆಂಬುದನ್ನು ದರ್ಪಣಕಾರನು ಹೇಳುವ "ಸಂಖ್ಯಾವ್ಯಯಂಗಳುಂ ಕಳೆದುಳಿದ ನಿಘಂಟುವಿನ ಸುಲಲಿತಾಕ್ಷರಮಪ್ಪ ನಾಮಪದ ಪ್ರಕೃತಿಗಳುಂ ಕನ್ನಡಕ್ಕೆ ಸರಿ ಮಾಡಿ ಸಮಸಂಸ್ಕೃತಮೆಂದು ಶಬ್ದಜ್ಞರ್ ಲಿಂಗಂ ಮಾಳ್ಪರ್" (ಸೂತ್ರ 90ರ ವೃತ್ತಿ) ಎಂಬ ವೃತ್ತಿವಾಕ್ಯ ಸ್ಪಷ್ಟೀಕರಿಸುತ್ತದೆ. ಕವಿರಾಜಮಾರ್ಗ ಕಾಲದಲ್ಲಿದ್ದ "ಸಮ ಸಂಸ್ಕೃತ"ದ ಕಲ್ಪನೆಯನ್ನೇ ಕೇಶಿರಾಜ ಯಥಾವತ್ತಾಗಿ ಸ್ವೀಕರಿಸಿ ಅದರ ವಿಧಾನವನ್ನು ಎಳೆಎಳೆಯಾಗಿ ಬಿಡಿಸಿ ಹೇಳಿದ್ದಾನೆ. ಹಾಗಾಗಿ "ಕನ್ನಡದ ಯಾವ ವೈಯಾಕರಣಿಗೂ ಇಲ್ಲದ ಸಂಸ್ಕೃತ-ಸಮಸಂಸ್ಕೃತಗಳ ಖಚಿತ ಜ್ಞಾನ ಮಾರ್ಗಕಾರನಿಗೆ ಇದೆ" (ಕ.ಪ.ಕ.ಸಾ. ಪು. 94) ಎಂಬ ಅಭಿಪ್ರಾಯವೂ ನಿಲ್ಲಲಾರದು.

ಸ್ಮೃತಿಯಲ್ಲಿ "ಸಮಸಂಸ್ಕೃತ" ಎಂಬ ಪ್ರಯೋಗ ಒಮ್ಮೆ ಮಾತ್ರ ತಲೆದೋರಿದೆ. ಅದರ ಸ್ವರೂಪದ ಖಚಿತವಾದ ನಿರೂಪಣೆ ಗ್ರಂಥದಲ್ಲಿಲ್ಲದುದರಿಂದ ಸಮಸಂಸ್ಕೃತದ ಕುರಿತು ಸ್ಮೃತಿಯ ನಿಲುವನ್ನು ಊಹಿಸಬೇಕಾಗುತ್ತದೆ.

"ಬೆರಸಿ ಸಮಸಂಸ್ಕೃತಂಗಳ್ ಬರೆ ಕನ್ನಡದೊಡನೆ ಸಮತೆಯಿಂದಂ ಸಲ್ಗುಂ ನಿರವದ್ಯಮಾಗಿ ಪದವಿಧಿ" (ಸೂತ್ರ 63) ಎಂದು ಹೇಳಿರುವುದರಿಂದ ಸಮಸಂಸ್ಕೃತ-ಕನ್ನಡ ಪದಗಳ ಸಮಾಸಕ್ಕೆ ಸಾಧುತ್ವ ದೊರಕಿಸಿದಂತಾಯಿತು. ಇದಕ್ಕೆ ಲಕ್ಷ್ಯವಾಗಿ ಕೊಟ್ಟ "ಅರಸುಗುಣಂ", "ಪರವೆಣ್", "ಅಟುಜನ" ಮೊದಲಾದ ಪ್ರಯೋಗಗಳಲ್ಲಿ ಗುಣ, ಪರ, ಜನ ಎಂಬ ಪದಗಳು ಸಮಸಂಸ್ಕೃತವೆಂದು ತಿಳಿಯಬೇಕಾಗುತ್ತದೆ. ಈ ಪದಗಳ ಕೊನೆಯಲ್ಲಿ ಕನ್ನಡ ವಿಭಕ್ತಿಗಳು ಸೇರುವಾಗ ಯಾವುದೇ ಬದಲಾವಣೆಯಿಲ್ಲ. "ಸಮಂಚ ತತ್ ಸಂಸ್ಕೃತಂಚ ಸಮಸಂಸ್ಕೃತಂ" ಎಂಬ ವಿಗ್ರಹವಾಕ್ಯಕ್ಕೆ ಕನ್ನಡದಲ್ಲಿ ಸಮಾನರೂಪದಿಂದಿದ್ದುಕೊಂಡ ಸಂಸ್ಕೃತ ಎಂದು ಅರ್ಥ. (ಕ.ಮಾ.ವಿ.ಪು. 127). ಇದಕ್ಕೆ ಮೇಲಿನ ಪದಗಳು ಹೊಂದಿಕೊಳ್ಳುತ್ತವೆ.

"ವಿರುದ್ಧಮಕ್ಕುಂ ತದನ್ಯಥಾವೃತ್ತಿಗಳೊಳ್" (ಸೂತ್ರ 63) ಎಂಬ ಮಾತಿಗೆ ಉದಾಹರಣೆಯಾಗಿ ಬಂದ "ಮಾಣಿಕ್ಯಭಂಡಾರ" ಎಂಬುದು ಅಪಪ್ರಯೋಗವೆಂಬುದು ಸ್ಮೃತಿಯ ಅಭಿಮತ. ಈ ಪ್ರಯೋಗದಲ್ಲಿ 'ಮಾಣಿಕ್ಯ' ಶುದ್ಧ ಸಂಸ್ಕೃತ ಪದವಾದರೆ. ಭಂಡಾರ ಕನ್ನಡ ಪದ. ಎಂದರೆ ಇದು ಸಂಸ್ಕೃತ-ಕನ್ನಡ ಪದಗಳ ಮಿಶ್ರ ಸಮಾಸ ಎಂದಂತಾಯಿತು. ಸ್ಮೃತಿಯ ದೃಷ್ಟಿಯಲ್ಲಿ ಈ ವಿಧವಾದ ಸಮಾಸ ಅಗ್ರಾಹ್ಯ.

ಮಾಣಿಕ್ಯಭಂಡಾರದ ಸಾಧುರೂಪ ''ಮಾಣಿಕಭಂಡಾರ''ವೆಂಬುದು ದರ್ಪಣಾವಲೋಕನದಿಂದ ತಿಳಿಯುತ್ತದೆ (ಸೂತ್ರ 304ರ ಪ್ರಯೋಗ). ಹೀಗೆ ವಿಚಾರಿಸಿದಾಗ ಸ್ಮೃತಿಕಾರನ ದೃಷ್ಟಿಯಲ್ಲಿ ಸಂಸ್ಕೃತ ಬೇರೆ ; ಸಮಸಂಸ್ಕೃತ ಬೇರೆಯೆಂಬುದು ಸ್ಫುಟವಾಗುತ್ತದೆ. ಹಾಗಾಗಿ ಯಾವ ರೀತಿಯಲ್ಲೂ ವ್ಯತ್ಯಾಸ ಹೊಂದದಿರುವ ಎಂದರೆ ತದ್ಭವವಾಗದಿರುವ ಸಂಸ್ಕೃತ ಪದಕ್ಕೆ 'ಸಮಸಂಸ್ಕೃತ'ವೆಂಬ ಸಂಜ್ಞೆ ಮತ್ತು ವ್ಯತ್ಯಾಸ ಹೊಂದತಕ್ಕ ಸಂಸ್ಕೃತ ಪದಗಳಿಗೆ ''ಸಂಸ್ಕೃತ'' ಎಂಬ ಸಂಜ್ಞೆ—ಈ ವಿಧವಾದ ವಿಚಾರ ಸ್ಮೃತಿಯಿಂದ ಧ್ವನಿತವಾಗುತ್ತದೆ ಎನ್ನಬಹುದು. ಇಲ್ಲಿನ ಸಮಸಂಸ್ಕೃತದ ಕಲ್ಪನೆ ಕವಿರಾಜಮಾರ್ಗಕ್ಕಿಂತ ತೀರ ಭಿನ್ನವೆಂಬುದು ಸ್ಪಷ್ಟ.

ಭೂಷಣದಲ್ಲಿ ''ಸಂಸ್ಕೃತ ಪದಸಮಂ ಯತ್ಪದಂ ತತ್ ಸಮಸಂಸ್ಕೃತಂ'' (ಸೂತ್ರ 132ರ ವೃತ್ತಿ) ಎಂದರೆ ''ಸಂಸ್ಕೃತ ಪದಕ್ಕೆ ಸಮನಾದ ಪದವು ಯಾವುದೋ ಅದು ಸಮಸಂಸ್ಕೃತ'' ಎಂಬ ವಿವರಣೆಯಿದೆ. ಇದಕ್ಕೆ ಪ್ರತ್ಯೇಕವಾದ ಯಾವುದೇ ಉದಾಹರಣೆಯಿಲ್ಲ. ಸಮಸಂಸ್ಕೃತಕ್ಕೂ ದೇಶೀಯ ಪದಕ್ಕೂ ಸಮಾಸವನ್ನು ಸ್ಮೃತಿಯಂತೆ ಭೂಷಣವೂ ಹೇಳುತ್ತದೆ (ಸೂ. 132). ಇದಕ್ಕೆ ಪ್ರಯೋಗವಾಗಿ ಕೊಟ್ಟಿರುವ ''ಪರದೇಸಂ, ಪರತೊತ್ತುಟಿ... ಪೊಡವೀಶಂ'' ಮುಂತಾದ ಸಮಸ್ತಪದಗಳಲ್ಲಿ ಪೂರ್ವ ಇಲ್ಲವೆ ಉತ್ತರ ಪದ ಸಂಸ್ಕೃತವಾಗಿದೆ. ಅವುಗಳಲ್ಲಿ 'ಈಶ' ಎಂಬ ಶಬ್ದವೊಂದನ್ನು ಬಿಟ್ಟರೆ ಉಳಿದ ಶಬ್ದಗಳು ಯಾವ ವಿಧದಲ್ಲೂ ತದ್ಭವವಾಗದ ಸಂಸ್ಕೃತ ಶಬ್ದಗಳಾಗಿವೆ. ಮಾತ್ರವಲ್ಲ, ಕನ್ನಡ ವಿಭಕ್ತಿಗಳನ್ನು ಸ್ವೀಕರಿಸುವಾಗ ಅವು ಯಾವುದೇ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಆದ್ದರಿಂದ ಸಮಸಂಸ್ಕೃತದ ಕಲ್ಪನೆಯಲ್ಲಿ ಸ್ಮೃತಿಯೊಂದಿಗೆ ಭೂಷಣ ಸಹಮತವಾಗಿದೆಯೆನ್ನಬಹುದು. ಸಂಸ್ಕೃತ-ಕನ್ನಡ ಪದಗಳ ಸಮಾಸದ ಕುರಿತು ಭೂಷಣ ಮೌನ ತಾಳಿದೆ. ಸ್ಮೃತಿ ಭೂಷಣಗಳು ಸ್ವೀಕಾರಾರ್ಹವಾದ ಸಮಸಂಸ್ಕೃತ-ಕನ್ನಡ ಪದಗಳ ಮಿಶ್ರ ಸಮಾಸಕ್ಕೆ ಕೊಡುವ ಉದಾಹರಣೆಗಳಲ್ಲಿ ಕೆಲವು— ''ಅರಸುಗುಣಂ. ಅಟ್ಟಿಜನಂ, ಕೂರಸಿ, ತುರಗದಟಂ, ಮಂಗಳಾರತಿ, ಕಡುರಾಗಂ'' ಮೊದಲಾದುವು ದರ್ಪಣಕಾರನ ''ಮಾರ್ಗದೊಳಂಟು ಅರಿಸಮಾಸಕ್ಕೆ'' ಲಕ್ಷ್ಯಗಳಾಗಿ ಬಂದುದನ್ನು ಕಾಣಬಹುದು. ಅಲ್ಲಿ ದರ್ಪಣಕಾರನಿಗೆ ಸಮಸಂಸ್ಕೃತ ಮತ್ತು ಸಂಸ್ಕೃತ ಸಮಾನಾರ್ಥಕಗಳಾಗಿರುವುದು ಅವನ ಭಿನ್ನ ದೃಷ್ಟಿಗೆ ಸಾಕ್ಷಿಯಾಗಿದೆ.

ಸ್ಮೃತಿಭೂಷಣಗಳಲ್ಲಿ ''ಸಮಸಂಸ್ಕೃತ''ವೆಂದು ಹೆಸರಿಸದೆ ಸಂಸ್ಕೃತದಿಂದ ಕನ್ನಡಕ್ಕೆ ಎತ್ತಿಕೊಳ್ಳುವ ಸಂಸ್ಕೃತ ಸ್ವೀಕರಣಗಳ ವಿಚಾರ ವಿವರಿಸಲ್ಪಟ್ಟಿದೆ (ಸ್ಮೃತಿ: ಸೂ. 38-43 ; ಭೂಷಣ ಸೂ. 98-111). ಅದು ದರ್ಪಣ ಹೇಳುವ ಸಮಸಂಸ್ಕೃತ ವಿಧಾನಕ್ಕೆ ಸಂವಾದಿಯಾಗಿರುವುದು ಗಮನಾರ್ಹ.

ದರ್ಪಣದಲ್ಲಿ ಸಮಸಂಸ್ಕೃತದ ಖಚಿತವಾದ ನಿರೂಪಣೆಯಿದೆ. ಒಟ್ಟು 8 ಸೂತ್ರಗಳಲ್ಲಿ ಅದನ್ನು ವಿವರಿಸಲಾಗಿದೆ (90-97). ಸಂಸ್ಕೃತ ಪದವೆಂದರೆ ಸಂಸ್ಕೃತ ವಿಭಕ್ತ್ಯಂತವಾದ ಪದ. ಅದು ನೇರವಾಗಿ ಕನ್ನಡದಲ್ಲಿ ಬಳಕೆಯಾಗದು. ಹಾಗಾಗಿ

ಸಂಸ್ಕೃತ ನಿಘಂಟುವಿನಲ್ಲಿರುವ ನಾಮಪದಗಳ "ಪ್ರಕೃತಿ"ಗಳನ್ನು "ಕನ್ನಡಕ್ಕೆ ಸರಿ ಮಾಡಿ" ತೆಗೆದುಕೊಂಡಾಗ ಅವುಗಳಿಗೆ "ಸಮಸಂಸ್ಕೃತ" ಎಂಬ ಸಂಜ್ಞೆ ಸಲ್ಲುವುದು (ಸೂತ್ರ 90). ಮೊದಲು ನಾಮ "ಪ್ರಕೃತಿ"ಯೆಂದರೂ ಆ ಬಳಿಕ ವಿಭಕ್ತ್ಯಂತ ಪದ ಗಳನ್ನು ಲಿಂಗವಾಗಿಸುವ ವಿಧಾನ ವಿವರಿಸಲ್ಪಟ್ಟಿದೆ (ಸೂತ್ರ 97). ಕವಿರಾಜಮಾರ್ಗ ದಲ್ಲಿ ಸಂಸ್ಕೃತಾವ್ಯಯಗಳು ನೇರವಾಗಿ ಲಿಂಗವಾಗವು ಎಂದು ಹೇಳಿದರೆ ಅವ್ಯಯಗಳ ಜೊತೆಯಲ್ಲಿ ಸಂಖ್ಯಾವಾಚಕ, ತ್ಯದಾದಿ ಮತ್ತು ಶತೃ-ಣಂತಗಳನ್ನು ದರ್ಪಣ ಸೇರಿಸಿ ಕೊಂಡಿದೆ. (ಸೂ. 91, 92). ಸಮಸಂಸ್ಕೃತದ ಕುರಿತು ದರ್ಪಣದಲ್ಲಿ ಸವಿಸ್ತರವಾಗಿ ವಿವರಿಸಿದ ವಿಚಾರಗಳನ್ನು ಕೆಳಗಿನಂತೆ ವಿಭಾಗಿಸಬಹುದು :

1. ಸ್ವರಾಂತ ಪ್ರಕೃತಿಗಳ ಲಿಂಗ ವಿಧಾನ . (ಸೂ. 92, 93, 94, 95)
2. ವ್ಯಂಜನಾಂತ ಪ್ರಕೃತಿಗಳ ಲಿಂಗವಿಧಾನ : (ಸೂ. 96)
3. ವಿಭಕ್ತ್ಯಂತ ಪದಗಳ ಲಿಂಗವಿಧಾನ : (ಸೂ. 97)
4. ಅವ್ಯಯ, ಸಂಖ್ಯಾವಾಚಕ, ಶತೃ-ಣಂತಗಳ ಲಿಂಗವಿಧಾನ (ಸೂ. 91, 92).

ದರ್ಪಣದ ನಿರೂಪಣೆಯಿಂದ ವ್ಯಕ್ತವಾಗುವಂತೆ ಯಾವುದೇ ವ್ಯತ್ಯಾಸವನ್ನು ಹೊಂದದೆಯೂ ಸಂಸ್ಕೃತ ಪ್ರಕೃತಿಗಳು ಕನ್ನಡದಲ್ಲಿ "ಸಮ ಸಂಸ್ಕೃತ ಸಂಜ್ಞೆ"ಯನ್ನು ಹೊಂದಬಲ್ಲುವು ಮತ್ತು ಯಾವುದೇ ರೀತಿಯಲ್ಲಿ ಕನ್ನಡದಲ್ಲಿ ತದ್ಭವವಾಗದಿರುವ ಸಂಸ್ಕೃತ ಪ್ರಕೃತಿಗಳಿಗೂ ಸಮಸಂಸ್ಕೃತ ಲಿಂಗವಾಗಬಲ್ಲವು. ಸ್ಮೃತಿ ಭೂಷಣಗಳೊಡನೆ ಹೋಲಿ ಸಿದಾಗ ಎದ್ದು ಕಾಣುವ ದರ್ಪಣದ ಪ್ರತ್ಯೇಕತೆಯಿದು. ಕವಿ, ಗಿರಿ, ನಯನ ಇತ್ಯಾದಿಗಳು ಇದಕ್ಕೆ ನಿದರ್ಶನ. ಮಾತ್ರವಲ್ಲ, ಯಾವುದೇ ಸಂಸ್ಕೃತ ಶಬ್ದ "ಸಮಸಂಸ್ಕೃತ"ವಾಗದೆ ಕನ್ನಡದಲ್ಲಿ ಲಿಂಗವಾಗದು, ಎಂದರೆ ವಿಭಕ್ತಿಯನ್ನು ಸ್ವೀಕರಿಸುವ ಸ್ಥಿತಿಗೆ ಬರಲಾರದು. ಆದ್ದರಿಂದ ಮೇಲೆ ವರ್ಗೀಕರಿಸಿದ ವಿಧಾನಗಳಲ್ಲಿ ಬಂದಿರುವ ಸ್ವೀಕರಣವೊಂದನ್ನು ಸಂಸ್ಕೃತ, ಸಕ್ಕದ, ಸಮ-ಸಂಸ್ಕೃತ ಈ ಮೂರು ಸಂಜ್ಞೆಗಳಿಂದ ಗುರುತಿಸುವುದನ್ನು ದರ್ಪಣದಲ್ಲಿ ಕಾಣಬಹುದು.[11] ಈ ವಿಚಾರದಲ್ಲಿ ದರ್ಪಣ ಕವಿರಾಜಮಾರ್ಗವನ್ನು ಅನುಸರಿಸಿದೆಯೆಂಬುದನ್ನು ಹಿಂದೆಯೇ ವಿಚಾರಿಸಲಾಗಿದೆ. ಆದ್ದರಿಂದ ಕೇಶಿರಾಜನು 'ಕವಿರಾಜ ಮಾರ್ಗಕಾರನಿಂದ ಲಕ್ಷಿತವಾದ ಸಮಸಂಸ್ಕೃತ ಸ್ವರೂಪವನ್ನು ಖಂಡಿಸಲಿಲ್ಲ. ಅದನ್ನೇ ವ್ಯಾಪಕವಾಗಿ, ವಿಶದವಾಗಿ ವಿವೇಚಿಸಿದ್ದಾನೆ (ಕ.ಮಾ.ವಿ. ಪು.127 ಅಡಿಟಿಪ್ಪಣಿ) ಎಂಬ ಅಭಿಪ್ರಾಯ ಒಪ್ಪತಕ್ಕುದಾಗಿದೆ.

ಇದುವರೆಗೆ ಚರ್ಚಿಸಿದ ವಿಷಯಗಳಿಂದ ಸಮಸಂಸ್ಕೃತದ ಕುರಿತು ಕೆಳಗಿನಂತೆ ತೀರ್ಮಾನಿಸಬಹುದು.

1. ನೇರವಾಗಿ ಇಲ್ಲವೆ ಶಬ್ದಾಂತ್ಯದಲ್ಲಿ ವ್ಯತ್ಯಾಸಗೊಂಡು ಕನ್ನಡ ವಿಭಕ್ತಿಗಳನ್ನು ಸ್ವೀಕರಿಸಲು ಸಿದ್ಧವಾದ ಸಂಸ್ಕೃತ ಶಬ್ದಗಳಿಗೆ ವ್ಯಾಕರಣದಲ್ಲಿ 'ಸಮಸಂಸ್ಕೃತ'ವೆಂಬ

ಸಂಜ್ಞೆ. ಮೂಲದಲ್ಲಿ ಸಂಸ್ಕೃತ ಶಬ್ದಗಳಾದುದರಿಂದ ಅವುಗಳನ್ನು 'ಸಂಸ್ಕೃತ' ಇಲ್ಲವೆ 'ಸಕ್ಕದ' ಎಂದೂ ಹೇಳಬಹುದು.

2. ಸಂಸ್ಕೃತವೇ ಆಗಿರುವ 'ಸಮಸಂಸ್ಕೃತ'ಗಳನ್ನು (ಕೆಲವು ನಿರ್ದಿಷ್ಟ ಪದಗಳನ್ನು ಬಿಟ್ಟು[13]) ಕನ್ನಡ ಪದಗಳೊಡನೆ ಸಮಾಸ ಮಾಡಬಾರದು. ಸಮಸಂಸ್ಕೃತಗಳ ಸಮಾಸ, ಸಂಸ್ಕೃತ ವ್ಯಾಕರಣ ರೀತ್ಯಾ ನಡೆಯಬೇಕು.

3. ಸಂಸ್ಕೃತದ ಸಂಖ್ಯಾವಾಚಕಗಳು, ಅವ್ಯಯಗಳು, ತ್ಯದಾದಿಗಳು ಮತ್ತು ಶತೃಅಂತ ಗಳು ಕನ್ನಡದಲ್ಲಿ ವ್ಯಸ್ತವಾಗಿ ಬಳಕೆಯಾಗವು. ಸಂಸ್ಕೃತ ಪದಗಳೊಂದಿಗೆ ಸಮಸ್ತ ವಾದ ಬಳಿಕಷ್ಟೇ ಕನ್ನಡದಲ್ಲವು ಲಿಂಗವಾಗಲು ಸಾಧ್ಯ.

## ಲಿಂಗ (Gender)

"ಭಾಷೆಯಲ್ಲಿಯ ಕ್ರಿಯಾರ್ಥವನ್ನು ಹೇಳದ ಎಲ್ಲ ಶಬ್ದಗಳು ವಿಭಕ್ತಿ ಪ್ರತ್ಯಯ ದೊಂದಿಗೆ ವಾಕ್ಯಗಳಲ್ಲಿ ಪ್ರಯೋಗಿಸಲ್ಪಡುವ ಕ್ರಮವು ಒಂದೇ ಬಗೆಯಲ್ಲಿ ಇರುವುದಿಲ್ಲ. ಅವುಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಆ ಭಿನ್ನತೆಯನ್ನು ವಿಭಾಗಿಸುವ ಕ್ರಮವು ಲಿಂಗ ವೆನ್ನಿಸಿಕೊಳ್ಳುತ್ತದೆ" (ಕ.ಭಾ.ಚ. ಪು. 493). ಭಾಷೆಯಲ್ಲಿರುವ ಲಿಂಗವಿಭಾಗ ಎಲ್ಲ ಭಾಷೆಗಳಲ್ಲೂ ಸಮಾನವಾಗಿರುವುದಿಲ್ಲ. ಕೆಲವು ಭಾಷೆಗಳಲ್ಲಿ ಸ್ತ್ರೀಪುರುಷ ಭೇದದ ಆಧಾರದಲ್ಲಿ ಲಿಂಗ ವಿಭಾಗದಿದ್ದರೆ ಇನ್ನು ಕೆಲವು ಭಾಷೆಗಳಲ್ಲಿ ಶಬ್ದ ಸ್ವರೂಪ ಇಲ್ಲವೆ ಅರ್ಥವನ್ನನುಸರಿಸಿ ಲಿಂಗ ವಿಭಜನೆಯಿರುತ್ತದೆ.

ಸಂಸ್ಕೃತದಲ್ಲಿ 'ಲಿಂಗ' ಪಾರಿಭಾಷಿಕ ಪದವಾಗಿ ಮೊದಲ ಬಾರಿಗೆ ಗೋಪಥ ಬ್ರಾಹ್ಮಣದಲ್ಲಿ ಕಾಣಿಸಿಕೊಳ್ಳುತ್ತದೆ. ಉಪನಿಷತ್ತುಗಳಲ್ಲಿ mark, token, characteristic (SED. p. 101) ಎನ್ನುವ ಅರ್ಥದಲ್ಲಿ 'ಲಿಂಗ' ಬಳಕೆಗೊಂಡಿದೆ. ನಿರುಕ್ತ ದಲ್ಲಿಯೂ 'ಲಿಂಗ'ವು Characteristic ಎಂಬ ಅರ್ಥವನ್ನು ಹೊಂದಿದೆ. From this, on one hand 'Linga' came to mean the characteristic of the male, Phallus, on the other hand it came to signify grammatical gender" (T.T.S.G. p. 117) ಎಂಬ ವಿವರಣೆ 'ಲಿಂಗ'ದ ಅರ್ಥದಲ್ಲುಂಟಾದ ಬೆಳವಣಿಗೆಯನ್ನು ಸರಿಯಾಗಿ ಹೇಳುತ್ತದೆ. ಅಷ್ಟಾಧ್ಯಾಯಿಯ "ಲುಪಿ ಯುಕ್ತವದ್ ವ್ಯಕ್ತಿವಚನೇ"(1-2-51) ಎಂಬ ಸೂತ್ರವನ್ನು ಪರಿಶೀಲಿಸಿದರೆ 'ಲಿಂಗ' ಎನ್ನುವ ಅರ್ಥ ದಲ್ಲಿ "ವ್ಯಕ್ತಿ" ಎಂಬ ಪದವೂ ಬಳಕೆಯಾಗುತ್ತಿದ್ದುದು ಸ್ಪಷ್ಟವಾಗುತ್ತದೆ. ಕಾಶಿಕಾದ "ವ್ಯಕ್ತಿ : ಸ್ತ್ರೀಪುಂ ನಪುಂಸಕಾನಿ" (1-2-51) ಎಂಬ ಮಾತು ಮೇಲಿನ ಅಭಿಪ್ರಾಯಕ್ಕೆ ಪುಷ್ಟಿ ನೀಡುತ್ತದೆ. ಲಿಂಗವೆಂದರೆ ಗುರುತು. ವ್ಯಕ್ತಿಯೆಂದರೆ ವ್ಯಂಜನೆ (indication) ಎಂದರೆ ಇಲ್ಲಿ ಶಬ್ದರೂಪ ವಿಶೇಷದ ವ್ಯಂಜನೆಯೆಂದರ್ಥ.

ಪುಂಸ, ಸ್ತ್ರೀ, ನಪುಂಸಕ ಎಂಬ ತ್ರಿವಿಧ ಲಿಂಗಗಳ ಉಲ್ಲೇಖ ಶತಪಥ ಬ್ರಾಹ್ಮಣ ದಲ್ಲಿದೆ. "ತ್ರಿಷು ಲಿಂಗೇಷು" ಎಂದು ಗೋಪಥ ಬ್ರಾಹ್ಮಣ ಹೇಳುತ್ತದೆ. ವ್ಯಸನ್

ಮತ್ತು ಯೋಷಾ ಎಂಬ ಪದಗಳು ಅನುಕ್ರಮವಾಗಿ ಪುಲ್ಲಿಂಗ-ಸ್ತ್ರೀಲಿಂಗಾರ್ಥಗಳಲ್ಲಿ ಐತರೇಯ ಬ್ರಾಹ್ಮಣ ಮತ್ತು ಐತರೇಯ ಆರಣ್ಯಕದಲ್ಲಿ ಬಳಕೆಯಾಗಿವೆ. ಅಷ್ಟಾಧ್ಯಾಯಿ ಮತ್ತು ಕಾತಂತ್ರದಲ್ಲಿ ಮೂರು ಲಿಂಗಗಳ ಸಂಜ್ಞೆಗಳಾಗಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗ ಎಂಬ ಪದಗಳು ಪ್ರಯುಕ್ತವಾಗಿವೆ. 'ನಪುಂಸಕ'ವನ್ನು ಜೈನೇಂದ್ರ 'ನಪ್' ಎಂದು ಹೇಳುತ್ತದೆ.

ಮೂರು ಲಿಂಗದ ಸ್ಥೂಲಕಲ್ಪನೆ ಹಾಗೂ ತ್ರಿವಿಧ ಲಿಂಗಗಳನ್ನು ಹೇಳುವ ಪಾರಿಭಾಷಿಕ ಪದಗಳು ನೇರವಾಗಿ ಸಂಸ್ಕೃತ ವ್ಯಾಕರಣದಿಂದ ಕನ್ನಡ ವ್ಯಾಕರಣಕ್ಕೆ ಜಿಗಿದಿವೆ. ದರ್ಪಣ ಹೇಳುವ "ಲಿಂಗವೆಂಬುದು ವಸ್ತುವಿನ ಕುರುಪಂ ಪೇೞ್ವುದು" (ಸೂ. 137ರ ವೃತ್ತಿ) ಎಂಬಲ್ಲಿನ ಅಭಿಪ್ರಾಯ ಉಪನಿಷತ್ತಿನ ನಿಲುವಿಗೆ ಸಮೀಪವಾಗಿದೆ. ಸ್ಮೃತಿ ಭೂಷಣ ದರ್ಪಣಗಳಲ್ಲಿ ತ್ರಿವಿಧ ಲಿಂಗಗಳನ್ನು ಹೇಳಲು ಬಳಸಿದ ಪದಗಳು ಕೆಳಗಿನಂತಿವೆ.

| ಗ್ರಂಥ | ಪುಲ್ಲಿಂಗ | ಸ್ತ್ರೀಲಿಂಗ | ನಪುಂಸಕ ಲಿಂಗ |
|---|---|---|---|
| ಸ್ಮೃತಿ | ಪುರುಷವಾಚಕ | ಸ್ತ್ರೀವಾಚಕ | ನಪುಂಸಕ |
| | ಪುಲ್ಲಿಂಗ | ಸ್ತ್ರೈಣ | ನಿಧನ |
| | ಪುಂಸ್ | ಸ್ತ್ರೀ | ನಪುಂಸಕತ್ವ |
| | ಪುಂಸ್ತ್ವ | ಸ್ತ್ರೀವಿಷಯ | |
| ಭೂಷಣ | ಪುರುಷವಾಚಕ | ಸ್ತ್ರೀವಾಚಕ | ನಪುಂಸಕ |
| | ಪುಂಸ್ | ಸ್ತ್ರೀ | ನಪುಂಸಕತ್ವ |
| | ಪುಂ | | ನಪ್ |
| ದರ್ಪಣ | ಪುಲ್ಲಿಂಗ | ಸ್ತ್ರೀಲಿಂಗ | ನಪ್ |
| | ಪುಂ | ಸ್ತ್ರೀ | ನಪುಂಸಕ |
| | | ಕಾಂತಾವಿಷಯ | ನಪ್ಪು |

ಲಿಂಗಭೇದಗಳನ್ನು ಹೇಳುವ ಮೇಲಿನ ಹೆಚ್ಚಿನ ಪಾರಿಭಾಷಿಕ ಪದಗಳು ಅಷ್ಟಾಧ್ಯಾಯಿ, ಕಾತಂತ್ರ ಮತ್ತು ಜೈನೇಂದ್ರದಿಂದ ಸ್ವೀಕೃತವಾಗಿದೆ. ಒಂದೇ ಅರ್ಥವನ್ನು ಕೊಡುವ ಭಿನ್ನಪದಗಳ ಬಳಕೆ (ಸ್ತ್ರೀವಾಚಕ, ಸ್ತ್ರೈಣ ಇತ್ಯಾದಿ) ಕನ್ನಡ ವ್ಯಾಕರಣಗಳ ಪ್ರತ್ಯೇಕತೆ.

### ಲಿಂಗಗಳೆಷ್ಟು ?

ಸಂಸ್ಕೃತ ವೈಯಾಕರಣರು ಪ್ರಧಾನವಾಗಿ ಮೂರು ಲಿಂಗಗಳನ್ನು ಹೇಳಿದರೂ ಸಂಸ್ಕೃತದಲ್ಲಿ ಕೆಲವು ಪ್ರಕೃತಿಗಳು ಒಂದಕ್ಕಿಂತ ಹೆಚ್ಚು ಲಿಂಗಗಳಲ್ಲಿ ವರ್ತಿಸುವುದರಿಂದ ಒಟ್ಟು ನವವಿಧ ಲಿಂಗಗಳನ್ನು ಅಲ್ಲಿ ಹೇಳುವುದುಂಟು. ಅಮರಚಂದ್ರನ ಸ್ಯಾದಿ ಸಮುಚ್ಚಯದ ಕೆಳಗಿನ ಶ್ಲೋಕ ಇದಕ್ಕೆ ನಿದರ್ಶನ :

ಶಬ್ದಾ : ಸ್ತ್ರೀಲಿಂಗಾ : ಪುಲ್ಲಿಂಗಾ : ಕ್ಲೀಬಲಿಂಗಕಾ :
ಸ್ತ್ರೀಪುಲ್ಲಿಂಗಕಾ : ಪುನ್ನಬ್ಲಿಂಗಾ : ಸ್ತ್ರೀಕ್ಲೀಬಲಿಂಗಕಾ :
ತ್ರಿಲಿಂಗಕಾ ಅಲಿಂಗಾಶ್ಚ ವಾಚ್ಯಲಿಂಗಾ ಅಥಕ್ರಮಾತ್
ನವ ಪ್ರಕಾರ ಶಬ್ದಾನಾಂ ಲಿಂಗಭೇದೋ ಭವತ್ಯಪಿ

(ದರ್ಪಣ(ಮ)ಅನುಬಂಧ-6)

"ಅರ್ಥವನ್ನನುಸರಿಸಿಯಾಗಲೀ, ವಾಕ್ಯದಲ್ಲಿಯಂ ಕ್ರಿಯಾಪದಗಳಲ್ಲಿ ಬರುವ ಪ್ರತ್ಯಯ ಜಾತಿಗಳಿಂದಾಗಲಿ ನಾಮಂಗಳನ್ನು ಇಂತಹ ಲಿಂಗಜಾತಿಗೆ ಸೇರಿದುವೆಂದು ಸಂಸ್ಕೃತದಲ್ಲಿ ಹೇಳಲು ಸಾಧ್ಯವಿಲ್ಲ" (ಶ್ರೀಕಂಠತೀರ್ಥ : ಪು. 580). ಆದುದರಿಂದ ಮೇಲಿನ ನವ ವಿಧ ಲಿಂಗಗಳ ಕಲ್ಪನೆ ಅಲ್ಲಿಗೆ ಸಹಜವೆನಿಸಿದೆ. ಆದರೆ ಸ್ತ್ರೀಪುಂನಪುಂಸಕಗಳೆಂಬ ಪ್ರಧಾನವಾದ ಮೂರು ವಿಧ ಲಿಂಗಗಳ ಆಧಾರದಲ್ಲಿ ಉಳಿದ ಆರು ಲಿಂಗಗಳು ನಿಂತಿವೆ ಯೆಂಬುದಿಲ್ಲಿ ಗಮನಾರ್ಹ.

ಸ್ಮೃತಿ ಭೂಷಣಗಳು ಪುಂಸ್ತ್ರೀ ನಪುಂಸಕಗಳೆಂಬ ಮೂರು ಲಿಂಗಗಳನ್ನು ಹೇಳಿದರೆ ದರ್ಪಣ ಮೊದಲಿಗೆ ನವವಿಧಲಿಂಗಗಳನ್ನು ಹೇಳುತ್ತದೆ.

"ನೀನಱಿ ಕರ್ಣಾಟಕದೊಳ್
ಪೀನಂ ಸ್ತ್ರೀಪುಂ ನಪುಂಸಕೋಭಯ ಪುಂಸ್ತ್ರೀ
ಸ್ತ್ರೀನಪ್ ಸಮಸ್ತವಾಚ್ಯಾ
ನೂನಾವ್ಯಯಮೆಂದು ಲಿಂಗಮೊಂಬತ್ತು ತೆಱು" (ಸೂತ್ರ 98)

ದರ್ಪಣದ ಈ ನಿರೂಪಣೆ ಮೇಲೆ ಉಲ್ಲೇಖಿಸಿದ ಸಂಸ್ಕೃತದ ನವವಿಧ ಲಿಂಗಗಳ ಕಲ್ಪನೆಯ ದಟ್ಟವಾದ ನೆರಳಲ್ಲಿ ಮೂಡಿ ಬಂದುದೆಂಬುದರಲ್ಲಿ ಎರಡು ಮಾತಿಲ್ಲ. ಅಲ್ಲಿನ ಅಲಿಂಗ ಇಲ್ಲಿ ಅವ್ಯಯಲಿಂಗವಾದುದು ಮಾತ್ರ ಎದ್ದು ಕಾಣುವ ಅಂತರ. ಇಲ್ಲಿಯೂ ಸ್ತ್ರೀಪುಂ ನಪುಂಸಕ ಲಿಂಗಗಳ ಆಧಾರದಲ್ಲಿ ಉಳಿದ ಆರು ಲಿಂಗಗಳು ನೆಲೆನಿಂತಿರುವುದು ಗಮನಾರ್ಹ.

ದರ್ಪಣದ ನವವಿಧ ಲಿಂಗ ಕಲ್ಪನೆಗೆ ಸಂಸ್ಕೃತ ವ್ಯಾಕರಣಗಳ ಲಿಂಗಭೇದಗಳ ಜೊತೆಯಲ್ಲಿ ಕನ್ನಡದ ಕಾವ್ಯ ಭಾಷೆಯೂ ಸ್ವಲ್ಪಮಟ್ಟಿಗೆ ಕಾರಣವೆನ್ನಬೇಕು. ಕೆಳಗಿನ ಲಕ್ಷ್ಯಗಳು ಇದಕ್ಕೆ ನಿದರ್ಶನ.

ಪುನ್ನಪುಂಸಕಕ್ಕೆ : ರವಿಮೂಡಿದಂ, ರವಿಮೂಡಿದುದು, ವಿಧುಮೂಡಿದಂ,
ವಿಧುಮೂಡಿದುದು........ಇತ್ಯಾದಿ

ಸ್ತ್ರೀನಪುಂಸಕಕ್ಕೆ : ಆ ಪೆಣ್ ಬಾಣೆ, ಆ ಪೆಣ್ ಬಂದುದು, ಈ ಕನ್ನಿಕೆ ಸಲಕ್ಷಣೆ,
ಈ ಕನ್ನಿಕೆ ಪೊಲ್ಲದು....ಇತ್ಯಾದಿ (ಸೂ. 98ರ ಪ್ರಯೋಗ)

ಕನ್ನಡದಲ್ಲಿ ಕ್ರಿಯಾಪದವು ನಾಮದ ಲಿಂಗನಿರ್ಣಯದ ಒಂದು ಸಾಧನವೆಂಬುದನ್ನು ಮನದಂದರೆ ಮೇಲಿನ ಉದಾಹರಣೆಗಳಲ್ಲಿ ಒಂದೇ ನಾಮ ಎರಡು ಲಿಂಗಗಳಲ್ಲಿ ವ್ಯವಹರಿಸುತ್ತಿರುವುದನ್ನು ಕಾಣಬಹುದು. ಆಗ ಆ ನಾಮಂಗಳ ದ್ವಿವಿಧ ಲಿಂಗಕ್ಕೆ ಕನ್ನಡ ಕಾವ್ಯಭಾಷೆಯೆ ಕಾರಣವಾಗುತ್ತದೆ. ಉಳಿದ ನಾಲ್ಕು ವಿಧವಾದ ಲಿಂಗಗಳನ್ನು ಗುರುತಿಸುವಾಗ ದರ್ಪಣಕಾರ ಪೂರ್ಣವಾಗಿ ಸಂಸ್ಕೃತದ ರೀತಿಯನ್ನು ಅನುಸರಿಸಿರುವ ನೆಂಬುದರಲ್ಲಿ ಅನುಮಾನವಿಲ್ಲ.

ಮೊದಲು 'ಲಿಂಗವೊಂಬತ್ತುತೆಱಂ' ಎಂದು ಹೇಳಿದರೂ ಕನ್ನಡದಲ್ಲಿ ಸಹಜವಾಗಿ ಪುಂಸ್ತ್ರೀ ನಪುಂಸಕಗಳೆಂಬ ಮೂರು ಲಿಂಗಗಳನ್ನು ಮಾತ್ರ ದರ್ಪಣಕಾರ ಒಪ್ಪಿಕೊಳ್ಳು ತ್ತಾನೆ. 'ಪರಿವರ್ತಿಸುವುಟಿದ ಲಿಂಗವೊಳವಾಗಿರ್ದುಂ' (ಸೂತ್ರ 101) ಎಂಬ ಹೇಳಿಕೆ ವಿಚಾರಿಸತಕ್ಕುದಾಗಿದೆ. ಸಹಜವಾಗಿರುವುದು ಮೂರೇ ಲಿಂಗಗಳೆಂದೂ, ಉಳಿದ ಆರು ವಿಧವಾದ ಲಿಂಗಗಳು ಕ್ವಚಿತ್ಪ್ರಯೋಗಗಳೆಂದೂ ಕೇಶಿರಾಜನ ಅಭಿಪ್ರಾಯ. ಕನ್ನಡ ಭಾಷೆಯ ಜೀವಾಳವನ್ನು ಗುರುತಿಸಿಯೂ ಸಂಸ್ಕೃತದ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳ ಲಾರದ ಸ್ಥಿತಿಗೆ ಈ ಸಂದರ್ಭ ಒಳ್ಳೆಯ ಉದಾಹರಣೆ. ಒಟ್ಟಿನಲ್ಲಿ ಒಂಭತ್ತು ಲಿಂಗ ಗಳನ್ನು ಕನ್ನಡದಲ್ಲಿ ಗುರುತಿಸುವ ಪ್ರಯತ್ನ ಹುರುಳಿಲ್ಲದ ಕೆಲಸವೆಂಬುದರಲ್ಲಿ ಸಂದೇಹ ವಿಲ್ಲ.

ಮೂರು ಲಿಂಗಗಳ ವಿವರಣೆ ದರ್ಪಣದಲ್ಲಿ ಮಾತ್ರ ಕಂಡುಬರುತ್ತದೆ.

'ಪುರುಷರ್ ಪುಲ್ಲಿಂಗಂ'
'ಸ್ತ್ರೀಯರ್ ಸ್ತ್ರೀಲಿಂಗಂ'
'ಉೞಿದುವೆಲ್ಲಂ ನಪ್' (ಸೂ. 101)

ಇಂತಹ ವಿವರಣೆ ಸ್ಮೃತಿ ಭೂಷಣಗಳಲ್ಲಿಲ್ಲವಾದರೂ ಮೂರು ಲಿಂಗಗಳ ಕುರಿತಾಗಿರುವ ದೃಷ್ಟಿಯಲ್ಲಿ ಆ ಗ್ರಂಥಗಳು ದರ್ಪಣದೊಂದಿಗೆ ಸಹಮತವಾಗಿವೆಯೆಂಬುದನ್ನು ಮುಂದೆ ನೋಡಬಹುದು.

ಕನ್ನಡ ವ್ಯಾಕರಣಗಳು ಒಮ್ಮತದಿಂದ ಸ್ವೀಕರಿಸಿರುವ ತ್ರಿವಿಧ ಲಿಂಗ ವಿಭಾಗ ನಾನಾ ವಿಧವಾದ ಟೀಕೆಗೆಡೆಯಾಗಿದೆ. "ಸಂಸ್ಕೃತ ವ್ಯಾಕರಣವನ್ನನುಸರಿಸಿದ ಕನ್ನಡ ವೈಯಾಕರಣಿಗಳು ಸಹ ಪ್ರಾಮುಖ್ಯವಾಗಿ ಮೂರುಲಿಂಗಗಳನ್ನೇ ಹೇಳುತ್ತಾರೆ" (ಕ.ಭಾ.ಚ.ಪು. 434) ಎಂಬ ಅಭಿಪ್ರಾಯವಿದೆ. "...the grammars of Kannada borrowed from Sanskrit the three-fold division in maculine, feminine and neuter" (GSODL p. 5) ಎಂಬ ನಿರ್ಣಯ ಸರಿಯಲ್ಲ. ಭಾಷೆಯ ಲಿಂಗವ್ಯವಸ್ಥೆ ಬೇರೆ; ಅದನ್ನು ಹೇಳುವ ಪಾರಿಭಾಷಿಕ ಪದ ಬೇರೆ. ಪಾರಿಭಾಷಿಕ ಪದವೊಂದರಲ್ಲಿ ಸಮಾನತೆ ಕಂಡುಬಂದಾಗ ಭಾಷಾಪ್ರಕ್ರಿಯೆಯಲ್ಲಿ ಸಮಾನತೆಯನ್ನು ಕಾಣಲೆಡೆಯಿಲ್ಲ. ಕನ್ನಡ ವ್ಯಾಕರಣಗಳು ಲಿಂಗವಿಭಾಗಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ

ಪದಗಳನ್ನು ಸಂಸ್ಕೃತ ವ್ಯಾಕರಣದಿಂದೆತ್ತಿಕೊಂಡುದು ಸತ್ಯ. ಸ್ಥೂಲವಾಗಿ ಸಂಸ್ಕೃತ ಕ್ರಮವನ್ನು ಕಂಡದ್ದು ಸತ್ಯ. ಆದರೆ ಅವುಗಳು ಹೇಳುವ ಕನ್ನಡ ಲಿಂಗ ವ್ಯವಸ್ಥೆ-ಅದೂ ತ್ರಿವಿಧ ಲಿಂಗವ್ಯವಸ್ಥೆ–ಸಂಸ್ಕೃತಕ್ಕಿಂತ ಶೀರ ವ್ಯತಿರಿಕ್ತವಾಗಿರುವುದಲ್ಲದೆ ದ್ರಾವಿಡಭಾಷೆಗಳ ಮೂಲಭೂತವಾದ ದ್ವಿವಿಧ ಲಿಂಗವ್ಯವಸ್ಥೆಗೆ ಅನುರೂಪವಾಗಿರುವುದೆಂಬುದರಲ್ಲಿ ಅನುಮಾನವಿಲ್ಲ. ಸಂಸ್ಕೃತ ಭಾಷೆಯ ಲಿಂಗವ್ಯವಸ್ಥೆಯೊಂದಿಗೆ ಹೋಲಿಸಿದಾಗ ಈ ಅಂಶ ವಿಶದವಾಗುತ್ತದೆ.

ಸಂಸ್ಕೃತದಲ್ಲಿ ಅರ್ಥಾನುಸಾರವಾದ ಲಿಂಗ ವಿಭಜನೆಯಿಲ್ಲ. ಒಂದೇ ಅರ್ಥವನ್ನು ಕೊಡುವ ಭಿನ್ನಪದಗಳು ಭಿನ್ನಲಿಂಗಗಳಲ್ಲಿರುವುದನ್ನಲ್ಲಿ ಕಾಣಬಹುದು. 'ಹೆಂಡತಿ' ಎಂಬ ಅರ್ಥವನ್ನೀಯುವ 'ಪತ್ನೀ' ಎಂಬ ಶಬ್ದ ಸ್ತ್ರೀಲಿಂಗದಲ್ಲಿರುವುದಾದರೆ 'ಕಲತ್ರಂ'ನಪುಂಸಕದಲ್ಲಿದೆ. 'ದಾರಾಃ' ಎಂಬುದು ನಿತ್ಯ ಪುಲ್ಲಿಂಗ ಬಹುವಚನವಾಗಿದೆ. ಒಂದೇ ಅರ್ಥವನ್ನು ಕೊಡುವ ತಟಃ, ತಟೀ, ತಟಮ್ ಅನುಕ್ರಮವಾಗಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳಲ್ಲಿವೆ. ಹಾಗಾಗಿ ಒಂದು ಶಬ್ದದಿಂದ ವ್ಯಕ್ತವಾಗತಕ್ಕದ್ದು ಗಂಡೋ, ಹೆಣ್ಣೋ ಅಥವಾ ಎರಡೂ ಅಲ್ಲದ್ದೋ ಎಂದಾಗಲೀ ಮಾನವ ಅಥವಾ ಮಾನವೇತರ ಎಂದಾಗಲಿ. ಬುದ್ಧಿಯಿದ್ದುದೋ ಬುದ್ಧಿಯಿಲ್ಲದ್ದೊ ಎಂದಾಗಲೀ ಯಾವುದೇ ಒಂದು ನಿಶ್ಚಿತವಾದ ಬುನಾದಿಯಲ್ಲಿ ಸಂಸ್ಕೃತದ ಲಿಂಗವಿಭಾಗ ನಿಂತುಕೊಂಡಿಲ್ಲ. ಆದಕ್ಕೆ ಬದಲಾಗಿ ಹೆಚ್ಚು ಕಡಮೆ ಶಬ್ದದ ರೂಪವಿಶೇಷ ಲಿಂಗ ನಿರ್ಣಯಕ್ಕೆ ಕಾರಣೀಭೂತವಾಗಿದೆ.

ದ್ರಾವಿಡ ಭಾಷೆಗಳ ಲಿಂಗವಿಭಾಗ ಅರ್ಥಾನುಸಾರವಾಗಿದೆ. ಬುದ್ಧಿಯನ್ನು ಆಧರಿಸಿಗೊಂಡು ಇಲ್ಲಿನ ಲಿಂಗವ್ಯವಸ್ಥೆ ನಿಂತುಕೊಂಡಿದೆ. ಬುದ್ಧಿಯಿದ್ದುದೆಲ್ಲವೂ ಒಂದು ವರ್ಗವಾದರೆ ಬುದ್ಧಿಯಿಲ್ಲದುವೆಲ್ಲವೂ ಇನ್ನೊಂದು ವರ್ಗ. ತಮಿಳು ಹಾಗೂ ತೆಲುಗು ವ್ಯಾಕರಣಗಳನ್ನನುಸರಿಸಿ ಹೇಳುವುದಾದರೆ ಈಯೆರಡು ವರ್ಗಗಳನ್ನು ಮೇಲುವರ್ಗ ಮತ್ತು ಕೆಳವರ್ಗ ಎನ್ನಬಹುದು. ಮೇಲುವರ್ಗದಲ್ಲಿ ಮಾನವ ವರ್ಗ–ಆದರಲ್ಲೂ ಬುದ್ಧಿ ಬೆಳೆದ ವಿಭಾಗ–ಸೇರಿದರೆ ಉಳಿದೆಲ್ಲವೂ ಕೆಳವರ್ಗದಲ್ಲಿ ಸೇರುತ್ತವೆ. ಮೇಲು ವರ್ಗದ ಏಕವಚನದಲ್ಲಿ ಮಾತ್ರ ಹೆಣ್ಣು-ಗಂಡು ಎಂಬ ಭೇದ ತಿಳಿಯುತ್ತದೆ. ಈ ದೃಷ್ಟಿಯಿಂದ "The Dravidian sex-concept, with reference to gender is confined only to the human" (ದ್ರಾ.ಭಾ.ವಿ : ಪು : 254. ಅಡಿಟಿಪ್ಪಣಿ. 1) ಎಂಬ ಅಭಿಪ್ರಾಯ ಅರ್ಥವತ್ತಾಗಿದೆ.

ಕನ್ನಡ ವೈಯಾಕರಣರು ಹೇಳುವ ಲಿಂಗವಿಭಾಗವನ್ನು ಪರಾಂಬರಿಸಿದರೆ ಅದು ಆಧುನಿಕ ದ್ರಾವಿಡ ಭಾಷಾ ವಿಜ್ಞಾನಿಗಳು ಹೇಳುವ ಲಿಂಗವಿಭಾಗಕ್ಕೆ ಅನುಸಾರವಾಗಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ತೆಲುಗು ಮತ್ತು ತಮಿಳು ವೈಯಾಕರಣರು ಹೇಳುವ ಲಿಂಗವ್ಯವಸ್ಥೆಯನ್ನು ಎತ್ತಿಹಿಡಿದು ಕನ್ನಡ ವೈಯಾಕರಣರ ನಿರೂಪಣೆಯನ್ನು ಅಲ್ಲಗಳೆಯುವುದೂ ಇದೆ (G.S.O.D.L. p.5). ಆದರೆ ಕೆಳಗಿನಂತೆ ಅರ್ಥಯಿಸಿದರೆ ಆ ಭಾಷಾ ವೈಯಾಕರಣರಿಗಿಂತ ಕನ್ನಡ ವೈಯಾಕರಣರು ಹಿಂದೆ ಬಿದ್ದಿಲ್ಲವೆಂದು ಧಾರಾಳ

ವಾಗಿ ಹೇಳಬಹುದು.

ದರ್ಪಣಕಾರ ಹೇಳುವ "ಪುರುಷರ್ ಪುಲ್ಲಿಂಗಂ. ಸ್ತ್ರೀಯರ್‌ಸ್ತ್ರೀಲಿಂಗಂ" (ಸೂತ್ರ 101) ಎಂಬ ಮಾತನ್ನು ಎಳೆಎಳೆಯಾಗಿ ಬಿಡಿಸಿದರೆ ವಿಶಿಷ್ಟವಾದ ಅರ್ಥ ಬೆಳಕಿಗೆ ಬರುತ್ತದೆ. ಮನುಷ್ಯ ವರ್ಗದಲ್ಲಿ ಬುದ್ಧಿ ಬೆಳೆದ ಗಂಡು ಮತ್ತು ಹೆಣ್ಣನ್ನು ಪುರುಷ ಮತ್ತು ಸ್ತ್ರೀಯೆಂದು ಹೇಳುವುದು ಸರ್ವಶ್ರುತ. ಬುದ್ಧಿ ಬಲಿಯದ ಗಂಡು ಯಾ ಹೆಣ್ಣು ಮಗುವನ್ನು ಎಂದೂ ಗಂಡಸು ಇಲ್ಲವೆ ಹೆಂಗಸು ಎಂದಾಗಲೀ ಪುರುಷ ಇಲ್ಲವೇ ಸ್ತ್ರೀ ಯೆಂದಾಗಲಿ ಹೇಳುವ ರೂಢಿಯಿಲ್ಲ. ಹಾಗಾಗಿ ದರ್ಪಣಕಾರ ಹೇಳಿದ ಆ ಮಾತುಗಳು ಮೇಲುವರ್ಗದ ಏಕವಚನಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ. ಒಂದು ವೇಳೆ ಗಂಡೆಲ್ಲವೂ ಪುಲ್ಲಿಂಗ, ಹೆಣ್ಣೆಲ್ಲವೂ ಸ್ತ್ರೀಲಿಂಗವೆಂದು ನಿರೂಪಿಸುತ್ತಿದ್ದರೆ ನಿಶ್ಚಯವಾಗಿ ದರ್ಪಣಕಾರ ಎಡವಿದನೆಂದೇ ಹೇಳಬೇಕಾಗುತ್ತಿತ್ತು. ನಪುಂಸಕ ಲಿಂಗದ ವಿವರಣೆಯಲ್ಲಿ ದರ್ಪಣ ಕಾರನ ದೃಷ್ಟಿ ಇನ್ನಷ್ಟು ಸ್ಪಷ್ಟವಾಗುತ್ತದೆ.

"ನಪುಂಸಕ ಲಿಂಗಕ್ಕೆ : ಮರಂ, ಬಳ್ಳಿ, ಪುಲಿ....ಇವು ಮೊದಲಾದ
ತಿರ್ಯಗ್ಜೀವಂಗಳಪ್ಪ ಚೇತನಾಚೇತನ ವಸ್ತುಗಳ್
ನಪುಂಸಕಂಗಳ್ (ಸೂತ್ರ 101ರ ಪ್ರಯೋಗ)

ನಪುಂಸಕ ಲಿಂಗದ ತಳಹದಿ ಹೆಣ್ಣು ಯಾ ಗಂಡು ಆಗಿರದೆ ಮಾನವವರ್ಗ ಹಾಗೂ ಬುದ್ಧಿ ತಳಹದಿಯಾಗಿರುವುದು ಎಷ್ಟೋ ದು ಸಮರ್ಪಕವಾಗಿದೆ.

ಗಂಡಸು ಮತ್ತು ಹೆಂಗಸು ಎಂಬರ್ಥದಲ್ಲೇ ಪುಲ್ಲಿಂಗ ಸ್ತ್ರೀಲಿಂಗ ನೆಲೆ ನಿಂತಿದೆ ಯೆಂಬುದಕ್ಕೆ ಮುಂದಿನ ಮಾತೂ ಉಪಷ್ಟಂಭಕವಾಗಿದೆ :

"ಗಂಡಾದ ನಪುಂಸಕ ಲಿಂಗದಲ್ಲಿಯುಂ ಕಿಱಿದು ಶಬ್ದಂಗಳಲ್ಲಿ
ಅಕಾರಾಂತ ಪುಲ್ಲಿಂಗದಂತಿರೆ ಸಪ್ತ ವಿಭಕ್ತಿಗಳೆಲ್ಲಂ ಪುದಿಗುಂ'

(ದರ್ಪಣ ಸೂತ್ರ 132ರ ವೃತ್ತಿ)

ಇಲ್ಲಿ "ಗಂಡಾದ ನಪುಂಸಕ ಲಿಂಗ" ಎಂಬ ಪ್ರಯೋಗ ಗಮನಿಸಬೇಕಾದುದು.

ವಾಚ್ಯವಾಗಿ ಹೇಳದಿದ್ದರೂ ಸ್ಮೃತಿ ಭೂಷಣಗಳಲ್ಲಿ ಲಿಂಗ ವಿಭಾಗದ ಬಗ್ಗೆ ಇಂತಹುದೇ ದೃಷ್ಟಿಯಿದ್ದಂತೆ ಭಾಸವಾಗುತ್ತದೆ. ಪುಲ್ಲಿಂಗ ಸ್ತ್ರೀಲಿಂಗಗಳಿಗೆ ಕೊಡುವ ಉದಾಹರಣೆಗಳನ್ನು ದರ್ಪಣದ ಲಕ್ಷ್ಯಗಳೊಂದಿಗೆ ಹೋಲಿಸಿದಾಗ ಈ ವಿಚಾರ ಮತ್ತಷ್ಟು ಸ್ಫುಟವಾಗುವುದು.

| | ಸ್ಮೃತಿ | ಭೂಷಣ | ದರ್ಪಣ |
|---|---|---|---|
| ಪುಲ್ಲಿಂಗ | ತಂದೆವಿರ್ | ತಂದೆವಿರ್ | ಅಣ್ಣಂದಿರ್ |
| | ಪುತ್ರರ್ | ತಮ್ಮಂದಿರ್ | ಭಾವಂದಿರ್ |
| | ಇವಂದಿರ್ | ನಲ್ಲರ್ | ಅರಸಂ |
| | ಇವನ್ | ಅರಸನಂ | ಅವನಂ |

| | | | |
|---|---|---|---|
| | | ಒರ್ವರ್ | ಅವಂ |
| | | ಇರ್ವರ್ | |
| ಸ್ತ್ರೀಲಿಂಗ | ಪೆಂಡಿರ್ | ಪೆಂಡಿರ್ | ಪೆಂಡಿರ್ |
| | ತಾಯ್ವಿರ್ | ತಾಯ್ವಿರ್ | ದೇವಿಯರ್ |
| | ಇವಳ್ದಿರ್ | ನಲ್ಲಳ್ | ಅಕ್ಕಂದಿರ್ |
| | ಮಂಡಿವಳ್ತಿ | ಮಂಡಿವಳಿತಿ | ಅಕ್ಕಂಗಳ್ |
| | ಮಾಲೆಗಾರ್ತಿ | ಬಾಣಸಗಿತಿ | ಎಳೆಯಳ್ |
| | ಅಱಿವಳ್ | ಅಱಿವಳ್ | ಪಡೆದಳ್ |

ಪುರುಷ–ಸ್ತ್ರೀ ವಿವಕ್ಷೆ ಕೇವಲ ಮೇಲುವರ್ಗಕ್ಕಷ್ಟೇ ಸೀಮಿತವೆಂಬುದನ್ನು ಕನ್ನಡ ವೈಯಾಕರಣರು ಸಮರ್ಪಕವಾಗಿ ಗುರುತಿಸಿದ್ದಾರೆ. ಒಂದೇ ಒಂದು ಉದಾಹರಣೆಯೂ ಮಾನವ ವರ್ಗೇತರವಾದದು ಬಾರದಿರುವುದು ಅವರ ನಿಚ್ಚಳ ದೃಷ್ಟಿಗೆ ಸಾಕ್ಷಿಯಾಗಿದೆ. ಆದುದರಿಂದ the gender of old Kannada generally seem to agree with the natural sex differentiations except in the case of animals which are brought under neuter gender. Perhaps due to an obessed view that the animals have not the power of rationalization (HGOK. p. 90) ಎಂಬ ಅಭಿಪ್ರಾಯ ಗ್ರಾಹ್ಯವಾಗಿದೆ. ಈ ನಿಟ್ಟಿನಿಂದ ವಿಚಾರಿಸಿದಾಗ ತಮಿಳು ವೈಯಾಕರಣರ ಅಭಿಪ್ರಾಯದೊಂದಿಗೆ ಕನ್ನಡ ವೈಯಾಕರಣರು ಸಹಮತರಾಗುವಂತೆ ಭಾಸವಾಗುತ್ತದೆ. "Kannada agrees with Tamil in distinguishing between rational and irrational objects in gender" (HKL. p. 21) ಎಂಬ ಮಾತು ಅದನ್ನು ಪುಷ್ಟೀಕರಿಸುತ್ತದೆ. ಒಟ್ಟಿನಲ್ಲಿ ಕನ್ನಡ ವ್ಯಾಕರಣಗಳು ನಿರೂಪಿಸುವ ಲಿಂಗವ್ಯವಸ್ಥೆಯನ್ನು ಕೆಳಗಿನಂತೆ ಸೂಚಿಸಬಹುದು :



ಬಹುವಚನ ಪ್ರತ್ಯಯಂಗಳನ್ನು ಹೇಳುವಲ್ಲಿಯೂ ಈ ದ್ವಿವಿಧ ಲಿಂಗದ ವಿಚಾರ ಕನ್ನಡ ವೈಯಾಕರಣರ ದೃಷ್ಟಿಗೆದುರಾಗಿದೆ. ಹಾಗಾಗಿಯೇ ಇರಬೇಕು-ಅವರಲ್ಲೂ ಇರ್, ಅರ್, ದಿರ್, ವಿರ್‌ಗಳನ್ನು ನಪುಂಸಕ ಪ್ರಕೃತಿಗಳಿಗೆ ವಿಧಿಸುವುದಿಲ್ಲ.

ಕನ್ನಡದ ಲಿಂಗ ವಿಭಜನೆಗೆ ಸಂಸ್ಕೃತದ ಲಿಂಗವ್ಯವಸ್ಥೆಯೊಂದಿಗೆ ಯಾವ ಸಾದೃಶ್ಯವೂ ಇಲ್ಲ. ಆದ್ದರಿಂದ ಕನ್ನಡ ವ್ಯಾಕರಣಗಳು ಕನ್ನಡ ಲಿಂಗವಿಭಾಗವನ್ನು ಹೇಳುವಲ್ಲಿ ಸ್ವತಂತ್ರವಾಗಿ ವ್ಯವಹರಿಸುತ್ತವೆಯೆಂದೇ ಹೇಳಬೇಕಾಗುತ್ತದೆ. ಸಂಸ್ಕೃತದ ಪ್ರಭಾವವೇನಿದ್ದರೂ ಅದು ಪಾರಿಭಾಷಿಕ ಪದಗಳಿಗಷ್ಟೇ ಸೀಮಿತವಾಗಿದೆ.

## ಲಿಂಗಪ್ರತ್ಯಯಗಳು

ದ್ರಾವಿಡ ಭಾಷಾ ಸ್ವಭಾವಕ್ಕನುಸರಿಸಿ ಸಾಮಾನ್ಯವಾಗಿ ಕನ್ನಡದಲ್ಲಿ ಪ್ರಕೃತಿಯು ನಿಜಸ್ವರೂಪದಲ್ಲಿ ಪುರುಷ, ಸ್ತ್ರೀ ಇಲ್ಲವೆ ನಪುಂಸಕ ವಾಚಕವೆಂಬುದನ್ನು ತೋರಿಸಿ ಕೊಡುತ್ತದೆ. ಕನ್ನಡ ವೈಯಾಕರಣರ ನಿರೂಪಣೆಯ ಧಾಟಿಯಿಂದ 'ಅನ್' ಮತ್ತು 'ದು' (ಅದು) ಅನುಕ್ರಮವಾಗಿ ಪುಲ್ಲಿಂಗ ಮತ್ತು ನಪುಂಸಕಲಿಂಗ ಪ್ರತ್ಯಯಂಗಳೆಂದು ಧ್ವನಿತವಾಗುತ್ತದೆ. ಆದರೆ ಅಳ್, ಇತಿ, ತಿ ಮತ್ತು ಎ–ಇವು ಸ್ತ್ರೀ ಪ್ರತ್ಯಯಂಗಳೆಂದು ವಾಚ್ಯವಾಗಿಯೆ ನಿರೂಪಿತವಾಗಿವೆ.

## ವಚನ

ವ್ಯಾಕರಣದಲ್ಲಿ ವಚನವೆಂದರೆ ಗಣನೆ (ದರ್ಪಣ ಸೂ. 136ರ ವೃತ್ತಿ). ನಾಮದ ಗಣನೆಯನ್ನು ಸೂಚಿಸುವುದು ವಚನದ (Number) ಕಾರ್ಯವಾಗಿದೆ. "Vacana means word, expression. It is reasonable to suppose that 'Vacana' as a technical term was first used with ಏಕ, ದ್ವಿ, ಬಹು and then separated form these and used as a generic term (T.T S.G. p. 128) ಎಂಬ ವಿವರಣೆ 'ವಚನ'ದ ಅರ್ಥ ಮತ್ತು ಬಳಕೆಯುಲ್ಲಾದ ಬೆಳವಣಿಗೆಯನ್ನು ಸಮರ್ಥವಾಗಿ ಹೇಳುತ್ತದೆ. 'ಏಕವಚನ, ಬಹುವಚನ'—ಈ ವಿಭಾಗದ ಶತಪಥ ಬ್ರಾಹ್ಮಣದಲ್ಲಿ ಮೊದಲ ಬಾರಿಗೆ ಕಾಣಿಸಿಕೊಳ್ಳುತ್ತದೆ. ಅಲ್ಲಿ 'ದ್ವಿವಚನ'ವಿಲ್ಲ. ಯಾಸ್ಕನಿಗಿಂತ ಮೊದಲು ದ್ವಿವಚನ ಗುರುತಿಸಲ್ಪಟ್ಟಿಲ್ಲವೆಂದು ವಿದ್ವಾಂಸರು ಹೇಳುತ್ತಾರೆ (ಅದೇ).

'ವಚನ' ಎಂಬುದು ಪಾರಿಭಾಷಿಕ ಪದವಾಗಿ ಅಷ್ಟಾಧ್ಯಾಯಿ ಕಾತಂತ್ರಗಳಲ್ಲಿದೆ. ಜೈನೇಂದ್ರವು ವಚನವೆಂಬಲ್ಲಿ 'ಸಂಖ್ಯಾ' ಬಂದಿದೆ. ಅಷ್ಟಾಧ್ಯಾಯಿ ಮತ್ತು ಕಾತಂತ್ರದಲ್ಲಿ 'ಏಕವಚನ', 'ದ್ವಿವಚನ', 'ಬಹುವಚನ' ಎಂಬ ಪ್ರಯೋಗವಿದೆ. ಕಾತಂತ್ರದಲ್ಲಿ 'ಏಕತ್ವ', 'ದ್ವಿತ್ವ' 'ಬಹುತ್ವ' ಎಂಬ ಪದಗಳೂ ಬಳಕೆಗೊಂಡಿದೆ. ಜೈನೇಂದ್ರದಲ್ಲಿ 'ಏಕ, ದ್ವಿ, ಬಹು'. ಏಕತ್ವ, ದ್ವಿತ್ವ, ಬಹುತ್ವ ಎಂಬ ಪದಗಳನ್ನು ಬಳಸಲಾಗಿದೆ.

ಕನ್ನಡ ವ್ಯಾಕರಣಗಳಲ್ಲಿ ವಚನಗಳನ್ನು ಹೇಳಲು ಪ್ರಯುಕ್ತವಾದ ಪದಗಳು ಕೆಳಗಿನಂತಿವೆ :

| ಗ್ರಂಥ | ವಚನ | | |
|---|---|---|---|
| | ಏಕ | ದ್ವಿ | ಬಹು |
| ಸ್ಮೃತಿ : | ಏಕವಚನ | ದ್ವಿತ್ವ | ಬಹುತ್ವ |
| | ಏಕತ್ತ್ವ | ದ್ವಿ | ಅನೇಕ ವಚನ |
| ಭೂಷಣ : | ಏಕವಚನ | ದ್ವಿತ್ವ | ಬಹುತ್ವ |
| | | ದ್ವಿ | ಬಹುವಚನ |
| | | | ಅನೇಕವಚನ |
| ದರ್ಪಣ : | ಏಕ | ದ್ವಿ | ಬಹುತ್ವ |
| | ಏಕವಚನ | ದ್ವಿತ್ವ | ಬಹುತ್ |
| | ಏಕತ್ವ | ದ್ವಿವಚನ | ಬಹುವಚನ |
| | ಏಕತೆ | | ಬಹೂಕ್ತಿ |
| | ಏಕೋಕ್ತಿ | | ಅನೇಕವಚನ |

ಯಾವುದೇ ವಚನವನ್ನು ಹೇಳುವಲ್ಲಿ ನಿರ್ದಿಷ್ಟವಾದ ಒಂದೇ ಪದವನ್ನು ಬಳಸುವುದರ ಬದಲು ಒಂದೇ ಅರ್ಥವನ್ನು ಕೊಡುವ ಹಲವು ಪದಗಳನ್ನು ಬಳಸುವುದು ಕನ್ನಡ ವ್ಯಾಕರಣಗಳ ಪ್ರತ್ಯೇಕತೆಯೆಂಬುದು ಮೇಲೆ ನಿರೂಪಿಸಿದ ಪದಗಳ ಪಟ್ಟಿಯಿಂದ ವ್ಯಕ್ತವಾಗುವುದು, 'ದ್ವಿವಚನ' ಎಂಬ ಪದಪ್ರಯೋಗ ದರ್ಪಣದಲ್ಲಿ ಮಾತ್ರ ಕಂಡುಬರುವುದು ಗಮನಾರ್ಹ. ಏಕವಚನ, ದ್ವಿ, ದ್ವಿತ್ವ; ಬಹುತ್ವ, ಅನೇಕ ವಚನ-ಈ ಪದಗಳು ಮೂರೂ ವ್ಯಾಕರಣ ಕೃತಿಗಳಲ್ಲಿ ಬಳಕೆಗೊಂಡಿವೆ. ಮೇಲೆ ಹೇಳಿದ ಹೆಚ್ಚಿನ ಪದಗಳು ಕಾತಂತ್ರ ಇಲ್ಲವೆ ಜೈನೇಂದ್ರದಿಂದ ಅನಾಮತ್ತಾಗಿ ಎತ್ತಿಕೊಂಡವುಗಳಾಗಿವೆ.

ಕನ್ನಡ ವ್ಯಾಕರಣಗಳಲ್ಲಿ ವಚನತ್ರಯಗಳ ವಿವರಣೆ ದರ್ಪಣದಲ್ಲಿ ಮಾತ್ರ ತಲೆದೋರಿದೆ :

'ಏಕ ದ್ವಿತ್ವ ಬಹುತ್ವಮಂ ಏಕದ್ವಿ ಬಹುತ್ವ ವಸ್ತುಗಳ್ಗಾಚರಿಪರ್' ಸೂತ್ರ 104 ಈ ವಿವರಣೆಯು ಮೇಲೆ ದುರ್ಗಸಿಂಹನ ವೃತ್ತಿಯ ಪ್ರಭಾವ ಬಿದ್ದಿರುವಂತಿದೆ :

"ಏಕಮರ್ಥಂ ದ್ವೌಬಹೂನ್ವಾವಕ್ತೀತ್ವನ್ನರ್ಥ ಸಂಜ್ಞಯಾ। ಏಕಸ್ಮಿನ್ನರ್ಥ ಏಕವಚನಂ। ದ್ವಯೋರ್ದ್ವಿವಚನಮ್। ಬಹುಷು ಬಹುವಚನಮ್" (ಕಾತಂತ್ರ 2-4-17ರ ವೃತ್ತಿ) ಎಂಬ ದುರ್ಗಸಿಂಹನ ನಿರೂಪಣೆಗೆ ದರ್ಪಣಕಾರ ಋಣಿ. ಅಷ್ಟಾಧ್ಯಾಯಿಯ "ದ್ವ್ಯೇಕಯೋರ್ದ್ವಿವಚನೈಕವಚನೇ" (1-4-22) ಮತ್ತು "ಬಹುಷುಬಹುವಚನಂ" (1-4-21) ಎಂಬ ಸೂತ್ರಗಳ ಮೇಲೂ ಬಹುಶಃ ದರ್ಪಣಕಾರ ದೃಷ್ಟಿ ಹಾಯಿಸಿರಬೇಕು.

## ವಚನಗಳೆಷ್ಟು ?

ಯಾಸ್ಕನಿಗಿಂತ ಹಿಂದೆ ದ್ವಿವಚನ ಕಲ್ಪನೆಯಿರಲಿಲ್ಲವಾದರೂ ವ್ಯಾಕರಣ ಗ್ರಂಥಗಳು ಸಂಸ್ಕೃತದಲ್ಲಿ ಹುಟ್ಟಿಕೊಳ್ಳುವ ಕಾಲಕ್ಕೆ ಏಕ, ದ್ವಿ, ಬಹುವೆಂಬ ಮೂರು ವಚನ ಕಲ್ಪನೆ ರೂಢವಾಗಿತ್ತು. ಆದ್ದರಿಂದ ಈ ವಿಚಾರದಲ್ಲಿ ಸಂಸ್ಕೃತದ ಎಲ್ಲ ವ್ಯಾಕರಣಗಳೂ ಸಹಮತವಾಗಿವೆ. ಸಂಸ್ಕೃತ ಭಾಷಾ ಮರ್ಯಾದೆಗನುಸರಿಸಿ ಮೂರೂ ವಚನಗಳಲ್ಲಿ ನಾಮಪದದ ಭಿನ್ನ ರೂಪಗಳನ್ನು ಕಾಣಲು ಸಾಧ್ಯ. ಹಾಗಾಗಿ ಮೂರು ವಚನಗಳ ವಿಚಾರ ಅಲ್ಲಿ ಕೇವಲ ಕಾಲ್ಪನಿಕವಾಗಿರದೆ ಆ ಭಾಷೆಯ ವ್ಯವಸ್ಥೆಗೆ ಸಂಬಂಧಿಸಿದ ವಾಸ್ತವಿಕತೆಯಾಗಿದೆ.

ಕನ್ನಡ ವೈಯಾಕರಣರಲ್ಲಿ ಆರಂಭದಲ್ಲಿ ಎರಡೇ ವಚನಗಳ ಕಲ್ಪನೆಯಿದ್ದಂತಿದೆ. ಕವಿರಾಜಮಾರ್ಗದ 'ವಚನಮೇಕಬಹುಕ್ರಮದಿಂದೆರಟ್ಟಿರ' (ಕ.ಮಾ. 1-114) ಎಂಬ ಮಾತು ಈ ಊಹೆಗೆ ಆಧಾರ. ಮಾರ್ಗಕಾರ ಏಕ ಮತ್ತು ಬಹುವೆಂಬ ಎರಡೇ ವಚನಗಳನ್ನು ಹೇಳಿದರೂ ಮುಂದಿನ ವೈಯಾಕರಣರು ಸಂಸ್ಕೃತ ವ್ಯಾಕರಣಗಳನ್ನು ಆಧರಿಸಿ ಮೂರು ವಚನಗಳಿಗೆ ಅಂಟಿಕೊಂಡಿದ್ದಾರೆ. ಸ್ಮೃತಿ ಭೂಷಣಗಳು ನಿಸ್ಸಂದೇಹವಾಗಿ ಮೂರು ವಚನಗಳನ್ನು ಹೇಳುತ್ತವೆ. ದರ್ಪಣದಲ್ಲಿ ದ್ವಿವಚನದ ಕುರಿತು ಸಂದೇಹ ಹುಟ್ಟಿಕೊಂಡರೂ "ಔಚಿತ್ಯದ ದ್ವಿವಚನ"ದ ಮೂಲಕ ಅದನ್ನು ನಿರಸನಗೊಳಿಸಲಾಗಿದೆ.

ದ್ರಾವಿಡ ಭಾಷಾಮರ್ಯಾದೆಗನುಸರಿಸಿ (C.G.D.L. p. 222) ನಿಜವಾಗಿ ಕನ್ನಡದಲ್ಲಿರುವುದು ಏಕ ಮತ್ತು ಅನೇಕವೆಂಬ ಎರಡೇ ವಚನಗಳು (H.G.O.K. p. 24) ಬಹುವಚನವನ್ನು ಸೂಚಿಸಲು ಮಾತ್ರ ಪ್ರತ್ಯಯಗಳಿದ್ದು ಅವು ಪ್ರಕೃತಿ ಮತ್ತು ವಿಭಕ್ತಿಗಳ ನಡುವೆ ಬರುತ್ತವೆ (ಸ್ಮೃತಿ. ಸೂ. 17, 18; ಭೂಷಣ ಸೂ. 40-44 ; ದರ್ಪಣ ಸೂ. 105-111).

## ದ್ವಿವಚನ

ಭಾಷೆಯಲ್ಲಿ ದ್ವಿವಚನದ ಹುಟ್ಟು, ಬೆಳವಣಿಗೆ ಮತ್ತು ಅದರ ಕೊನೆಯ ಕುರಿತಾದ ವಿದ್ವಾಂಸರ ಅಭಿಪ್ರಾಯ ಸಮುಚಿತವಾಗಿದೆ :

The use of duel number must have originated from denoting things which occur naturally in pairs, as the eyes, ears, hands etc., and the things which occur artificially in pairs as the two bulls of a cart. Then its use was extended to denote a combination of any two things, as soon as it came to denote any two things without regard to their being naturally a pair and without any emphasis being laid on the idea of duality ; it became a grammatical luxury and it possessed no sense separate from that of plural. Then it speedily died out of use. (A short

manual of comparative philology: p. 228). ಸಂಸ್ಕೃತದ ದ್ವಿವಚನ ವ್ಯವಸ್ಥೆಯನ್ನು ನೋಡುವಾಗ ಈ ವಿವರಣೆ ಸಮರ್ಪಕವೆನಿಸುತ್ತದೆ. ಮಾತ್ರವಲ್ಲ, ಪ್ರಾಕೃತ, ಹಿಂದಿ ಮೊದಲಾದ ಆರ್ಯ ಭಾಷೆಗಳಲ್ಲಿ ದ್ವಿವಚನವಿಲ್ಲದಿರುವುದು ವಿವರಣೆಯ ಕೊನೆಯ ಮಾತಿಗೆ ಸಾಕ್ಷಿಯಾಗುತ್ತದೆ.[13] ಸಂಸ್ಕೃತದಲ್ಲಿ ದ್ವಿವಚನಕ್ಕೆ ಪ್ರತ್ಯೇಕವಾದ ಪ್ರತ್ಯಯಗಳಿದ್ದು ಅದು ಅಲ್ಲಿನ ವೈಶಿಷ್ಟ್ಯವಾಗಿದೆ. ಗಂಡು–ಹೆಣ್ಣು, ಸುಖ–ದುಃಖ, ಆಕಾಶ–ಪಾತಾಳ, ಸ್ವರ್ಗ–ನರಕ, ತಾಯ್–ತಂದೆ— ಹೀಗೆ ದ್ವಂದ್ವಗಳನ್ನು ಪ್ರತ್ಯೇಕ ವಾಗಿ ಸೂಚಿಸುವ ಮೂಲಕ ಸಂಸ್ಕೃತದಲ್ಲಿ ಸೌಂದರ್ಯ ಸಾಧಿತವಾಗಿದೆ. ಪ್ರತ್ಯೇಕವಾದ ಪ್ರತ್ಯಯ ವ್ಯವಸ್ಥೆ, ದ್ವಂದ್ವ ಸೂಚನೆಯ ಸಹಜತೆ ಮುಂತಾದವು ಭಾಷೆಯಲ್ಲಿ ದ್ವಿವಚನದ ಅಸ್ತಿತ್ವವನ್ನು ಕಾಣುವ ಒರೆಗಲ್ಲುಗಳು. ಈ ದೃಷ್ಟಿಯಿಂದ ನೋಡಿದಾಗ ಕನ್ನಡದಲ್ಲಿ ದ್ವಿವಚನವಿಲ್ಲ.

ಕನ್ನಡ ಭಾಷೆಯ ಜೀವನಾಡಿಯ ಸ್ಪಂದನವನ್ನು ಹಲವೆಡೆಗಳಲ್ಲಿ ಗುರುತಿಸುವ ದರ್ಪಣಕಾರ ದ್ವಿವಚನವನ್ನು ಕನ್ನಡದಲ್ಲಿ ಒಪ್ಪಿಕೊಂಡು ಎಡವಿದ್ದಾನೆ. "ಸ್ವೀಕಾರಂ ಕನ್ನಡದೊಳಗೇಕ ಬಹುತ್ವಂ" (ಸೂತ್ರ 104) ಎಂಬುದು ಅರ್ಥವತ್ತಾದ ಹೇಳಿಕೆ. ಆದರೆ ಮುಂದುವರಿದು "ದ್ವಿವಚನಮುಚಿತದೆ ಬರ್ಕುಂ" (ಸೂತ್ರ 104) ಎಂದು ಹೇಳಿದ್ದರಿಂದ ಕನ್ನಡದಲ್ಲಿ ಇಲ್ಲದಿರುವ ದ್ವಿವಚನವನ್ನು ಇದೆಯೆಂದು ಒಪ್ಪಿಕೊಂಡು ತಾಯಿತು. "ಭೀಮಾರ್ಜುನರ್, ರಾಮುಲಕ್ಷ್ಮಣರ್. ನಕುಲಸಹದೇವರ್ ಎಂಬು ಉಚಿತ ವಚನ ಪ್ರಸಿದ್ಧಿಯಿಂ ದ್ವಿವಚನಮೆನಿಸುವುದು" (ಸೂತ್ರ 104ರ ಪ್ರಯೋಗ) ಎಂಬಲ್ಲಿ ಯಾವುದೇ ಭಾಷಾ ಸಹಜತೆಯಿಲ್ಲ. ಸಂಸ್ಕೃತಕ್ಕಿಂತ ಹೇಗೆ ಇದು ಭಿನ್ನವೆಂಬು ದನ್ನೂ ಪರಿಶೀಲಿಸಬಹುದು. ಸಂಸ್ಕೃತದಲ್ಲಿ ರಾಮ ಮತ್ತು ಲಕ್ಷ್ಮಣ ಇಬ್ಬರು ಮಾತ್ರವೇ ಆದರೆ "ರಾಮಲಕ್ಷ್ಮಣೌ", ಕೆಲವು ಜನ ರಾಮರು ಮತ್ತು ಲಕ್ಷ್ಮಣರಾದರೆ "ರಾಮಲಕ್ಷ್ಮಣಾಃ"; ಆದರೆ ಕನ್ನಡದಲ್ಲಿ ಒಬ್ಬ ರಾಮ ಮತ್ತು ಒಬ್ಬ ಲಕ್ಷ್ಮಣ ಸೇರಿದರೆ "ರಾಮಲಕ್ಷ್ಮಣರ್" ಕೆಲವು ಜನ ರಾಮರು ಮತ್ತು ಲಕ್ಷ್ಮಣರು ಸೇರಿದರೂ "ರಾಮಲಕ್ಷ್ಮಣರ್" ಎರಡೆಡೆಗಳಲ್ಲೂ ವಚನ ಪ್ರತ್ಯಯ 'ಅರ್' ಎಂಬುದೊಂದೇ. ಹೀಗೆ ಇಲ್ಲಿ ಸಂಸ್ಕೃತದ ದ್ವಿವಚನ ಬಹುವಚನಗಳಲ್ಲಿರುವ ಅಂತರ ಹಾಗೂ ಕನ್ನಡದಲ್ಲಿ ಆ ಅಂತರವಿಲ್ಲದಿರುವಿಕೆ–ಇವೆರಡೂ ಸ್ಪಷ್ಟವಾಗುತ್ತವೆ. ಒಟ್ಟಿನಲ್ಲಿ ದ್ವಂದ್ವ ಸೂಚನೆಯ ಅಭಾವ ಮತ್ತು ಪ್ರತ್ಯೇಕ ದ್ವಿವಚನ ಪ್ರತ್ಯಯವಿಲ್ಲದಿರುವಿಕೆ–ಇದರಿಂದ ಕನ್ನಡದಲ್ಲಿ ಔಚಿತ್ಯದ ದ್ವಿವಚನವಾದರೂ ಇಲ್ಲವೆಂದೇ ಹೇಳಬೇಕಾಗುತ್ತದೆ.

ದರ್ಪಣಕಾರ ಒಮ್ಮೆ ಔಚಿತ್ಯದ ದ್ವಿವಚನವೆಂದು ಹೇಳಿದರೂ ಮುಂದೆ ವಚನದ ಪ್ರಸ್ತಾಪ ಬಂದಲ್ಲೆಲ್ಲಾ ವಚನತ್ರಯಗಳನ್ನು ಹೇಳುತ್ತಾನೆ. ಆದ್ದರಿಂದ ದರ್ಪಣಕಾರ ತನ್ನ ಹಿಂದಿನ ವೈಯಾಕರಣರಂತೆ ಸಂಸ್ಕೃತದ ವಚನ ವ್ಯವಸ್ಥೆಯನ್ನು ಅಂಧವಾಗಿ ಅನು ಸರಿಸಿದ್ದಾನೆಂದೇ ಹೇಳಬೇಕಾಗುತ್ತದೆ.

## ವಚನ ಪ್ರತ್ಯಯ

ವಚನ ಸೂಚಕಾಂಶಗಳ ಸ್ವರೂಪದಲ್ಲಿ ಪ್ರಾತ್ಯಯಿಕ ಮತ್ತು ಅಂಟು ಭಾಷೆಗಳಲ್ಲಿ ಪ್ರಾಮುಖ್ಯವಾದ ಅಂತರವೊಂದಿದೆ "... in the inflecting languages in the declension of nouns the number and case are united in one suffix, but in the suffix agglutinating languages there is a separate suffix for the number and another for each case (Elements of the Science of Language. p. 24) ; ಎಂಬ ಅಭಿಪ್ರಾಯ ಆ ಅಂತರದ ಸ್ವರೂಪವನ್ನು ಸರಿಯಾಗಿ ತಿಳಿಸುತ್ತದೆ. ಸಂಸ್ಕೃತವು ಪ್ರಾತ್ಯಯಿಕ ಭಾಷೆಯಾದುದರಿಂದ ಅದರಲ್ಲಿ ವಿಭಕ್ತಿ ಪ್ರತ್ಯಯಗಳು ವಚನ ಸೂಚಕಾಂಶವನ್ನು ಗರ್ಭೀಕರಿಸಿಕೊಂಡಿವೆ. ಹಾಗಾಗಿ ಸಂಸ್ಕೃತ ವ್ಯಾಕರಣಗಳಲ್ಲಿ "ವಚನ ಪ್ರತ್ಯಯ" ಎಂಬ ಪದ ಪ್ರಯೋಗಕ್ಕಾಗಲಿ, ಅಂತಹ ಪ್ರತ್ಯೇಕ ಪ್ರತ್ಯಯಗಳ ವಿವೇಚನೆಗಾಗಲಿ ಎಡೆಯಿಲ್ಲ.

ಅಂಟುಭಾಷಾ ಸ್ವಭಾವಕ್ಕನುಸರಿಸಿ ಕನ್ನಡದಲ್ಲಿ ಪ್ರತ್ಯೇಕವಾದ ವಚನ ಪ್ರತ್ಯಯಗಳಿವೆ. ಆದರೆ ಕನ್ನಡದ ಆ ವಚನ ಸೂಚಕಾಂಶಗಳನ್ನು "ಪ್ರತ್ಯಯ"ವೆನ್ನಬೇಕೆ ಅಲ್ಲ, ಬೇಡವೇ ? ಎಂಬುದು ಸಂಸ್ಕೃತ ವ್ಯಾಕರಣವನ್ನು ಕಣ್ಣುಮುಚ್ಚಿ ಅನುಕರಿಸಿದ ಕನ್ನಡ ವೈಯಾಕರಣರಿಗೊಂದು ಸಮಸ್ಯೆಯಾದಂತೆ ಭಾಸವಾಗುತ್ತದೆ. "ವಚನ ಪ್ರತ್ಯಯ ವೆನ್ನೋಣವೆಂದರೆ ಸಂಸ್ಕೃತದಲ್ಲಿ ಹಾಗೆ ಕರೆಯಿಸಿಕೊಳ್ಳುವ ಪ್ರತ್ಯಯಗಳಿಲ್ಲ. ಇತ್ತ, ಪ್ರತ್ಯಯ ಸ್ವರೂಪದಲ್ಲಿರುವ ಬಹುವಚನ ಸೂಚಕಾಂಶಗಳನ್ನು ಅವಗಣಿಸುವಂತೆಯೂ ಇಲ್ಲ. ಸಂಸ್ಕೃತದಂತೆ ವಿಭಕ್ತಿಗಳಲ್ಲಿ ಅವುಗಳನ್ನು ಅಂತರ್ಗತಗೊಳಿಸಲು ಕಷ್ಟಸಾಧ್ಯ. ಈ ಸಮಸ್ಯೆಯನ್ನು ಬಗೆಹರಿಸುವುದಕ್ಕಾಗಿ ಅವರು ವಚನ ಪ್ರತ್ಯಯಗಳನ್ನು 'ಶಬ್ದ' ಎಂದಾಗಲಿ 'ಆಗಮ' ಎಂದಾಗಲಿ ಕರೆಯಬೇಕಾಯಿತು" (ಪ್ರದೀಪಿಕೆ : ಪು. 99).

ಸೂತ್ರ : "ಅವಱೊಳ್ ದ್ವಿತ್ವ ಬಹುತ್ವಂ
ಬವರಿಸೆ ತಳ್ತಿರ್ಕುಮಲ್ಲಿ ಗಳ್‌ಶಬ್ದಂ" ಸೂತ್ರ 17

ಭೂಷಣ : "ತಾಸಾಂ ವಿಭಕ್ತೀನಾಮಾದೌ ದ್ವಿತ್ವ ಬಹುತ್ವ ವಿಷಯೇ
ವಿವಕ್ಷಿತೇ ಗಳಾಗಮೋ ಭವತಿ" ಸೂತ್ರ 40ರ ವೃತ್ತಿ.

ದರ್ಪಣ : "ನಮನಿಸುಗುಮಾ ವಿಭಕ್ತಿಗ
ಳ ಮೊದಲೊಳಾದು ಗಳಾಗಮಂ ದ್ವಿತ್ವ ಬಹು
ತ್ವಮೆಂದಾಗೆ...." ಸೂತ್ರ 105.[14]

ವಚನ ಸಂಬಂಧವಾಗಿ ಸಂಸ್ಕೃತವನ್ನು ಅನುಸರಿಸಿದ್ದರಿಂದ ಕವಿರಾಜಮಾರ್ಗದಲ್ಲಿ ಒಂದು ದೃಷ್ಟಿಯಲ್ಲಿ ಪ್ರಮಾದವಾಗಿದೆ (ನೋ: ಪ್ರದೀಪಿಕೆ ಪು. 97-101). ಅಲ್ಲಿ ವಚನ ಪ್ರತ್ಯಯವೆನ್ನಬೇಕಾದಲ್ಲಿ 'ವಿಭಕ್ತಿ'ಯೆಂದು ಪ್ರಯೋಗಿಸಿದ್ದುಂಟು(1-121). ಸಂಸ್ಕೃತದ

ವ್ಯಾಕರಣ ರೀತ್ಯಾ ಅದು ಸಮರ್ಪಕವಾದರೂ ಕನ್ನಡ ವ್ಯಾಕರಣ ಮಾರ್ಗಾನುಸಾರ ಅದು ಅಸಮರ್ಪಕವೆನ್ನದೆ ವಿಧಿಯಿಲ್ಲ.

## ಬಹುವಚನ ಪ್ರತ್ಯಯಗಳು

ಇತರ ದ್ರಾವಿಡ ಭಾಷೆಗಳಂತೆ ಕನ್ನಡದಲ್ಲೂ ನಾಮಪ್ರಕೃತಿಗಳು ಒಂದೆಡೆ ಅರ್ಥವನ್ನು ಸೂಚಿಸಿದರೆ ಇನ್ನೊಂದೆಡೆ ಏಕವಚನವನ್ನೂ ಹೇಳುತ್ತವೆ. ಎಂದರೆ ಏಕವಚನವನ್ನು ಸೂಚಿಸಲು ಪ್ರತ್ಯೇಕ ಪ್ರತ್ಯಯಗಳಿಲ್ಲ ಎಂದಭಿಪ್ರಾಯ. ಹಾಗಾಗಿ ಕನ್ನಡ ವ್ಯಾಕರಣಗಳೂ ಏಕವಚನ ಪ್ರತ್ಯಯವನ್ನು ಹೇಳುವುದಿಲ್ಲ. ಆಧುನಿಕ ವಿದ್ವಾಂಸರು ಕೆಲವು ನಾಮಪ್ರಕೃತಿಗಳ ಕೊನೆಯಲ್ಲಿರುವ ಅನ್, ಅಳ್, ಅದು, ಗಳನ್ನು ಪುಂಸ್ತ್ರೀ ನಪುಂಸಕ ಸೂಚಕಗಳೆಂದೂ ಹೇಳುವುದರ ಜೊತೆಯಲ್ಲಿ ಏಕವಚನ ಪ್ರತ್ಯಯಗಳೆಂದೂ ಹೇಳುತ್ತಾರೆ (K.S.D. p. 126, H.K L. p. 90). ಅಂತಹ ಕೆಲವೇ ಪ್ರಕೃತಿಗಳನ್ನು ಬಿಟ್ಟರೆ ಉಳಿದುವೆಲ್ಲ ಪ್ರಕೃತಿ ಸ್ವರೂಪದಲ್ಲೇ ಏಕವಚನವನ್ನು ಸೂಚಿಸುತ್ತವೆ.

ಬಹುವಚನ ಪ್ರತ್ಯಯಗಳನ್ನು ನಿರೂಪಿಸುವಲ್ಲಿ ಕನ್ನಡ ವ್ಯಾಕರಣಗಳು ಸಂಸ್ಕೃತ ವ್ಯಾಕರಣದ ನೆರಳಿನಿಂದ ದೂರ ಸರಿಯಬೇಕಾಗಿ ಬಂದಿದೆ. ಇಲ್ಲಿ ಅವುಗಳು ತಮ್ಮದೇ ಆದ ರೀತಿಯಲ್ಲಿ ಚಿಂತಿಸುತ್ತವೆ, ಹೆಚ್ಚು ಕಡಿಮೆ ಏಕಾಭಿಪ್ರಾಯದಿಂದ ಪ್ರತ್ಯಯಗಳನ್ನು ಹೇಳುತ್ತವೆ. ಬಹುವಚನ ಪ್ರತ್ಯಯಗಳಲ್ಲಿ ಮನುಷ್ಯವರ್ಗವನ್ನು ಸೂಚಿಸುವ ಪ್ರಕೃತಿಗಳಿಗೆ ಬರುವ ಪ್ರತ್ಯಯಗಳೆಂದೂ ಮನುಷ್ಯೇತರರನ್ನು ಹೇಳುವ ಪ್ರಕೃತಿಗಳಿಗೆ ಬರುವ ಪ್ರತ್ಯಯಗಳೆಂದೂ ಎರಡು ವಿಧವಾದ ಗುಂಪಿರುವಂತೆ ಕನ್ನಡ ವ್ಯಾಕರಣಗಳು ಸೂಚಿಸುವುದನ್ನು ಗಮನಿಸಬಹುದು (K.S.D. p. 126). ವೈಯಾಕರಣರು ಹೇಳುವ ಬಹುವಚನ ಪ್ರತ್ಯಯಗಳನ್ನು ಕೆಳಗಿನಂತೆ ಸಂಗ್ರಹಿಸಬಹುದು.

''ಗಳ್'' ಮತ್ತು ''ಅವು'' : (ವಾಚ್ಯವಾಗಿ ಹೇಳದಿದ್ದರೂ ನಿರೂಪಣೆಯಿಂದ ಧ್ವನಿತವಾಗುವಂತೆ ಇವೆರಡು ನಪುಂಸಕ ಪ್ರಕೃತಿಗಳಿಗೆ ಹಚ್ಚುವ ಪ್ರತ್ಯಯಗಳು). ಸರ್ವನಾಮ ಗುಣವಚನಗಳಿಗೆ 'ಅವು' ಬಂದರೆ ಇತರ ಪ್ರಕೃತಿಗಳಿಗೆ 'ಗಳ್' ಬರುವುದು. ಭೂಷಣ ಮತ್ತು ದರ್ಪಣ ಪುಲ್ಲಿಂಗ ಸ್ತ್ರೀಲಿಂಗ ಪ್ರಕೃತಿಗಳಿಗೂ 'ಗಳ್' ಪ್ರತ್ಯಯವನ್ನು ವಿಧಿಸುತ್ತವೆ. ದರ್ಪಣ 'ಅರ್'ವಿನ ಮುಂದೆಯೂ ಕೆಲವೊಮ್ಮೆ 'ಗಳ್' ಬರುವುದಾಗಿ ಹೇಳುತ್ತದೆ.

''ಅರ್, ಇರ್, ದಿರ್, ವಿರ್, ಕಳ್'' : ಮೂರೂ ವ್ಯಾಕರಣಗಳು ಸ್ಪಷ್ಟವಾಗಿ ಹೇಳುವಂತೆ ಪುಲ್ಲಿಂಗ ಸ್ತ್ರೀಲಿಂಗ ಪ್ರಕೃತಿಗಳಿಗೆ ಬರುವ ಪ್ರತ್ಯಯಗಳಾಗಿವೆ. ಸ್ಮೃತಿ ಭೂಷಣಗಳು, ದರ್ಪಣವು ಹೇಳುವಂತೆ 'ಗಳ್'ಗೆ ಆದೇಶವಾಗಿ ಬರುವ ಪ್ರತ್ಯಯಗಳೆಂದು ಇವುಗಳನ್ನು ಹೇಳುವುದಿಲ್ಲ. ದರ್ಪಣ

'ಅರ್'ವಿನ ಮುಂದೆ ಕೆಲವೊಮ್ಮೆ 'ಕಳ್' ಪ್ರತ್ಯಯವು ಬರುವು ದಾಗಿ ಹೇಳುತ್ತದೆ.

'ಮ್' : ಭೂಷಣ ದರ್ಪಣಗಳು ಹೇಳುವಂತೆ ಆನ್, ನೀನ್, ತಾನ್ ಎಂಬ ಸರ್ವನಾಮಗಳ ಕೊನೆಯ ನಕಾರಕ್ಕೆ ಆದೇಶವಾಗಿ ಬರುತ್ತದೆ. 'ನೀನ್' ಎಂಬ ಸರ್ವನಾಮಕ್ಕೆ "ಗಳ್" ಪ್ರತ್ಯಯ ಬರುವ ದಾಗಿಯೂ ಸ್ಮೃತಿ ಭೂಷಣಗಳು ಹೇಳುತ್ತವೆ.

ಗೌರವ ಮತ್ತು ಆಸಹ್ಯ ವೃತ್ತಿಸೂಚಕವಾಗಿ ಬಹುವಚನವನ್ನು ಬಳಸುವ ವಿಚಾರ ದರ್ಪಣದಲ್ಲಿ ಮಾತ್ರ ಪ್ರಸ್ತಾಪಿತವಾಗಿದೆ (ಸೂ. 112).

## ವಿಭಕ್ತಿ

ಧಾತು ಅಥವಾ ಪ್ರಾತಿಪದಿಕದ ಮುಂದೆ ಬರುವ ಅಕ್ಷರವರ್ಗಕ್ಕೆ (affix) ಪ್ರತ್ಯಯ ವೆಂದು ಹೆಸರು.[15] "ಸ್ಯಾಚ್ಛತ್ರವತ್ ಪ್ರತ್ಯಯಾಃ ಪರೇ" ಎಂಬ ಉಕ್ತಿಯಂತೆ ಕೊಡೆಯ ರೀತಿಯಲ್ಲಿ (ಪ್ರಕೃತಿಯ) ಮುಂದೆಯೇ ಇರುವುದು ಪ್ರತ್ಯಯಗಳ ಸ್ವಭಾವ.[1] ಪ್ರತ್ಯಯ ಪಾರಿಭಾಷಿಕ ಪದವಾಗಿ ಮೊದಲ ಬಾರಿಗೆ ಗೋಪಥ ಬ್ರಾಹ್ಮಣದಲ್ಲಿ (1-24) ಗೋಚರಿಸುತ್ತದೆ. ಪ್ರಾತಿಶಾಖ್ಯಗಳಿಂದ ತಿಳಿದು ಬರುವಂತೆ ಒಂದು ಕಾಲದಲ್ಲಿ "ಪ್ರತ್ಯಯ"ದ ಅರ್ಥವ್ಯಾಪ್ತಿಯಲ್ಲಿ ಉಪಸರ್ಗ ಮತ್ತು ಮಧ್ಯ ಪ್ರತ್ಯಯಗಳೂ (augments) ಸೇರಿದ್ದುವು (DSG. p. 78). ಕಾಲಕ್ರಮೇಣ ವ್ಯಾಕರಣಗಳು 'ಪ್ರತ್ಯಯ'ವನ್ನು ಮೊದಲು ಹೇಳಿದ ಅರ್ಥದಲ್ಲಿ ಬಳಸತೊಡಗಿರಬೇಕು.

ಅಷ್ಟಾಧ್ಯಾಯಿ ಮತ್ತು ಕಾತಂತ್ರವೂ ಸೇರಿದಂತೆ ಸಂಸ್ಕೃತದ ಹೆಚ್ಚಿನ ಎಲ್ಲ ವ್ಯಾಕರಣ ಸಂಪ್ರದಾಯಗಳಲ್ಲೂ 'ಪ್ರತ್ಯಯ' ಪಾರಿಭಾಷಿಕ ಪದವಾಗಿ ಮೊದಲು ಹೇಳಿದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಜೈನೇಂದ್ರ ಮತ್ತು ಮುಗ್ಧಬೋಧಗಳು ಅದನ್ನು ಏಕಾಕ್ಷರಿಯಾಗಿಸಿ "ತ್ಯ" ಎಂದುದು ಅವುಗಳ ಪ್ರತ್ಯೇಕತೆಯಾಗಿದೆ.

"ಪ್ರತ್ಯಯ" ವೆಂಬುದೊಂದು ವರ್ಗನಾಮ, ಪ್ರಕೃತಿಯ (ಧಾತು ಯಾ ಪ್ರಾತಿ ಪದಿಕ) ಮುಂದೆ ಬರುವ ಇದು ಹಲವು ಒಳಗುಂಪುಗಳನ್ನು ಹೊಂದಿದೆ. ವಿಭಕ್ತಿ, ತದ್ಧಿತ, ಕೃತ್, ಸ್ತ್ರೀ ಎಂಬ ನಾಲ್ಕು ವಿಧವಾದ ಪ್ರತ್ಯಯಗಳು ಪ್ರಸಿದ್ಧವಾಗಿವೆ. ಇವು ಗಳಲ್ಲಿ ವಿಭಕ್ತಿ ನಾಮಾಖ್ಯಾತ ಭೇದಗಳಿಂದೊಡಗೂಡಿದೆ. ಪ್ರತ್ಯಯಗಳ ಒಳಗುಂಪು ಗಳನ್ನು ಕೆಳಗಿನಂತೆ ಸೂಚಿಸಬಹುದು :




ಪ್ರತ್ಯಯಗಳಲ್ಲಿ ಒಂದು ಗುಂಪಿಗೆ ಮಾತ್ರ ''ವಿಭಕ್ತಿ''ಯೆಂದು ಹೆಸರು. ವಿಭಕ್ತಿಗಳೆಲ್ಲ ಪ್ರತ್ಯಯಗಳು. ಆದರೆ ಪ್ರತ್ಯಯಗಳೆಲ್ಲ ವಿಭಕ್ತಿಗಳಲ್ಲ. ಸಾಮಾನ್ಯವಾಗಿ ಬಳಸುವ ''ವಿಭಕ್ತಿ ಪ್ರತ್ಯಯ'' ಎಂಬ ಬಳಕೆಗೆ ''ವಿಭಕ್ತಿ ಎಂಬ ಸಂಜ್ಞೆಯಿರುವ ಪ್ರತ್ಯಯ'' ಎಂದು ಅರ್ಥವಿಸಬೇಕು.

'ವಿ' ಎಂಬ ಉಪಸರ್ಗವನ್ನು ಹೊಂದಿದ 'ಭಜ್' ಎಂಬ ಧಾತುವಿನಿಂದ 'ವಿಭಕ್ತಿ' ಎಂಬ ರೂಪ ಸಾಧಿತವಾಗಿದೆ. 'ವಿಭಜತಿ ಇತಿ ವಿಭಕ್ತಿ' ಎಂದಿದರ ಶಾಸ್ತ್ರೀಯ ವ್ಯುತ್ಪತ್ತಿ. ವಿಭಾಗಿಸುವುದು, ಅರ್ಥಕ್ಕನುಗುಣವಾಗಿ ಪದದ ಅರ್ಥವನ್ನು ಬೇರೆ ಬೇರೆ ಮಾಡುವುದು ಎಂದಿದರ ಸಾಮಾನ್ಯಾರ್ಥ. ವಿಭಕ್ತಿಯನ್ನು ಬದಲಿಸಿದಾಗ ಅರ್ಥವೂ ಬದಲಾಗುತ್ತದೆ. ಆದ್ದರಿಂದ ''ಇದು ಕರ್ಮಾರ್ಥ, ಇದು ಕರಣಾರ್ಥ'', ಇತ್ಯಾದಿಯಾಗಿ ಭಿನ್ನವಾದ ಅರ್ಥಗಳನ್ನು ತೋರಿಸುವುದಕ್ಕೆ ಸಾಧನವಾದುದು 'ವಿಭಕ್ತಿ' ಎನ್ನಬಹುದು. ಸಂಸ್ಕೃತ ವ್ಯಾಕರಣಗಳಲ್ಲಿ ನಾಮಪ್ರಕೃತಿ ಮತ್ತು ಧಾತುಗಳ ಮೇಲೆ ಬರುವ ಪದಸಂಬಂಧ ಪ್ರತ್ಯಯಕ್ಕೆ 'ವಿಭಕ್ತಿ' ಎಂಬ ಸಂಜ್ಞೆ ಸಂದಿದೆ (ಕಾಶಿಕಾ. 1-4-104). ಗೋಪಥ ಬ್ರಾಹ್ಮಣದಲ್ಲಿ 'ವಿಭಕ್ತಿ' ತಲೆದೋರಿದೆ. ಅಷ್ಟಾಧ್ಯಾಯಿ, ಕಾತಂತ್ರ, ಜೈನೇಂದ್ರ ಮೊದಲಾದ ಎಲ್ಲ ವ್ಯಾಕರಣಗಳೂ 'ವಿಭಕ್ತಿ'ಯನ್ನು ಸಾರ್ಥಕ ಸಂಜ್ಞೆಯಾಗಿ ಬಳಸಿವೆ.

ಕನ್ನಡದ ಎಲ್ಲ ವ್ಯಾಕರಣ ಗ್ರಂಥಗಳಲ್ಲೂ ಸಂಸ್ಕೃತ ವ್ಯಾಕರಣಗಳನ್ನನುಸರಿಸಿ ''ಪ್ರತ್ಯಯ'' ಮತ್ತು ''ವಿಭಕ್ತಿ'' ಎಂಬ ಪಾರಿಭಾಷಿಕ ಪದಗಳು ತಮ್ಮ ಮೂಲಾರ್ಥದಲ್ಲಿ ಬಳಕೆಗೊಂಡಿವೆ. ಕವಿರಾಜಮಾರ್ಗದಲ್ಲಿ 'ಪ್ರತ್ಯಯ' ಪ್ರಯುಕ್ತವಾಗಿಲ್ಲವಾದರೂ 'ವಿಭಕ್ತಿ'ಗೆ ಅಲ್ಲಿ ಪ್ರವೇಶ ದೊರಕಿದೆ. ಆದರೆ ವಿಭಕ್ತಿ ಎಂದರೇನು ? ವಿಭಕ್ತಿ ಮತ್ತು ಪ್ರತ್ಯಯಗಳ ಅರ್ಥವ್ಯಾಪ್ತಿ ಎಂಥದು ? ಇತ್ಯಾದಿ ವಿವರಣೆ ದರ್ಪಣದಲ್ಲಿ ಮಾತ್ರ ಗೋಚರಿಸುತ್ತದೆ (ಸೂ. 45).

''ಪದದರ್ಥಮಂ ವಿಭಾಗಿಸುವುದಱಿಂದೆ ವಿಭಕ್ತಿ'' ಎಂಬ ಕೇಶಿರಾಜನ ವಿವರಣೆ ದುರ್ಗಸಿಂಹನ ''ಅರ್ಥಸ್ಯ ವಿಭಂಜನಾದ್ವಿಭಕ್ತಯ ಇತಿ'' (ಕಾತಂತ್ರ 3-1-3ರ ವೃತ್ತಿ) ಎಂಬ ವೃತ್ತಿ ವಾಕ್ಯದ ಕನ್ನಡ ಅನುವಾದವಾಗಿದೆ. ವಿಭಕ್ತಿಯ ವಾಚ್ಯಾರ್ಥವಾದ ''ವಿಭಾಗ'' ''ವಿಭಜನೆ'' ಇತ್ಯಾದಿಯ ಬೆನ್ನು ಹಿಡಿದು ''ವಿಭಕ್ತಿ ಪ್ರತ್ಯಯಗಳು ಯಾವುದನು ವಿಭಾಗಿಸುತ್ತವೆ ?'' (ಆಲೋಕ. ಪು. 128) ಎಂದು ಕೇಶಿರಾಜನ

ನಿರೂಪಣೆಯನ್ನು ಪ್ರಶ್ನಿಸಿದ್ದಿದೆ: 'ವಿಭಕ್ತಿ' ಎಂಬುದೊಂದು ಪಾರಿಭಾಷಿಕ ಪದ, ಸಂಜ್ಞೆ–ಎಂಬುದನ್ನು ಮೊದಲು ಅರಿತುಕೊಳ್ಳಬೇಕು. ಯಾವುದೇ ಒಂದು ಶಬ್ದ ಪಾರಿಭಾಷಿಕ ಪದವಾಗಿ ಒಂದು ಶಾಸ್ತ್ರದಲ್ಲಿ ಬಳಕೆಗೆ ಬಂದಾಗ ಅದರ ವಾಚ್ಯಾರ್ಥದೊಡನೆ ಅದಕ್ಕೆ ಯಾವುದೇ ಸಂಬಂಧವಿರುವುದಿಲ್ಲವೆಂಬುದನ್ನು ಲೆಕ್ಕಿಸಿದರೆ ಮೇಲೆ ಕೇಳಿದಂತಹ ಪ್ರಶ್ನೆಗವಕಾಶವಿಲ್ಲ. ಆಗ ಸಂಪ್ರದಾಯದ ಹಿನ್ನೆಲೆಯಿರುವ 'ವಿಭಕ್ತಿ' ಎಂಬುದು ಒಂದು ಅರ್ಥವತ್ತಾದ ಸಂಜ್ಞೆಯೆಂಬುದನ್ನು ಒಪ್ಪಬೇಕಾಗುತ್ತದೆ. ಹಾಗಿದ್ದೂ ದುರ್ಗಸಿಂಹ ನಾಗಲಿ, ''ಶಬ್ದದೊಳಿರ್ದರ್ಥವಂ ತಂತಮ್ಮನಂಗುಣವಾಗಿ ವಿಭಾಗಿಸಿ ಕುಡುವುದರಿಂ ವಿಭಕ್ತಿಗಳೆನಿಸುಗುಂ'' (ಸೂತ್ರ 45ರ ವೃತ್ತಿ) ಎಂದು ಹೇಳುವ ದರ್ಪಣಕಾರನಾಗಲಿ ವಾಚ್ಯಾರ್ಥದೊಡನೆ ಸಂಜ್ಞೆಯನ್ನು ಹೊಂದಿಸಿಕೊಳ್ಳುವ ಪ್ರಯತ್ನ ಮಾಡಿದ್ದಾರೆ ಎನ್ನಬಹುದು.

ದರ್ಪಣಕಾರ ಮುಂದುವರಿದು ''ಅಂತದು ಪ್ರತ್ಯಯಮುಂ ಎಂಬುದು'' ಎಂದು ಹೇಳಿ ವಾದಕ್ಕೆ ದಾರಿ ಮಾಡಿದ್ದಾನೆ. ಈ ಮಾತಿನಿಂದ ''ವಿಭಕ್ತಿ'' ಮತ್ತು ''ಪ್ರತ್ಯಯ'' ಸಮಾನಾರ್ಥಕ ಭಿನ್ನ ಸಂಜ್ಞೆಗಳೆಂಬುದನ್ನು ಒಪ್ಪಬೇಕಾಗುತ್ತದೆ. ಆದರೆ ಸಂಸ್ಕೃತ ವ್ಯಾಕರಣಗಳಲ್ಲಿ ನಿರೂಪಿತವಾಗಿರುವಂತೆ ವಿಭಕ್ತಿಗಳೆಲ್ಲ ಪ್ರತ್ಯಯಗಳು, ಆದರೆ ಪ್ರತ್ಯಯ ಗಳೆಲ್ಲ ವಿಭಕ್ತಿಗಳಲ್ಲ. ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ ಕೇಶಿರಾಜ ಎಡವಿದನೆಂದೇ ಭಾಸವಾಗುತ್ತದೆ.[17]

ಯಾವುದೇ ಶಾಸ್ತ್ರದಲ್ಲಿ ಇಂಥದೇ ಪಾರಿಭಾಷಿಕ ಪದವನ್ನು ಬಳಸಬೇಕೆಂಬ ನಿಯಮವಿಲ್ಲ. ಸಂಸ್ಕೃತದ ಭಿನ್ನ ವ್ಯಾಕರಣ ಸಂಪ್ರದಾಯಗಳು ಒಂದೇ ಒಂದಾದ ಸಂಸ್ಕೃತ ಭಾಷೆಯನ್ನು ವಿವೇಚಿಸುವಲ್ಲಿ ಭಿನ್ನ ಪಾರಿಭಾಷಿಕ ಪದಗಳನ್ನು ಬಳಸುತ್ತಿರು ವುದಕ್ಕೆ ಇದೇ ಮೂಲಭೂತವಾದ ಕಾರಣವಾಗಿದೆ. ಸಂಪ್ರದಾಯಕ್ಕೆ ಋಣಿಯಾಗಿಯೂ ಅವು ''ತಮ್ಮತನ''ವನ್ನು ಆ ಮೂಲಕ ಮೆರೆದಿವೆ. ವೈಯಾಕರಣನೊಬ್ಬ ತಾನು ಬಳಸುವ ಸಂಜ್ಞೆಯನ್ನು ಎಷ್ಟು ಖಚಿತವಾಗಿ ನಿರ್ದುಷ್ಟವಾಗಿ ನಿರ್ವಹಿಸುತ್ತಾನೆ ಎಂಬುದೇ ಮುಖ್ಯ. ಈ ಹಿನ್ನೆಲೆಯಲ್ಲಿ ಕೇಶಿರಾಜನ ಮೇಲಿನ ಮಾತನ್ನು ಅವಲೋಕಿಸ ಬಹುದು.

ಕೇಶಿರಾಜನ ದೃಷ್ಟಿಯಲ್ಲಿ ವಿಭಕ್ತಿ ಮತ್ತು ಪ್ರತ್ಯಯ–ಇವೆರಡೂ ಪರ್ಯಾಯ ವಾಚಿಗಳು. ಸ್ಮೃತಿ, ಭೂಷಣ, ದರ್ಪಣಗಳನ್ನು ಸಮೀಕ್ಷಿಸಿದಾಗ ಪ್ರತ್ಯೇಕವಾದೊಂದು ವಿಚಾರ ಗೋಚರಿಸುತ್ತದೆ. ಈ ಮೂರೂ ಕೃತಿಗಳಲ್ಲಿ ''ವಿಭಕ್ತಿ ಪ್ರತ್ಯಯ'' (ವಿಭಕ್ತಿ ಮತ್ತು ಪ್ರತ್ಯಯ ಜೊತೆಜೊತೆಯಾಗಿ) ಎಂಬ ಪ್ರಯೋಗವಿಲ್ಲ. ನಾಮಾಖ್ಯಾತ ವಿಭಕ್ತಿಗಳನ್ನು ಹೇಳುವಲ್ಲಿ 'ವಿಭಕ್ತಿ' ಎಂದು ಮಾತ್ರ ಬಳಸಲಾಗುತ್ತಿದೆ.

'' ...... ಈ ತೆಱದಿಂದೇಟಿಕ್ಕುಂ
ಖ್ಯಾತ ವಿಭಕ್ತಿಗಳದರ್ಕೆ ಕಾರಕವಶದಿಂ'' ಸ್ಮೃತಿ ಸೂ.15

"ಇತಿ ತಾಃ ಪುನಃ ಸಪ್ತವಿಭಕ್ತಯೋ ಜ್ಞಾತವ್ಯಾಃ"

ಭೂಷಣ ಸೂತ್ರ 39ರ ವೃತ್ತಿ

"........ಇತ್ಯೇತಾ ವಿಭಕ್ತಯೋ ಭವಂತಿ"

ಭೂಷಣ ಸೂತ್ರ 195ರ ವೃತ್ತಿ

"ಸಂದಿಸಿ ಮುಮಿಂಕೆಯುದದೊ

ಳೆಂದಿರ್ಪುವು ಸಪ್ತವಿಧ ವಿಭಕ್ತಿಗಳ್" ದರ್ಪಣ ಸೂ. 103

"........ಧಾತುಗೆ ವಿಭಕ್ತಿಯಾಖಾಗಿರ್ಕುಂ ದರ್ಪಣ ಸೂ. 227

ತದ್ಧಿತ ಪ್ರತ್ಯಯಂಗಳನ್ನು ಹೇಳುವಲ್ಲಿ "ಇಗ ಪ್ರತ್ಯಯ" "ಇಚ ಪ್ರತ್ಯಯ" ಹೀಗೆ ಈ ಗ್ರಂಥಗಳಲ್ಲಿ ಬಳಸಲಾಗಿದೆ. ದರ್ಪಣದಲ್ಲಿ "ಇಸು ಪ್ರತ್ಯಯ" ಎಂಬ ಬಳಕೆಯಿದೆ. ಧಾತುಲಕ್ಷಣದ ಕುರಿತು ದರ್ಪಣಕಾರ ಸೂತ್ರದಲ್ಲಿ "ಕ್ರಿಯೆಯರ್ಥದ ಮೂಲಂ ಪ್ರತ್ಯಯಂ ರಹಿತಂ ಧಾತು" (ಸೂ. 227) ಎಂದರೆ, ವೃತ್ತಿಯಲ್ಲಿ "ಕ್ರಿಯಾರ್ಥ ಪ್ರಕೃತಿಯುಂ ವಿಭಕ್ತಿ ರಹಿತಮುಂ ಧಾತುವೆಂಬುದು" ಎಂದು ವಿವರಿಸುತ್ತಾನೆ. ಸೂತ್ರದಲ್ಲಿ 'ಪ್ರತ್ಯಯ' ಎಂದು ಹೇಳಿ ವೃತ್ತಿಯಲ್ಲಿ "ವಿಭಕ್ತಿ" ಎಂದಿರುವುದು ವಿಚಾರಣೀಯ.

ಇವನ್ನೆಲ್ಲ ವಿಚಾರಿಸಿದಾಗ ಒಂದು ಪ್ರತ್ಯೇಕವಾದ ತೀರ್ಮಾನಕ್ಕೆ ಬರಬೇಕಾಗುತ್ತದೆ. ಕನ್ನಡ ವೈಯಾಕರಣರು "ಪ್ರತ್ಯಯ" ಎಂಬ ಸಂಜ್ಞೆಯನ್ನು ಸಂಸ್ಕೃತ ವ್ಯಾಕರಣದಿಂದ ನೇರವಾಗಿ ಎತ್ತಿಕೊಂಡಿದ್ದರೂ ತಮ್ಮ ಗ್ರಂಥಗಳಲ್ಲಿ ಅದನ್ನು ಬಳಸುವಾಗ ಒಂದು ಪ್ರತ್ಯೇಕವಾದ ವ್ಯವಸ್ಥೆಯನ್ನು ಅವಲಂಬಿಸಿದಂತಿದೆ. 'ಪ್ರತ್ಯಯ' ಎಂದು ಮಾತ್ರ ಪ್ರಯೋಗಗೊಂಡಾಗ ಅದು 'ವಿಭಕ್ತಿ'ಯ ಪರ್ಯಾಯವಾಚಿಯಾಗಿರುತ್ತದೆ. ತದ್ಧಿತ ಪ್ರತ್ಯಯ, ಇಸು ಪ್ರತ್ಯಯ–ಇಂಥ ಪ್ರಯೋಗಗಳಲ್ಲಿ ಅದು (ಪ್ರತ್ಯಯ) ವರ್ಗನಾಮವಾಗಿರುತ್ತದೆ. ಆಗ ಮುಕ್ತ ಆಕೃತಿಮಾದ ಮುಂದಿನಿಂದ ಬರುವ ಬದ್ಧ ಆಕೃತಿಮಾ ಎನ್ನುವ ಅರ್ಥವನ್ನದು ಕೊಡುತ್ತದೆ. ಈ ನಿಟ್ಟಿನಲ್ಲಿ ವಿಚಾರಿಸಿದಾಗ ಕೇಶಿರಾಜನು "ವಿಭಕ್ತಿಯೆಂಬುದನ್ನು ಸಾಮಾನ್ಯಾರ್ಥದಲ್ಲಿ ಪ್ರತ್ಯಯಗಳೆಲ್ಲವಕ್ಕೂ ಅನ್ವಯಿಸಿ ಹೇಳಿದ್ದಾನೆ" (ಶ್ರೀಕಂಠತೀರ್ಥ ಪು. 595) ಎಂಬ ಹೇಳಿಕೆ ಸಮರ್ಪಕವೆನಿಸದು. ವಿಭಕ್ತಿಯ ಪರ್ಯಾಯವಾಚಿ ಪ್ರತ್ಯಯ ಹೌದಾದರೂ ತದ್ಧಿತ ವಿಭಕ್ತಿ, ಇಸು ವಿಭಕ್ತಿ ಇತ್ಯಾದಿಯಾದ ಪ್ರಯೋಗ ಕನ್ನಡ ವ್ಯಾಕರಣಗಳಲ್ಲೆಲ್ಲೂ ನಡೆದಿಲ್ಲವೆಂಬುದನ್ನೂ ಲೆಕ್ಕಿಸಬೇಕು.

ಸಂಸ್ಕೃತ ವ್ಯಾಕರಣಗಳು ನಿರೂಪಿಸುವಂತೆ ಪದಸಂಸ್ಕಾರ ಪಡೆಯಲು ಶಬ್ದವೊಂದು ವಿಭಕ್ತಿಯನ್ನು ಹೊಂದಲೇಬೇಕು. ವಿಭಕ್ತಿಯಿಂದ ಹೊರತಾದ ಯಾವುದೇ ಎಷ್ಟೇ ಪ್ರತ್ಯಯಂಗಳನ್ನು ಹೊಂದಿದರೂ ಪದತ್ವ ಲಭ್ಯವಾಗದು. ಪ್ರಕೃತಿ ಪ್ರತ್ಯಯಗಳ ಕೂಟದಿಂದ ಪದವಾಗುವುದೆಂದು ಸಂಸ್ಕೃತದಲ್ಲಿ ಹೇಳುವುದು ತೀರ ಸಾಮಾನ್ಯವೆಂಬುದನ್ನು ಮುಂದೆ ನೋಡುತ್ತೇವೆ. ಪ್ರಕೃತಿ ಪ್ರತ್ಯಯಗಳ ಎಂದರೆ ಪ್ರಕೃತಿ ವಿಭಕ್ತಿಗಳ ಎಂದೇ

ಅರ್ಥ. ಹೀಗಿರಲು ವಿಭಕ್ತಿ ಮತ್ತು ಪ್ರತ್ಯಯಂಗಳನ್ನು ಪರ್ಯಾಯ ವಾಚಿಗಳಂತೆ ಪ್ರಯೋಗಿಸಲು ಸಂಸ್ಕೃತದ ರೂಢಿಯೇ ಹಿನ್ನೆಲೆಯಾಗಿದೆ.

ವಿಭಕ್ತಿಯನ್ನು ಹೊಂದುವ ರೂಪವೆ ಪ್ರಕೃತಿ. ವಿಭಕ್ತಿ ಇರ್ತೆರನಾಗಿರ್ಪಂತೆ ಪ್ರಕೃತಿಯೂ ದ್ವಿವಿಧವಾಗಿದೆ. ಅದನ್ನೇ ದರ್ಪಣದಲ್ಲಿ "ಆ ವಿಭಕ್ತಿಗಳ ಪಿಂದಿರ್ಪ ಲಿಂಗಮುಂ ಧಾತುಮುಂ ಪ್ರಕೃತಿಯೆನಲಕ್ಕುಂ" (ಸೂತ್ರ 45ರ ವೃತ್ತಿ) ಎಂದು ನಿರೂಪಿಸ ಲಾಗಿದೆ. "ಮೂಲರೂಪ" ಎಂಬ ಅರ್ಥದಲ್ಲಿ "ಪ್ರಕೃತಿ" ಎಂಬ ಪದ ನಿರುಕ್ತ, ಪ್ರಾತಿಶಾಖ್ಯ ಮತ್ತು ಅಷ್ಟಾಧ್ಯಾಯಿಯಲ್ಲಿ ಪ್ರಯುಕ್ತವಾಗಿದೆ. "ತತ್ ಪ್ರತ್ಯಯದಿಂ ಪೂರ್ವದೊಳಿರ್ಕುಂ ಪ್ರಕೃತಿ" ಎಂಬ ದರ್ಪಣದ ಹೇಳಿಕೆ ದುರ್ಗಸಿಂಹ ಹೇಳುವ "ಪ್ರತ್ಯಯಾತ್ ಪ್ರಥಮಂ ಕ್ರಿಯತ ಇತಿ ಪ್ರಕೃತಿಃ" (ಕಾತಂತ್ರ 3-2-1ಕ್ಕೆ ದುರ್ಗಸಿಂಹ ವೃತ್ತಿ) ಎಂಬ ಮಾತನ್ನು ನೆನಪಿಗೆ ತರುತ್ತದೆ. ದುರ್ಗಸಿಂಹ ಮುಂದುವರಿದು "ಪ್ರಕೃತೇಃ ಪರಃ ಪ್ರತ್ಯಯೋವೇದಿತವ್ಯಃ" ಎಂದುದು ಗಮನಾರ್ಹ. ಪದವನ್ನು ವಿಭಜಿಸಿ ವಿಭಕ್ತಿಯ ಹಿಂದಿರುವ ರೂಪವನ್ನು ಪ್ರಕೃತಿಯೆಂದು ಕರೆಯುವ ಮೇಲಿನ ದರ್ಪಣದ ಮಾತನ್ನು "ತತ್‌ಪ್ರತ್ಯಯುವೆಂದರೆ ಯಾವ ಪ್ರತ್ಯಯ ? ವಿಭಕ್ತಿ ಎಂಬ ಅರ್ಥವನ್ನು ಕೊಡುವ ಪ್ರತ್ಯಯವೊ ಅಥವಾ ವಿಭಕ್ತಿಯನ್ನು ಉಪವರ್ಗವನ್ನಾಗಿ ಒಳಗೊಂಡಿರುವ ಪ್ರತ್ಯಯವೋ" (ಆಲೋಕ ಪು. 130) ಎಂದು ಪ್ರಶ್ನಿಸುವುದು ಅನವಶ್ಯ. ಕನ್ನಡ ವೈಯಾಕರಣರು ನಡೆದ ಜಾಡನ್ನು ಮೊದಲು ಗುರುತಿಸಿದರೆ ಪದ ಸಂಸ್ಕಾರವನ್ನು ಕುರಿತಾಗಿ ಹೇಳುವ ಈ ಸೂತ್ರದಲ್ಲಿ ಅಂತಹ ಪ್ರಶ್ನೆಗೆಡೆಯಿಲ್ಲ. ಮುಂದಿನ ವಿವರಣೆ ಅದನ್ನು ಮತ್ತಷ್ಟು ಸ್ಫುಟಗೊಳಿಸುತ್ತದೆ.

ಪದವೆಂದರೇನು ? ಅದರ ನಿರ್ಮಾಣ ಹೇಗೆ ? ಎಂಬುದರ ಕುರಿತು ಸಂಸ್ಕೃತ ವ್ಯಾಕರಣಗಳಲ್ಲಿ ವಿವರಣೆಯಿದೆ. ಬೇರೆ ಬೇರೆ ವ್ಯಾಕರಣಗಳು ಹೇಳುವ ಕೆಲವು ನಿರೂಪಣೆಗಳು ಕೆಳಗಿನಂತಿವೆ.

| | |
|---|---|
| ಅಷ್ಟಾಧ್ಯಾಯಿ | "ಸುಪ್ತಿಙಂತಂ ಪದಂ" 1–4–14 |
| ಕಾತಂತ್ರ | "ಪೂರ್ವಪರಯೋರರ್ಥೋಪಲಬ್ಧೌ ಪದಂ" 1–1–20 |
| ಐಂದ್ರ | "ಅರ್ಥಃ ಪದಮ್ (ಸಂ.ವ್ಯಾ.ವಿ. ಪು. 78) |
| ಆಪಿಶಲೆ | "ವಿಭಕ್ತ್ಯಂತಂ ಪದಂ" (ಅದೇ) |
| ಸ,ಕಂ. | "ವಿಭಕ್ತ್ಯಂತಂ ಪದಂ" 1_1–25 |
| ಸಿ.ಹೇ.ಶ. | "ಸ್ಯಾದಿರ್ವಿಭಕ್ತಿಃ ತದಂತಂ ಪದಂ 1–1–19, 20 |
| ಸಾ.ಪ್ರ. | "ವಿಭಕ್ತ್ಯಂತಂ ಪದು" 7–1 |

ಸರಸ್ವತೀ ಕಂಠಾಭರಣದ ಪ್ರಾರ್ಥನಾ ಶ್ಲೋಕ ಕೆಳಗಿನದು:

"ಪ್ರಣಮ್ಯೈಕಾತ್ಮತಾಂ ಯಾತೌ ಪ್ರಕೃತಿಪ್ರತ್ಯಯಾವಿವ
ಶ್ರೇಯಃ ಪದಮುಮೇಶಾನೌ ಪದಲಕ್ಷ್ಮಪ್ರಚಕ್ಷ್ಮಹೇ"

ಇದಕ್ಕೆ ಶ್ರೀ ನಾರಾಯಣ ದಂಡನಾಥ ವಿರಚಿತ "ಹೃದಯಹಾರಿಣಿ" ವೃತ್ತಿಯಲ್ಲಿ "ಉಮೇಶಾನೌ ಗೌರೀಮಹೇಶ್ವರೌ. ಪ್ರಕೃತಿ ಪ್ರತ್ಯಯಾವಿವ ಪ್ರಕೃತಿ ಪ್ರತ್ಯಯೌ ಯಥೈಕಾತ್ಮತಾಂ ಯಾತೌ ಏಕಸ್ವರೂಪತಾಂ ಪ್ರಾಪ್ತೌ ಶ್ರೇಯಃ ಪದಂ ಶ್ರೇಷ್ಠಃ ಪದಂ ಸಂಪದ್ಯತೇ..." ಎಂದಿದೆ. ಪ್ರಕೃತಿ ಪ್ರತ್ಯಯಗಳು ಕೂಡಿ ಏಕಸ್ವರೂಪತೆಯನ್ನು ಹೊಂದಿ ಶ್ರೇಷ್ಠಪದವಾಗುವುದು ಎನ್ನುವ ಹೇಳಿಕೆ ಇಲ್ಲಿ ಮುಖ್ಯವಾದುದು.[18] ದುರ್ಗಸಿಂಹನು "ಪೂರ್ವಪರಯೋಃ ಪ್ರಕೃತಿ ವಿಭಕ್ತ್ಯೋಃ ಅರ್ಥೋಪಲಬ್ಧೌ ಸತ್ಯಾಂ ಸಮುದಾಯಃ ಪದ ಸಂಜ್ಞೋಭವತಿ" (1-1-20) ಎಂದುದನ್ನೂ, ಉಪರ್ಯುಕ್ತ ಹೇಳಿಕೆಗಳೆಲ್ಲವನ್ನೂ ಲೆಕ್ಕಿಸಿದರೆ ಸಂಸ್ಕೃತ ವೈಯಾಕರಣರಲ್ಲಿ ಪ್ರಕೃತಿಗೆ ವಿಭಕ್ತಿ ಇಲ್ಲವೆ ಪ್ರತ್ಯಯ ಸೇರಿ ಪದವಾಗುವುದೆಂಬ ಅಭಿಪ್ರಾಯವಿತ್ತೆಂಬುದು ಗಟ್ಟಿಯಾಗುತ್ತದೆ. ಇಂತಹ ಹಿನ್ನೆಲೆಯಿಂದಲೇ ಕನ್ನಡ ವ್ಯಾಕರಣಗಳಲ್ಲಿ ಪದತ್ವವನ್ನು ಹೊಂದುವ ಕುರಿತಾದ ನಿರೂಪಣೆಗಳು ಉದ್ಭವಿಸಿರಬೇಕು. ಸ್ಮೃತಿ ಭೂಷಣ ದರ್ಪಣಗಳಲ್ಲಿ ಪದ ನಿರ್ಮಾಣದ ಕುರಿತಾದ ಹೇಳಿಕೆಗಳು ಕೆಳಗಿನಂತಿವೆ.

ಸ್ಮೃತಿ : "ನಿರತಂ ಪ್ರಕೃತಿಪ್ರತ್ಯಯ
ಮೆರಡುಮೊಡಂಬಟ್ಟು ತೋಱೆ ಪದಮೆನೆಪಡೆಗುಂ" ಸೂ. 7

ಭೂಷಣ : ವಿಭಕ್ತ್ಯಂತಂ ಪದಂ ಸೂ. 16

ದರ್ಪಣ : "....ಎರಡುಮೊಂದಾದಪೆ ಪದಂ" ಸೂ. 45

ಮೇಲಿನ ನಿರೂಪಣೆಯನ್ನು ಗಮನಿಸಿದಾಗ ಸ್ಮೃತಿಯನ್ನು ದರ್ಪಣ ನೇರವಾಗಿ ಅನುಸರಿಸಿದ್ದು ಸ್ಪಷ್ಟವಾಗುತ್ತದೆ. ಆದರೆ ಭೂಷಣಕಾರ ನಡೆದ ಜಾಡೇ ಬೇರೆ. ಅವನು ಐಂದ್ರ, ಆಪಿಶಲಿ, ಭೋಜ ಹಾಗೂ ಹೇಮಚಂದ್ರನನ್ನು ಅನುಸರಿಸಿರುವನು. ಭೋಜ ಪಾಣಿನಿ ಸಂಪ್ರದಾಯದವನಾದರೂ "ಸುಪ್ತಿಙಂತಂ ಪದಂ" ಎಂಬುದನ್ನು ಬಿಟ್ಟು "ವಿಭಕ್ತ್ಯಂತಂ ಪದಂ" ಎಂಬುದನ್ನು ಸ್ವೀಕರಿಸಿದಂತೆ ಕಾತಂತ್ರವನ್ನು ಅನುಸರಿಸುವ ಭೂಷಣಕಾರ ಈ ವಿಚಾರದಲ್ಲಿ ಅದರಿಂದ ದೂರ ಸರಿದಿರುವುದು ಗಮನಾರ್ಹವಾಗಿದೆ.

ವಿಭಕ್ತಿಗಳ ಕುರಿತಾದ ಮೇಲಿನ ವಿವೇಚನೆಯನ್ನು ಕೆಳಗಿನಂತೆ ಸಂಗ್ರಹಿಸಬಹುದು.

1. ಪ್ರತ್ಯಯಗಳ ಒಂದು ಒಳಗುಂಪು ವಿಭಕ್ತಿ. ಪದ ನಿರ್ಮಾಣಕ್ಕಾಗಿ ಪ್ರಕೃತಿಗೆ (ಧಾತು ಇಲ್ಲವೆ ನಾಮ ಪ್ರಕೃತಿ) ಹತ್ತುವ ಪ್ರತ್ಯಯಗಳಿಗೆ ವಿಭಕ್ತಿ ಎಂಬ ಸಂಜ್ಞೆ.
2. ಕನ್ನಡ ವ್ಯಾಕರಣ ಪರಂಪರೆಯಲ್ಲಿ ವಿಭಕ್ತಿಯನ್ನು ಮಾತ್ರ ಹೇಳುವಲ್ಲಿ ಪ್ರತ್ಯಯವು ವಿಭಕ್ತಿಯ ಪರ್ಯಾಯವಾಚಿ.

3. ಪ್ರಕೃತಿಯು ವಿಭಕ್ತಿ ಯಾ ಪ್ರತ್ಯಯವನ್ನು ಸೇರಿ ಪದವಾಗುವುದು.

ಹೊಸಗನ್ನಡದಲ್ಲಿ ಹುಟ್ಟಿಕೊಂಡ ವ್ಯಾಕರಣ ಸಂಬಂಧವಾದ ಜಿಜ್ಞಾಸೆಯಲ್ಲಿ ವಿಭಕ್ತಿ ಮತ್ತು ಪ್ರತ್ಯಯವನ್ನು ಬೇರ್ಪಡಿಸಿದ ಸ್ವಾರಸ್ಯವೊಂದಿದೆ. ಪ್ರಥಮಾ ಮತ್ತು ಪಂಚಮೀ ವಿಭಕ್ತಿಗಳ ಕುರಿತಾಗಿ ಹುಟ್ಟಿಕೊಂಡ ಚರ್ಚೆಯಲ್ಲಿ ಈ ಸ್ವಾರಸ್ಯ ತಲೆದೋರಿದೆ. ಪ್ರಥಮಾ ಮತ್ತು ಪಂಚಮೀ ವಿಭಕ್ತಿಗಳಿವೆಯೇ ಎಂದು ಹುಟ್ಟಿಕೊಂಡ ಪ್ರಶ್ನೆಗಳಿಗೆ ಮೂರು ವಿಧವಾದ ಉತ್ತರಗಳು ದೊರಕಿವೆ.

ಅ) ಪ್ರಥಮಾ ಯಾ ಪಂಚಮೀ ವಿಭಕ್ತಿಯಿಲ್ಲ (ಕ.ಭಾ.ಶಾ. ಪು. 268)

ಆ) ಪ್ರಥಮಾ ಯಾ ಪಂಚಮೀ ವಿಭಕ್ತಿಯಿದೆ. ಆದರೆ ಪ್ರತ್ಯಯವಿಲ್ಲ (ದ್ರಾ.ಭಾ.ವಿ. ಪು. 190)

ಇ) ಪ್ರಥಮಾ ಯಾ ಪಂಚಮೀ ವಿಭಕ್ತಿಯೂ ಇಲ್ಲ ಪ್ರತ್ಯಯವೂ ಇಲ್ಲ (ಅದೇ. ಪು. 204)

ಇಲ್ಲಿ ಈ ಉತ್ತರಗಳ ತಥ್ಯಾಂಶದ ವಿವೇಚನೆ ಪ್ರಸ್ತುತವಲ್ಲ. ಬಳಸಿದ ಪದಗಳು ವಿವೇಚಿಸತಕ್ಕುವು. ವಿಭಕ್ತಿಯಿದೆ. ಪ್ರತ್ಯಯವಿಲ್ಲ ಅಥವಾ ವಿಭಕ್ತಿಯೂ ಇಲ್ಲ ಪ್ರತ್ಯಯ ಇಲ್ಲ–ಈ ತೆರನಾದ ಹೇಳಿಕೆಗೆ ಕನ್ನಡದ ಪ್ರಾಚೀನ ವ್ಯಾಕರಣಗಳು ಎಡೆಗೊಡುವುದಿಲ್ಲ. ವಿಭಕ್ತಿಯು ಅಸ್ತಿತ್ವ ಪ್ರತ್ಯಯ ಸ್ವರೂಪದಲ್ಲಷ್ಟೆ. ಹಾಗಾಗಿ ಅದರ ವಿವೇಚನೆ ಇಲ್ಲಿ ಮುಖ್ಯ. ಇಂತಹ ಹೇಳಿಕೆಗೆ ಕಾರಣವೇನು ಎಂಬುದನ್ನು ವಿಚಾರಿಸಬೇಕು. ಬಹುಶಃ ಇಂಗ್ಲಿಷ್ ಬರವಣಿಗೆಯ ಮುಖಾಂತರ ಈ ರೀತಿಯ ನಿರೂಪಣೆ ಬಂದಿರಬೇಕು. ನಮ್ಮ ವಿಭಕ್ತಿಗಳ ವಿಚಾರಗಳನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆಯುವಾಗ ವಿಭಕ್ತಿಗೆ ಸಂವಾದಿಯಾಗಿ Case, Case Termination, Case Affix ಹೀಗೆ ಬರೆಯುವುದು ರೂಢಿಗೆ ಬಂತು.[19] ಕಾಲಕ್ರಮೇಣ case termination ಅನುವಾದಿತವಾಗಿ ವಿಭಕ್ತಿ ಪ್ರತ್ಯಯವಾಯಿತು. ಬಳಿಕ 'termination' ಪ್ರತ್ಯಯವಾಗಿ case ವಿಭಕ್ತ್ಯರ್ಥವಾಯಿತು. ವಿಭಕ್ತ್ಯರ್ಥದ ವ್ಯವಸ್ಥೆ ''case system'' ಆಯಿತು. ಹೀಗೆ 'ವಿಭಕ್ತ್ಯರ್ಥ' ಎಂಬಲ್ಲಿ ವಿಭಕ್ತಿಯೂ (case) ಆ ಅರ್ಥವನ್ನು ಸೂಚಿಸುವ ಅಂಶಕ್ಕೆ 'ಪ್ರತ್ಯಯ'ವೂ ರೂಢಿಗೆ ಬಂದಂತಿವೆ. ಹಾಗಾಗಿ ವಿಭಕ್ತಿಯಿದೆ ಅಥವಾ ಇಲ್ಲವೆಂದರೆ ವಿಭಕ್ತ್ಯರ್ಥ ಇದೆ ಯಾ ಇಲ್ಲವೆಂದರ್ಥ. (ವಿಭಕ್ತಿ) ಪ್ರತ್ಯಯ ಇದೆ ಯಾ ಇಲ್ಲ ಎಂದರೆ ವಿಭಕ್ತ್ಯರ್ಥವನ್ನು ಸೂಚಿಸುವ affix ಇದೆ ಯಾ ಇಲ್ಲ ಎಂದರ್ಥ. ಈ ನಿಟ್ಟಿನಲ್ಲಿ ವಿಚಾರಿಸಿದರೆ ಮೇಲಿನ ಪದಪ್ರಯೋಗಗಳಲ್ಲಿರುವ ಅವ್ಯವಸ್ಥೆ ನಿವಾರಣೆಯಾಗುತ್ತದೆ.

## ವಿಭಕ್ತಿಗಳೆಷ್ಟು ?

ಇಲ್ಲಿ ವಿಭಕ್ತಿಯೆಂದರೆ ನಾಮಂ ವಿಭಕ್ತಿ ಎಂದೇ ಅರ್ಥ. ಸಂಸ್ಕೃತ ವೈಯಾಕರಣರು ಏಳು ವಿಭಕ್ತಿಗಳನ್ನು ಹೇಳುತ್ತಾರೆ.[20] ಏಳು ವಿಭಕ್ತಿಗಳ ಲೆಕ್ಕಾಚಾರ ಋಕ್ ಸಂಹಿತೆಯಲ್ಲಿದೆ.

"....ದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯ" (4–8–6)

ಅಷ್ಟಾಧ್ಯಾಯಿ, ಕಾತಂತ್ರ, ಸಿದ್ಧಹೇಮ ಶಬ್ದಾನುಶಾಸನ ಮೊದಲಾದ ವ್ಯಾಕರಣಗಳು ಏಳು ವಿಭಕ್ತಿಗಳಿಗೆ ಕ್ರಮದಿಂದ ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥಿ, ಪಂಚಮೀ, ಷಷ್ಠೀ, ಸಪ್ತಮೀ ಎಂದು ಸಂಜ್ಞೆಗಳನ್ನು ಕೊಟ್ಟಿವೆ. ಒಂದೊಂದು ವಿಭಕ್ತಿಯೂ ವಚನತ್ರಿತಯಕ್ಕೆ ಹೊಂದಿಕೊಂಡು ಮೂರು ತೆರನಾಗಿದೆ (ಕಾಶಿಕಾ. 1-4-103) ಎಂದರೆ ಒಂದು ವಿಭಕ್ತಿ ಎಂಬ ಸಂಜ್ಞೆ ಮೂರು ಪ್ರತ್ಯಯಗಳಿಗೆ ಸಲ್ಲುತ್ತದೆ. ಕೆಳಗಿನ ಉದಾಹರಣೆಯಿಂದ ಇದನ್ನು ಸ್ಪಷ್ಟೀಕರಿಸಬಹುದು.

| ಸಂಜ್ಞೆ | ವಚನ | | |
|---|---|---|---|
| | ಏಕ | ದ್ವಿ | ಬಹು |
| ಪ್ರಥಮಾ | ಸು | ಔ | ಜಸ್ |
| ದ್ವಿತೀಯಾ | ಅಮ್ | ಔಟ್ | ಶಸ್ |

ಹೀಗೆ ಸಂಸ್ಕೃತದಲ್ಲಿ ಏಳು ವಿಭಕ್ತಿಗಳಲ್ಲಿ ಒಟ್ಟು 21 ಪ್ರತ್ಯಯಗಳನ್ನು ಕಾಣುತ್ತೇವೆ. ಸಂಬೋಧನೆಯನ್ನು ಸೂಚಿಸಲು ಪ್ರತ್ಯೇಕ ಪ್ರತ್ಯಯವಿಲ್ಲ. ಅದು ಪ್ರಥಮೆಯನ್ನೇ ಬಳಸಿಕೊಳ್ಳುವುದರಿಂದ "ಸಂಬೋಧನಾ ಪ್ರಥಮಾ" ಎಂದೇ ರೂಢಿ.

ಕನ್ನಡದಲ್ಲಿ ಕವಿರಾಜಮಾರ್ಗ ಮೊದಲ್ಗೊಂಡು ಏಳು ವಿಭಕ್ತಿಗಳ ಕಲ್ಪನೆಯಿದೆ :

ಕವಿರಾಜಮಾರ್ಗ : "ವಿಭಕ್ತಿಗಳೇೞಿನಿಕ್ಕುಂ" 1-114

ಸ್ಮೃತಿ : "ಏೞಕ್ಕುಂ ಖ್ಯಾತ ವಿಭಕ್ತಿಗಳ್" ಸೂ. 15

ದರ್ಪಣ : "ಸಪ್ತವಿಧ ವಿಭಕ್ತಿಗಳ್" ಸೂ. 103

ಭೂಷಣ ವಿಭಕ್ತಿಗಳೆಷ್ಟೆಂದು ಸಂಖ್ಯೆಯನ್ನು ಹೇಳದಿದ್ದರೂ ಅದೂ ಹೇಳುವುದು ಏಳು ವಿಭಕ್ತಿಗಳನ್ನಾಗಿದೆ. ದರ್ಪಣಕಾರ ಹೇಳಿದ "ಸಪ್ತವಿಧ" ಎಂಬುದು ಗಮನಾರ್ಹ. ವಿಭಕ್ತಿ ಏಳೆಂದೊಡನೆ ಪ್ರತ್ಯಯಗಳು ಏಳು ಎಂದರ್ಥವಲ್ಲ. ಏಳು ವಿಧವಾದ ವಿಭಕ್ತಿಗಳು ಎಂದರ್ಥ. ಅವುಗಳಲ್ಲಿ ಒಂದೊಂದರಲ್ಲೂ ಬೇರೆ ಬೇರೆ ಪ್ರತ್ಯಯಗಳಿರಲೆಡೆಯಿದೆ. ತೃತೀಯಾ ವಿಭಕ್ತಿಯನ್ನು ವಿವರಿಸುವಲ್ಲಿ "ಇಂ, ಇಂದು, ಇಂದೆಯೆಂದು ತೃತೀಯೆ

ಮೂರುಂ ತೆಱನಾಗಿರ್ಪುದಂ'' (ದರ್ಪಣ ಸೂತ್ರ 117ರ ವೃತ್ತಿ) ಎಂದು ಹೇಳಿರುವು ದನ್ನು ಗಮನಿಸಬೇಕು. 'ತೃತೀಯಾ' ಎಂಬ ಸಂಜ್ಞೆ ಈ ಮೂರು ಪ್ರತ್ಯಯಂಗಳಿಗೂ ಅನ್ವಯಿಸುವುದು ಎಂದರ್ಥ. ಈ ದೃಷ್ಟಿಯಿಂದ ದರ್ಪಣಕಾರ "ಸಪ್ತ ವಿಭಕ್ತಿಗಳ್'' ಎಂದು ಹೇಳಬೇಕಾದಲ್ಲಿ "ಸಪ್ತವಿಧ ವಿಭಕ್ತಿಗಳ್'' ಎಂದುದು ಅರ್ಥಪೂರ್ಣವಾಗಿದೆ.

ವಿಭಕ್ತಿಗಳನ್ನು ಹೆಸರಿಸುವಲ್ಲಿ ಕನ್ನಡ ವ್ಯಾಕರಣಗಳು ಅಷ್ಟಾಧ್ಯಾಯಿ ಕಾತಂತ್ರ ಗಳಿಗೆ ಋಣಿಗಳಾಗಿದ್ದು ಪ್ರಥಮಾ, ದ್ವಿತೀಯಾ ಎಂಬ ಸಂಜ್ಞೆಗಳೇ ಇಲ್ಲೂ ಬಳಕೆ ಯಾಗಿವೆ :

ಮ್–ಪ್ರಥಮಾ ; ಅಮ್–ದ್ವಿತೀಯಾ ಇತ್ಯಾದಿ.

ಕೆಲವೊಮ್ಮೆ ವಿಭಕ್ತಿ ಸಂಜ್ಞೆಯನ್ನು ಕನ್ನಡಕ್ಕೆ ಅನುವಾದಿಸಿದ್ದೂ ಇದೆ. "ಆದಿವಿಭಕ್ತಿ" (ಸ್ಮೃತಿ ಸೂ. 27) ಮೊದಲೆರಡು ವಿಭಕ್ತಿ (ದರ್ಪಣ ಸೂ. 131) ಇತ್ಯಾದಿ. ಸಂಸ್ಕೃತ ಮತ್ತು ಕನ್ನಡ ವಿಭಕ್ತಿ ಪ್ರತ್ಯಯಗಳಲ್ಲಿ ಮೂಲಭೂತವಾದ ಅಂತರವೊಂದಿದೆ. ಸಂಸ್ಕೃತ ದಲ್ಲಿ ವಿಭಕ್ತಿ ಪ್ರತ್ಯಯಗಳು ವಚನ ಸೂಚಕಾಂಶವನ್ನು ಗರ್ಭೀಕರಿಸಿಕೊಂಡಿವೆ. ಆದುದರಿಂದ ಅಲ್ಲಿ ವಚನಕ್ಕೆ ಹೊಂದಿಕೊಂಡು ,ವಿಭಕ್ತಿ ಪ್ರತ್ಯಯಗಳು ಬೇರೆ ಬೇರೆ ಯಾಗಿರಬೇಕಾಗುತ್ತದೆ. ಹಾಗೆಂದೇ ಅಲ್ಲಿ ಮೂರು ವಚನಗಳಿಗೆ ಹೊಂದಿಕೊಂಡು ಸಪ್ತವಿಧ ವಿಭಕ್ತಿಗಳ ಪ್ರತ್ಯಯಗಳು 21. ಕನ್ನಡದಲ್ಲಿ ವಿಭಕ್ತಿ ಬೇರೆ, ವಚನ ಸೂಚಕಾಂಶ ಬೇರೆ. ಹಾಗಾಗಿ ವಚನಕ್ಕೆ ಹೊಂದಿಕೊಂಡು ಇಲ್ಲಿ ವಿಭಕ್ತಿ ಪ್ರತ್ಯಯ ಗಳಲ್ಲಿ ಭೇದವಿಲ್ಲ.

ಕವಿರಾಜಮಾರ್ಗದಲ್ಲಿ ಒಂದೆಡೆ ಮಾತ್ರ (1–121) 'ವಿಭಕ್ತಿ' ಎಂಬ ಪದ ವಚನ ಸೂಚಕ ಪ್ರತ್ಯಯ ಎಂಬರ್ಥದಲ್ಲಿ ಬಳಕೆಯಾಗಿದೆ. "ಕವಿರಾಜ ಮಾರ್ಗಕಾರ ಸಂಸ್ಕೃತದ ಪಾರಿಭಾಷಿಕ ಪದವೊಂದನ್ನು ಅಲ್ಲಿನ ಅರ್ಥದಲ್ಲೇ ಸ್ವೀಕರಿಸಿ ಕನ್ನಡದಲ್ಲಿ ಕಣ್ಣುಮುಚ್ಚಿ ಪ್ರಯೋಗಿಸಿದುದಕ್ಕೆ ಇದೊಂದು ದೃಷ್ಟಾಂತ'' (ಪ್ರದೀಪಿಕೆ. ಪು. 99). ಕನ್ನಡ ವ್ಯಾಕರಣಗಳಲ್ಲಿ ಇನ್ನೆಲ್ಲೂ 'ವಿಭಕ್ತಿ' ಎಂಬುದಕ್ಕೆ ವಚನ ಸೂಚಕ ಪ್ರತ್ಯಯವೆಂಬರ್ಥ ವಿಲ್ಲ.

## ಕನ್ನಡ ವಿಭಕ್ತಿ ಪ್ರತ್ಯಯಗಳು

ವಿಭಕ್ತಿಗಳನ್ನು ಲೆಕ್ಕಮಾಡಿ ಹೇಳುವಂತೆ ವಿಭಕ್ತಿ ಪ್ರತ್ಯಯಂಗಳನ್ನು ಇಷ್ಟೇ ಎಂದು ಕನ್ನಡ ವ್ಯಾಕರಣಗಳು ಲೆಕ್ಕಮಾಡಿ ಹೇಳುವುದಿಲ್ಲ. ಸ್ಮೃತಿ ಭೂಷಣ ದರ್ಪಣಗಳಲ್ಲಿ ನಿರೂಪಿತವಾಗಿರುವ ವಿಭಕ್ತಿ ಪ್ರತ್ಯಯಗಳನ್ನು ಕೆಳಗಿನಂತೆ ಸೂಚಿಸಬಹುದು.

| ಪ್ರತ್ಯಯಗಳು | ಸಂಜ್ಞೆ |
|---|---|
| ಮ್–ಂ | ಪ್ರಥಮ |
| ಅಮ್–ಆಮ್ | ದ್ವಿತೀಯ |

| | |
|---|---|
| ಇಮ್–ಇಂದಂ–ಇಂದೆ–ಎ | ತೃತೀಯಂ |
| ಕೆ–ಕ್ಕೆ–ಗೆ–ಗ್ಗೆ–ಂಗೆ | ಚತುರ್ಥಿ |
| ಅತ್ತಣಿಂ–ಅತ್ತಣಿಂದಂ–ಅತ್ತಣಿಂದೆ | ಪಂಚಮಿ |
| ಅ–ಆ | ಷಷ್ಠಿ |
| ಅಲ್ಲಿ–ಒಳ್–ಅಲ್–ಎ | ಸಪ್ತಮಿ |

ಈ ಸಪ್ತವಿಧ ವಿಭಕ್ತಿಗಳನ್ನು ಭಾಷಾವಿಜ್ಞಾನಿಗಳು ಪೂರ್ಣವಾಗಿ ಒಪ್ಪುವುದಿಲ್ಲ. ಪ್ರಥಮಾ ಮತ್ತು ಪಂಚಮೀ ವಿಭಕ್ತಿಗಳು ಹೆಚ್ಚಿನ ವಾದಕ್ಕೆಡೆಯಾಗಿವೆ.

## ಪ್ರಥಮಾ ವಿಭಕ್ತಿ

'ಮ್' ಪ್ರಥಮಾ ವಿಭಕ್ತಿಯೆಂದೂ ಅದು ಅಕಾರಾಂತ ಲಿಂಗಗಳ ಮುಂದೆ ಬಿಂದು ಸ್ವರೂಪದಲ್ಲಿದ್ದು ಇತರೆಡೆಗಳಲ್ಲಿ ಲೋಪ ಹೊಂದುವುದೆಂದೂ ವೈಯಾಕರಣರು ಒಮ್ಮತದಿಂದ ಹೇಳಿದರೆ ಪ್ರಥಮಾ ವಿಭಕ್ತಿಯ ಅಸ್ತಿತ್ವವನ್ನೇ ಆಧುನಿಕ ಭಾಷಾ ವಿಜ್ಞಾನಿಗಳು ಅಲ್ಲಗಳೆಯುತ್ತಾರೆ. ಇತರ ದ್ರಾವಿಡ ಭಾಷೆಗಳನ್ನು ದೃಷ್ಟಿಯಲ್ಲಿರಿಸಿಕೊಂಡಾಗ ಪ್ರಥಮಾ ವಿಭಕ್ತಿಯನ್ನು ನಿರಾಕರಿಸದೆ ವಿಧಿಯಿಲ್ಲ. ಪ್ರಥಮಾ ವಿಭಕ್ತಿಯ ಕೆಲಸವನ್ನು ದ್ರಾವಿಡ ಭಾಷೆಗಳಲ್ಲಿ ಶಬ್ದವೊಂದು ಪ್ರಕೃತಿ ಸ್ವರೂಪದಲ್ಲೇ ಇದ್ದುಕೊಂಡು ನಿಭಾಯಿಸುತ್ತದೆ. ಪ್ರಾಚೀನ ವೈಯಾಕರಣರು ಪ್ರಥಮಾ ವಿಭಕ್ತಿಯೆಂದು ಭ್ರಮಿಸಿದ ಹಾಗೂ ಅಕಾರಾಂತ ಪ್ರಕೃತಿಗಳ ಮುಂದೆ ಕಾಣಿಸಿಕೊಳ್ಳುವ ನ ಮಕಾರಗಳು ಅನುಕ್ರಮವಾಗಿ ಮೇಲುವರ್ಗ ಮತ್ತು ಕೆಳವರ್ಗ ಸೂಚಕಗಳೆಂದೇ ಹೇಳಬೇಕಾಗುತ್ತದೆ. ದ್ರಾವಿಡ ಭಾಷೆಗಳ ನಾಮ ಪ್ರಕೃತಿಗಳಲ್ಲಿ ಮುಖ್ಯವಾಗಿ ಎರಡು ಗುಂಪುಗಳಿದ್ದಂತೆ ಭಾಸವಾಗುತ್ತದೆ. ಅಕಾರಾಂತ ಪ್ರಕೃತಿಗಳು ಮತ್ತು ಇತರ ಪ್ರಕೃತಿಗಳು. ಮುಖ್ಯವಾಗಿ ಅಕಾರಾಂತ ಪ್ರಕೃತಿಗಳು ಲಿಂಗ ಸೂಚಕಾಂಶಗಳನ್ನು ಹೊಂದಿರುವುದು ಈ ಭಾಷೆಗಳ ಕ್ರಮ. ಅದಕ್ಕನುಸರಿಸಿಯೇ ದ್ವಿತೀಯಾದಿ ವಿಭಕ್ತಿಗಳು ಪರವಾದಾಗ ನಪುಂಸಕ ಪ್ರಕೃತಿಗಳ ಮುಂದೆ ಮ್ (ಅಮ್), ದ್ (ಅದ್) ಅಙ್ ಎಂಬ ಆಗಮಂಗಳಾಗುತ್ತವೆ. "ಇವೆಲ್ಲವೂ ನಪುಂಸಕ ಲಿಂಗವನ್ನು ಸೂಚಿಸುವ ಪ್ರತ್ಯಯಗಳು" (ಕ.ಕೈ. ಪು. 338). ಅಕಾರಾಂತ ಪುಲ್ಲಿಂಗ ಪ್ರಕೃತಿಗಳ ಮುಂದೆ ಬರುವುದೆಂದು ಹೇಳಲಾದ 'ನ್' (ಅನ್) ಪುಲ್ಲಿಂಗ ಸೂಚಕ. ಅದು ಅಕಾರಾಂತ ಸ್ತ್ರೀಲಿಂಗ ಪ್ರಕೃತಿಗಳಿಗೂ ಬರುವುದರಿಂದ (ಅಂತಹ ಪ್ರಕೃತಿಗಳು ತೀರಾ ಕಡಮೆ) ಬೇಕಾದರೆ 'ನ್' (ಅನ್)ವನ್ನು ಮೇಲುವರ್ಗ ಸೂಚಕವೆಂದೂ ಹೇಳಬಹುದು. ಸಂಸ್ಕೃತ ವ್ಯಾಕರಣದ ವಿಭಕ್ತಿ ವ್ಯವಸ್ಥೆಯ ಚೌಕಟ್ಟನ್ನು ಸ್ವೀಕರಿಸಿಯೂ ಪ್ರಥಮಾ ವಿಭಕ್ತಿಯನ್ನು ಹೇಳುವಲ್ಲಿ "ಪೆಯರ್" (ಹೆಸರು) ಎಂದೇ ತಮಿಳು ಮಲಯಾಳಗಳ ವ್ಯಾಕರಣಗಳು ಹೇಳುತ್ತಿರುವುದು ತೀರ ಸಮರ್ಪಕವಾಗಿದೆ. ಬಹುಶಃ ಸಂಸ್ಕೃತ ವ್ಯಾಕರಣದ ರೀತಿಯನ್ನು ಕಣ್ಣುಮುಚ್ಚಿ ಅನುಸರಿಸಿದ ಕನ್ನಡ

ವೈಯಾಕರಣರು ಪ್ರಕೃತಿಗೆ ವಿಭಕ್ತಿ ಸೇರದೆ ಪದವಾಗದೆಂಬ ನಿಯಮಕ್ಕೆ ಅಂಟಿಕೊಂಡು ವಿಭಕ್ತಿ ಲೋಪವನ್ನು ಪ್ರಸ್ತಾವಿಸಿರಬೇಕು. ಹಾಗೆಯೇ ಅಕಾರಾಂತ ಪ್ರಕೃತಿಗಳ ಮುಂದಿರುವ ಲಿಂಗಸೂಚಕಾಂಶಗಳನ್ನು ಬೇರ್ಪಡಿಸಿ ಪ್ರತ್ಯಯವಾಗಿಸಿರಬೇಕು,

ಪ್ರಾಚೀನ ಕನ್ನಡ ವೈಯಾಕರಣರ ನಿರೂಪಣೆಯನ್ನು ಒಪ್ಪಿಕೊಳ್ಳುತ್ತ ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಇದ್ದೇ ಇದೆಯೆಂದು ಹೇಳುವ ಪಂಡಿತರ ವಾದ ಸ್ವಾರಸ್ಯಕರವಾಗಿದೆ (ಸಂ.ರ. ಪು. 47–57). ಅದನ್ನು ಕೆಳಗಿನಂತೆ ಸಂಕ್ಷೇಪಿಸಬಹುದು.

1. ಪ್ರಥಮಾ ವಿಭಕ್ತಿ ಪ್ರತ್ಯಯದ 'ಮ್' ಎಂಬುದು ವ್ಯಂಜನವಲ್ಲ. ಇದು ಅನುಸ್ವಾರದ ಉಚ್ಚಾರಣೆ. 'ಮೋನುಸ್ವಾರಃ' ಎಂಬ ಸೂತ್ರವು ಇದನ್ನು ಸಮರ್ಥಿಸುತ್ತದೆ.
2. ಪ್ರಥಮಾ ವಿಭಕ್ತಿಯ ಬಿಂದುವಿಗೆ ಸ್ವರಪರವಾದಾಗ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ'ನ್' ಎಂಬುದೂ ನಪುಂಸಕ ಲಿಂಗದಲ್ಲಿ ವಿಕಲ್ಪವಾಗಿ 'ಮ್, ನ್' ಎಂಬಿವೆರಡೂ, ಆ ಶಬ್ದ ಸಂಸ್ಕೃತವಾದಲ್ಲಿ 'ಮ್' ಮಾತ್ರವೂ ಬರುವುದು.
3. ಪ್ರಥಮಾ ಪ್ರತ್ಯಯಕ್ಕೆ ಇತರ ವಿಭಕ್ತಿ ಸ್ವರಗಳು ಪರವಾದಾಗ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ನಕಾರವೂ ನಪುಂಸಕ ಲಿಂಗದಲ್ಲಿ ಮಕಾರವೂ ಆದೇಶವಾಗುವುದು. ದ್ವಿತೀಯೆ, ತೃತೀಯೆ ಮುಂತಾದ ಮುಂದಿನ ವಿಭಕ್ತಿಗಳು ಬಂದಾಗ ಅವುಗಳ ಹಿಂದೆ ಪ್ರಥಮೆಯ ಪ್ರತ್ಯಯವು ಸೇರಲೇ ಬೇಕಾಗುತ್ತದೆ.
4. ಕೆಲವು ಪ್ರಯೋಗಗಳಲ್ಲಿ (ಮರಂಗಳ್, ಅಣ್ಣಂದಿರ್ ಇತ್ಯಾದಿ) ಪ್ರಥಮಾ ವಿಭಕ್ತಿಯ ಮುಂದೆ ಬಹುವಚನ ಪ್ರತ್ಯಯವಿದೆ.

ಇಲ್ಲದಿರುವ ಪ್ರಥಮಾ ವಿಭಕ್ತಿಯ ಸ್ಥಾಪನೆಗಾಗಿ ಉದ್ಭವಿಸಿದ ಮೇಲಿನ ಮತಾತಗಳಲ್ಲಿ ಯಾವುದೇ ದೃಷ್ಟಿಯಿಂದ ಹುರುಳು ಕಾಣದು. ಈ ವಾದವನ್ನು ಹೀಗೆ ಆಕ್ಷೇಪಿಸಬಹುದು.

1. ಕನ್ನಡದಲ್ಲಿ ಮೂಲಭೂತವಾಗಿ ಅನುಸ್ವಾರವಿಲ್ಲ. ಹಳಗನ್ನಡದಲ್ಲಿ ಸ್ವರರಹಿತ ಮ ನಕಾರಗಳನ್ನು ಬಿಂದುವಾಗಿ ಬರೆಯುವ ಸಂಪ್ರದಾಯದಿಂದಾಗಿ ಅನುಸ್ವಾರ ಕನ್ನಡದಲ್ಲಿ ಪ್ರವೇಶ ಪಡೆಯಿತು. ಕೇವಲ ಬರವಣಿಗೆಯ ಸೌಲಭ್ಯಕ್ಕಾಗಿ ಸೇರಿಕೊಂಡ ಬಿಂದುವಿಗೂ ಅಷ್ಟಾಧ್ಯಾಯಿಯು ಸಂಸ್ಕೃತ ವ್ಯಾಕರಣದ ವಿವೇಚನಾವಸರದಲ್ಲಿ ಹೇಳಿರುವ 'ಮೋನುಸ್ವಾರಃ' (8–3–23) ಎಂಬ ಸೂತ್ರಕ್ಕೂ ಯಾವುದೇ ತೆರನಾದ ಸಂಬಂಧವಿಲ್ಲ. ಯಾವ ಕನ್ನಡ ವ್ಯಾಕರಣವೂ ಈ ಸೂತ್ರವನ್ನು ಬಳಸಿಕೊಂಡಿಲ್ಲ.
2. ಯಾವುದೇ ಬಿಂದುವಿಗೆ (ಅದು ಪ್ರಕೃತಿಯ ಅಂಗವಾಗಿರಬಹುದು ಇಲ್ಲವೇ ಪ್ರತ್ಯಯದ ಒಂದು ಭಾಗವಾಗಿರಬಹುದು). ಸ್ವರ ಪರವಾದಾಗ ಅದಕ್ಕೆ ಮ ನ

ಕಾರಗಳು ಆದೇಶವಾಗಿ ಬರುವುದೆಂದು ಕನ್ನಡ ವ್ಯಾಕರಣಗಳು ಹೇಳುತ್ತವಲ್ಲದೆ (ಸ್ಮೃತಿ. ಸೂ. 20, ಭೂಷಣ. ಸೂ. 53, ದರ್ಪಣ ಸೂ. 114) ಪ್ರಥಮಾ ವಿಭಕ್ತಿಯು ಬಿಂದುವಿಗೆ ಸ್ವರ ಪರವಾದಾಗ ಮಾತ್ರ ಮ ನಕಾರಗಳು ಆದೇಶ ವಾಗುವವೆಂದು ಅವುಗಳು ಹೇಳುವುದಿಲ್ಲ. ಮಾತ್ರವಲ್ಲ, ಬಿಂದುವಿಗೆ ಮ ನ ಕಾರಗಳು ಆದೇಶವಾಗಿ ಬರುವಲ್ಲಿ ಯಾವುದೇ ಲಿಂಗ ನಿರ್ದಿಷ್ಟತೆಯೂ ನಿರ್ಣೀತ ವಾಗಿಲ್ಲ.

3. ಈ ಅಭಿಪ್ರಾಯವೂ ಸರಿಯಲ್ಲ. ಕನ್ನಡ ವೈಯಾಕರಣರು ಅಕಾರಾಂತ ಪುಲ್ಲಿಂಗ ಪ್ರಕೃತಿಗಳಿಗೆ ಸ್ವರಾದಿ ವಿಭಕ್ತಿಗಳು ಪರವಾದಾಗ ನಕಾರಾಗಮವನ್ನೂ ಅಕಾರಾಂತ ನಪುಂಸಕ ಪ್ರಕೃತಿಗಳಿಗೆ ದ್ವಿತೀಯಾ ವಿಭಕ್ತಿ ಪರವಾದಾಗ ನಕಾರ ಮಕಾರಾಗಮಗಳನ್ನೂ ವಿಧಿಸುವರಲ್ಲದೆ ಪ್ರಥಮಾ ಪ್ರತ್ಯಯವೆಂದು ಹೇಳಲಾದ ಬಿಂದುವಿಗಲ್ಲ (ಸ್ಮೃತಿ. ಸೂ. 22, 23, ಭೂಷಣ. ಸೂ. 52, ದರ್ಪಣ. ಸೂ. 115. 116).

ಪ್ರಥಮಾ ವಿಭಕ್ತಿಯ ಮುಂದೆ ಇತರ ವಿಭಕ್ತಿಗಳು ಬರುವುದಾಗಿ ಕನ್ನಡ ವ್ಯಾಕರಣ ಗಳು ಎಲ್ಲೂ ಹೇಳುವುದಿಲ್ಲ. ಹಾಗೆ ಹೇಳುವುದು ಸಮರ್ಪಕವೂ ಅಲ್ಲ. ಅಕಾರಾಂತ ಪ್ರಕೃತಿಗಳಿಗೆ ಸ್ವರಾದಿ ವಿಭಕ್ತಿಗಳು ಪರವಾದಾಗ ಬರುವ ನಾಗಮ ಮಾಗಮಗಳನ್ನು ಪ್ರಥಮಾ ವಿಭಕ್ತಿಯೆಂದು ಹೇಳಲಾದ ಬಿಂದುವಿಗೆ ಬರುವ ಆದೇಶವೆಂದು ಭ್ರಮಿಸಿದು ದರಿಂದ ಇಂತಹ ಅಭಿಪ್ರಾಯಕ್ಕೆಡೆಯಾಗಿದೆಯಷ್ಟೆ. ಒಂದು ವೇಳೆ ಪ್ರಥಮಾ ವಿಭಕ್ತಿಯ ಮುಂದೆ ಇತರ ವಿಭಕ್ತಿಗಳು ಬರುವ ಅಭಿಪ್ರಾಯ ಪ್ರಾಚೀನ ವೈಯಾಕರಣರಿಗಿದ್ದಲ್ಲಿ ಕೆಳಗಿನ ಹೇಳಿಕೆಗಳು ಉದ್ಭವಿಸುತ್ತಿರಲಿಲ್ಲ.

"ಮೊದಲೊಳನುಸ್ವಾರಂ ಬೆರ
ಸದಂತ ಪುಲ್ಲಿಂಗದೊಳ್ ಗೆಯುಕ್ಕುಂ" ಸ್ಮೃತಿ. ಸೂತ್ರ 2

"ಅತಶ್ಚತುರ್ಥ್ಯಾಸ್ತೃತೀಯೋಽ ನುಸ್ವಾರಪೂರ್ವಃ ಪುಂಸಿ" ಭೂಷಣ. ಸೂತ್ರ 62

"ಒದವುವುದದಂತ ಪುಲ್ಲಿಂ
ಗದೊಳ್ ಗೆಯೆಂದಾದಿ ಬಿಂದುವಿಂ" ದರ್ಪಣ. ಸೂತ್ರ 23

ಪ್ರಾಚೀನರು ಪ್ರಥಮಾ ವಿಭಕ್ತ್ಯಂತವೆಂದು ಹೇಳಿದ ರೂಪವು ಸಹಜವಾಗಿ ಪ್ರಕೃತಿ ಯಷ್ಟೆ. ಪ್ರಕೃತಿಯ ಮುಂದೆ ಇತರ ವಿಭಕ್ತಿಗಳು ಬರುವುದರಿಂದ ಪ್ರಥಮಾ ವಿಭಕ್ತಿಯ ಮುಂದೆ ಇತರ ವಿಭಕ್ತಿಗಳು ಬರುವಂತೆ ಭಾಸವಾಗುವುದು ಸಹಜ". In a very large number of instances, that form of a Dravidian noun, which constitutes the crude base, and which is used as the nominative, constitutes also the inflexion base" (CGDL. p.259) ಎಂಬ ವಿವರಣೆ ಈ ದೃಷ್ಟಿಯಿಂದ ಗಮನಾರ್ಹವಾಗಿದೆ.

4. ಕನ್ನಡ ವ್ಯಾಕರಣಗಳ ನಿರೂಪಣೆಯನ್ನು ಸರಿಯಾಗಿ ಅರ್ಥಯಿಸದೆ ಹುಟ್ಟಿಕೊಂಡ ಅಭಿಪ್ರಾಯವಿದು. ಕನ್ನಡ ವೈಯಾಕರಣರ ಒಮ್ಮತದ ಅಭಿಪ್ರಾಯದಂತೆ ಅಕಾರಾಂತ ಪ್ರಕೃತಿಗಳ ಮುಂದೆ ದಿರ್ ಮತ್ತು ಗಳ್ ಎಂಬ ಬಹುವಚನ ಪ್ರತ್ಯಯ ಗಳು ಬಂದಾಗ ನಡುವೆ ಬಿಂದು ಬರುತ್ತದೆ. ಆ ಬಿಂದುವಿಗೂ ಪ್ರಥಮಾ ವಿಭಕ್ತಿಗೆ ಆದೇಶವಾಗಿ ಬರುವ ಬಿಂದುವಿಗೂ ಯಾವ ಸಂಬಂಧವನ್ನೂ ಅವರು ಕಲ್ಪಿಸಿಲ್ಲ. ಬಹುವಚನ ಪ್ರತ್ಯಯಗಳೆಲ್ಲ ವಿಭಕ್ತಿಗಳ ಮೊದಲು ಬರುವುದರ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯವಿಲ್ಲ.

ಪ್ರಥಮಾ ವಿಭಕ್ತಿಯ ಮುಂದೆ ಬಹುವಚನ ಪ್ರತ್ಯಯಗಳು ಬರುತ್ತವೆ ಎನ್ನುವ ಅಭಿಪ್ರಾಯಕ್ಕೆ ಸ್ವಲ್ಪ ಮಟ್ಟಿಗೆ ಸ್ಮೃತಿ ಭೂಷಣಗಳ ನಿರೂಪಣಾ ಕ್ರಮ ಕಾರಣವಾಗಿದೆ. ಅಕಾರಾಂತ ಲಿಂಗದ ಮುಂದೆ ಬಂದ 'ಮ್'ಗೆ ಆದೇಶವಾಗಿ ಅನುಸ್ವಾರ ಬರುವುದೆಂದು ಹೇಳಿದ ಬಳಿಕ (ಸ್ಮೃತಿ ಸೂತ್ರ 19, ಭೂಷಣ ಸೂತ್ರ 45) ಅಕಾರಾಂತ ಪ್ರಕೃತಿಗಳ ಮುಂದೆ ಗಳ್ ಬಂದಾಗ ಬರುವ 'ಮಾಗಮ' ವಿಚಾರ (ಸ್ಮೃತಿ ಸೂತ್ರ 20) ಮತ್ತು ನಾಗಮ ವಿಚಾರ (ಭೂಷಣ ಸೂತ್ರ 49) ನಿರೂಪಿತವಾಗಿವೆ. ಬಹುಶಃ ವಿದ್ವಾಂಸರನ್ನು ಈ ನಿರೂಪಣೆ ತಪ್ಪುದಾರಿಗೆಳೆದಿರಬಹುದು. ಆದರೆ ದರ್ಪಣದಲ್ಲಿ ಹೀಗಿಲ್ಲ. ಅಲ್ಲಿ ಬಹು ವಚನ ಪ್ರತ್ಯಯಗಳನ್ನೆಲ್ಲ ಹೇಳಿದ ಬಳಿಕ ಕೊನೆಯಲ್ಲಿ 'ಗಳ್' ಮತ್ತು 'ದಿರ್'ಗಳ ಹಿಂದೆ ಬಿಂದು ಬರುವ ವಿಚಾರ ಬರುತ್ತದೆ (ಸೂತ್ರ 113). ಆ ಬಳಿಕವೇ ಪ್ರಥಮೈಕ ವಚನ ದಲ್ಲಿ ಅಕಾರಾಂತಕ್ಕೆ ಬಿಂದು ಬರುವ ವಿಚಾರವನ್ನು ಹೇಳಲಾಗಿದೆ.

ಈ ವಿವೇಚನೆಯಿಂದ ಕನ್ನಡದಲ್ಲಿ ಪ್ರಥಮಾ ವಿಭಕ್ತಿಯಿಲ್ಲವೆಂಬುದು ಸ್ಪಷ್ಟವಾಗು ತ್ತದೆ. ಎಂದರೆ ಕರ್ತ್ರರ್ಥ ಮತ್ತು ಪ್ರಥಮಾ ವಿಭಕ್ತ್ಯಂದೆಂದು ಹೇಳಲಾಗುವ ಲಿಂಗ, ಅರ್ಥ, ವಚನ ಮೊದಲಾದ ಇತರ ಅರ್ಥಗಳನ್ನು ಹೇಳಲು ಕನ್ನಡ ಭಾಷೆ ಯಾವುದೇ ಪ್ರತ್ಯಯವನ್ನೂ ಬಳಸುವುದಿಲ್ಲ ಎಂದಭಿಪ್ರಾಯ. ಹಾಗಾಗಿ ಕೆಳಗಿನ ಮಾತು ಸಮರ್ಥನೀಯವಾಗಿದೆ:

"The nominative singular in all the three genders does not possess any case termination. The stem itself or the stem with gender suffix forms the nominative singular. In modern scientific linguistics the nominative case here will be said to possess marpheme zero. The nominative plural is formed with the suffixes-ar,-gal,-arkkal,-dir and vir" (H.G.O.K. p. 28-29)

## ಪಂಚಮೀ ವಿಭಕ್ತಿ

'ಅತ್ತಣಿಂ' ಎಂಬುದು ಪಂಚಮೀ ವಿಭಕ್ತಿಯೆಂಬ ಹೇಳಿಕೆ ಕವಿರಾಜಮಾರ್ಗದಲ್ಲಿದೆ (1-115). ಸ್ಮೃತಿ ಭೂಷಣ ದರ್ಪಣಗಳು 'ಅತ್' ಎಂಬುದನ್ನು ಪಂಚಮೀ ಪ್ರತ್ಯಯ ವೆಂದು ಒಕ್ಕೊರಲಿನಿಂದ ಹೇಳಿದುದಲ್ಲದೆ ಅದು ಬಳಿಕೆಯಲ್ಲಿ 'ಅತ್ತಣಿಂ' ಎಂಬ ರೂಪ

ದಲ್ಲಿರುವುದರ ಬಗ್ಗೆಯೂ ಏಕಾಭಿಪ್ರಾಯ ತಾಳಿವೆ. ದರ್ಪಣ ಮಾತ್ರ 'ಅತ್ತಣಿಂದಂ' ಮತ್ತು 'ಅತ್ತಣಿಂದೆ' ಎಂಬೆರಡು ಹೆಚ್ಚಿನ ರೂಪಗಳನ್ನು ಹೇಳುತ್ತದೆ. ಅವು ಮೊದಲಿನದರ ವಿಕಸಿತ ರೂಪಗಳಾಗಿವೆ.

'ಅತ್' ಅಥವಾ 'ಅತ್ತಣಿಂ' ಪಂಚಮೀ ಪ್ರತ್ಯಯವಲ್ಲವೆಂದು ಆಧುನಿಕ ವಿದ್ವಾಂಸರು ಹೇಳುವುದು ಸಮರ್ಪಕವಾಗಿದೆ. 'ಅತ್' ಕನ್ನಡದಲ್ಲಿ ಎಲ್ಲಿಯೂ ಬಳಕೆಯಾದಂತಿಲ್ಲ. 'ಅತ್ತ' ಎಂಬ ದಿಗ್ವಾಚಕದ ಮುಂದೆ ಅಣ್' ಬಂದು ಮುಂದೆ ತೃತೀಯಾ ವಿಭಕ್ತಿ ಸೇರಿ 'ಅತ್ತಣಿಂ, ಅತ್ತಣಿಂದಂ. ಅತ್ತಣಿಂದೆ' ಎಂಬ ರೂಪಗಳು ಸಾಧಿತವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ. 'ಅತ್ತಣಿಂ' ನಿಜವಾಗಿ ಸಹಜ ಪ್ರಯೋಗವಲ್ಲ. ಅದರ ಕೃತಕತೆಯ ಅಸಹಜತೆಯನ್ನು ಮನದಂದು ಕನ್ನಡದಲ್ಲಿ ಪಂಚಮೀ ವಿಭಕ್ತಿಯ ಅಸ್ತಿತ್ವದ ಕುರಿತು ಪಂಡಿತರು ಪ್ರಶ್ನಿಸಿದ್ದಾರೆ. ಕೆಳಗಿನ ಮೂರು ಅಭಿಪ್ರಾಯಗಳು ಆ ದಿಸೆಯಲ್ಲಿ ವಿಚಾರಾರ್ಹವಾಗಿವೆ.

1. ಕನ್ನಡದಲ್ಲಿ ಪಂಚಮೀ ವಿಭಕ್ತಿಯ ಪ್ರತ್ಯಯವಾಗಲಿ, ಪಂಚಮೀ ವಿಭಕ್ತಿಯೇ ಆಗಲಿ ಇಲ್ಲ (ದ್ರಾ.ಭಾ.ವಿ; ಪು. 204).
2. ಪಂಚಮೀ ವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲ. ಪಂಚಮ್ಯರ್ಥದಲ್ಲಿ ತೃತೀಯೆಯನ್ನೇ ಪ್ರಯೋಗಿಸುತ್ತಾರೆ (ಕ.ಕೈ. ಪು. 335).
3. ಕನ್ನಡದಲ್ಲಿ ಸಹಜವಾಗಿ ಪಂಚಮೀ ವಿಭಕ್ತಿಯಿದೆ 'ಇಂ' ಮೂಲಭೂತವಾಗಿ ಪಂಚಮೀ ಪ್ರತ್ಯಯ (ಒಸಗೆ, ಪು. 109-120).

ಮೇಲಿನ ಅಭಿಪ್ರಾಯಗಳನ್ನು ಕೆಳಗಿನಂತೆ ಸಮೀಕ್ಷಿಸಬಹುದು :

1. ಈ ಅಭಿಪ್ರಾಯದಲ್ಲಿ ಹುರುಳಿಲ್ಲ, ಹಿಂದೊಮ್ಮೆ ಹೇಳಿರುವಂತೆ 'ವಿಭಕ್ತಿ' ಮತ್ತು 'ಪ್ರತ್ಯಯ' ಎಂಬಿವುಗಳ ಪ್ರಯೋಗದಲ್ಲಾದ ಗಡಿಬಿಡಿ ಮಾತ್ರ ಇಲ್ಲಿ ಗೋಚರಿಸುತ್ತದೆ.
2, ಇಲ್ಲಿ ಪಂಚಮೀ ವಿಭಕ್ತ್ಯರ್ಥವಿದೆಯೆಂದು ಒಪ್ಪಿಕೊಳ್ಳಲಾಗಿದೆ. ಆ ವಿಭಕ್ತ್ಯರ್ಥವನ್ನು ಸೂಚಿಸಲು ತೃತೀಯೆಗಿಂತ ಭಿನ್ನವಾದ ವಿಭಕ್ತಿ ಪ್ರತ್ಯಯವಿಲ್ಲ ಎಂಬುದರಿಂದ ಪಂಚಮೀ ವಿಭಕ್ತಿಯ ಅಸ್ತಿತ್ವವನ್ನು ನಿರಾಕರಿಸಲಾಗಿದೆ. ಪ್ರತಿಯೊಂದು ವಿಭಕ್ತ್ಯರ್ಥವನ್ನು ಸೂಚಿಸಲು ಪ್ರತ್ಯೇಕವಾದ ವಿಭಕ್ತಿ ಪ್ರತ್ಯಯವಿರಬೇಕೆಂಬ ಭ್ರಮೆಯೇ ಆ ನಿರಾಕರಣೆಗೆ ಕಾರಣವಾಗಿದೆ. ಆದರೆ ಪರಂಪರಾಗತ ವ್ಯಾಕರಣ ಸಂಪ್ರದಾಯಗಳನ್ನು ನೋಡಿದರೆ ಹಾಗೆ ಹೇಳುವುದು ಸರಿಯಲ್ಲವೆಂಬುದು ಸ್ಪಷ್ಟವಾಗುತ್ತದೆ.

ಬೇರೆ ಬೇರೆ ವಿಭಕ್ತ್ಯರ್ಥಗಳನ್ನು ಸೂಚಿಸಲು ಕೆಲವೊಮ್ಮೆ ಒಂದೇ ಪ್ರತ್ಯಯ ಬಳಕೆಗೊಳ್ಳುವುದುಂಟು. ಹಲವು ಅರ್ಥಗಳಲ್ಲಿ ಬರುವ ಪ್ರತ್ಯಯವೊಂದನ್ನು ಅದು

ಬಂದಿರುವ ಸಂದರ್ಭ ಹಾಗೂ ಪರಿಸರದ ಆಧಾರದಲ್ಲಿ ಯಾವ ವಿಭಕ್ತ್ಯರ್ಥವೆಂಬುದನ್ನು ನಿರ್ಣಯಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಸಂಸ್ಕೃತದ ಕೆಳಗಿನ ಪ್ರತ್ಯಯಗಳು ಅವಲೋಕನೀಯವಾಗಿವೆ.

| ಸಂಜ್ಞೆ | ಪ್ರತ್ಯಯ | | |
|---|---|---|---|
| | ಏಕವಚನ | ದ್ವಿವಚನ | ಬಹುವಚನ |
| ದ್ವಿತೀಯಾ | — | ಭ್ಯಾಮ್ | — |
| ಚತುರ್ಥಿ | — | ಭ್ಯಾಮ್ | ಭ್ಯಸ್ |
| ಪಂಚಮಿ | — | ಭ್ಯಾಮ್ | ಭ್ಯಸ್ |

ಮೂರು ವಿಭಕ್ತಿಗಳಲ್ಲೂ ದ್ವಿವಚನ ಸಮಾನವಾಗಿದೆ. ಬಹುವಚನದಲ್ಲಿ ಚತುರ್ಥೀ ಪಂಚಮಿಗಳು ಏಕರೂಪವಾಗಿರುವುದು ಸ್ಪಷ್ಟ. ವಿಭಕ್ತ್ಯಂತ ರೂಪಗಳಲ್ಲೂ ಇಂತಹ ಏಕರೂಪತೆಯನ್ನು ಕಾಣಬಹುದು. ಉದಾಹರಣೆಗಾಗಿ 'ಅಸ್ಮದ್' ಮತ್ತು 'ಯುಷ್ಮದ್' ಶಬ್ದಗಳನ್ನಿಲ್ಲಿ ಎತ್ತಿಕೊಳ್ಳಲಾಗಿದೆ.

| ಸಂಜ್ಞೆ | ವಿಭಕ್ತ್ಯಂತ ರೂಪಗಳು | | |
|---|---|---|---|
| | ಏಕವಚನ | ದ್ವಿವಚನ | ಬಹುವಚನ |
| ದ್ವಿತೀಯಾ | — | ನೌ | ನಃ |
| ದ್ವಿತೀಯಾ | — | ವಾಮ್ | ವಃ |
| ಚತುರ್ಥೀ | ಮೇ | ನೌ | ನಃ |
| ಚತುರ್ಥೀ | ತೇ | ವಾಮ್ | ವಃ |
| ಷಷ್ಠೀ | ಮೇ | ನೌ | ನಃ |
| ಷಷ್ಠೀ | ತೇ | ವಾಮ್ | ವಃ |

ವಿಭಕ್ತಿ ಪ್ರತ್ಯಯಗಳು ಹಾಗೂ ವಿಭಕ್ತ್ಯಂತ ರೂಪಗಳು ಸಮಾನವಾಗಿದ್ದ ಮಾತ್ರಕ್ಕೆ ಯಾವುದಾದರೊಂದು ವಿಭಕ್ತಿಯಿದೆ, ಇನ್ನೊಂದು ಇಲ್ಲ ಎಂಬಂತಹ ವಾದ ಸಂಸ್ಕೃತದಲ್ಲಿ ಹುಟ್ಟಿಕೊಂಡಿಲ್ಲ. ಅಲ್ಲಿ ವ್ಯಕ್ತವಾಗುವ ಅರ್ಥವನ್ನು ಪ್ರಧಾನವಾಗಿಟ್ಟುಕೊಂಡು ಅಲ್ಲಲ್ಲಿ ಯಾವ ಯಾವ ವಿಭಕ್ತಿಯೆಂದು ಹೇಳುವುದು ಅಲ್ಲಿನ ಸಂಪ್ರದಾಯ. ಕರ್ಮಾರ್ಥವಾದರೆ ದ್ವಿತೀಯೆ, ಸಂಪ್ರದಾನಾರ್ಥವಾದರೆ ಚತುರ್ಥಿ, ಸಂಬಂಧಾರ್ಥ ಮಾತ್ರವಾದರೆ ಷಷ್ಠಿ— ಹೀಗೆ ಅಲ್ಲಿ ನಿರ್ಣಯಿಸುತ್ತಾರೆ. ಆಧುನಿಕ ಆರ್ಯ ಭಾಷೆಗಳಲ್ಲಿ ಒಂದಾದ ಹಿಂದಿಯಲ್ಲಿ ಇಂದಿಗೂ ಇಂತಹ ವ್ಯವಸ್ಥೆಯನ್ನು ಕಾಣಬಹುದು.

| ಸಂಜ್ಞೆ | ಪ್ರತ್ಯಯ |
|---|---|
| ದ್ವಿತೀಯೆ | ಕೋ |
| ತೃತೀಯೆ | ಸೇ |
| ಚತುರ್ಥಿ | ಕೋ |
| ಪಂಚಮಿ | ಸೇ |

ಅರ್ಥವನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳುವುದಾದರೆ ಇಲ್ಲಿ ಎರಡು ಪ್ರತ್ಯಯಗಳು ನಾಲ್ಕು ವಿಭಕ್ತ್ಯರ್ಥಗಳನ್ನು ಕೊಡುತ್ತವೆ ಎನ್ನಬೇಕಾಗುತ್ತದೆ.

ಹೀಗೆ ಸಾಂಪ್ರದಾಯಿಕ ದೃಷ್ಟಿಯಿಂದ ವಿಚಾರಿಸಿದಾಗ ಕನ್ನಡದಲ್ಲಿ ತೃತೀಯಾ ಮತ್ತು ಪಂಚಮಿಾ ಅರ್ಥಗಳು ಒಂದೇ ಪ್ರತ್ಯಯದಿಂದ ಸ್ಫುಟವಾಗುವುದನ್ನು ಒಪ್ಪಿ ಕೊಳ್ಳಬೇಕಾಗುತ್ತದೆ. ಆಗ ತೃತೀಯಾ ವಿಭಕ್ತಿಯಿಂದ ಪಂಚಮ್ಯರ್ಥ ವ್ಯಕ್ತವಾಗುತ್ತದೆ ಎಂಬ ಹೇಳಿಕೆ ಅಸಮರ್ಪಕವೆನಿಸುತ್ತದೆ. ಪಂಚಮ್ಯರ್ಥದಲ್ಲಿ ಎಲ್ಲೋ ಒಂದೊಂದು ಕಡೆ ಮಾತ್ರ ಈ ಪ್ರತ್ಯಯಗಳು ಬರುತ್ತಿದ್ದರೆ 'ವಿಭಕ್ತಿ ಪಲ್ಲಟ' ಎಂದಾದರೂ ಕರೆಯಬಹು ದಾಗಿತ್ತು. ಆದರೆ ನಿಯತವಾಗಿ ಪಂಚಮ್ಯರ್ಥದಲ್ಲಿ ಈ ಪ್ರತ್ಯಯಗಳು ಬರುತ್ತಿರುವುದರಿಂದ ಹಾಗೆ ಹೇಳಲು ಬರುವುದಿಲ್ಲ. ಹಾಗಾಗಿ "...the instrumental case termination is used for the purpose of what is called the ablative of motion" (H.G.O.K. p.54) ಎಂಬ ಅಭಿಪ್ರಾಯ ನಿಲ್ಲಲಾರದು.

3. ಈ ಅಭಿಪ್ರಾಯ ಸಮರ್ಪಕವಾಗಿದ್ದು ಮೇಲಿನ ನಿಲುವನ್ನು ಪುಷ್ಟೀಕರಿಸು ತ್ತದೆ. ಸಂಸ್ಕೃತದಲ್ಲಿರುವ ಆರು ವಿಭಕ್ತ್ಯರ್ಥಗಳಲ್ಲಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಧಿಕರಣಗಳನ್ನು ಕನ್ನಡದಲ್ಲಿ ಒಪ್ಪಿಕೊಳ್ಳುವುದಾದರೆ ಅಪಾದಾನವನ್ನೂ ಒಪ್ಪಲೆ ಬೇಕಾಗುತ್ತದೆ. ಕರಣಕ್ಕಿಂತ ಭಿನ್ನವಾದ, ಹಾಗೆ 'ಅಪಾದಾನ'ವೆಂದು ಕರೆಯಿಸಿಕೊಳ್ಳಲು ಅರ್ಹವಾದ ಪ್ರಯೋಗಗಳು ಕನ್ನಡದಲ್ಲಿವೆ. ಕಾಲ್ಡ್‌ವೆಲ್ಲರ "It is true that if we look at the construction and meaning of a Dravidian sentence, the signification of an ablative of motion will be found to exist and it will be found to be expressed much more clearly even than in Sanskrit"(C.G.D.L. p.283) ಎಂಬ ವಿವರಣೆ ಕನ್ನಡಕ್ಕೂ ಅನ್ವಯಿಸಿಯೆ ಬಂದಿರುವುದನ್ನು ಗಮನಿಸಬೇಕು. ಅಪಾದಾನಾರ್ಥವಿದೆಯೆಂದಾದ ಒಳಿಕ ಅದು ಯಾವ ವಿಭಕ್ತಿಯ ಮೂಲಕ ಅಭಿವ್ಯಕ್ತಗೊಳ್ಳುವುದೆಂಬುದನ್ನು ವಿಚಾರಿಸಿ ಆ ವಿಭಕ್ತಿಯನ್ನು ಪಂಚಮಿಯೆಂದು ಕರೆದರೆ ಸಮರ್ಪಕವಾದೀತು. ವಿರಳವೂ ಅಸಹಜವೂ ಆದ 'ಅತ್ತಣಿಂ' ಎಂಬುದನ್ನು ಬಿಟ್ಟರೆ ಕನ್ನಡದಲ್ಲಿ 'ಇಂ, ಇಂದಂ, ಇಂದೆ' ಎಂಬಿವುಗಳಿಂದ ಅಪಾದಾನ ಅಭಿವ್ಯಕ್ತವಾಗುತ್ತದೆ. ವೈಯಾಕರಣರು ಇದನ್ನೇ ಪಂಚಮ್ಯರ್ಥದಲ್ಲಿ ತೃತೀಯೆ ಎಂಬು ದಾಗಿ ಒಪ್ಪಿಕೊಂಡಿದ್ದಾರೆ. ಸಂಸ್ಕೃತ ಹಾಗೂ ಹಿಂದಿಯ ವಿಭಕ್ತಿ ವ್ಯವಸ್ಥೆಯ ಹಿನ್ನೆಲೆ ಯಲ್ಲಿ ವಿಚಾರಿಸಿದರೆ ಈ ಪ್ರತ್ಯಯಗಳನ್ನು "ಪಂಚಮಿ" ಸಂಜ್ಞೆಯಿಂದ ಕರೆಯುವುದು

ವ್ಯಾಕರಣ ಮಾರ್ಗವಾಗುತ್ತದೆ. ಕನ್ನಡದ ಕೆಲವು ಆಡುನುಡಿಗಳಲ್ಲಿ ಪಂಚಮ್ಯರ್ಥದ ಅಭಿವ್ಯಕ್ತಿಗೆ 'ಇಂದ, ಂದ' ಎಂಬ ಪ್ರತ್ಯಯಗಳು ಪ್ರಯುಕ್ತವಾಗುವುದನ್ನು ವಿದ್ವಾಂಸರು ಎತ್ತಿ ತೋರಿಸಿದ್ದಾರೆ (ಒಸಗೆ. ಪು. 115-116). ಸಾಮಾನ್ಯವಾಗಿ ತೃತೀಯಾರ್ಥದಲ್ಲಿ ಸಪ್ತಮಿಯ ಬಳಕೆ ದ್ರಾವಿಡ ಭಾಷೆಗಳಲ್ಲಿ ಸಹಜವೆಂಬುದನ್ನು ಪರಿಗಣಿಸಿ ಸೇಡಿಯಾಪು ಕೃಷ್ಣಭಟ್ಟರು 'ಇಂ' ಎಂಬುದೆ ಪಂಚಮೀ ವಿಭಕ್ತಿಯೆಂದು ತೀರ್ಮಾನಿಸಿದ್ದಾರೆ (ಅದೇ : ಪು: 128). ಆದರೆ ಹಳೆಗನ್ನಡದ ಕಾವ್ಯಭಾಷೆಯಲ್ಲಿ 'ಇಂ, ಇಂದಂ, ಇಂದೆ' ಎಂಬಿವು ಗಳು ಹೆಚ್ಚಾಗಿ ತೃತೀಯೆ ಮತ್ತು ಪಂಚಮಿಯ ಪ್ರತ್ಯಯಗಳಾಗಿ ಬಳಕೆಗೊಂಡುದನ್ನು ನೋಡಿದಾಗ ಅವುಗಳನ್ನು ತೃತೀಯೆ ಮತ್ತು ಪಂಚಮಿಯ ಪ್ರತ್ಯಯಗಳೆಂದೇ ಹೇಳು ವುದು ಹೆಚ್ಚು ಸಮಂಜಸವೆನಿಸುತ್ತದೆ. ಈ ಪ್ರತ್ಯಯಗಳನ್ನು ಕರಣ ಇತ್ಯಾದಿ ತೃತೀ ಯಾರ್ಥದಲ್ಲಿ ಬಂದಾಗ ತೃತೀಯಾ ವಿಭಕ್ತಿಯೆಂದೂ ಅಪಾದಾನ ಇತ್ಯಾದಿ ಪಂಚಮ್ಯರ್ಥ ದಲ್ಲಿ ಬಂದಾಗ ಪಂಚಮೀ ವಿಭಕ್ತಿಯೆಂದೂ ತಿಳಿಯಬೇಕಾಗುತ್ತದೆ. ಆದ್ದರಿಂದ ಕನ್ನಡ ದಲ್ಲಿ ಅಪಾದಾನಾರ್ಥವೂ ಇದೆ, ಇದನ್ನು ಅಭಿವ್ಯಕ್ತಗೊಳಿಸುವ ಪಂಚಮೀ ವಿಭಕ್ತಿಯೂ ಇದೆಯೆಂದು ಹೇಳದೆ ವಿಧಿಯಿಲ್ಲ.

ಅತ್ತಣಿಂ ಎಂಬ ಪ್ರತ್ಯಯದ ಕಲ್ಪನೆ ಹೇಗೆ ಉಂಟಾಯಿತೆಂದು ಹೇಳಲು ಅಸಾಧ್ಯ ವಾಗಿದೆ. "ಸಂಸ್ಕೃತ ವ್ಯಾಕರಣಗಳ ಮಾದರಿಯನ್ನು ಅನುಸರಿಸಿ ಕನ್ನಡ ವ್ಯಾಕರಣಗಳು ಸಿದ್ಧವಾದುದರಿಂದ, ಕನ್ನಡದಲ್ಲಿಯೂ ಒಂದು ಪಂಚಮೀ ವಿಭಕ್ತಿಯನ್ನು ಕಲ್ಪಿಸ ಬೇಕಾದ ನಿರ್ಬಂಧವುಂಟಾಗಿ" (ದ್ರಾ.ಭಾ.ವಿ. ಪು. 204) ಅತ್ತಣಿಂ ಪ್ರತ್ಯಯದ ನಿರ್ಮಾಣ ಮಾಡಿರಬೇಕೆಂದು ಹೇಳಿರುವುದರಲ್ಲಿ ಹುರುಳಿಲ್ಲ. ಒಂದೇ ಪ್ರತ್ಯಯವನ್ನು ಎರಡೋ ಮೂರೋ ಅರ್ಥಗಳಲ್ಲಿ ವಿಧಿಸುವ ಸಂಸ್ಕೃತ ವ್ಯಾಕರಣದಿಂದ ಅಂತಹ ಪ್ರೇರಣೆ ದೊರಕಲೆಡೆಯಿಲ್ಲ. ಬಹುಶಃ ಮೊದಲಿಗೆ ಕನ್ನಡ ವೈಯಾಕರಣರೇ ಸ್ವತಂತ್ರವಾಗಿ ತೃತೀಯೆಗಿಂತ ಭಿನ್ನವಾದ 'ಅತ್ತಣಿಂ' ಎಂಬ ಪಂಚಮೀ ಪ್ರತ್ಯಯವನ್ನು ಕಂಡುಕೊಂಡಿರ ಬೇಕು. ಸಾಮಾನ್ಯವಾಗಿ ಕನ್ನಡ ಭಾಷೆಯ ಸ್ವಭಾವವನ್ನು ಸೂಕ್ಷ್ಮವಾಗಿ ಗುರುತಿಸಿರುವ ಕವಿರಾಜಮಾರ್ಗಕಾರನೇ "ಅತ್ತಣಿಂ" ಎಂಬುದನ್ನು ಪಂಚಮೀ ಪ್ರತ್ಯಯವಾಗಿ ಪರಿಗಣಿಸಿದುದನ್ನು ನೋಡಿದರೆ ಆ ಕಾಲಕ್ಕಿಂತ ಹಿಂದೆಯೇ ಇದು ಕಲ್ಪಿತವಾಗಿರ ಬೇಕೆಂಬುದರಲ್ಲಿ ಸಂದೇಹವಿಲ್ಲ. ಹಾಗಿದ್ದೂ ಕ್ರಿ.ಶ. 10ನೇ ಶತಮಾನದವರೆಗಿನ ಶಾಸನ ಗಳಲ್ಲಿ "ಅತ್ತಣಿಂ" ಮೈದೋರದಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. (H.G.O K. p. 54).

ಪ್ರಾಚೀನ ಕನ್ನಡ ವ್ಯಾಕರಣಗಳು ಹೇಳುವ ವಿಭಕ್ತಿ ವಿಚಾರ ಸಂಸ್ಕೃತ ವ್ಯಾಕರಣ ಗಳಲ್ಲಿ ರೂಢವಾದ ವಿಭಕ್ತಿ ವ್ಯವಸ್ಥೆಯ ಚೌಕಟ್ಟಿನಲ್ಲಿ ಮೂಡಿ ಬಂದುದು ಸತ್ಯ. ಕನ್ನಡ ದಂತೆ, ಇತರ ದ್ರಾವಿಡ ಭಾಷಾ ವ್ಯಾಕರಣಗಳು ವಿಭಕ್ತಿ ವಿಚಾರದಲ್ಲಿ ಸಂಸ್ಕೃತ ವ್ಯಾಕರಣ ಗಳನ್ನೂ ಚಾಚೂ ತಪ್ಪದೆ ಅನುಸರಿಸಿವೆ. ಈ ಅನುಸರಣೆಯ ಕುರಿತು ಕಾಲ್ಡ್ವೆಲ್ ಹೇಳುವ ಈ ಮಾತು ಸಮರ್ಥನೀಯ : "...the order in which they have

been arranged by Dravidian grammarians is the same as that of the Sanskrit. The imitation of Sanskrit in this particular was certainly an error" (CGDL. p. 254) ಕನ್ನಡದ ವಿಭಕ್ತಿ ವ್ಯವಸ್ಥೆ ಸಂಸ್ಕೃತಕ್ಕಿಂತ ತೀರ ಭಿನ್ನವಾಗಿದೆ. ಸಂಸ್ಕೃತ ಭಾಷೆ ಕೇವಲ ಪ್ರತ್ಯಯಗಳಿಂದಲೇ ಕಾರ್ಯ ನಿಭಾಯಿ ಸುವುದಿದ್ದರೆ ಕನ್ನಡ ಎಷ್ಟೋ ಸಂದರ್ಭಗಳಲ್ಲಿ ಸ್ವತಂತ್ರವಾದ ಶಬ್ದಗಳನ್ನೇ ಬಳಸುತ್ತದೆ. ಮೂಲತಃ ಇದು ಅಂಟುಭಾಷಾ ಸ್ವಭಾವವಷ್ಟೆ. ಸಂಸ್ಕೃತ ಮತ್ತು ಕನ್ನಡದ ವಿಭಕ್ತಿಯ ಬಳಕೆಯಲ್ಲಿರುವ ವ್ಯತ್ಯಾಸವನ್ನು ಒಂದು ಉದಾಹರಣೆಯಿಂದ ಸ್ಪಷ್ಟೀಕರಿಸಬಹುದು.

| ಕನ್ನಡ | ಸಂಸ್ಕೃತ |
|---|---|
| ರಾಮಂಗೆ ಮಗಂ ಪುಟ್ಟಿದಂ | ರಾಮಸ್ಯ ಪುತ್ರೋ ಜಾತಃ |
| ರಾಮಂಗೆ ಧನಂಗೊಟ್ಟಂ | ರಾಮಾಯ ಧನಮದಾತ್ |

ಕನ್ನಡದಲ್ಲಿ ಎರಡೆಡೆಗಳಲ್ಲೂ ಚತುರ್ಥಿಯಿದ್ದರೆ ಸಂಸ್ಕೃತದಲ್ಲಿ ಮೊದಲ ವಾಕ್ಯದಲ್ಲಿ ಷಷ್ಠಿ ಯಿದ್ದು ಎರಡನೆಯ ವಾಕ್ಯದಲ್ಲಿ ಚತುರ್ಥಿಯಿದೆ.

ಎಲ್ಲ ದ್ರಾವಿಡ ಭಾಷೆಗಳಿಗೂ ಅನ್ವಯಿಸುವಂತೆ ಕಾಲ್ಡ್ವೆಲ್ ಹೇಳುವ ಕೆಳಗಿನ ಮಾತೂ ಒಪ್ಪತಕ್ಕುದಾಗಿದೆ. "...the number of cases in Tamil, Telugu etc. is almost indefinite. Every Post-position annexed to a noun constitutes, properly speaking, a new case; and therefore the number of such cases depends upon the requirements of the speaker and the different shades of meaning he wishes to express" (Ibid. p. 254-255).

**ಕಾರಕ**

ನಾಮಕ್ಕೆ ಕ್ರಿಯೆಯೊಡನಿರುವ ಸಂಬಂಧವೆ 'ಕಾರಕ'ವಾಗಿದ್ದು ಆ ಸಂಬಂಧ ನಾಮ ವಿಭಕ್ತಿಗಳ ಮೂಲಕ ವ್ಯಕ್ತವಾಗುತ್ತದೆ. "Cases are inflected forms for nouns which fit them for participation in key constructions relative to verbs"(C.M.L. p.234) ಎಂಬ ಹೇಳಿಕೆ ಕಾರಕದ ಸ್ವರೂಪ ಕಾರ್ಯ ಗಳನ್ನು ಖಚಿತವಾಗಿ ತಿಳಿಸುತ್ತದೆ. ಸಂಸ್ಕೃತದ ವ್ಯಾಕರಣಗಳಲ್ಲಿ ಕಾರಕವನ್ನು ವಿಭಕ್ತ್ಯರ್ಥ ವೆಂದು (ಸಿ. ಹೇ. ಶ. 3-1-79ರ ಲಘು ವೃತ್ತಿ) ಹೇಳುವುದಲ್ಲದೆ ನಾಮವಿಭಕ್ತಿಗಳನ್ನು 'ಕಾರಕ ವಿಭಕ್ತಿ' ಎಂದೂ ಹೇಳುತ್ತಾರೆ: (D.S.G. p.109-110). ಕನ್ನಡದಲ್ಲಿ ಅರ್ಥ ಯಿಸಿದರೆ "ಕಾರಕ ಎಂದರೆ ಮಾಡಿಸುವ ಇಲ್ಲವೆ ಮಾಡಿಸುವ ಪದಾರ್ಥವನ್ನು ಸೂಚಿ ಸುವ" (ಕ.ಮೂ.ವಿ. ಪು. 142) ಎಂದರ್ಥವಾಗುತ್ತದೆ. ಮಹಾಭಾಷ್ಯದಲ್ಲಿ "ಏವಂ ತರ್ಹಿಸಾಮಾನ್ಯ ಭೂತಾ ಕ್ರಿಯಾವರ್ತತೇ. ತಸ್ಯಾ ನಿರ್ವರ್ತಕಂ ಕಾರಕಂ" (1-4-24) ಎಂದುದೂ ಈ ದೃಷ್ಟಿಯಿಂದ ಗಮನಾರ್ಹ.

ಸಂಸ್ಕೃತ ವ್ಯಾಕರಣಗಳಲ್ಲಿ ಕಾರಕದ ಕುರಿತಾಗಿರುವ ಕೆಲವು ಪ್ರಸಿದ್ಧ ಹೇಳಿಕೆಗಳು ಕೆಳಗಿನಂತಿವೆ.

1. "ಕ್ರಿಯಾ ನಿಮಿತ್ತಂ ಕಾರಕಂ ಲೋಕತಃ ಸಿದ್ಧಂ" ದುರ್ಗಸಿಂಹನ ವೃತ್ತಿ ಕಾತಂತ್ರ 2-4-15.
2. "ಕ್ರಿಯಾ ನಿಮಿತ್ತಂ ಕಾರಕಂ" ಸ. ಕಂ. 1-1-32
3. ಕ್ರಿಯಾ ಹೇತುಃ ಕಾರಕಂ : ಸಿ. ಹೇ. ಶ. 2-2-1

ಕನ್ನಡ ವ್ಯಾಕರಣಗಳಲ್ಲಿ ಕಾರಕದ ಈ ವಿಧವಾದ ವಿವರಣೆ ದರ್ಪಣದಲ್ಲಿ ಮಾತ್ರ ಕಂಡುಬರುತ್ತದೆ.

"ಕಾರಕಮೆಂಬುದು ಕ್ರಿಯಾನಿಮಿತ್ತಂ" (ಸೂತ್ರ 103ರ ವೃತ್ತಿ). ಈ ವಿವರಣೆಯು ಮೇಲೆ ಸಂಸ್ಕೃತ ವ್ಯಾಕರಣದ ಪ್ರಭಾವ ನಿಚ್ಚಳವಾಗಿದೆ.

**ಕಾರಕಗಳೆಷ್ಟು ?**

ನಾಮಕ್ಕೆ ಕ್ರಿಯೆಯೊಡನೆ ಆರು ವಿಧವಾದ ಸಂಬಂಧವಿರುವುದರಿಂದ ಕಾರಕಗಳು ಆರೆಂದು ಸಂಸ್ಕೃತ ವ್ಯಾಕರಣಗಳು ಹೇಳುತ್ತವೆ[31]. ಅಷ್ಟಾಧ್ಯಾಯಿ, ಕಾತಂತ್ರ ಮೊದಲಾದ ಎಲ್ಲ ಹೆಚ್ಚಿನ ವ್ಯಾಕರಣಗಳಲ್ಲೂ ಅವುಗಳ ಸಂಜ್ಞೆ ಸಮಾನವಾಗಿದೆ. ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣ ಎಂಬಿವೇ ಆ ಆರು ಸಂಜ್ಞೆಗಳು. ವಿಭಕ್ತಿ ಪಲ್ಲಟದ ಸಂದರ್ಭವನ್ನು ಬಿಟ್ಟರೆ ಸಾಮಾನ್ಯವಾಗಿ ಕರ್ಮಾದಿಕಾರಕಗಳು ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ ಮತ್ತು ಸಪ್ತಮಿ ವಿಭಕ್ತಿಗಳ ಮೂಲಕ ಅಭಿವ್ಯಕ್ತಗೊಳ್ಳುತ್ತವೆ. ಕರ್ತೃಕಾರಕ ಪ್ರಥಮಾ ಮತ್ತು ತೃತೀಯೆಗಳಿಂದ ಅಭಿವ್ಯಕ್ತವಾಗುತ್ತದೆ.

ಸಂಸ್ಕೃತದಲ್ಲಿ ಕಾರಕಗಳನ್ನು ಅಭಿಹಿತ ಮತ್ತು ಅನಭಿಹಿತ ಅಥವಾ ಉಕ್ತ ಮತ್ತು ಅನುಕ್ತ ಎಂದು ವಿಭಾಗಿಸುತ್ತಾರೆ. ಅಭಿಹಿತ ಇಲ್ಲವೆ ಉಕ್ತವಾದಲ್ಲಿ ಸರ್ವತ್ರ ಪ್ರಥಮಾ ವಿಭಕ್ತಿ ಬರುವುದು (ಬಾಲಶಿಕ್ಷಾ : ಪು. 33). ಉಕ್ತ ಅಥವಾ ಅಭಿಹಿತವೆಂದರೆ ವಿಭಕ್ತ್ಯರ್ಥವನ್ನು ಆಖ್ಯಾತ ವಿಭಕ್ತಿ, ಕೃತ್‌ಪ್ರತ್ಯಯ, ತದ್ಧಿತ ಪ್ರತ್ಯಯ ಮತ್ತು ಸಮಾಸಗಳಿಂದ ಅಭಿವ್ಯಕ್ತಗೊಳಿಸುವುದಾಗಿದೆ (A. O. P: p. 277). ಅನಭಿಹಿತ ಕರ್ಮಾದಿಕಾರಕಗಳನ್ನು ಹೇಳಲು ದ್ವಿತೀಯಾದಿ ವಿಭಕ್ತಿಗಳು ಬರುತ್ತವೆ. ಸಂಸ್ಕೃತದ ಕಾರಕ ವ್ಯವಸ್ಥೆಯ ಬಗ್ಗೆ ವೈಯಾಕರಣರ ಹೇಳಿಕೆಗಳನ್ನು ಹಿಂಜಿದ ವಿದ್ವಾಂಸರು ಪ್ರಥಮಾ ವಿಭಕ್ತಿ ಯಾವುದೇ ಕಾರಕಾಧೀನವಲ್ಲ (ಕ. ಮಾ. ಟಿಪ್ಪಣಿ. 167-168). ಕೇವಲ ಆಖ್ಯಾತ ವಿಭಕ್ತಿಯಿಂದಲೇ ಕರ್ತೃ ಸೂಚಿತವಾಗುತ್ತದೆ ಎಂದು ಅಭಿಪ್ರಾಯಿಸಿದ್ದಾರೆ. "ಕಾರಯತಿ ಇತಿ ಕಾರಕಂ" ಎಂಬ ವ್ಯುತ್ಪತ್ತಿಯಂತೆ ಕಾರಕ ಎಂಬುದು "ಮಾಡಿಸುವ" ವ್ಯಕ್ತಿಯನ್ನು ಸೂಚಿಸುವುದಲ್ಲದೆ ಮಾಡುವ ವ್ಯಕ್ತಿಯನ್ನಲ್ಲ (ಕ.ಮಾ.ವಿ. ಪು. 145) ಎಂಬ ಆಕ್ಷೇಪವೂ ಇದೆ. ಬಹುಶಃ ಸಂಸ್ಕೃತದಲ್ಲೂ ಈ ಬಗ್ಗೆ ದ್ವಿವಿಧ ಅಭಿಪ್ರಾಯವಿದ್ದಿರಬೇಕು. ಪಾಣಿನಿ ಕಾತಂತ್ರಕಾರ ಮೊದಲಾದವರು ಪ್ರಥಮಾ

ವಿಭಕ್ತಿಯು ಅರ್ಥಗಳನ್ನು ಹೇಳುವಲ್ಲಿ 'ಕರ್ತೃ' ಅರ್ಥವನ್ನು ಸೂಚಿಸದೆ ಹೋಗುವುದು ವಿಚಾರಕ್ಕೆಡೆಮಾಡುತ್ತದೆ. ಇನ್ನೊಂದೆಡೆಯಲ್ಲಿ "ಉಕ್ತೇ ಕರ್ತರಿ ಪ್ರಥಮಾ"(ಬಾಲಶಿಕ್ಷಾ, ಪು.104). 'ಕರ್ತರಿ ಪ್ರಥಮಾ' (ಸಾ.ಪ್ರ. ಕಾರಕ ಪ್ರಕ್ರಿಯೆ) ಇತ್ಯಾದಿ ಉಕ್ತಿಗಳೂ ಇವೆ. ಅಂತೂ ಒಟ್ಟಿನಲ್ಲಿ ಪ್ರಥಮಾ ವಿಭಕ್ತಿಯು ಕಾರಕಾಧೀನತೆಯು ಬಗ್ಗೆ ಎರಡಭಿಪ್ರಾಯ ಸಂಸ್ಕೃತ ವ್ಯಾಕರಣದಲ್ಲಿತ್ತೆಂಬುದು ಸತ್ಯ.

ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿ ಕರ್ತೃ ಕಾರಕವನ್ನು ಸೂಚಿಸುವುದಿಲ್ಲ ಎಂದ ಮಾತ್ರಕ್ಕೆ 'ಕರ್ತೃ' ಎಂಬ ಕಾರಕವೇ ಇಲ್ಲ ಎಂದರ್ಥವಲ್ಲ. ಹಿಂದೆ ಹೇಳಿದಂತೆ ಅನುಕ್ತ ವಾದ ಕರ್ತೃ, ತೃತೀಯಾ ವಿಭಕ್ತಿಯಿಂದ ಸೂಚಿತವಾಗುತ್ತದೆ. ಅದನ್ನೇ ಅಷ್ಟಾಧ್ಯಾಯಿ ಯಲ್ಲಿ "ಕರ್ತೃ ಕರಣಯೋ ತೃತೀಯಾ" (2-3-18) ಎಂದು ಹೇಳಲಾಗಿದೆ.

ಸಂಸ್ಕೃತ ವೈಯಾಕರಣರ ಒಮ್ಮತದ ಅಭಿಪ್ರಾಯದಂತೆ ಷಷ್ಠೀ ವಿಭಕ್ತಿ ಕಾರಕಾ ಧೀನವಲ್ಲ. ಅದಕ್ಕೆ ಕ್ರಿಯಾ ಹೇತುತ್ವದ ಅಭಾವವೇ ಕಾರಣ (ಕಾರಕ ಕ್ರಿಯಾ ಹೇತು ವಷ್ಟೆ). ಆದ್ದರಿಂದ ಷಷ್ಠೀ ವಿಭಕ್ತಿ ಕಾರಕ ವಿಭಕ್ತಿಯಲ್ಲ. ಅದು ಸೂಚಿಸುವ ಸಂಬಂಧ ಕಾರಕವೂ ಅಲ್ಲ (Ph. S. G. p. 219). ಎರಡು ನಾಮಗಳ ನಡುವಣ ಸಂಬಂಧವನ್ನು (expressive of relation) ಮಾತ್ರ ಷಷ್ಠೀ ಹೇಳುತ್ತದೆ (K. S. D. p. 263). ಹೀಗೆ ಸಂಸ್ಕೃತದಲ್ಲಿ ವಿಭಕ್ತಿಗಳು ಏಳು ವಿಧವಾಗಿದ್ದರೂ ಕಾರಕಗಳಾರೆಂದು ಖಚಿತವಾಗಿ ನಿರೂಪಿತವಾಗಿದೆ.[22]

ಕನ್ನಡ ವ್ಯಾಕರಣಗಳು ಕಾರಕಗಳ ಸಂಜ್ಞೆಗಳನ್ನು ಸಂಸ್ಕೃತ ವ್ಯಾಕರಣಗಳಿಂದ ಅನಾಮತ್ತಾಗಿ ಎತ್ತಿಕೊಂಡಿವೆ. ಕಾರಕಗಳನ್ನು ಲೆಕ್ಕ ಮಾಡಿದ ಗ್ರಂಥಗಳು ಕಾರಕಗಳಾ ರೆಂದೂ ಘೋಷಿಸಿವೆ.

"ಕಾರಕಮಾಱು ಕರ್ಮಕರಣಾದಿಕದಿಂ" ಕ. ಮಾ. 1. 114

"ಪರಿವಿಡಿಯೆ ಕರ್ತೃ ಕರ್ಮಂ....ಕಾರಕಂಗಳಾಱುಂ ನೆಗೞ್ಗುಂ" ಸ್ಮೃ. ಸೂ. 16

"ಆ ಕಾರಕಂ ಕರ್ತೃವೆಂದುಂ

................ಷಡ್ವಿಧಮಾಗಿರ್ಪುದು" ದ. ಸೂ. 103ರ ವೃತ್ತಿ

ಭೂಷಣಕಾರ ಕಾರಕಗಳನ್ನು ಲೆಕ್ಕ ಮಾಡಿ ಹೇಳುವುದಿಲ್ಲ. ಕವಿರಾಜ ಮಾರ್ಗಕಾರ ಆರು ಕಾರಕಗಳೆಂದು ಹೇಳಿದರೂ ಆರು ಕಾರಕಗಳು ಯಾವುದೆಂದು ಹೇಳುವುದಿಲ್ಲ. ಸ್ಮೃತಿ ದರ್ಪಣಗಳು ಆ ಆರು ಕಾರಕಗಳನ್ನು ಹೆಸರಿಸಿರುವುದರಿಂದ ಚರ್ಚೆಗೆಡೆಯಿಲ್ಲ. ಕವಿರಾಜ ಮಾರ್ಗಕಾರ ಕೇವಲ ಕರ್ಮ ಮತ್ತು ಕರಣವನ್ನು ಹೆಸರಿಸಿದ್ದಾನೆ. ಬಹುಶಃ ಆ ಕಾಲ ಕ್ಕಾಗಲೇ ಸಂಸ್ಕೃತ ವ್ಯಾಕರಣದ ನೆರಳಲ್ಲಿ ಕನ್ನಡ ವ್ಯಾಕರಣ ಬೆಳೆದು ಬಂದು ಸಂಪ್ರ ದಾಯವಾಗಿ ಹೋಗಿದ್ದುದರಿಂದ ಹೇಳದೆ ಬಿಟ್ಟಿರಬೇಕೆಂದು ಭಾಸವಾಗುತ್ತದೆ. ಕವಿರಾಜ ಮಾರ್ಗ ನೇರವಾಗಿ ಭಾಷಾ ವ್ಯಾಕರಣವನ್ನು ನಿರೂಪಿಸುವ ಗ್ರಂಥವಲ್ಲವೆಂಬುದನ್ನೂ, ಮೇಲೆ ಹೇಳಿದ ವಿಚಾರ ಬರುವುದು ಕಾರಕ ದೋಷದ ಪ್ರಸಕ್ತಿಯಲ್ಲೆಂಬುದನ್ನೂ ಮೊದಲು ಲೆಕ್ಕಿಸಬೇಕು.

ಕವಿರಾಜಮಾರ್ಗಕಾರ "ಕಾರಕಮಾಱು ಕರ್ಮ ಕರಣಾದಿಕದಿಂ ಪ್ರಥಮಾದಿಭೇದ ನಿರ್ಧಾರದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞ್ನಿಕ್ಕುಂ" (ಕ. ಮಾ. 1-114) ಎಂದು ಹೇಳಿದುದು ಸಮಸ್ಯೆಗೆ ದಾರಿ ತೋರಿದೆ. ವಿಚಾರಿಸಿದಷ್ಟೂ ಸಮಸ್ಯೆ ಜಟಿಲ ವಾಗಿದೆ. ಷಷ್ಠಿಗೆ ಕಾರಕತ್ವವಿಲ್ಲದ್ದರಿಂದ "ವಿಭಕ್ತಿಗಳಾಱೞ್ನಿಕ್ಕುಂ" (ಕ.ಮಾ.ವಿ. ಪು.144) ಎಂಬ ತಿದ್ದುಪಡಿ ಸೂಚಿತವಾದುದೂ ಇದೆ. ಆದರೆ ಆ ತಿದ್ದುಪಡಿ ಸ್ವೀಕಾರಾರ್ಹವಲ್ಲ. "ಷಷ್ಠಿಗೆ ಕಾರಕತ್ವವಿಲ್ಲದಿರುವುದು ಸಂಸ್ಕೃತ ವ್ಯಾಕರಣ ಪದ್ಧತಿಗನುಸಾರವಾಗಿ, ಅದನ್ನು ಅನುಸರಿಸಿದಲ್ಲಿ, ವಿಭಕ್ತಿಗಳಾಱು ಅನ್ನುವುದು ಹೇಗೆ ? ಸಂಸ್ಕೃತದಲ್ಲಿ ನಾಮ ವಿಭಕ್ತಿ ಗಳಾಱಲ್ಲ, ಏಳು" (ಅದೇ.)

ಕವಿರಾಜಮಾರ್ಗದಲ್ಲಿ ಕಾರಕಗಳ ಎಣಿಕೆ "ಕರ್ಮ" ದಿಂದ ತೊಡಗಿರುವುದನ್ನು ನೋಡಿ ಮುಳಿಯ ತಿಮ್ಮಪ್ಪಯ್ಯನವರು ಗ್ರಂಥಕರ್ತ ಉದ್ದೇಶಪಟ್ಟೇ ಕರ್ತೃ ಕಾರಕ ವನ್ನು ಬಿಟ್ಟಿರಬೇಕೆಂದು ಭಾವಿಸುತ್ತಾರೆ. ಹೇಗೂ ಸಂಸ್ಕೃತದಲ್ಲಿ ಪ್ರಥಮಾವಿಭಕ್ತಿ ಕಾರಕಾಧೀನವಲ್ಲವಷ್ಟೆ.[23] ಹಾಗಾದರೆ ಕಾರಕಗಳಾರಾಗುವುದು ಹೇಗೆ ? ಲಕ್ಷ್ಯಪದ್ಯದಲ್ಲಿ ಕಾರಕಯುಕ್ತವಿಭಕ್ತ್ಯನುಕ್ರಮದಲ್ಲಿ ಷಷ್ಠಿಗೆ ಉದಾಹರಣೆಯಾಗಿ "ಅಧೀಶ್ವರನಾದಯೆ" ಎಂಬ ಮಾತಿದೆ. ಇದರಿಂದ ಷಷ್ಠಿಗೆ ಕಾರಕತ್ವವನ್ನು ಆರೋಪಿಸಿದಂತಾಯಿತು. ಇದು ಹೇಗೆ ? "ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನು ಮಾತ್ರ ಕೊಡುವ 'ಅಧೀಶ್ವ ರನಾ' ಎಂಬ ಪದವು ಆ ಸ್ವಸಂಬಂಧಿಯಾದ ದಯೆಯೆಂಬ ಕರ್ತೃವಿನ ಮೂಲಕವಾಗಿ ಸಾಲ್ಗುಂ" ಎಂಬ ಭಾವನಾತ್ಮಕ ಕ್ರಿಯೆಯನ್ನು ಮಾಡಿಸುವುದಲ್ಲವೆ ? ಇನ್ನೊಬ್ಬರ 'ದಯೆ' ಯಾದರೆ ಅದು 'ಸಾಲ್ಗುಂ' ಎಂಬುದಕ್ಕೆ ಕರ್ತೃವಾಗಲಾರದು. ಆದರಿಂದಲೇ ಷಷ್ಠೀ ವಿಭಕ್ತಿಯುಕ್ತ ಪದವು ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನಿತ್ತು ಆ ಮೂಲಕವಾಗಿ ಕ್ರಿಯೆಗೆ ಕಾರಕವಾಗುವುದು. ಅದನ್ನು ಬೇಕಾದರೆ 'ಸಂಬದ್ಧ ಕಾರಕ' ಎಂದು ಕರೆಯಬಹುದು (ಕ. ಮಾ. ವಿ. ಪು. 146) ಎಂಬುದು ಮುಳಿಯರ ಅಭಿಪ್ರಾಯ.

ಮಾರ್ಗಕಾರನು ಸಂಸ್ಕೃತ ವ್ಯಾಕರಣದ ಕಾರಕ ವ್ಯವಸ್ಥೆಯನ್ನು ಅನುಸರಿಸಿರುವುದ ರಿಂದ 'ಕರ್ತೃ'ವನ್ನು ಕಾರಕಾನುಕ್ರಮದಲ್ಲಿ ಸೇರಿಸಿಲ್ಲವೆಂದು ಕೆ. ಟಿ. ಪಾಂಡುರಂಗಿಯವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಮಾರ್ಗಕಾರನು ಹೇಳುವ ಕರ್ತೃಕಾರಕ ರಹಿತವಾದ ಆರು ಕಾರಕಗಳಲ್ಲಿ ಷಷ್ಠಿಯೂ ಸೇರುವುದೇ ಇಲ್ಲವೇ ಎಂಬ ಸಮಸ್ಯೆಗೆ ಅವರಿಂದ ಪರಿ ಹಾರ ಸೂಚಿತವಾಗಿಲ್ಲ (ಕ. ಮಾ. ಟಿಪ್ಪಣಿಗಳು ಪು. 167). ಹಿಂದಿನ ಪಂಡಿತರ ವಾದ ಗಳನ್ನು ಕ್ರೋಢೀಕರಿಸಿ ಮಥಿಸಿದ ಎಂ. ವಿ. ಸೀತಾರಾಮಯ್ಯನವರು ಅಭಿಪ್ರಾಯ ಪಡುವಂತೆ "ಕವಿರಾಜಮಾರ್ಗಕಾರ ಹೇಳುವ ಆರು ಕಾರಕಗಳಲ್ಲಿ ಕರ್ತೃ ಸೇರುವುದಿಲ್ಲ ; ಷಷ್ಠಿಗೂ ಕಾರಕತ್ವ ಉಂಟು. ಪ್ರಥಮಾದಿಯಾಗಿ ವಿಭಕ್ತಿಗಳು ಏಳು". (ಅದೇ. ಪು.172) ಇದೇ ಅಭಿಪ್ರಾಯ ಈಗ ಹೆಚ್ಚು ಕಡಿಮೆ ಸ್ವೀಕೃತವಾದಂತಿದೆ (ಕ.ಪ.ಕ.ಸಾ. ಪು. 99. (K.S.D. p. 263).

ಕವಿರಾಜಮಾರ್ಗಕಾರನ ನಿರೂಪಣೆ ಸಂಸ್ಕೃತ ವ್ಯಾಕರಣದ ಹಿನ್ನೆಲೆಯಲ್ಲಿ ಮೂಡಿ ಬಂದುದೆಂಬುದು ಸತ್ಯ. ಆರು ಕಾರಕಗಳ ಕಲ್ಪನೆ ಸಂಸ್ಕೃತದಿಂದ ಎತ್ತಿಕೊಂಡುದಷ್ಟೆ. ಕಾರಕಾನುಕ್ರಮದಲ್ಲಿ ಕರ್ತೃವನ್ನು ಬಿಟ್ಟುದರಿಂದ ಕವಿರಾಜಮಾರ್ಗಕಾರ ಕರ್ತೃವನ್ನು ಕಾರಕವೆಂದು ಪರಿಗಣಿಸಿಲ್ಲವೆಂದು ತಿಳಿಯುವುದು ತರವಲ್ಲ. ಕಾರಕಾನುಕ್ರಮವನ್ನು ಕರ್ತೃವಿನಿಂದಲೇ ತೊಡಗುವ ವ್ಯವಸ್ಥೆ ಸಂಸ್ಕೃತ ವ್ಯಾಕರಣಗಳಲ್ಲಿ ಮೊದಲಿರಲಿಲ್ಲವೆಂಬುದು ಮುಖ್ಯ. ಅಷ್ಟಾಧ್ಯಾಯೀ, ಜೈನೇಂದ್ರ, ಮಹಾಭಾಷ್ಯ ಮತ್ತು ಕಾತಂತ್ರದಲ್ಲಿ ಕಾರಕಗಳನ್ನು ಅಪಾದಾನ ಮೊದಲ್ಗೊಂಡು ಹೇಳಲಾಗುತ್ತದೆ (ಜೈನೇಂದ್ರ 1-2-120ರ ಮಹಾವೃತ್ತಿ ; ಮಹಾಭಾಷ್ಯ 1-4-51). ಸರಸ್ವತೀ ಕಂಠಾಭರಣ, ರೂಪಾವತಾರ, ಸಿದ್ಧಹೇಮ ಶಬ್ದಾನುಶಾಸನ ಮುಂತಾದ ಗ್ರಂಥಗಳಲ್ಲಿ ಮಾತ್ರ ಕಾರಕಾನುಕ್ರಮ ಕರ್ತೃವಿನಿಂದ ಆರಂಭವಾಗುತ್ತದೆ. ಈ ಗ್ರಂಥಗಳೆಲ್ಲ ಕವಿರಾಜ ಮಾರ್ಗಕ್ಕಿಂತ ಈಚೆಗಿನವು. ಹೆಚ್ಚೇಕೆ, ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ ಕರ್ಮದಿಂದ ಕಾರಕಗಳ ನಿರೂಪಣೆ ಆರಂಭವಾಗುತ್ತದೆ. ಅದ್ದರಿಂದ ಕಾರಕಾನುಕ್ರಮದಲ್ಲಿ ಕರ್ತೃವನ್ನು ಬಿಟ್ಟುದರಿಂದ ಕವಿರಾಜಮಾರ್ಗಕಾರ ಕರ್ತೃಕಾರಕವನ್ನೇ ಹೇಳುವುದಿಲ್ಲ ಎನ್ನುವಂತಿಲ್ಲ.

ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿಯು ಅರ್ಥವಾಗಿ ಕರ್ತೃಕಾರಕವನ್ನು ಒಪ್ಪುವ ಮತ್ತು ಒಪ್ಪದಿರುವ ಉಭಯ ಸಂಪ್ರದಾಯಗಳನ್ನು ಹಿಂದೆಯೇ ವಿಚಾರಿಸಲಾಗಿದೆ. ಆದರೆ ತೃತೀಯಾ ವಿಭಕ್ತಿಯಿಂದ ವ್ಯಕ್ತವಾಗುವ ಕರ್ತೃಕಾರಕದ ಬಗ್ಗೆ ಸಂಸ್ಕೃತ ವ್ಯಾಕರಣದಲ್ಲಿ ಅಷ್ಟಾಧ್ಯಾಯಿ ಮೊದಲ್ಗೊಂಡು ಎರಡಭಿಪ್ರಾಯವಿಲ್ಲವಷ್ಟೇ. ಹಾಗಿರಲು ಸಂಸ್ಕೃತ ವ್ಯಾಕರಣವನ್ನನುಸರಿಸಿ ಕವಿರಾಜಮಾರ್ಗಕಾರ ಕರ್ತೃವನ್ನು ಕಾರಕವೆಂದು ಪರಿಗಣಿಸಿಲ್ಲವೆನ್ನುವುದು ಹೇಗೆ ?

ಲಕ್ಷ್ಯ ಪದ್ಯವೂ ಈ ದೃಷ್ಟಿಯಿಂದ ವಿಚಾರಣೀಯ. ತೃತೀಯಾ ವಿಭಕ್ತಿಗೆ ಉದಾಹರಣೆಯಾಗಿ ಬಂದಿರುವ "ತನ್ನರೇಂದ್ರನಿಂ ಧರಣಿ ಸನಾಥೆ" ಎಂಬಲ್ಲಿ ತೃತೀಯಾ ವಿಭಕ್ತಿಯಿಂದ ವ್ಯಕ್ತವಾಗುವುದು ಕರ್ತೃಕಾರಕವಾಗಿದೆ. ಧರಣಿ ಸನಾಥೆಯಾಗಲು 'ತನ್ನರೇಂದ್ರ' 'ಕರಣ' ನಲ್ಲ. ಅವನು ಕರ್ತೃ. 'ಇಂ' ಎಂಬ ಪ್ರತ್ಯಯ ಧರಣಿಯನ್ನು ಸನಾಥೆ ಮಾಡುವ ಕರ್ತೃವು 'ತನ್ನರೇಂದ್ರ'ನೆನ್ನುವುದನ್ನು ತೋರಿಸಿಕೊಡುತ್ತದೆ.

ಲಕ್ಷ್ಯಪದ್ಯ ಕೇವಲ ಕಾರಕಗಳನ್ನು ಸೂಚಿಸಲು ಬಂದುದಲ್ಲ. ಕಾರಕಯುಕ್ತ ವಿಭಕ್ತ್ಯನುಕ್ರಮಕ್ಕೆ ಎಂದರೆ ಕಾರಕಗಳನ್ನು ತಿಳಿಸುವ ಅನುಕ್ರಮ ವಿಭಕ್ತಿಗೆ ಅದು ಲಕ್ಷ್ಯ. ಕಾರಕಾರ್ಥವಿರುವಲ್ಲಿ ಕಾರಕ, ಅದಿಲ್ಲದಿರುವಲ್ಲಿ ವಿಭಕ್ತಿ ಮಾತ್ರ ಎಂಬ ಲೆಕ್ಕದಲ್ಲಿ ಲಕ್ಷ್ಯ ಪದ್ಯವನ್ನು ಹೆಣೆದಿರುವಂತಿದೆ. ಇಲ್ಲವಾದರೆ ಕರ್ತೃಕಾರಕವನ್ನು ಹೆಸರಿಸದ ಗ್ರಂಥಕರ್ತೃ ಪ್ರಥಮಾ ವಿಭಕ್ತಿ ಲೋಪಹೊಂದಿರುವ "ನರಪತಿ ಬಂದಂ" ಎಂಬ ಉದಾಹರಣೆಯನ್ನು ಕೊಡುತ್ತಿರಲಿಲ್ಲ. ಆ ಕಾಲಕ್ಕಾಗಲೇ ಭದ್ರವಾದ ಕನ್ನಡ ವ್ಯಾಕರಣ ಪರಂಪರೆ ಬೆಳೆದಿದ್ದುದರಿಂದ ಅಲ್ಲಿ ವಿಭಕ್ತಿ ಲೋಪವನ್ನಾತ ಒಪ್ಪಿದ್ದಾನೆ ಎಂದೇ ತಿಳಿಯಬೇಕು.

ಷಷ್ಠೀವಿಭಕ್ತಿಯ ಕಾರಕತ್ವ ವಿಚಾರವೂ ಹೀಗೆಯೇ. ಕೇವಲ 'ಅಧೀಶ್ವರನಾದಯಂ' ಎಂಬ ಉದಾಹರಣೆಯ ಬಲದಿಂದ ಷಷ್ಠಿಗೆ ಕಾರಕತ್ವವನ್ನು ಕವಿರಾಜಮಾರ್ಗಕಾರ ಕೊಟ್ಟನೆಂದರೆ "ನರಪತಿ ಬಂದಂ" ಎಂಬಲ್ಲಿ ಕರ್ತೃಕಾರಕವನ್ನೂ ಒಪ್ಪಿಕೊಳ್ಳಬೇಡವೇ ? ಮಾತ್ರವಲ್ಲ. ಉದಾಹರಣೆಯೇ ಇಲ್ಲದ ಕಾರಣ ಕಾರಕವನ್ನು ಆಗ ಕೈಬಿಡಬೇಕಾಗುತ್ತದೆ. ಹಾಗೆ ಮಾಡೋಣವೆಂದರೆ ಕರ್ಮಕರಣಾದಿಕದಿಂ ಎಂಬಲ್ಲಿನ 'ಕರಣಕ್ಕೆ' ಸಮಾಧಾನ ಕೊಡಲು ದಾರಿಯಿಲ್ಲ.

ಉದಾಹರಣೆಯ ಪಂಥದಲ್ಲಿ ಬಂದಿರುವ ಕಾರಣಕ್ಕಾಗಿ ಷಷ್ಠಿಗೆ ಕಾರಕತ್ವವನ್ನು ಆರೋಪಿಸುವುದಿದ್ದರೆ ಕೆಳಗಿನ ಹೇಳಿಕೆಗಳು ವಿಚಾರಾರ್ಹವಾಗಿವೆ.

"ಈ ತೆಱದಿಂದೇೞಕ್ಕುಂ ಖ್ಯಾತವಿಭಕ್ತಿಗಳದರ್ಕೆ
ಕಾರಕವಶದಿಂ" ಸ್ಮೃತಿ. ಸೂ, 15

"ಪಿಂತೆ ಪೇೞ್ದ.............ಷಷ್ಠಿಗಂ
ಸಪ್ತಮಿಗಂ ಏೞಾಗಿ ಕಾರಕವಶದಿಂ ಪತ್ತುಗುಂ"
ದ. ಸೂ. 103ರ ವೃತ್ತಿ

ಇಲ್ಲಿ ಏಳು ವಿಭಕ್ತಿಗಳು ಕಾರಕ ವಶದಿಂದ ಬರುತ್ತವೆ ಎನ್ನುವಲ್ಲಿ ಷಷ್ಠಿಗೆ ಕಾರಕತ್ವ ದೊರಕಿದಂತಾಯಿತಲ್ಲವೆ ? ಹಾಗೆಂದು ಒಪ್ಪಿಕೊಳ್ಳೋಣವೆಂದರೆ ಸ್ಮೃತಿ ದರ್ಪಣಗಳು ಕಾರಕಗಳಾರೆಂದು ಷಷ್ಠಿಯನ್ನಾಗಲಿ, ಸಂಬಂಧಾರ್ಥವನ್ನಾಗಲಿ ಬಿಟ್ಟು ಘೋಷಿಸುವುದರಿಂದ ಅದು ಸಾಧ್ಯವಲ್ಲ. ಹಾಗಾದರೆ ಕವಿರಾಜಮಾರ್ಗಕಾರ ಷಷ್ಠೀ ವಿಭಕ್ತಿಯನ್ನು ಉದಾಹರಣೆಯಲ್ಲಿ ಸೇರಿಸಿಕೊಳ್ಳಲು ಕಾರಣವನ್ನು ಕಾಣಬೇಕಾಗುತ್ತದೆ.

ಮುಳಿಯ ತಿಮ್ಮಪ್ಪಯ್ಯನವರೇ ಸಮಾಧಾನವೀಯುವಂತೆ 'ಷಷ್ಠೀ ವಿಭಕ್ತಿಯನ್ನು ಕ್ರಮವಾಗಿ ಕಾರಕಾಧಾರವೆನ್ನಿಸಿದ ವಿಭಕ್ತಿ ನಿರೂಪಣೆಯಲ್ಲಿ ಒಟ್ಟಿಗೆ ಸೇರಿಸಿದಂದು ಮಾತ್ರ ಎಂದೇಕೆ ಭಾವಿಸಬಾರದು ? ಸಂಬಂಧದ ಷಷ್ಠಿಗೆ ಕಾರಕತ್ವವಿಲ್ಲವಾದರೂ ಕಾರಕಗಳ ಸಾಲಿನಲ್ಲಿರುವುದರಿಂದ ಅದನ್ನೂ ಅವುಗಳೊಡನೆ ನಿರೂಪಿಸಿದ್ದಾನೆ ಎಂದೇ ಭಾವಿಸತಕ್ಕುದು" (ಕ. ಮಾ. ವಿ. ಪು. 144). ಈ ವಿಧವಾದ ಅಭಿಪ್ರಾಯಕ್ಕೆ ಸಂಸ್ಕೃತ ವ್ಯಾಕರಣಗಳಲ್ಲಿ ಹಿನ್ನೆಲೆಯಿದೆ. ಸಂಸ್ಕೃತದಲ್ಲಿ ಕಾರಕಗಳ ನಿರೂಪಣೆಯ ಮಧ್ಯದಲ್ಲಿ ಸಂಬಂಧಾರ್ಥವನ್ನು ಇರಿಸುತ್ತಾರೆ. ಕೆಳಗಿನ ಹೇಳಿಕೆಗಳು ಇದಕ್ಕೆ ನಿದರ್ಶನ.

"ಶೇಷಾಃ ಕರ್ಮಕರಣ ಸಂಪ್ರದಾನಾಪಾದಾನ ಸ್ವಾಮ್ಯಾದ್ಯಧಿಕರಣೇಷು"
ಕಾತಂತ್ರ 2-4-19

"ಶೇಷಾಃ ಕಾರ್ಯೇ ಕರ್ತೃ ಸಾಧನಯೋರ್ದಾನ ಪಾತ್ರೇ ವಿಶ್ಲೇಷಾವಧೌ
ಸಂಬಂಧ ಆಧಾರ ಭಾವಯೋಃ :" ಸಾ. ಪ್ರ. ಕಾರಕ ಪ್ರಕ್ರಿಯ-4

ಈ ಹೇಳಿಕೆಗಳಲ್ಲಿ ಬಂದ ಸ್ವಾಮ್ಯಾದಿ ಅಥವಾ ಸಂಬಂಧ, ಕಾರಕಾನುಕ್ರಮದಲ್ಲಿ ಸೇರಿಸಿ ಹೇಳುವ ಸಂಪ್ರದಾಯದಲ್ಲಿ ಬಂದುದು ಎಂದು ಮಾತ್ರ ಭಾವಿಸಬೇಕು. ಕವಿರಾಜ ಮಾರ್ಗಕಾರ ಷಷ್ಠಿಗೆ ಕಾರಕತ್ವವನ್ನು ವಿಧಿಸಲಾರ. ಸಂಸ್ಕೃತದ ಚೌಕಟ್ಟನ್ನು ಮೀರಿ ಹೋಗಲಾರ ಎಂದೀ ವಿವೇಚನೆಯ ಅರ್ಥವಲ್ಲ. ದೇಸಿಯಲ್ಲಿ ಯತಿಭಂಗವನ್ನು ಗುಣ ವನ್ನಾಗಿ ಭಾವಿಸಿದ ಆತನು ಹೊಸಹೆಜ್ಜೆಯನ್ನಿಡಲೆಡೆಯಿದೆ. ಆದರೆ ಇಲ್ಲಿ ಅಂತಹ ಹೊಸತನ್ನು ಹೇಳಿದಂತೆ ಊಹಿಸಲು ಆಧಾರ ಸಾಮಗ್ರಿ ಸಾಲದು ಎಂದು ಮಾತ್ರ ಅಭಿ ಪ್ರಾಯ.

ಒಟ್ಟಿನಲ್ಲಿ ಮೇಲಿನ ವಿವೇಚನೆಯನ್ನು ಕೆಳಗಿನಂತೆ ಸಂಗ್ರಹಿಸಬಹುದು. ಕವಿರಾಜ ಮಾರ್ಗದಿಂದ ತಿಳಿದು ಬರುವಂತೆ

1. ಕಾರಕಗಳು ಆರು. ಮತ್ತು ವಿಭಕ್ತಿಗಳು ಏಳು.
2. ಆರು ಕಾರಕಗಳಲ್ಲಿ ಕರ್ತೃ ಸೇರದಿರುವ ವಿಚಾರವಾಗಲಿ ಷಷ್ಠೀ ವಿಭಕ್ತಿಗೆ ಕಾರಕತ್ವವಿರುವ ವಿಚಾರವಾಗಲಿ ಕವಿರಾಜಮಾರ್ಗದಲ್ಲಿ ಧ್ವನಿತವಾಗುವುದಿಲ್ಲ.
3. ಕವಿರಾಜ ಮಾರ್ಗದ ಕಾಲಕ್ಕಾಗಲೇ ಸಂಸ್ಕೃತ ವ್ಯಾಕರಣದ ಚೌಕಟ್ಟಿನಲ್ಲಿ ಗಟ್ಟಿಯಾದ ಕನ್ನಡ ವ್ಯಾಕರಣ ಬೆಳೆದಿದ್ದುದರಿಂದ ಕರ್ತೃಕಾರಕವನ್ನು ಕಾರಕಗಳ ಸಾಲಿನಿಂದ ಬಿಟ್ಟುಬಿಡಲೆಡೆಯಿಲ್ಲ.
4. ಸಂಸ್ಕೃತ ವ್ಯಾಕರಣಗಳು ಹೇಳುವ ತೃತೀಯೆಯಿಂದ ವ್ಯಕ್ತವಾಗುವ ಕರ್ತೃಕಾರಕವನ್ನು ಕವಿರಾಜಮಾರ್ಗಕಾರ ಗುರುತಿಸಿದ್ದಾನೆ.
5. ಕಾರಕಾನುಕ್ರಮದಲ್ಲಿ ಷಷ್ಠಿಯನ್ನಾಗಲಿ, ಸಂಬಂಧಾರ್ಥವನ್ನಾಗಲಿ ಸೇರಿಸಿ ಹೇಳುವ ಸಂಸ್ಕೃತ ವ್ಯಾಕರಣ ಮಾರ್ಗಾನುಸಾರವಾಗಿ 'ಕಾರಕ ಯುಕ್ತ ವಿಭಕ್ತ್ಯನುಕ್ರಮ'ದಲ್ಲಿ 'ಅಧೀಶ್ವರನಾ ದಯೆ' ಯೂ ಸೇರಿದೆ.
6. ಕವಿರಾಜ ಮಾರ್ಗಕಾರ ಷಷ್ಠಿಗೆ ಕಾರಕತ್ವವನ್ನಿತ್ತಿರುವನೆನ್ನಲು ಸಾಧಕ ವಾದ ಆಧಾರಗಳಿಲ್ಲ.

ಸ್ಮೃತಿ ದರ್ಪಣಗಳು ಆರು ಕಾರಕಗಳೆಂದು ಹೇಳಿರುವುದಲ್ಲದೆ ಅವುಗಳ ಸಂಜ್ಞೆ ಯನ್ನು ತಿಳಿಸಿರುವುದರಿಂದ ಅಲ್ಲಿ ಚರ್ಚೆಗೆಡೆಯಿಲ್ಲ. ಭೂಷಣದ ಒಂದು ಪ್ರತಿಯಲ್ಲಿ (ರೈಸ್ ಸಂಪಾದಿತ) ಮಾತ್ರ ಷಷ್ಠಿಯ ಅರ್ಥವಾದ 'ಸ್ವಾಮಿ' ಯನ್ನು ಕಾರಕವೆಂದು ಹೇಳಲಾಗಿದೆ,

ಸೂ ॥ " ಅಥ ಕಾರಕಂ ನಿರೂಪ್ಯತೇ " ಸೂ. 75

ವೃತ್ತಿ : ಸಂಜ್ಞಾ ಸಂಧಿ ವಿಭಕ್ತಿ ವ್ಯಾಖ್ಯಾನಾನಂತರಂ ಕರ್ತೃಕರ್ಮ ಕರಣಸಂಪ್ರ ದಾನಾಪಾದಾನ ಸ್ವಾಮ್ಯಾಧಿಕರಣಾಖ್ಯಂ ಕಾರಕಂ ಯಥಾಕ್ರಮಂ ನಿರೂಪ್ಯತೇ"

ಇಲ್ಲಿ ಷಷ್ಠಿಗೆ ಕಾರಕತ್ವ ವಿಧಿಸಿದಂತೆ ಕಾಣುತ್ತದೆ. ಒಂದೋ ಇಲ್ಲಿ ಸಂಸ್ಕೃತ ವ್ಯಾಕರಣಗಳ ನಿರೂಪಣೆಯ ಕುರಿತು ಹೇಳಿದ್ದನ್ನು ಅನ್ವಯಿಸಬಹುದು. ಇಲ್ಲವಾದರೆ ಭೂಷಣಕಾರನ ದೃಷ್ಟಿ ಭೇದವೆಂದು ಪರಿಗಣಿಸಬಹುದು. ಒಂದೇ ಪ್ರತಿಯಲ್ಲಿ ಈ ಮಾತು ಗೋಚರಿಸು ವುದರಿಂದ ಸಂದೇಹಕ್ಕೆಡೆಯಾಗಿದೆ. ಸಂಬಂಧಾರ್ಥವನ್ನು ಹೇಳುವಲ್ಲಿ ಷಷ್ಠಿಗೆ ಕಾರಕತ್ವ ವಿಲ್ಲದಿರುವ ಪ್ರಸ್ತಾಪವನ್ನು ಮಾಡದಿರುವುದೂ ಗಮನಾರ್ಹವಾಗಿದೆ.

### ಕಾರಕಾನುಕ್ರಮ

ಸಂಸ್ಕೃತದಲ್ಲಿ ಕಾರಕಗಳನ್ನು ಯಾವುದೇ ಒಂದು ನಿಶ್ಚಿತಕ್ರಮದಲ್ಲಿ ಹೇಳದಿರು ವುದರಿಂದ ಬೇರೆ ಬೇರೆ ಗ್ರಂಥಗಳಲ್ಲಿ ಕಾರಕಾನುಕ್ರಮ ಬೇರೆ ಬೇರೆಯಾಗಿದೆ.

### ಅಷ್ಟಾಧ್ಯಾಯಿ

ಅಪಾದಾನ, ಸಂಪ್ರದಾನ, ಕರಣ, ಅಧಿಕರಣ, ಕರ್ಮ, ಕರ್ತೃ.

### ಕಾತಂತ್ರ

ಅಪಾದಾನ, ಸಂಪ್ರದಾನ, ಅಧಿಕರಣ, ಕರಣ, ಕರ್ಮ, ಕರ್ತೃ.

### ಜೈನೇಂದ್ರ

ಅಪಾದಾನ, ಸಂಪ್ರದಾನ, ಕರಣ, ಅಧಿಕರಣ, ಕರ್ಮ, ಕರ್ತೃ

### ಸರಸ್ವತೀ ಕಂಠಾಭರಣ

ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ.

### ರೂಪಾವತಾರ

(ಪ್ರಥಮಾವಿಭಕ್ತಿ), ಕರ್ಮ, ಕರ್ತೃ, ಕರಣ, ಸಂಪ್ರದಾನ. ಅಪಾದಾನ (ಷಷ್ಠಿ) ಅಧಿಕರಣ.

### ಸಿದ್ಧಹೇಮ ಶಬ್ದಾನುಶಾಸನ

ಕರ್ತೃ,ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ.

ವಿಭಕ್ತಿಯ ಅರ್ಥವನ್ನು (ಯಾವ ಯಾವ ವಿಭಕ್ತಿ ಯಾವ ಯಾವ ಅರ್ಥದಲ್ಲಿ ಬರುತ್ತದೆ ಎಂಬುದನ್ನು)ಹೇಳುವಲ್ಲಿಯೂ ಒಂದೊಂದು ಕ್ರಮವನ್ನು ಅನುಸರಿಸಿದಂತಿದೆ. ಹೆಚ್ಚು ಕಡಮೆ ಕೆಳಗಿನಂತಿರುವುದನ್ನು ಕಾಣಬಹುದು.

**ಅಷ್ಟಾಧ್ಯಾಯಿ**

ದ್ವಿತೀಯಾ, ಚತುರ್ಥೀ, ತೃತೀಯಾ, ಪಂಚಮೀ, ಸಪ್ತಮೀ, ಪ್ರಥಮಾ, ಷಷ್ಠೀ.

**ಸರಸ್ವತಿ ಕಂಠಾಭರಣ**

ದ್ವಿತೀಯಾ, ತೃತೀಯಾ, ಷಷ್ಠೀ, ಚತುರ್ಥೀ, ಪಂಚಮೀ, ಸಪ್ತಮೀ, ಪ್ರಥಮಾ

ಕಾತಂತ್ರ ಮತ್ತು ಸಾರಸ್ವತ ಪ್ರಕ್ರಿಯೆಗಳು ಹೇಳುವುದನ್ನು ಹಿಂದೆಯೇ ನೋಡಲಾಗಿದೆ. (ಪುಟ 220)

ಕವಿರಾಜಮಾರ್ಗದಲ್ಲಿ ಕಾರಕಯುಕ್ತ ವಿಭಕ್ತ್ಯನುಕ್ರಮಕ್ಕೆ ಲಕ್ಷ್ಯಮಾತ್ರವಿದೆ (1-114). ವಿಭಕ್ತಿಗಳ ಸಂಜ್ಞೆಗಳಾಗಲಿ, ಎಲ್ಲ ಕಾರಕಗಳ ಹೆಸರುಗಳಾಗಲಿ ಉಕ್ತವಾಗಿಲ್ಲ. ಸ್ಮೃತಿಯಲ್ಲಿ ಕಾರಕಗಳನ್ನು ಹೆಸರಿಸುವಲ್ಲಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಎಂಬ ಈ ಕ್ರಮದಲ್ಲಿ ಹೇಳಲಾಗಿದೆ. ವಿಭಕ್ತ್ಯರ್ಥವನ್ನು ಹೇಳದಿರುವುದರಿಂದ ಯಾವ ಯಾವ ಕಾರಕವನ್ನು ಸೂಚಿಸಲು ಯಾವ ಯಾವ ವಿಭಕ್ತಿ ಬರುವುದೆಂಬ ವಿಚಾರವಲ್ಲಿ ಸ್ಪಷ್ಟವಾಗುವುದಿಲ್ಲ. ಸ್ವಾಮ್ಯಾದಿಗಳ ವಿವರಣೆ ಮಾತ್ರವಿದೆ. ಬಹುಶಃ ಅದಕ್ಕೆ ಕಾರಕಾರ್ಥವಿಲ್ಲದಿರುವುದರಿಂದ ಅದನ್ನು ಪ್ರತ್ಯೇಕವಾಗಿ ಹೇಳಿರಬೇಕು. ಭೂಷಣದಲ್ಲಿ ಕಾರಕಗಳನ್ನು ಮತ್ತು ಆಯಾ ಕಾರಕಾರ್ಥವನ್ನು ಕೊಡುವ ವಿಭಕ್ತಿಗಳನ್ನು ಒಟ್ಟೊಟ್ಟಿಗೆ ಹೇಳಲಾಗಿದೆ. ಹಾಗಾಗಿ ವಿಭಕ್ತಿಗಳು ಪ್ರಥಮಾ, ದ್ವಿತೀಯಾ, ತೃತೀಯಾ ಚತುರ್ಥಿ, ಪಂಚಮೀ, ಷಷ್ಠೀ, ಸಪ್ತಮೀ-ಈ ಕ್ರಮದಲ್ಲಿದ್ದರೆ ಕಾರಕಗಳು ಕರ್ಮ, ಕರ್ತೃ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ–ಈ ಕ್ರಮದಲ್ಲಿವೆ. ಅಪಾದಾನ ಮತ್ತು ಅಧಿಕರಣದ ಮಧ್ಯದಲ್ಲಿ ಸಂಬಂಧಾರ್ಥವನ್ನು ಹೇಳಲಾಗಿದೆ. ಕಾರಕಾನುಕ್ರಮದಲ್ಲಿ ದರ್ಪಣ ಸ್ಮೃತಿಯನ್ನು ಅನುಸರಿಸುತ್ತದೆ. ಆಯಾ ಕಾರಕಾರ್ಥವನ್ನು ಕೊಡುವ ವಿಭಕ್ತ್ಯನುಕ್ರಮವನ್ನು ಹೇಳುವಲ್ಲಿ ಭೂಷಣವನ್ನು ಅನುಸರಿಸುತ್ತದೆ. ಒಟ್ಟಿನಲ್ಲಿ ಭೂಷಣ ದರ್ಪಣಗಳಲ್ಲಿ ಪ್ರಥಮಾ ವಿಭಕ್ತಿಯ ಅರ್ಥಗಳಿಂದ ತೊಡಗಿ ಕರ್ಮ, ಕರ್ತೃ, ಕರಣ, ಸಂಪ್ರದಾನ ಅಪಾದಾನಗಳನ್ನು ಹೇಳಿ ಬಳಿಕ ಸಂಬಂಧಾರ್ಥವನ್ನು ತಿಳಿಸಿ ಕೊನೆಗೆ ಅಧಿಕರಣ ಕಾರಕವನ್ನು ವಿವರಿಸಲಾಗಿದೆ ಎನ್ನಬಹುದು.

ಕನ್ನಡ ವ್ಯಾಕರಣಗಳಲ್ಲಿ ಅಭಿಹಿತ ಮತ್ತು ಅನಭಿಹಿತವೆಂಬ ಕಾರಕಗಳ ಇಬ್ಬಗೆಯಾದ ವಿಂಗಡಣೆ ಇಲ್ಲದಿರುವುದು ಅವುಗಳ ಪ್ರತ್ಯೇಕತೆಯಾಗಿದೆ.

**ವಿಭಕ್ತ್ಯರ್ಥಗಳು**

ಪ್ರಥಮಾ ವಿಭಕ್ತಿ ಭೂಷಣ ದರ್ಪಣಗಳಲ್ಲಿ ಪ್ರಥಮಾ ವಿಭಕ್ತ್ಯರ್ಥದ ಕುರಿತು ಕೆಳಗಿನಂತಿದೆ.

ಭೂಷಣ : ಲಿಂಗಾರ್ಥ ವಚನ ಮಾತ್ರೇ ಪ್ರಥಮಾ. ಸೂ. 74

ದರ್ಪಣ : ಪ್ರಥಮಾ ವಿಭಕ್ತಿ ಲಿಂಗಾರ್ಥ ವಚನ ಸಂಬೋಧನದೊಳ್
ಪ್ರಭವಿಪ್ಪುದು ಸೂ. 137

ಅಷ್ಟಾಧ್ಯಾಯಿಯಲ್ಲಿ "ಪ್ರಾತಿಪದಿಕಾರ್ಥ ಲಿಂಗ ಪರಿಮಾಣ ವಚನ ಮಾತ್ರೇ ಪ್ರಥಮಾ"(2-3-46) ಎಂದು ಪ್ರಥಮಾ ವಿಭಕ್ತಿಯ ಅರ್ಥವನ್ನು ಹೇಳಿದರೆ, ಕಾತಂತ್ರದಲ್ಲಿ "ಪ್ರಥಮಾ ವಿಭಕ್ತಿ ಲಿಂಗಾರ್ಥವಚನೇ" (2-4-17) ಎಂದು ನಿರೂಪಿಸಲಾಗಿದೆ. ಕಾತಂತ್ರ ಸೂತ್ರದ ಪದಗಳನ್ನು ಸ್ಥಾನಪಲ್ಲಟಗೊಳಿಸಿ ಅಷ್ಟಾಧ್ಯಾಯಿಯ ಸೂತ್ರದಲ್ಲಿರುವ 'ಮಾತ್ರ' ಶಬ್ದವನ್ನು ಸೇರಿಸಿ ಭೂಷಣ ಸೂತ್ರವನ್ನು ಹೆಣೆದಿದೆ. ದರ್ಪಣದ ಸೂತ್ರದಲ್ಲಿ 'ಮಾತ್ರ' ಶಬ್ದವನ್ನು ಕೈಬಿಟ್ಟುದು ಅದರ ಪ್ರತ್ಯೇಕತೆ. ಸ್ಮೃತಿ ಈ ವಿಚಾರದಲ್ಲಿ ಮೌನ ತಾಳಿದೆ.

ಪಾಣಿನಿ ಹೇಳುವ ಪ್ರಾತಿಪದಿಕಾರ್ಥವೆಂದರೆ ಸತ್ತೆ (existence) (ಕಾಶಿಕಾ 2-3-46), ಲಿಂಗವೆಂದರೆ ಪುಂಸ್ತ್ರೀ ನಪುಂಸಕ ಸೂಚಕವಾದ ಲಿಂಗ (Gender), ವಚನವೆಂದರೆ ಗಣನೆ (Number), ಕಾತಂತ್ರಕಾರ ಹೇಳುವ 'ಲಿಂಗ' ಪಾಣಿನಿ ಹೇಳುವ ಪ್ರಾತಿಪದಿಕ ಮತ್ತು ಲಿಂಗ-ಎರಡರ ಅರ್ಥವನ್ನೂ ಒಳಗೊಂಡಿದೆ. ಹಾಗಾಗಿ ಮಹಾಭಾಷ್ಯದಲ್ಲಿ ಪ್ರಾತಿಪದಿಕ ಮತ್ತು ಲಿಂಗಕ್ಕೆ ಕೊಟ್ಟಿರುವ ಉದಾಹರಣೆಗಳೇ ದುರ್ಗಸಿಂಹನ ವೃತ್ತಿಯಲ್ಲಿ ಕಾಣಬರುತ್ತವೆ : ಉಚ್ಚೈಃ, ನೀಚೈಃ, ವೃಕ್ಷಃ. ಕುಂಡಮ್, ಕುಮಾರೀ ಇತ್ಯಾದಿ, ಪ್ರಾತಿಪದಿಕಾರ್ಥ (ಅಷ್ಟಾಧ್ಯಾಯಿ) ಮತ್ತು ಲಿಂಗಾರ್ಥ (ಕಾತಂತ್ರ)–ಇವೆರಡರ ಜಾಗದಲ್ಲಿ ಭೂಷಣ ದರ್ಪಣಗಳು 'ಅರ್ಥ' ಎಂಬ ಪದವನ್ನು ಬಳಸಿವೆ. ಲಿಂಗವೆಂದು ಬಳಸಿದ್ದು Gender ಎಂಬ ಅರ್ಥದಲ್ಲಾಗಿದೆ. ಈ ಗ್ರಂಥಗಳು ಪ್ರಾತಿಪದಿಕವನ್ನು 'ಲಿಂಗ'ವೆಂದು ಕರೆದರೂ ಇಲ್ಲಿ ಆ ಅರ್ಥದಲ್ಲಿ 'ಲಿಂಗ'ವನ್ನು ಬಳಸುವುದಿಲ್ಲ. "ಲಿಂಗಮೆಂಬುದು ವಸ್ತುವಿನ ಕುರುಪು ಪೇಟ್ವುದು" (ದರ್ಪಣ ಸೂ. 137ರ ವೃತ್ತಿ) ಎಂದು ಹೇಳಿ ತ್ರಿಲಿಂಗಕ್ಕೆ ಉದಾಹರಣೆಗಳನ್ನು ಕೊಟ್ಟುದೂ ಗಮನಾರ್ಹ. 'ಅರ್ಥ'ದಲ್ಲಿ ಪ್ರಥಮಾ ವಿಭಕ್ತಿಯನ್ನು ವಿಧಿಸುವಲ್ಲಿ ಚಾಂದ್ರ ಮತ್ತು ಸರಸ್ವತೀ ಕಂಠಾಭರಣದ ಪ್ರಭಾವವನ್ನು ಹೇಳಲೆಡೆಯಿದೆ :

ಚಾಂದ್ರ : ಅರ್ಥಮಾತ್ರೇ ಪ್ರಥಮಾ 2-1-93

ಸ. ಕಂ. : ಅರ್ಥಮಾತ್ರೇ ಪ್ರಥಮಾ 3-1-274

ವಚನಕ್ಕೆ ಉದಾಹರಣೆಯಾಗಿ ಮಹಾಭಾಷ್ಯ ಮತ್ತು ದುರ್ಗಸಿಂಹನ ವೃತ್ತಿಯಲ್ಲಿ "ಏಕಃ, ದ್ವೌ, ಬಹವಃ" ಎಂದಿದ್ದರೆ ಭೂಷಣ ದರ್ಪಣಗಳಲ್ಲಿ ಸಂಖ್ಯಾವಾಚಕಗಳ ಭಿನ್ನ ರೂಪಗಳನ್ನೇ ಕಾಣುತ್ತೇವೆ.

"ವಚನ ಮಾತ್ರೇ—ಒಂದಾನುಂ ಎರಡಾನುಂ"—ಭೂಷಣ

"ವಚನಕ್ಕೆ—ಒಂದು, ಎರಡು, ಮೂರು; ಒರ್ವನ್, ಇರ್ವರ್, ಮೂವರ್"—ದರ್ಪಣ

**ಸಂಬೋಧನೆ**

ಸಂಬೋಧನೆಯೆಂದರೆ ಅಭಿಮುಖೀಕರಣ. ಕಾರ್ಯಾಂತರದಲ್ಲಿ ಆಸಕ್ತನಾಗಿರುವವನ ಗಮನವನ್ನು ಸಂಬೋಧಿಸುವವನ ಕಡೆಗೆ ಸೆಳೆದುಕೊಳ್ಳುವುದು ಇದರ ಕಾರ್ಯ. ಅಂತಹ ಸಂಬೋಧನೆಯಲ್ಲಿ ಸಂಸ್ಕೃತ ವೈಯಾಕರಣರು ಪ್ರಥಮಾ ವಿಭಕ್ತಿಯನ್ನು ವಿಧಿಸುತ್ತಾರೆ,

| | | | |
|---|---|---|---|
| ಸಂಬೋಧನೇ ಚ | — | ಅಷ್ಟಾಧ್ಯಾಯೀ | 2–3–47 |
| ಆಮಂತ್ರಣೇ ಚ | — | ಕಾತಂತ್ರ | 2–4–18 |
| ಸಂಬೋಧನೇ | — | ಚಾಂದ್ರ | 2–1–94 |
| ಆಮಂತ್ರಣೇ ಚ | — | ಸಾ. ಪ್ರ: ಕಾರಕಪ್ರಕ್ರಿಯೆ | —2 |

ಪಾಣಿನಿ ಪ್ರಥಮಾ ವಿಭಕ್ತ್ಯಂತ ಸಂಬೋಧನ ರೂಪಕ್ಕೆ "ಆಮಂತ್ರಿತ" (ಸೂ. 2-3-48) ಎಂಬ ಸಂಜ್ಞೆಯನ್ನು ಕೊಟ್ಟು ಆಮಂತ್ರಿತ ಏಕವಚನ ರೂಪವನ್ನು "ಸಂಬುದ್ಧಿ" (ಸೂ. 2–3–49) ಎಂದಿರುವನು. ಪಾಣಿನಿ ಸಂಬೋಧನೆಯೆನ್ನುವಲ್ಲಿ ಕಾತಂತ್ರಕಾರ "ಆಮಂತ್ರಣ"ವೆಂದಿರುವನು.

ಸಂಸ್ಕೃತ ವೈಯಾಕರಣರನ್ನು ಅನುಸರಿಸಿ ಕನ್ನಡ ವೈಯಾಕರಣರೂ ಸಂಬೋಧನೆಯಲ್ಲಿ ಪ್ರಥಮೆಯನ್ನು ವಿಧಿಸುತ್ತಾರೆ.

"ಆದಿಯುದಾಮಂತ್ರಣದೊಳ್ ನೆಗಳ್ಗುಂ" ಸ್ಮೃತಿ. ಸೂ. 28.

ಸೂ. "ಸಂಬೋಧನೇ ಚ" ಭೂಷಣ ಸೂ. 75.

ವೃತ್ತಿ "ಸಂಬೋಧನಮಭಿಮುಖೀಕರಣಂ. .ತದರ್ಥೇಽಪಿ ಪ್ರಥಮಾ ವಿಭಕ್ತಿರ್ಭವತಿ"

"ಪ್ರಥಮಾ ವಿಭಕ್ತಿ........ಸಂಬೋಧನದೊಳ್ ಪ್ರಭವಿಪ್ಪುದು"

ದರ್ಪಣ ಸೂತ್ರ 137

'ಆಮಂತ್ರಣ' ಎಂಬ ಸಂಜ್ಞೆಯನ್ನು ಬಳಸುವಲ್ಲಿ ಸ್ಮೃತಿ ಕಾತಂತ್ರಕ್ಕೆ ಋಣಿಯಾದರೆ ಭೂಷಣ ಅಷ್ಟಾಧ್ಯಾಯಿಯಿಂದ ನೇರವಾಗಿ ಸೂತ್ರವನ್ನು ಎತ್ತಿಕೊಂಡಿದೆ. ಭೂಷಣದ ವೃತ್ತಿಯಲ್ಲಿ ಬರುವ "ಸಂಬೋಧನಮಭಿಮುಖೀಕರಣಂ" ಎಂಬ ವಾಕ್ಯದ ಮೇಲೆ ಜೈನೇಂದ್ರದ ಮಹಾವೃತ್ತಿಯ ಪ್ರಭಾವವಿದ್ದಂತಿದೆ.[25]

"ಸಂಬೋಧನಮಭಿಮುಖೀಕರಣಂ" ಜೈನೇಂದ್ರ 1–4–55ರ ಮಹಾವೃತ್ತಿ. ಭೂಷಣದ ಮಾತನ್ನು ದರ್ಪಣಕಾರ ವೃತ್ತಿಯಲ್ಲಿ ಕನ್ನಡಿಸಿರುವನು.

"ಸಂಬೋಧನಮೆಂಬುದಭಿಮುಖೀಕರಣಮಂ ಪೇಳ್ವುದು" ಸೂ. 136 ವೃತ್ತಿ.

ದರ್ಪಣದಲ್ಲಿ "ಸಂಬೋಧನೆ" ಎಂಬ ಸಂಜ್ಞೆಯನ್ನು ಬಳಸಿದರೂ ವಿಭಕ್ತಿಗಳನ್ನು ನಿರೂಪಿಸುವಲ್ಲಿ "ಆಮಂತ್ರಣ" (ಸೂ. 134) ಎಂಬ ಸಂಜ್ಞೆಯನ್ನು ಬಳಸಲಾಗಿದೆ, ಮಾತ್ರವಲ್ಲ, ಸಂಬುದ್ಧಿಯೆಂಬ ಸಂಜ್ಞೆಯನ್ನು ಅದರ ಮೂಲಾರ್ಥದಲ್ಲಿ ಬಳಸಲಾಗಿದೆ.

"ಸಂಬುದ್ಧಿಯೊಳ್ ಹ್ರಸ್ವ ಧೀರ್ಘಮೆಂಬೆರಡು ಕಾಕುಗಳುಮಂ
ವಿಕಲ್ಪದಿಂ ಪೇಟ್ವರ್" (ದರ್ಪಣ ಸೂ. 134ರ ವೃತ್ತಿ)

ಅಂತೂ ದರ್ಪಣವು ಅಷ್ಟಾಧ್ಯಾಯಿ ಮತ್ತು ಕಾತಂತ್ರ–ಎರಡು ವ್ಯಾಕರಣಗಳ ಸಂಜ್ಞೆಗಳನ್ನೂ ಸ್ವೀಕರಿಸಿ ನಿಭಾಯಿಸಿದೆ.

ಭೂಷಣ ದರ್ಪಣಗಳು ಪ್ರಥಮಾ ವಿಭಕ್ತಿಯ ಅರ್ಥಗಳಲ್ಲಿ ಕರ್ತ್ರರ್ಥವನ್ನು ಸೂಚಿಸದಿರುವುದು ಗಮನಾರ್ಹವಾಗಿದೆ.

## ಕರ್ಮ

ಕ್ರಿಯಾ ಪರಿಣಾಮವನ್ನು ಪಡೆಯುವುದು ಕರ್ಮವೆನಿಸುವುದು. ಈ ಕರ್ಮವನ್ನು ಪಾಣಿನಿ 'ಕರ್ತುರೀಪ್ಸಿತತಮಂ ಕರ್ಮ' (1–4–49) ಮತ್ತು "ತಥಾಯುಕ್ತಂ ಚಾನೀಪ್ಸಿತಂ" (1–4–50) ಎಂದು ಹೇಳಿದರೆ ಕಾತಂತ್ರಕಾರ "ಯತ್‌ಕ್ರಿಯತೇ ತತ್ಕರ್ಮ" (2–4–13) ಎಂದಿದ್ದಾನೆ.

ಕರ್ಮದ ಕುರಿತು ಸ್ಮೃತಿಯಲ್ಲಿ ಪ್ರಸಾಪವಿಲ್ಲ. ಭೂಷಣ ದರ್ಪಣಗಳ ಆ ಸಂಬಂಧವಾದ ನಿರೂಪಣೆ ಕೆಳಗಿನಂತಿದೆ.

ಭೂಷಣ : "ಯತ್ಕ್ರಿಯತೇ ತತ್ಕರ್ಮ ಉಚ್ಯತೇ" ಸೂ. 76ರ ವೃತ್ತಿ.

ದರ್ಪಣ : ಪ್ರವಿದಿತ ತತ್ಕರ್ಮಂ ಕರ್ತೃವಿನೀಪ್ಸಿತ ತಮ ಪದಾರ್ಥಂ
ಸೂತ್ರ 138.

ಭೂಷಣಕಾರ ಕಾತಂತ್ರದ ಸೂತ್ರವನ್ನೆತ್ತಿಕೊಂಡು ಅದನ್ನು ವೃತ್ತಿಯಾಗಿ ಮಾಡಿಕೊಂಡರೆ ದರ್ಪಣಕಾರ ಪಾಣಿನಿಯ ಸೂತ್ರವನ್ನು (1–4–49) ಕನ್ನಡಿಸಿದ್ದಾನೆ.

## ಕರ್ಮಪ್ರದೇಶ

ಭೂಷಣಕಾರ "ಕರ್ಮಣಿ ದ್ವಿತೀಯಾ" (ಸೂ. 76) ಎಂದು ಪಾಣಿನಿಯ ಸೂತ್ರವನ್ನು (2–3–2) ಯಥಾವತ್ತಾಗಿ ಎತ್ತಿಕೊಂಡರೆ ಅದನ್ನೇ ದರ್ಪಣಕಾರ "ದ್ವಿತೀಯಾ ವಿಭಕ್ತಿ ಕರ್ಮದೊಳನಾಕುಲಂ ವರ್ತಿಸುಗುಂ" (ಸೂ. 137) ಎಂದು ಕನ್ನಡಕ್ಕೆ ಅನುವಾದಿಸಿದ್ದಾನೆ.

## ಕರ್ಮಪ್ರಭೇದಗಳು

ಭರ್ತೃಹರಿ ಹೇಳುವಂತೆ ಕರ್ಮ ಮೂರು ವಿಧ (ವಾಕ್ಯಪದೀಯ 3–1–45). ನಿರ್ವರ್ತ್ಯ, ವಿಕಾರ್ಯ ಮತ್ತು ಪ್ರಾಪ್ಯ. ಜೈನೇಂದ್ರದ ಮಹಾವೃತ್ತಿಯಲ್ಲಿ ಹೇಳುವಂತೆ ಕರ್ಮವು "ಪ್ರಾಪ್ಯ, ವಿಷಯಭೂತ, ನಿರ್ವರ್ತ್ಯ, ವಿಕ್ರಿಯಾತ್ಮಕ, ಈಪ್ಸಿತ, ಅನೀಪ್ಸಿತ" (ಜೈನೇಂದ್ರ 1-2-119ರ ಮಹಾವೃತ್ತಿ) ಎಂಬ ಪ್ರಭೇದಗಳನ್ನೊಳಗೊಂಡಿದೆ. ಕನ್ನಡ

ವೈಯಾಕರಣರು ಬಹುಶಃ ಮೇಲಿನ ಗ್ರಂಥಗಳಿಂದ ಪ್ರಭಾವಿತರಾಗಿ ಚತುರ್ವಿಧವಾದ ಕರ್ಮಗಳನ್ನು ಹೇಳುತ್ತಾರೆ.

ಭೂಷಣ : "ತದೇಕಂ ನಿರ್ವರ್ತ್ಯಂ ವಿಕಾರ್ಯಂ ಪ್ರಾಪ್ಯಂ
ವೈಷಯಿಕಮಿತಿ ಚತುರ್ಧಾಭಿದ್ಯತೇ" (ಸೂ. 79ರ ವೃತ್ತಿ)

ದರ್ಪಣ : "ಆದುಂ ನಾಲ್ಕುಂ ಭೇದವನಾಳ್ದಿರ್ಕುಂ ನಿರ್ವರ್ತ್ಯ
ವಿಕಾರ್ಯಂ ಪ್ರಾಪ್ಯ ವೈಷಯಿಕಮೆಂದೆತ್ತಂ" ಸೂ. 138

ಎರಡೂ ಗ್ರಂಥಗಳಲ್ಲಿ ನಾಲ್ಕು ಪ್ರಭೇದಗಳ ಹೆಸರು ಸಮಾನವಾಗಿದೆ. ಪಾಣಿನಿ ಸಂಪ್ರದಾಯದಲ್ಲಿ ಅಧಿಕರಣದ ಒಂದು ಭೇದ ವೈಷಯಿಕ. ಕನ್ನಡ ವೈಯಾಕರಣರು ಜೈನೇಂದ್ರದ ಮಹಾವೃತ್ತಿಯಲ್ಲಿ ಹೇಳುವ ವಿಷಯಭೂತವನ್ನೇ "ವೈಷಯಿಕ" ವೆಂದು ಮಾಡಿಕೊಂಡಿರಬೇಕೆಂದು ತೋರುತ್ತದೆ. ರೈಸ್ ಸಂಪಾದಿಸಿದ ಭೂಷಣದಲ್ಲಿ ಮಾತ್ರ ಕರ್ಮವನ್ನು ಪಂಚವಿಧವೆಂದು ಹೇಳಲಾಗಿದೆ.[36] ಇಲ್ಲಿ ಹೇಳುವ 'ವಿಷಯ ಭೂತ' ವೈಷಯಿಕದ ಸ್ಥಾನದಲ್ಲಿ ಬಂದಿರುವುದು ಮೇಲಿನ ಊಹೆಗೆ ಪೋಷಕವಾಗಿದೆ.

ಅಷ್ಟಾಧ್ಯಾಯಿಯನ್ನನುಸರಿಸಿ ಭೂಷಣ ದರ್ಪಣಗಳು ಈಪ್ಸಿತ ಅನೀಪ್ಸಿತಗಳೆಂದು ಕರ್ಮಭೇದಗಳನ್ನು ಹೇಳಿವೆ.

"ತಚ್ಚೇಪ್ಸಿತಮನೀಪ್ಸಿತಮಿತಿ ದ್ವಿಧಾ ಭವತಿ"—ಭೂಷಣ 76ರ ವೃತ್ತಿ

"ತೊಡರ್ದಿಷ್ಟಾನಿಷ್ಟದೊಳ್............ದ್ವಿತೀಯೆಯ" ದರ್ಪಣ ಸೂತ್ರ 139

ಕಾಲಾಧ್ವಗಳಿಗೆ ಅತ್ಯಂತ ಸಂಯೋಗ ತೋರುತ್ತಿರಲು ದ್ವಿತೀಯಾ ವಿಭಕ್ತಿ ಬರುವುದೆಂದು ಸಂಸ್ಕೃತ ವ್ಯಾಕರಣಗಳ ಹೇಳಿಕೆ. ಅತ್ಯಂತ ಸಂಯೋಗವೆಂದರೆ ನಿರಂತರ ಸಂಬಂಧ. "ಕ್ರಿಯಾಗುಣದ್ರವ್ಯೈಃ ಸಾಕಲ್ಯೇನ ಕಾಲಾಧ್ವನೋಃ ಸಂಬಂಧೋ ಅತ್ಯಂತ ಸಂಯೋಗಃ" (ಕಾಶಿಕಾ 2-3-5) ಎಂಬ ವಿವರಣೆಯಲ್ಲಿದು ಸ್ಪಷ್ಟವಾಗಿದೆ.

ಅಷ್ಟಾಧ್ಯಾಯಿ : "ಕಾಲಾಧ್ವನೋರತ್ಯಂತ ಸಂಯೋಗೇ" 2-3-5

ಜೈನೇಂದ್ರ : "ಕಾಲಾಧ್ವನ್ಯ ವಿಚ್ಛೇದೇ" 1-4-4

ಸಾರಸ್ವತ ಪ್ರಕ್ರಿಯೆ : "ಕಾಲಾಧ್ವನೋರ್ನೈರಂತರ್ಯೇ" ಕಾರಕ ಪ್ರಕ್ರಿಯೆ 5

ಭೂಷಣಕಾರ ಅಷ್ಟಾಧ್ಯಾಯಿ ಮತ್ತು ಜೈನೇಂದ್ರದ ಸೂತ್ರಗಳ ಪೂರ್ವೋತ್ತರಾರ್ಧಗಳನ್ನು ಜೊತೆಗೂಡಿಸಿ "ಕಾಲಾಧ್ವನೋರವಿಚ್ಛೇದೇ" (ಸೂ. 77) ಎಂಬ ಸೂತ್ರವನ್ನು ಹೆಣೆದಿರುವನು. ಅದನ್ನೇ ದರ್ಪಣಕಾರ 'ಎಡೆಯುಡುಗದೆ ಕಾಲಾಧ್ವದೊಳ್ ದ್ವಿತೀಯೆಯು" ಎಂದು ಕನ್ನಡಕ್ಕೆ ಅನುವಾದಿಸಿದ್ದಾನೆ. ಆದರೆ ವೃತ್ತಿಯಲ್ಲಿ ಸ್ವಲ್ಪ ಬದಲಾವಣೆಯಿದೆ.

"ಇಷ್ಟದೊಳಂ ಅನಿಷ್ಟದೊಳಂ ಕಾಲದೊಳಂ ಅಧ್ವದೊಳಂ ಎಡೆವಱಿಯದೆ ದ್ವಿತೀಯೆಯಕ್ಕುಂ" (ಸೂ. 139ರ ವೃತ್ತಿ). ಇಲ್ಲಿ 'ಎಡೆವಱಿಯದೆ' ಎಂಬುದು ಇಷ್ಟಾ

ನಿಷ್ಟಕಾಲಾಧ್ವ ನಾಲ್ಕಕ್ಕೂ ಅನ್ವಯವಾಗುತ್ತದೆ. ಆದರೆ ಸೂತ್ರದಲ್ಲಿ ಅದು ಕಾಲಾಧ್ವಕ್ಕಷ್ಟೇ ಸೀಮಿತವಾಗಿದೆ.

ಸಂಸ್ಕೃತದಲ್ಲಿ ದ್ವಿಕರ್ಮಕವಾದ 'ದುಹ್' ಇತ್ಯಾದಿ ಕೆಲವು ಧಾತುಗಳಿವೆ. ಅಪಾದಾನಾದಿ ಕಾರಕಗಳಿಂದ ಗೌಣಕರ್ಮ ಅಕಥಿತವಾದರೆ ಅಲ್ಲಿ ದ್ವಿತೀಯಾ ವಿಭಕ್ತಿ ಬರುವುದೆಂದು ಮಹಾಭಾಷ್ಯದಲ್ಲಿ (1-4-51)ವಿವರಣೆಯಿದೆ. "ದ್ವಿಕರ್ಮಕ" ಎಂಬ ಸಂಜ್ಞೆಯನ್ನೂ ಅಲ್ಲಿ ಕಾಣಬಹುದು.

ದೋಹನಾದಿಗಳಲ್ಲಿ ದ್ವಿಕರ್ಮದ ವಿಚಾರ ದರ್ಪಣದಲ್ಲಿ ಮಾತ್ರ ಪ್ರಸ್ತಾಪಿತವಾಗಿದೆ. "ಪಶುವು ಪಾಲು ಕರೆದು" ಎಂಬ ಉದಾಹರಣೆ ಮಹಾಭಾಷ್ಯದಲ್ಲಿ ಬರುವ "ಗಾಂ ದೋಗ್ಧಿ ಪಯಃ" ಎಂಬ ವಾಕ್ಯದ ಅನುವಾದವಾಗಿದೆ. ಸಂಸ್ಕೃತ ವಾಕ್ಯರಚನೆಯನ್ನು ಕಣ್ಣುಮುಚ್ಚಿ ಅನುಸರಿಸಿರುವುದನ್ನಿಲ್ಲಿ ಕಾಣಬಹುದು.

## ಕರ್ತೃ

ಕ್ರಿಯೆಯಿಂದ ತಿಳಿಯುವ ವ್ಯಾಪಾರಾಶ್ರಯವಾದ ವ್ಯಕ್ತಿಯೇ ಕರ್ತೃ. ಕರ್ತೃ ಕಾರಕದ ಬಗ್ಗೆ ಪಾಣಿನಿ "ಸ್ವತಂತ್ರಃ ಕರ್ತಾ" (1-4-54) ಎಂದು ಹೇಳಿದರೆ ಕಾತಂತ್ರಕಾರ "ಯಃ ಕರೋತಿ ಸಕರ್ತಾ" (2-4-14) ಎಂದು ಹೇಳುತ್ತಾನೆ. "ಯಃ ಕ್ರಿಯಾಂ ಕರೋತಿ ಸ ಕರ್ತಾ" ಎಂಬ ಭೂಷಣಕಾರನ ವಿವರಣೆಯ ಮೇಲೆ ಕಾತಂತ್ರದ ಮೇಲಿನ ಸೂತ್ರದ ಪ್ರಭಾವ ಕಣ್ಣೊತ್ತಾಗಿದೆ. ದರ್ಪಣಕಾರ ಕರ್ತೃಕಾರಕವನ್ನು ವಿವರಿಸದೆ ಹೋಗುತ್ತಾನೆ.

## ಕರಣ

ಕ್ರಿಯೆಯನ್ನು ನಿರ್ವಹಿಸಲು ಯಾವುದು ಸಾಧನವೋ ಅದಕ್ಕೆ ಕರಣ ಎಂಬ ಸಂಜ್ಞೆ. ಅದನ್ನೇ "Cause associated with action" (Ph. S G. p. 45) ಎಂದು ವಿವರಿಸುತ್ತಾರೆ. ಅಷ್ಟಾಧ್ಯಾಯಿ, ಜೈನೇಂದ್ರ, ಸಿದ್ಧಹೇಮ ಶಬ್ದಾನುಶಾಸನಗಳಲ್ಲಿ ಒಮ್ಮತದಿಂದ "ಸಾಧಕತಮಂ ಕರಣಂ" (ಅಷ್ಟಾಧ್ಯಾಯಿ 1-4-42; ಜೈನೇಂದ್ರ 1-2-113. ಸಿ.ಹೇ.ಶ. 2-2-24) ಎಂದು ಕರಣವನ್ನು ವಿವೇಚಿಸಲಾಗಿದೆ. ಕಾತಂತ್ರವಲ್ಲಿ "ಯೇನ ಕ್ರಿಯತೇ ತತ್ ಕರಣಂ"(2-4-12) ಎಂದಿದೆ. ಭೂಷಣಕಾರ "ಸಾಧಕತಮಂ ಕರಣಂ" ಎಂಬುದನ್ನೇ ಯಥಾವತ್ತಾಗಿ ಎತ್ತಿಕೊಂಡು ವೃತ್ತಿಯಲ್ಲಿ ಹೇಳುತ್ತಾನೆ. ಅಲ್ಲಿಯ ಸೂತ್ರ, ಭೂಷಣದಲ್ಲಿ ವೃತ್ತಿ; ಅಷ್ಟೇ ಅಂತರ. ದರ್ಪಣಕಾರ ಇಲ್ಲೂ ಮೌನವನ್ನು ಧರಿಸಿದ್ದಾನೆ.

## ಕರ್ತೃಕರಣ ಪ್ರದೇಶ

ಪಾಣಿನಿ "ಕರ್ತೃಕರಣಯೋಸ್ತೃತೀಯಾ" (2-3-18) ಎಂದು ಕರ್ತೃ ಮತ್ತು

ಕರಣಾರ್ಥದಲ್ಲಿ ತೃತೀಯಾ ವಿಭಕ್ತಿಯನ್ನು ವಿಧಿಸಿದರೆ ಕಾತಂತ್ರಕಾರ ಅದಕ್ಕೆ ಒತ್ತು ಕೊಡುತ್ತಾನೆ (2-4-19, 2-4-33). ಭೂಷಣಕಾರ ಪಾಣಿನಿ ಸೂತ್ರವನ್ನು ಯಥಾವತ್ತಾಗಿ ಎತ್ತಿಕೊಂಡಿದ್ದಾನೆ (ಸೂತ್ರ 78). ಲಕ್ಷ್ಯಗಳನ್ನು ಕೊಡುವಲ್ಲಿ ಕಾಶಿಕಾವೃತ್ತಿಗೆ ಋಣಿಯಾಗಿದ್ದಾನೆ. ಕಾಶಿಕಾದಲ್ಲಿ "ದೇವದತ್ತೇನ ಕೃತಂ", "ಯಜ್ಞದತ್ತೇನ ಭುಕ್ತಂ", "ಪರಶುನಾ ವಿನತ್ತಿ", ಎಂಬ ಉದಾಹರಣೆಗಳಿದ್ದರೆ, ಭೂಷಣದಲ್ಲಿ "ದೇವದತ್ತನಿಂ ಮಾಡಲ್ಪಟ್ಟುದು, ಯಜ್ಞಮಿತ್ರನಿಂ ಬೇಡಲ್ಪಟ್ಟುದುಂ, ಪರಶುವಿಂ ಕಡಿದುಂ" ಮೊದಲಾದ ವಾಕ್ಯಗಳು ಉದಾಹೃತವಾಗಿವೆ. ದುರ್ಗಸಿಂಹನ ವೃತ್ತಿಯಲ್ಲೂ "ದೇವದತ್ತೇನ ಕೃತಂ" ಬರುತ್ತದೆ.

"ಹೇತು" ಎಂದರೆ ಕಾರಣ ಅಥವಾ ನಿಮಿತ್ತ. "Anything capable of accomplishing a desired object is called 'hetu' (A.O.P. p. 286)" ಎಂಬುದಾಗಲಿ "By 'hetu' is meant the material cause. In the grammatical conception of 'hetu' we should remember there is no room for action (Ph. S. G. p. 45)" ಎಂಬ ವಿವರಣೆಯಾಗಲಿ ಹೇತುವಿನ ನಿಜ ಸ್ವರೂಪದ ಪರಿಚಯ ಮಾಡಿಕೊಡುತ್ತದೆ. ಕರಣಕ್ಕೂ ಹೇತುವಿಗೂ ಸ್ವಲ್ಪ ಅಂತರವಿದೆ. ಕರಣವೆಂದರೆ ಉಪಕರಣ, ಕ್ರಿಯೆಯ ಮುಖ್ಯ ಸಾಧನ. ಕ್ರಿಯಾಫಲ ನಿಷ್ಪತ್ತಿಯಾಗುವ ವರೆಗೆ ಕರ್ತೃವಿನೊಡನೆ ಅದು ಸಹಕಾರಿಯಾಗಿರುತ್ತದೆ. ಆದರೆ ಕ್ರಿಯೆಗೆ ನಿಮಿತ್ತ ವಾದುದು ಹೇತು. ಕನ್ನಡ ವ್ಯಾಕರಣಗಳಲ್ಲಿ ಹೇತುವಿನ ವಿವರಣೆ ಭೂಷಣದಲ್ಲಿ ಮಾತ್ರ ಕಾಣಸಿಕೊಳ್ಳುತ್ತದೆ.

"ಹೇತುರ್ನಿಮಿತ್ತಂ" ಭೂಷಣ ಸೂತ್ರ 79ರ ವೃತ್ತಿ.

ಹೇತ್ವರ್ಥದಲ್ಲಿ ತೃತೀಯೆ ಬರುವುದೆಂದು ಭೂಷಣ ಹೇಳುವಲ್ಲಿ (ಸೂತ್ರ 79), ಆದು ಅಷ್ಟಾಧ್ಯಾಯಿ ಮತ್ತು ಕಾತಂತ್ರಕ್ಕೆ ಋಣಿಯಾಗಿರುವುದು ಸುಸ್ಪಷ್ಟ.

ದರ್ಪಣಕಾರ ಕರ್ತೃ ಕರಣ ಹೇತುಗಳಲ್ಲಿ ಒಂದೇ ಮಾತಿನಿಂದ ತೃತೀಯೆಯನ್ನು ವಿಧಿಸುತ್ತಾನೆ.

"ತೃತೀಯೆ ಪೇಟಲ್ಪಡೆಗುಂ ಸಲೆ ಕರ್ತೃಕರಣ ಹೇತು ಸ್ಥಿತಿಯೊಳ್"

ಸೂತ್ರ 139

ಸಹಾರ್ಥದಲ್ಲಿ ಪಾಣಿನಿ ಮೊದಲಾದವರು ತೃತೀಯೆಯನ್ನು ಹೇಳುತ್ತಾರೆ.

"ಸಹಯುಕ್ತೇ ಪ್ರಧಾನೇ" ಅಷ್ಟಾಧ್ಯಾಯಿ 2-3-19
"ತೃತೀಯಾ ಸಹಯೋಗೇ" ಕಾತಂತ್ರ 2-4-29
"ಸಹಾರ್ಥಯೋಗೇ" ಸ. ಕಂ. 3-1-220
"ಸಹಾರ್ಥೇ" ಸಿ. ಹೇ. ಶ. 2-2-45

ಈ ಕುರಿತು ದರ್ಪಣದಲ್ಲಿ ಮಾತ್ರ ಪ್ರಸ್ತಾಪವಿದೆ. "ಸಂಯೋಗದೊಳಂ ಉಂಟು"(ಸೂತ್ರ 139ರ ಪ್ರಯೋಗ) ಎಂದು ಹೇಳಿ "ಸಂಗಡದಿಂ ಬಂದಂ" ಎಂದು ದರ್ಪಣ ಉದಾಹರಿಸಿದೆ.

## ಸಂಪ್ರದಾನ

ಸಂಸ್ಕೃತದಲ್ಲಿ ನಿರ್ವಚಿಸುವಂತೆ "ಸಂಪ್ರದೀಯಂತೇ ಅಸ್ಮೈ ಇತಿ" ಎಂದು ವಸ್ತುವನ್ನು ಪಡೆಯುವ ಪಾತ್ರವು "ಸಂಪ್ರದಾನ" (A. O. P. 1-4-32ರ ವಿವರಣೆ) ಎಂಬ ಸಂಜ್ಞೆಯನ್ನು ಹೊಂದುತ್ತದೆ. ಸಂಪ್ರದಾನದ ಕುರಿತು ಪಾಣಿನಿ ಮೊದಲಾದವರ ವಿವರಣೆ ಕೆಳಗಿನಂತಿದೆ.

"ಕರ್ಮಣಾಯಮಭಿಪ್ರೈತಿ ಸ ಸಂಪ್ರದಾನಮ್" ಅಷ್ಟಾಧ್ಯಾಯಿ 1-4-32
"ಯಸ್ಮೈದಿತ್ಸಾರೋಚತೇ ಧಾರಯತೇ ವಾ ತತ್ ಸಂಪ್ರದಾನಮ್"
ಕಾತಂತ್ರ 2-4-10
"ಕರ್ಮಣೋಪೇಯಃ ಸಂಪ್ರದಾನಮ್" ಜೈನೇಂದ್ರ 1-2-110
"ಕರ್ಮಾಭಿಪ್ರೇಯಃ ಸಂಪ್ರದಾನಮ್" ಸಿ. ಹೇ. ಶ. 2-2-25

ಈ ನಿರೂಪಣೆಗಳ ಹಿನ್ನೆಲೆಯಲ್ಲಿ ಭೂಷಣವು "ಕರ್ಮಣೋ ವಿಷಯಂ ಭೂತತ್ವೇನ ವಿವಕ್ಷಿತಂ ಸಂಪ್ರದಾನಂ" (ಸೂತ್ರ 80ರ ವೃತ್ತಿ) ಎಂದು ಹೇಳಿದರೆ ದರ್ಪಣವು "ಸಂಪ್ರದಾನವೆಂಬುದಾವುದಾನೊಂದು ವಸ್ತುವನೀಸಿಕೊಂಬ ಪಾತ್ರಂ" (ಸೂತ್ರ 140-41ರ ವೃತ್ತಿ) ಎಂದು ಹೇಳುತ್ತದೆ. ಸಂಪ್ರದಾನದೊಂದಿಗೆ ಸಂಬಂಧವುಳ್ಳ ಕರ್ಮವನ್ನು ಬಿಟ್ಟುದು ದರ್ಪಣದ ಪ್ರತ್ಯೇಕತೆಯಾಗಿದೆ.

## ಸಂಪ್ರದಾನ ಪ್ರದೇಶ

ಸಂಪ್ರದಾನಾರ್ಥದಲ್ಲಿ ಚತುರ್ಥೀ ವಿಭಕ್ತಿ ಬರುವುದೆಂದು ಪಾಣಿನ್ಯಾದಿಗಳ ಮತ

"ಚತುರ್ಥೀ ಸಂಪ್ರದಾನೇ" ಅಷ್ಟಾಧ್ಯಾಯಿ 2-3-13
"ಸಂಪ್ರದಾನೇ ಚತುರ್ಥೀ" ಚಾಂದ್ರ 2-1-73
"ಸಂಪ್ರದಾನೇಽಪ್" ಜೈನೇಂದ್ರ 1-4-23
"ಚತುರ್ಥೀ ಸಂಪ್ರದಾನೇ" ಸ. ಕಂ. 2-1-230

ಕಾತಂತ್ರದಲ್ಲೂ ಇದೇ ಅಭಿಪ್ರಾಯ ವ್ಯಕ್ತವಾಗಿದೆ (ಸೂ. 2-4-19). ಭೂಷಣವು ಜೈನೇಂದ್ರ ಚಾಂದ್ರಗಳನ್ನನುಸರಿಸಿ "ಸಂಪ್ರದಾನೇ ಚತುರ್ಥೀ" (ಸೂ. 80) ಎಂದು ಹೇಳಿದರೆ ದರ್ಪಣವು "ನುತ ಸಂಪ್ರದಾನ ರೂಢಂ ಚತುರ್ಥೀ" (ಸೂ. 140) ಎಂದು ಕನ್ನಡಿಸಿದೆ.

**ಚತುರ್ಥಿಯ ಅರ್ಥಾಭಿವ್ಯಕ್ತಿ**

ಪಾಣಿನಿ ಮೊದಲಾದ ಸಂಸ್ಕೃತ ವೈಯಾಕರಣರ ಅಭಿಮತದಂತೆ ಕೆಳಗಿನ ಸಂದರ್ಭಗಳಲ್ಲಿ ಚತುರ್ಥೀ ವಿಭಕ್ತಿ ವ್ಯವಹರಿಸುತ್ತದೆ.

1. "ರುಚ್" (to like)ಎನ್ನುವ ಧಾತು ಹಾಗೂ ಅದರ ಸಮಾನಾರ್ಥದ ಧಾತುಗಳಿಂದ ನಿರ್ಮಾಣಗೊಂಡ ಕ್ರಿಯಾಪದಗಳಿದ್ದು ಅಲ್ಲಿ ಅದರಿಂದ ಯಾರಿಗೆ ರುಚಿಯಾದಂತೆ ಹೇಳಲಾಗುತ್ತದೋ ಅದನ್ನು ಹೇಳುವ ನಾಮಕ್ಕೆ ಚತುರ್ಥೀ ಬರುವುದು.

2. ಕ್ರಿಯಾಪದಗಳು ಕ್ರೋಧ, ದ್ರೋಹ, ಈರ್ಷ್ಯೆ, ಅಸೂಯೆಗಳನ್ನು ಹೇಳುವವಾಗಿದ್ದು ಯಾರ ಬಗ್ಗೆ ಅದು ಹೇಳಲಾಗುತ್ತದೋ ಅವರನ್ನು ಸೂಚಿಸುವ ನಾಮಕ್ಕೆ ಚತುರ್ಥೀ ಬರುವುದು.

3. ನಮಃ ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ, ವಷಟ್ ಎಂಬ ಶಬ್ದಗಳನ್ನು ಬಳಸುವಲ್ಲಿ ಅದು ಯಾರಿಗೆ ಸಲ್ಲುವುದೋ ಅವರನ್ನು ಸೂಚಿಸುವ ನಾಮಕ್ಕೆ ಚತುರ್ಥೀ ಬರುತ್ತದೆ.

4. ಪ್ರಾಣಿವರ್ಗವನ್ನು ಬಿಟ್ಟುಳಿದವರ ಮೇಲೆ ಅನಾದರವನ್ನು ಸೂಚಿಸಲು "ಮನ್ಯ" ಎಂಬ ಕ್ರಿಯೆಯನ್ನು ಬಳಸುವಲ್ಲಿ ಅನಾದರಿತರನ್ನು ಹೇಳುವ ಪದಕ್ಕೆ ಚತುರ್ಥಿ ವಿಭಕ್ತಿ ಬರುವುದು.

5. ಮಹಾಭಾಷ್ಯದಲ್ಲಿ "ಹಿತಯೋಗೇಚ" (2-3-13) ಎಂದು ಹಿತವನ್ನು ಹೇಳುವಲ್ಲಿ ಅದು ಯಾವುದಕ್ಕೆ ಸಂಬಂಧಿಸಿದುದೋ ಅದನ್ನು ಸೂಚಿಸುವ ನಾಮಕ್ಕೆ ಚತುರ್ಥೀ ಬರುವುದಾಗಿ ಹೇಳಲಾಗಿದೆ.

6. ಹೇಮಚಂದ್ರನು "ಹೇತ್ವರ್ಥೈ ತೃತೀಯಾದ್ಯಾ" (2-2-118) ಎಂಬ ಸೂತ್ರದಲ್ಲಿ ಹೇಳುವಂತೆ ಹೇತ್ವರ್ಥದಲ್ಲಿ ಚತುರ್ಥೀ ವಿಭಕ್ತಿಯೂ ಬರುತ್ತದೆ.

ಮೇಲಿನ ಅಭಿಪ್ರಾಯಗಳಲ್ಲಿ ಹೆಚ್ಚಿನವುಗಳನ್ನು ಕನ್ನಡ ವ್ಯಾಕರಣಗಳು ಕೆಲವು ಬದಲಾವಣೆಗಳೊಂದಿಗೆ ಸ್ವೀಕರಿಸಿವೆ. ಭೂಷಣ ಮುಖ್ಯವಾಗಿ ಅಷ್ಟಾಧ್ಯಾಯಿಯ ಸೂತ್ರಗಳನ್ನೇ ಅಲ್ಪ ಬದಲಾವಣೆಗಳೊಂದಿಗೆ ತನ್ನದಾಗಿಸಿದೆ.

| ಅಷ್ಟಾಧ್ಯಾಯಿ | ಭೂಷಣ |
|---|---|
| ರುಚ್ಯರ್ಥಾನಾಂ ಪ್ರೀಯಮಾಣಃ 1-4-33 | "ರುಚಿಹಿತೇರ್ಷ್ಯಾ ಭಯೇಷುಚ ಸೂ. 81 |
| ಕ್ರುಧದ್ರುಹೇರ್ಷ್ಯಾ....ಯಂ ಪ್ರತಿಕೋಪಃ 1-4-37 | |
| 'ಮನ್ಯಕರ್ಮಣ್ಯನಾದರೇ ವಿಭಾಷಾ ಪ್ರಾಣಿಷು" 2-3-17 | "ಮನ್ಯಕರ್ಮಣಿಚಾನಾದರೇ" ಸೂತ್ರ 82 |

"ನಮಃ ಸ್ವಸ್ತಿಸ್ವಾಹಾಸ್ವಧಾ ಲಂ- ವಷಡ್ಯೋಗಾಚ್ಚ" 2-3-16 — ನಮಸ್ಕ್ರಿಯಾಯಾಂ ಸ್ವಸ್ತ್ಯಾದಿಷಂಚ. ಸೂ. 83

ಅನಾದರವನ್ನು ಹೇಳುವಲ್ಲಿ 'ಪ್ರಾಣಿ' ಶಬ್ದವನ್ನು ಬಿಟ್ಟುದು ಮತ್ತು ರುಚಿಹಿತಗಳೊಡನೆ ಭಯವನ್ನು ಸೇರಿಸಿದುದು ಭೂಷಣಕಾರನ ಬದಲಾವಣೆಗೆ ಉದಾಹರಣೆಗಳಾಗಿವೆ.

ಲಕ್ಷ್ಯಗಳಲ್ಲೂ ಭೂಷಣಕಾರ ಸಂಸ್ಕೃತ ವ್ಯಾಕರಣವನ್ನು ಅನುಸರಿಸುತ್ತಾನೆ. ಕಾಶಿಕಾದಲ್ಲಿ "ದೇವದತ್ತಾಯ ರೋಚತೇ ಮೋದಕಃ" ಎಂದಿದ್ದರೆ ಅದೇ ಭಾಷಾಂತರಗೊಂಡು "ದೇವದತ್ತಂಗೆ ರುಚಿಯಾಯ್ತು ಮೋದಕಂ" ಎಂದು ಭೂಷಣದಲ್ಲಿ ಪ್ರತ್ಯಕ್ಷವಾಗಿದೆ.

ದರ್ಪಣವು ಭೂಷಣದ ಸ್ವಾಹಾ, ಸ್ವಧಾ, ವಷಟ್ ಎಂಬ ಪ್ರಯೋಗಗಳನ್ನು ಬಿಟ್ಟು ಉಳಿದ ಎಲ್ಲ ವಿಚಾರಗಳನ್ನು ಎತ್ತಿಕೊಂಡುದಲ್ಲದೆ ಜೊತೆಯಲ್ಲಿ ಮಚ್ಚರ, ಉನ್ನತಿ, ಸ್ವಭಾವ ಸ್ಥಿತಿ, ಹೇತು, ಅನೀಪ್ಸಿತ, ಸದೃಶವೃತ್ತಿ, ಪ್ರತಿನಿಧಾನ ಮತ್ತು ಇಷ್ಟಗಳನ್ನು ಚತುರ್ಥಿಯ ಅರ್ಥಗಳಾಗಿ ಹೇಳುತ್ತದೆ. ಇವುಗಳಲ್ಲಿ ಹೇತುವಿಗೆ ಸಿದ್ಧಹೇಮ ಶಬ್ದಾನುಶಾಸನದ ಹೇಳಿಕೆ ಕಾರಣವಾಗಿದ್ದರೆ ಅಷ್ಟಾಧ್ಯಾಯಿಯ "ಪ್ರತಿನಿಧಿ ಪ್ರತಿದಾನೇ ಚ ಯಸ್ಮಾತ್" (2-3-11) ಎಂಬ ಸೂತ್ರದಿಂದ ಪ್ರಭಾವಿತವಾಗಿ 'ಪ್ರತಿನಿಧಾನ'ವನ್ನು ಹೇಳಿರಬೇಕು. ಸಂಸ್ಕೃತದಲ್ಲಿ 'ಪ್ರತಿನಿಧಿ'ಯನ್ನು ಹೇಳುವಲ್ಲಿ ಪಂಚಮಿ ವಿಭಕ್ತಿ ಬರುವುದಾದರೆ ಕನ್ನಡದಲ್ಲಿ ಪ್ರತಿನಿಧಾನದಲ್ಲಿ ಚತುರ್ಥೀ ಬರುತ್ತದೆ. ಇಷ್ಟು ಮಾತ್ರ ಇಲ್ಲಿರುವ ಅಂತರ. ಬಹುಶಃ ಉಳಿದ ಅರ್ಥಗಳನ್ನು ಕೇಶಿರಾಜ ಸ್ವೋಪಜ್ಞಶೀಲತೆಯಿಂದ ಕಂಡುಕೊಂಡಿರಬೇಕು.

ಸಂಸ್ಕೃತ ವೈಯಾಕರಣರು ನಿರ್ದಿಷ್ಟವಾದ ಧಾತುಗಳನ್ನು (ರುಚ್ ಇತ್ಯಾದಿ) ಎತ್ತಿಕೊಂಡು ಹೇಳುವುದಿದ್ದರೆ ಕನ್ನಡ ವೈಯಾಕರಣರು ಅದರ ಅರ್ಥವನ್ನು ಪ್ರಧಾನವಾಗಿಟ್ಟುಕೊಂಡು ಹೇಳುವುದಾಗಿ ತೋರುತ್ತದೆ. ಹಾಗಾಗಿಯೇ ರುಚ್ಯರ್ಥದಲ್ಲಿ "ಕೂಸಿಂಗೆ ಲಡ್ಡುಗೆಯುಚ್ಚಿ" (ಸೂ. 141ರ ಪ್ರಯೋಗ) ಎಂಬ ಲಕ್ಷ್ಯ ದರ್ಪಣದಲ್ಲಿ ತಲೆಯೆತ್ತಿದೆ.

**ಅಪಾದಾನ**

ಅಪಾದಾನವೆಂದರೆ ಬೇರೆಯಾಗುವುದು, ತೊಲಗುವುದು ಎಂದರ್ಥ. ದರ್ಪಣವು "ಅಪಾದಾನವೆಂದಾವುದೊಂದರಿಂ ತೊಲಗುವುದು" (ಸೂ. 142ರ ವೃತ್ತಿ) ಎಂದು ಸ್ಪಷ್ಟೀಕರಿಸುತ್ತದೆ. ಅಪಾದಾನದ ಕುರಿತು ಸಂಸ್ಕೃತ ವ್ಯಾಕರಣಗಳ ನಿರೂಪಣೆ ಕೆಳಗಿನಂತಿದೆ.

"ಧ್ರುವಮಪಾಯೇಽಪಾದಾನಂ" ಅಷ್ಟಾಧ್ಯಾಯಿ 1-4-24

"ಯತೋಽಪೈತಿ ಭಯಮಾದತ್ತೇ ವಾ ತದಪಾದಾನಮ್". ಕಾತಂತ್ರ 2-4-8

"ಧ್ಯಪಾಯೇ ಧ್ರುವಮಪಾದಾನಮ್" ಜೈನೇಂದ್ರ 1-2-109

"ಅಪಾಯೇಽವಧಿರಪಾದಾನಮ್" ಸಿ. ಹೇ. ಶ. 2-2-29

ಭೂಷಣಕಾರ ಹೇಳುವ "ಅಪಾದಾನಮಪನಯನಂ" (ಸೂ. 84ರ ವೃತ್ತಿ) ಎಂಬ ವಿವರಣೆ ಮೇಲಿನ ಹಿನ್ನೆಲೆಯಲ್ಲಿ ಮೂಡಿಬಂದುದಾಗಿದೆ. ದರ್ಪಣಕಾರನ ಉಪರ್ಯುಕ್ತ ವಿವರಣೆ ಇದರ ಅನುವಾದವಷ್ಟೆ.

**ಅಪಾದಾನ ಪ್ರದೇಶ**

ಅಪಾದಾನಾರ್ಥದಲ್ಲಿ ಪಂಚಮೀ ವಿಭಕ್ತಿಯನ್ನು ಸಂಸ್ಕೃತ ವ್ಯಾಕರಣಗಳು ವಿಧಿಸುತ್ತವೆ.

"ಅಪಾದಾನೇ ಪಂಚಮೀ" ಅಷ್ಟಾಧ್ಯಾಯಿ 2-3-28
"ಕಾsಪಾದಾನೇ" ಜೈನೇಂದ್ರ 1-4-37
"ಪಂಚಮ್ಯಪಾದಾನೇ" ಸಿ. ಹೇ. ಶ. 2-2-69

ಅಷ್ಟಾಧ್ಯಾಯಿಯ ಸೂತ್ರವನ್ನು ಅನುವಂತ್ತಾಗಿ ಭೂಷಣ ಎತ್ತಿಕೊಂಡಿದೆ (ಸೂ. 84). ದರ್ಪಣವು "ಅದುಂ ಪಂಚಮಿಯಪ್ಪುದಪಾದಾನಸ್ಥಲದೊಳ್" (ಸೂ. 142) ಎಂಬು ದನ್ನು ಕನ್ನಡಕ್ಕೆ ಅನುವಾದಿಸಿದೆ.

**ಪಂಚಮಿಯ ಅರ್ಥಗಳು :**

ಪಂಚಮಿಯ ವಿವಿಧ ಅರ್ಥಗಳ ಕುರಿತು ಭೂಷಣದಲ್ಲಿ ಪ್ರಸ್ತಾಪವಿಲ್ಲ. ದರ್ಪಣ ದಲ್ಲಿ ಭಯ (ಆತಂಕ), ಸ್ವೀಕಾರ (ಆದಾನ), ಇಷ್ಟ, ಅನಿಷ್ಟ, ಹೇತು, ಉದಯ, ಗುರುತ್ವ (ಪೆರ್ಮೆ)ಗಳನ್ನು ಪಂಚಮಿಯ ಅರ್ಥಗಳೆಂದು ಪರಿಗಣಿಸಲಾಗಿದೆ. ಇವುಗಳಲ್ಲಿ ಹೆಚ್ಚಿನ ವಕ್ಕೆ ಅಷ್ಟಾಧ್ಯಾಯಿ ಮತ್ತು ಕಾತಂತ್ರವೇ ಮೂಲವಾಗಿರಬೇಕು. ಅಷ್ಟಾಧ್ಯಾಯಿಯಲ್ಲಿ ನಿರೂಪಿಸಿರುವಂತೆ ಭಯ ಮತ್ತು ರಕ್ಷಾರ್ಥಗಳನ್ನು ಹೇಳುವ (ಭೀ, ತ್ರಾ ಅರ್ಥ) ಧಾತು ಗಳ ಪ್ರಯೋಗದಲ್ಲಿ ಅಂತಹ ಭಯ ಮತ್ತು ರಕ್ಷೆಗಳ ಹೇತುವಿಗೆ ಪಂಚಮೀ ವಿಭಕ್ತಿ ಬರುವುದು (ಸೂ. 1-4-25). ದುರ್ಗಸಿಂಹ ಹೇಳುವಂತೆ (ಕಾತಂತ್ರ 2-4-8ರ ವೃತ್ತಿ) ಭಯ ಮತ್ತು ಆದಾನಾರ್ಥದಲ್ಲಿ ಪಂಚಮೀ ಪ್ರಯೋಗವಿದೆ. "ರಕ್ಷಾರ್ಥಾನಾಂ ಧಾತೂನಾಂ ಪ್ರಯೋಗೇ ಯದೀಪ್ಸಿತಮನೀಪ್ಸಿತಂಚ ತತ್ಕಾರಕಮಪಾದಾನಸಂಜ್ಞಂ ಭವತಿ" (ಕಾತಂತ್ರ 2-4-9ರ ದುರ್ಗಸಿಂಹ ವೃತ್ತಿ) ಎಂಬ ಹೇಳಿಕೆಯೂ ಗಮನಾರ್ಹ. ಹೇತ್ವರ್ಥದಲ್ಲಿ ಪಂಚಮೀ (ತೃತೀಯಾದಿಗಳು) ಬರುವುದರ ಬಗ್ಗೆ ಹಿಂದೆಯೇ ವಿಚಾರಿಸ ಲಾಗಿದೆಯಷ್ಟೆ. ಹೀಗೆ ದರ್ಪಣಕಾರನಿಗೆ ಭಯ, ಆದಾನ, ಇಷ್ಟ, ಅನಿಷ್ಟ, ಮತ್ತು ಹೇತು ವಿಗೆ ಪಂಚಮಿಯನ್ನು ಹೇಳುವಲ್ಲಿ ಮೇಲಿನ ಹೇಳಿಕೆಗಳು ಪ್ರೇರಕವಾಗಿರಬೇಕು.

ಅಷ್ಟಾಧ್ಯಾಯಿಯ "ಪಂಚಮೀ ವಿಭಕ್ತೇ (2-3-42) ಎಂಬ ಸೂತ್ರದಲ್ಲಿ ಪ್ರತಿ ಪಾದಿತವಾಗಿರುವಂತೆ ಗುರುತ್ವ (ತುಲನ)ದಲ್ಲಿ ಪಂಚಮೀ ವಿಭಕ್ತಿ ಪ್ರಯೋಗವಿದೆ. ಬಹುಶಃ ಕೇಶಿರಾಜನಿಗೆ ಅಲ್ಲಿಂದ ಪ್ರೇರಣೆ ದೊರಕಿ ಪಂಚಮ್ಯರ್ಥಗಳಲ್ಲಿ ಪೆರ್ಮೆಯನ್ನೂ

ಸೇರಿಸಿರಬೇಕು. ಇಲ್ಲವಾದರೆ ಸಂಸ್ಕೃತ ಭಾಷೆಯಲ್ಲಿ ಸಹಜವಾಗಿ ತಲಲನೆಯಲ್ಲಿ ಬಳಕೆಗೊಳ್ಳುವ ಪಂಚಮಿಯಿಂದ ಪ್ರೇರಿತನಾಗಿರಲೂಬಹುದು. 'ಉದಯ'ವನ್ನು ಪಂಚಮಿಯು ಒಂದು ಅರ್ಥವಾಗಿ ಹೇಳುವಲ್ಲಿ ಕೇಶಿರಾಜನಿಗೆ ಎಲ್ಲಿಂದ ಪ್ರೇರಣೆ ದೊರಕಿತೆಂದು ಹೇಳಲು ಬರುವುದಿಲ್ಲ. ವೈಯಾಕರಣರು ಎಳೆಎಳೆಯಾಗಿ ಬಿಡಿಸಿ ಹೆಚ್ಚು ಅರ್ಥಭೇದಗಳನ್ನು ಹೇಳುವುದುಂಟು. ಇಲ್ಲವೆ, ಕೆಲವೊಮ್ಮೆ ಹಲವು ಅರ್ಥಗಳನ್ನು ಒಂದರಲ್ಲೇ ಅಡಗಿಸಿ ಹೇಳುವುದುಂಟು. ದರ್ಪಣ ಹೇಳುವ ಅರ್ಥಗಳೆಲ್ಲ ಭೂಷಣ ಹೇಳುವ ಅಪಾದಾನವೊಂದರಲ್ಲಿ ಅಡಗಿಕೊಂಡಿದೆಯೆಂದೇ ತಿಳಿಯಬೇಕು.

## ಸಂಬಂಧ

ಸಂಬಂಧವೆಂದರೆ ಕರ್ಮಾದಿಗಳಿಂದ ಹೊರತಾದ ಪ್ರಾತಿಪದಿಕಾರ್ಥ ವ್ಯತಿರಿಕ್ತವಾದ ಸ್ವಸ್ವಾಮಿ ಸಂಬಂಧ (ಕಾಶಿಕಾ 2-3-50 ; ಜೈನೇಂದ್ರ 1-4-57). "ಲೋಕದಲ್ಲಿ ಸಂಬಂಧವಿಲ್ಲದ ವಿಧಿಯೇ ಇಲ್ಲವಾದುದರಿಂದ ಸಂಬಂಧವು ಸಾರ್ವತ್ರಿಕವೆಂದು ತಿಳಿಯಬೇಕು. ಅಲ್ಲಿ ಕ್ರಿಯಾವ್ಯಾಪ್ಯತ್ವವನ್ನು ವಿವಕ್ಷಿಸಲು ದ್ವಿತೀಯೆಯೂ ಸಾಧಕತಮತ್ವಾದಿಗಳನ್ನು ವಿವಕ್ಷಿಸಲು ತೃತೀಯೆಯೂ, ಸಂಪ್ರದಾನತ್ವಾದಿಯನ್ನು ಚತುರ್ಥಿಯೂ ಅಪಾದಾನತ್ವಾದಿಯನ್ನು ವಿವಕ್ಷಿಸಲು ಪಂಚಮಿಯೂ ಅಧಿಕಾರಣತ್ವಾದಿಯನ್ನು ವಿವಕ್ಷಿಸಲು ಸಪ್ತಮಿಯೂ ಇದಕ್ಕೆ ಅಪವಾದವಾಗಿ ವಿಧಿಸಲ್ಪಟ್ಟಿರುವುದರಿಂದ ಆ ಸಂಬಂಧಗಳನ್ನು ಬಿಟ್ಟು ಇರುವ ಸಾಮಾನ್ಯವಾದ ಸಂಬಂಧ ಮಾತ್ರ ವಿವಕ್ಷೆ" (ಕ.ಶ. ಪು. 340) ಯೆಂದೇ ಈ ಸಂಬಂಧದ ಅರ್ಥ. ಕ್ರಿಯೆಯೊಡನೆ ಸಂಬಂಧವನ್ನು ಹೊಂದದ "ಸಂಬಂಧ"ಕ್ಕೆ ಕಾರಕತ್ವವಿಲ್ಲ. ಈ ಸಂಬಂಧದ ವಿವರಣೆ ಭೂಷಣದಲ್ಲಿ "ಸ್ವಸ್ವಾಮಿಭಾವಾದಿ ಸಂಬಂಧ" (ಸೂತ್ರ 85ರವೃತ್ತಿ) ಎಂದು ಮಾತ್ರವಿದೆ. ದರ್ಪಣ ಸಂಬಂಧದ ವಿವರಣೆಯ ಕುರಿತು ಮೌನ ತಾಳಿದೆ.

## ಸಂಬಂಧ ಪ್ರದೇಶ

ಸಂಬಂಧಾರ್ಥದಲ್ಲಿ ಷಷ್ಠೀವಿಭಕ್ತಿ ಪ್ರಯೋಗದ ಕುರಿತಾಗಿ ಚಾಂದ್ರವು "ಷಷ್ಠೀ ಸಂಬಂಧೇ" (2-1-95) ಎಂದು ಹೇಳಿದರೆ ಸಾರಸ್ವತ ಪ್ರಕ್ರಿಯೆ "ಸಂಬಂಧೇ ಷಷ್ಠೀ" (ಕಾ.ಪ್ರ. 9)ಎಂದು ಹೇಳುತ್ತದೆ. ಕಾತಂತ್ರವೂ ಸ್ವಾಮ್ಯಾದಿಯಲ್ಲಿ ಷಷ್ಠಿಯನ್ನು ವಿಧಿಸುತ್ತದೆ (2-4-19).

ಕನ್ನಡ ವ್ಯಾಕರಣಗಳಲ್ಲಿ ಸಂಬಂಧಾರ್ಥದಲ್ಲಿ ಷಷ್ಠಿಯನ್ನು ಕೆಳಗಿನಂತೆ ವಿಧಿಸುತ್ತಾರೆ.

"ಸ್ವಾಮ್ಯಾದಿಯೊಳು ಷಷ್ಠಿ" ಸ್ಮೃತಿ ಸೂ. 27
"ಸಂಬಂಧೇ ಷಷ್ಠೀ" ಭೂಷಣ ಸೂ. 85
"ಸಂಬಂಧದೊಳೆ ಷಷ್ಠಿಯಕ್ಕುಂ" ದರ್ಪಣ ಸೂ. 143ರ ವೃತ್ತಿ

ಈ ನಿರೂಪಣೆಯನ್ನು ಪರಾಂಬರಿಸಿದಾಗ ಸ್ಮೃತಿ ಕಾತಂತ್ರವನ್ನೂ ಭೂಷಣವು ಚಾಂದ್ರ ಸಾರಸ್ವತಗಳನ್ನೂ ಅನುಸರಿಸಿರುವುದು ಕಂಡುಬರುತ್ತದೆ. ದರ್ಪಣ ನೇರವಾಗಿ ಭೂಷಣ ವನ್ನನುಸರಿಸಿದೆ.

## ಷಷ್ಠಿಯ ಅರ್ಥಗಳು

ಸ್ಮೃತಿಯು ಮೇಲೆ ನಿರೂಪಿಸಿದ ಮಾತನ್ನು ಮಾತ್ರ ಹೇಳಿ ವಿರಮಿಸುತ್ತದೆ. ಷಷ್ಠಿಯ ಅರ್ಥಭೇದಗಳ ಕುರಿತು ಅದು ಮೌನ ತಾಳಿದೆ. ಭೂಷಣವು ಸ್ವಸ್ವಾಮಿ ಭಾವದ ಜೊತೆಯಲ್ಲಿ ಅವಯವ, ಜಾತಿ ವಸ್ತುಗಳನ್ನು ಹೇಳಿದರೆ (ಸೂತ್ರ 85ರ ಪ್ರಯೋಗ), ದರ್ಪಣವು ಸ್ವಾಮಿ (ಪತಿ), ಕುಲ, ಜಾತಿ, ಅವಯವ, ಲಕ್ಷಣ, ಸನ್ನಿಧಾನ, ಸಂಸ್ಪರ್ಶ, ಸಂಬಂಧಗಳನ್ನು ಷಷ್ಠಿಯ ಅರ್ಥಭೇದಗಳಾಗಿ ಪರಿಗಣಿಸಿದೆ (ಸೂತ್ರ 144). ಮತ್ತೆ ಇವುಗಳ ಜೊತೆಯಲ್ಲಿ ಶೇಷ ಮತ್ತು ವಸ್ತುವಿಕಾರವನ್ನೂ ಸೇರಿಸಿಕೊಂಡಿದೆ (ಸೂತ್ರ 144ರ ವೃತ್ತಿ). ಭೂಷಣದ ನಾಲ್ಕು ಅರ್ಥಗಳಿಗೆ ದರ್ಪಣವು ಹೇಳುವ ಸ್ವಾಮಿ ಅವಯವ, ಜಾತಿ ಮತ್ತು ವಸ್ತು ವಿಕಾರಗಳು ಸಂವಾದಿಯಾಗಿವೆ. ಈ ವಿಧವಾದ ಹೆಚ್ಚಿನ ಅರ್ಥಗಳಿಗೆ ಸಂಸ್ಕೃತ ವ್ಯಾಕರಣದಿಂದ ಪ್ರೇರಣೆ ದೊರಕಿದಂತಿದೆ. ಅಷ್ಟಾಧ್ಯಾಯಿಯಲ್ಲಿ, "ಸ್ವಾಮಿನ್, ಈಶ್ವರ, ಅಧಿಪತಿ, ದಾಯಾದ, ಸಾಕ್ಷಿನ್, ಪ್ರತಿಭೂ, ಪ್ರಸೂತ" ಈ ಶಬ್ದ ಗಳ ಜೊತೆಯಲ್ಲಿ ಪ್ರಯುಕ್ತವಾಗುವ ಶಬ್ದಗಳಿಗೆ ಷಷ್ಠೀ ಯಾ ಸಪ್ತಮೀ ವಿಭಕ್ತಿಗಳು ಬರುವುದಾಗಿ ಹೇಳಲಾಗಿದೆ. (ಸೂತ್ರ 2-3-39). ಕಾತಂತ್ರವೂ ಈ ಅಭಿಪ್ರಾಯದಲ್ಲಿ ಸಹಮತವಾಗಿದೆ. ಭೂಷಣ, ದರ್ಪಣಗಳ "ಸ್ವಾಮಿ" ಈ ಎಲ್ಲ ಅರ್ಥವನ್ನು ಒಳಗೊಳ್ಳು ತ್ತದೆ. ಸಂಸ್ಕೃತದಲ್ಲಿ ಮೇಲಿನ ನಿರ್ದಿಷ್ಟವಾದ ಶಬ್ದಗಳು ಮುಖ್ಯವಾದರೆ ಇಲ್ಲಿ ಅವುಗಳಿಂದ ವ್ಯಕ್ತವಾಗುವ ಅರ್ಥವನ್ನು ಗಮನಿಸಲಾಗುತ್ತದೆ. ಅಲ್ಲಿ ಷಷ್ಠೀ ಸಪ್ತಮಿಗಳೆರಡೂ ಬರು ವುದಿದ್ದರೆ ಇಲ್ಲಿ ಷಷ್ಠಿ ಮಾತ್ರ ಬರುವುದು ಮುಖ್ಯ ವ್ಯತ್ಯಾಸ.

ಜೈನೇಂದ್ರದ ಮಹಾವೃತ್ತಿಯಲ್ಲಿ "ಸ್ವಸ್ವಾಮಿ ಸಂಬಂಧ ಸಮೀಪ ಸಮೂಹ ವಿಕಾರಾವಯವ ಸ್ಥಾನಾದಯಸ್ಯಾರ್ಥಾಃ" (1-4-57ರ ವೃತ್ತಿ) ಎಂದಿರುವ ವಿವರಣೆ ಯನ್ನು ಭೂಷಣ ದರ್ಪಣಗಳು ಗಮನಿಸಿರಬೇಕು. ಬಹುಶಃ ಇಲ್ಲಿಂದಲೇ 'ಪತಿ'ಯೂ ಸೇರಿದಂತೆ ಅವಯವ, ಸನ್ನಿಧಾನ (ಸಮೀಪ), ವಿಕಾರ, ಸಂಬಂಧ ಸಂಬಂಧಗಳನ್ನೂ ಎತ್ತಿ ಕೊಂಡಿರಬೇಕು. ಉಳಿದ ಕುಲ, ಜಾತಿ, ಲಕ್ಷಣ, ಸಂಸ್ಪರ್ಶ ಮತ್ತು ಶೇಷ—ಈ ಅರ್ಥ ಗಳನ್ನು ಕನ್ನಡ ವೈಯಾಕರಣರು ತಮ್ಮ ಸೂಕ್ಷ್ಮ ನಿರೀಕ್ಷಣೆಯಿಂದ ಹೊಸದಾಗಿ ಕಂಡು ಕೊಂಡುದಾಗಿರಬೇಕೆಂದು ತೋರುತ್ತದೆ. ಇವಕ್ಕೆಲ್ಲ ಕೊಡುವ ಲಕ್ಷ್ಯಗಳು ಕನ್ನಡ ಭಾಷೆಯ ಜಾಯಮಾನವನ್ನು ಒಗ್ಗಿಸಿಕೊಂಡವಾಗಿರುವುದು ತೃಪ್ತಿಯ ವಿಷಯವಾಗಿದೆ.

ದರ್ಪಣಕಾರ ಪ್ರಯೋಗದ ಕೊನೆಯಲ್ಲಿ "ಎಲ್ಲಾ ವಿಭಕ್ತಿಗಳೂ ಷಷ್ಠೀಗತ ಮಾದುವಾಗಿ ಸಂಬಂಧಮೆಂಬರ್" ಎಂದು ಹೇಳಿರುವುದು ವಿವೇಚನೆಗೆಡೆ ಮಾಡಿದೆ. ಷಷ್ಠೀಗತ ಎಂದರೆ ಷಷ್ಠಿಯಲ್ಲಿ ಅಂತರ್ಗತ ಎಂದು ತಿಳಿದುಕೊಳ್ಳಬೇಕು (ರತ್ನಮಂಜೂಷ

ಪು. 102). ಷಷ್ಠಿಗೆ ಕಾರಕತ್ವವಿಲ್ಲದಿರುವುದರಿಂದ ಅದು ಕ್ರಿಯಾನ್ವಯಿಯಲ್ಲ, ನಾಮಾನ್ವಯಿ. "ಷಷ್ಠೀ ವಿಭಕ್ತಿಯ ಮುಂದೆ ನಾಮಪದವೇ ಇರಬೇಕು ಹೊರತು ಕ್ರಿಯಾವಾಚಕವು ಇರಲಾರದು. ಈ ಷಷ್ಠೀ ವಿಭಕ್ತಿಯ ಮುಂದೆ ಬರುವ ವಿಶೇಷ್ಯವು ಕ್ರಿಯಾರ್ಥ ಗರ್ಭಿತವಾಗಿದ್ದರೆ ಎಂದರೆ ಧಾತುವಿನಿಂದ ಹುಟ್ಟಿದ ಭಾವನಾಮವಾಗಿದ್ದರೆ ಅದು ಕಾರಕಾರ್ಥವನ್ನು ವ್ಯಂಜಿಸುತ್ತದೆ (ಅದೇ. ಪು. 103). ರಾಮನ ಗೆಲುವು, ರಾವಣನ ಕೊಲೆ, ಗದೆಯ ಹೊಡೆತ ಇತ್ಯಾದಿಗಳು ಇದಕ್ಕೆ ಲಕ್ಷ್ಯಗಳು. ಬಹುಶಃ ಈ ತೆರನಾದ ಪ್ರಯೋಗವೇ ದರ್ಪಣಕಾರನ ಮೇಲಿನ ಮಾತಿಗೆ ಕಾರಣವಾಗಿರಬೇಕು. ಈ ದಿಸೆಯಲ್ಲಿ ಇನ್ನೂ ಒಂದು ವಿಧವಾಗಿ ಊಹಿಸಲೆಡೆಯಿದೆ. ಸಂಸ್ಕೃತದಲ್ಲಿ ದ್ವಿತೀಯಾ, ತೃತೀಯಾ, ಚತುರ್ಥೀ, ಸಪ್ತಮೀ ಮತ್ತು ಪ್ರಥಮಾ ವಿಭಕ್ತಿಗಳು ಬರಬೇಕಾದಲ್ಲಿ, ಕೆಲವು ವಿಶಿಷ್ಟ ಶಬ್ದಗಳಿಗೆ ಷಷ್ಠೀ ವಿಭಕ್ತಿ ನಿಯತವಾಗಿ ಬರುತ್ತದೆ (ಅಷ್ಟಾಧ್ಯಾಯಿ ಸೂ. 2-3-50ರಿಂದ 59, 61-71). ಅದು ವಿಭಕ್ತಿಪಲ್ಲಟವಲ್ಲ. ಬಹುಶಃ ಇಂತಹ ವ್ಯವಸ್ಥೆಯಿಂದ ಪ್ರೇರಣೆ ಹೊಂದಿ ಕೇಶಿರಾಜ "ಎಲ್ಲಾ ವಿಭಕ್ತಿಗಳುಂ ಷಷ್ಠೀಗತಮಾದುವಾಗಿ ಸಂಬಂಧಮೆಂಬರ್" ಎಂದು ಹೇಳಿರಬಹುದು.

### ಅಧಿಕರಣ

ಕ್ರಿಯೆಗೆ ಆಧಾರವಾದುದಕ್ಕೆ 'ಅಧಿಕರಣ' ಎಂಬ ಸಂಜ್ಞೆ ಸಂದಿದೆ. ಅಧಿಕರಣದ ಕುರಿತಾದ ಕೆಲವು ಸಂಸ್ಕೃತ ವೈಯಾಕರಣರ ಹೇಳಿಕೆಗಳು ಕೆಳಗಿನಂತಿವೆ.

"ಆಧಾರೋಽಧಿಕರಣಮ್"—ಅಷ್ಟಾಧ್ಯಾಯಿ 1-4-45
"ಯ ಆಧಾರಸ್ತದಧಿಕರಣಮ್"—ಕಾತಂತ್ರ 2-4-11
"ಆಧಾರೋಽಧಿಕರಣಃ"—ಜೈನೇಂದ್ರ 1-2-115
"ಕ್ರಿಯಾಶ್ರಯಸ್ಯಾಧಾರೋಽಧಿಕರಣಮ್"—ಸಿ.ಹೇ.ಶ. 2-2-29

ಕನ್ನಡ ವ್ಯಾಕರಣಗಳಲ್ಲಿ ಭೂಪಣವು "ಆಧಾರೋಽಧಿಕರಣಂ" (ಸೂತ್ರ 86ರ ವೃತ್ತಿ) ಎಂಬುದಾಗಿ ಪಾಣಿನಿಯ ಸೂತ್ರವನ್ನು ಯಥಾವತ್ತಾಗಿ ಎತ್ತಿಕೊಂಡರೆ "ಆವುದು ತಾನಾಧಾರಮದಧಿಕರಣಂ" ಎಂದು ದರ್ಪಣ (ಸೂತ್ರ 144) ಕಾತಂತ್ರ ಸೂತ್ರವನ್ನು ಕನ್ನಡಿಸಿದೆ.

### ಅಧಿಕರಣ ಪ್ರದೇಶ

ಅಧಿಕರಣಾರ್ಥವನ್ನು ಹೇಳಲು ಸಪ್ತಮೀ ವಿಭಕ್ತಿ ಬರುವುದೆಂದು ಸಂಸ್ಕೃತ ವ್ಯಾಕರಣಗಳು ಹೇಳುತ್ತವೆ.[37]

"ಸಪ್ತಮ್ಯಧಿಕರಣೇಚ" ಅಷ್ಟಾಧ್ಯಾಯಿ 2-3-36
"ಈಪಧಿಕರಣೇಚ" ಜೈನೇಂದ್ರ 1-4-44

"ಸಪ್ತಮೀ ಆಧಾರೇ" ಚಾಂದ್ರ 2-2-95
"ಸಪ್ತಮ್ಯಧಿಕರಣೇ" ಸಿ. ಹೇ. ಶ. 2-2-95
"ಅಧಿಕರಣೇ ಸಪ್ತಮೀ" ಸ. ಕಂ. 2-1-255

ಭೂಷಣವು "ಅಧಿಕರಣೇ ಸಪ್ತಮೀ" (ಸೂ. 86) ಎಂದು ಸರಸ್ವತೀ ಕಂಠಾಭರಣವನ್ನು ಅನುಸರಿಸಿದರೆ ಭೂಷಣದ ಹೇಳಿಕೆಯನ್ನು ದರ್ಪಣವು "ಅಲ್ಲಿ (ಅಧಿಕರಣದಲ್ಲಿ) ಸಪ್ತಮಿಂತಿಳ್" (ಸೂ. 144) ಎಂದು ಕನ್ನಡಿಸಿದೆ.

**ಸಪ್ತಮಿಯ ಅರ್ಥಗಳು**

ಭೂಷಣವು ನಿರ್ಧಾರಣಾರ್ಥದಲ್ಲಿ ಸಪ್ತಮಿಯನ್ನು ವಿಧಿಸುತ್ತದೆ (ಸೂ.87). ಕಾಶಿಕಾದಲ್ಲಿ "ಜಾತಿಗುಣ ಕ್ರಿಯಾಭಿಃ ಸಮುದಾಯಾದೇಕದೇಶಸ್ಯ ಪೃಥಕ್ಕರಣಂ ನಿರ್ಧಾರಣಂ" (2-3-41) ಎಂದು ನಿರ್ಧಾರಣವನ್ನು ವಿವರಿಸಿದರೆ (ಜೈನೇಂದ್ರ 1-4-49ರ ಮಹಾವೃತ್ತಿ) ಅದನ್ನು ಅಲ್ಪ ಮಾರ್ಪಾಟಿನೊಂದಿಗೆ ಭೂಷಣವು "ಜಾತಿ ಕ್ರಿಯಾಗುಣ ದ್ರವ್ಯೈರೇಕದೇಶ ಪೃಥಕ್ಕರಣಂ ನಿರ್ಧಾರಣಂ (ಸೂತ್ರ 87ರ ವೃತ್ತಿ) ಎಂದು ಹೇಳುತ್ತದೆ. ಜಾತಿ, ಕ್ರಿಯೆ, ಗುಣ, ದ್ರವ್ಯ–ಇವುಗಳಿಂದ ವಸ್ತುಗಳನ್ನು ಬೇರೆ ಮಾಡುವುದಕ್ಕೆ ನಿರ್ಧಾರಣೆಯೆಂದಭಿಪ್ರಾಯ. ಕಾತಂತ್ರವು "ನಿರ್ಧಾರಣೇಚ" (2-4-36) ಎಂಬ ಸೂತ್ರದಲ್ಲಿ ನಿರ್ಧಾರಣದಲ್ಲಿ ಸಪ್ತಮೀ ಪ್ರಯೋಗವನ್ನು ಹೇಳುತ್ತದೆ. ಭೂಷಣ ಆ ಸೂತ್ರವನ್ನು ಅನಾಮತ್ತಾಗಿ ಎತ್ತಿಕೊಂಡಿದೆ (ಸೂತ್ರ 87). ಸಪ್ತಮಿಯ ಉಳಿದ ಅರ್ಥಗಳ ಪ್ರಸ್ತಾಪ ಭೂಷಣದಲ್ಲಿಲ್ಲ. ಸ್ಮೃತಿ "ಗುಣದಿಂ ಕ್ರಿಯೆಯಿಂ ನಿರ್ಧಾರಣೆಯೊಳ್ ಸಪ್ತಮಿಯಕ್ಕುಂ" (ಸೂತ್ರ 28) ಎಂದು ಮಾತ್ರ ಹೇಳುತ್ತದೆ. ದರ್ಪಣದಲ್ಲಿ ನಿರ್ಧಾರಣ ಮಾತ್ರವಲ್ಲದೆ ವಿಷಯ, ವ್ಯಾಪಕ, ವ್ಯವಹಾರ, ಕಾಲ, ಸತ್ಯರ್ಥಗಳನ್ನು ಹೇಳುವಲ್ಲಿ ಸಪ್ತಮಿಯನ್ನು ವಿಧಿಸಲಾಗಿದೆ (ಸೂತ್ರ 144).

ಸಂಸ್ಕೃತ ವೈಯಾಕರಣರ ಅಭಿಮತದಂತೆ ಒಟ್ಟು 16 ಸ್ಥಾನಗಳಲ್ಲಿ ಸಪ್ತಮೀ ಬರುತ್ತದೆ (ಬಾಲಶಿಕ್ಷಾ. ಪು. 36). ಭರ್ತೃಹರಿಯ ವಿವರಣೆಯಂತೆ ಅಧಿಕರಣವು ಸಾಮೀಪ್ಯ ಔಪಶ್ಲೇಷಿಕ, ವೈಷಯಿಕ, ವ್ಯಾಪ್ತ್ಯಾಧಾರವೆಂದು ಚತುರ್ವಿಧವಾಗಿದೆ (ಕ.ಶ.ಪ್ರ. ಪು. 337). ದರ್ಪಣ ಹೇಳುವ 'ವಿಷಯ'ವು ವೈಷಯಿಕಕ್ಕೆ, "ವ್ಯಾಪಕ"ವು ವ್ಯಾಪ್ತ್ಯಾಧಾರಕ್ಕೆ ಸಂವಾದಿಯಾಗಿದೆ. ಕಾತಂತ್ರದ "ಕಾಲಭಾವಯೋಃ ಸಪ್ತಮೀ" (2-4-34) ಎಂಬ ಸೂತ್ರದಲ್ಲಿ ಕಾಲಾರ್ಥ ಮತ್ತು ಸತ್ಯರ್ಥದಲ್ಲಿ ಸಪ್ತಮಿ ಬರುವುದಾಗಿ ಹೇಳಲಾಗಿದೆ. ಅಷ್ಟಾಧ್ಯಾಯಿಯ "ಯಸ್ಯಚಭಾವೇನ ಭಾವಲಕ್ಷಣಮ್" (2-3-37) ಎಂಬ ಸೂತ್ರವು ಸತ್ಯರ್ಥದಲ್ಲಿ ಸಪ್ತಮಿ ಬರುವುದನ್ನು ಹೇಳುತ್ತದೆ. ಹಾಗೆ ಕೇಶಿರಾಜನಿಗೆ ಈ ಗ್ರಂಥಗಳಿಂದಲೇ ಕಾಲ ಮತ್ತು ಸತ್ಯರ್ಥದಲ್ಲಿ ಸಪ್ತಮಿಯನ್ನು ಹೇಳಲು ಪ್ರೇರಣೆ ದೊರಕಿರಬಹುದೆಂದು ತೋರುತ್ತದೆ.

ಅಷ್ಟಾಧ್ಯಾಯಿಯಲ್ಲಿ ವ್ಯವಹೃ ಮತ್ತು ಪಣ್ ಧಾತುಗಳು ವ್ಯವಹಾರಾರ್ಥದಲ್ಲಿ ಬಳಕೆಯಾಗಲು ಷಷ್ಠಿಯನ್ನು ಹೊಂದುವ ವಿಚಾರವಿದೆ (ಸೂತ್ರ 2-3-57). ಬಹುಶಃ ಅಲ್ಲಿಂದ ಪ್ರೇರಣೆ ಹೊಂದಿ ಕೇಶಿರಾಜನು ವ್ಯವಹಾರಾರ್ಥದಲ್ಲಿ ಸಪ್ತಮಿಯನ್ನು ವಿಧಿಸಿರ ಬಹುದು.

ಹೀಗೆ ಕನ್ನಡ ವ್ಯಾಕರಣಗಳ ಕಾರಕ ನಿರೂಪಣೆಯ ಮೇಲೆ ದೃಷ್ಟಿ ಬೀರಿದಾಗ ಇವುಗಳ ಕಾರಕ ಸಂಬಂಧವಾದ ಹೆಚ್ಚಿನ ವಿವೇಚನೆಯೆಲ್ಲ ಸಂಸ್ಕೃತ ವ್ಯಾಕರಣಗಳ ಮೇಲ್ಪಂಕ್ತಿಯಲ್ಲಿ ನಡೆದುದರ ಸರಿಯಾದ ತಿಳಿವುಂಟಾಗುತ್ತದೆ. ಈ ದೃಷ್ಟಿಯಿಂದ "The case systen as enunciated by ancient Kannada Grammarians is made to fit into the established pattern in Sanskrit Grammar. The eight cases and their uses have been imparted into Kannada 'mutatis mutandis' by our grammarians',.(K.S. p.6) ಎಂಬ ಮಾತು ಸಮಂಜಸವಾಗಿದೆ. ಕಾರಕವು ಮೂಲಭೂತವಾಗಿ ವಾಕ್ಯರಚನೆಗೆ ಸಂಬಂಧ ಪಟ್ಟುದು (K.S.D. p. 200). ಭಿನ್ನರಚನೆಯುಳ್ಳಿರುವ ಎರಡು ಭಾಷೆಗಳ ಕಾರಕ ವ್ಯವಸ್ಥೆಯಲ್ಲಿ ಸಮಾನತೆಗಿಂತ ಭಿನ್ನತೆಯ ಅಂಶ ಹೆಚ್ಚಿರುತ್ತದೆ. ಹಾಗಾಗಿ ಕಾರಕಗಳ ವಿವೇಚನೆಯಲ್ಲಿ ಒಂದು ಭಾಷೆಯ ತತ್ವಗಳನ್ನು ಭಿನ್ನ ರಚನೆಯ ಇನ್ನೊಂದು ಭಾಷೆ ಯಥಾವತ್ತಾಗಿ ಸ್ವೀಕರಿಸಿಕೊಂಡರೆ ಸಲ್ಲದ ಹೇಳಿಕೆಗಳಿಗೆ ಅವಕಾಶ ದೊರಕುತ್ತದೆ. ಸಂಸ್ಕೃತದ ಕಾರಕ ವಿಚಾರವನ್ನು ಕನ್ನಡ ವ್ಯಾಕರಣಗಳು ಯಥಾವತ್ತಾಗಿ ಸ್ವೀಕರಿಸಿ ಕೊಂಡಿರುವಲ್ಲಿ ನಾವದವನ್ನೇ ಕಾಣುತ್ತೇವೆ.

ಕನ್ನಡ ವ್ಯಾಕರಣಗಳು ಕಾರಕಗಳಿಗೆ ಸಂಬಂಧಿಸಿದಂತೆ ಸಂಸ್ಕೃತ ವ್ಯಾಕರಣಗಳಿಂದ ಪಾರಿಭಾಷಿಕಪದಗಳನ್ನು (ಕರ್ತೃ, ಕರ್ಮ ಇತ್ಯಾದಿ) ಎತ್ತಿಕೊಂಡಿರುವುದರಿಂದ ಏನೂ ಪ್ರಮಾದ ಸಂಭವಿಸಿಲ್ಲ. ಆದರೆ ಕೆಲವೆಡೆಗಳಲ್ಲಿ ಕಾರಕ ಪ್ರಕ್ರಿಯೆಗಳನ್ನು ಯಥಾವತ್ತಾಗಿ ಸ್ವೀಕರಿಸಿರುವುದರಿಂದ ಅಸಂಬದ್ಧತೆ ತಲೆದೋರಿದೆ. ಅಂತಹ ಪ್ರಮಾದಗಳನ್ನು ಎರಡು ಗುಂಪುಗಳಾಗಿ ವರ್ಗೀಕರಿಸಬಹುದು.

1. ತಾತ್ವಿಕ

2. ಅನುಕರಣಾತ್ಮಕ

ಸಂಸ್ಕೃತ ಭಾಷೆಯ ವಿಶಿಷ್ಟ ಸ್ವಭಾವಕ್ಕೆ ಸಂಬಂಧಿಸಿದ ತತ್ವಗಳನ್ನು ಕನ್ನಡಕ್ಕೆ ಸರಿ ಹೊಂದುವಂತೆ ಮಾಡುವ ಪ್ರಯತ್ನವನ್ನು 'ತಾತ್ವಿಕ' ವೆಂದು ಹೇಳಬಹುದಾದರೆ ಸಂಸ್ಕೃತ ವಾಕ್ಯ ರಚನೆಯಲ್ಲಿ ಒಂದು ವಿಭಕ್ತಿ ಪ್ರಯೋಗವಿರುವಲ್ಲಿ ಕನ್ನಡದಲ್ಲಿ ಇನ್ನೊಂದು ವಿಭಕ್ತಿ ಪ್ರಯೋಗವಾಗುವುದಿದ್ದರೂ ಅವನ್ನು ಅಪಗಣಿಸಿ ಸಂಸ್ಕೃತವನ್ನನುಸರಿಸಿ ಬಂದ ಪ್ರಯೋಗವನ್ನು ಅನುಕರಣಾತ್ಮಕವೆಂದು ಹೇಳಬಹುದು. ಇವೆರಡರ ವಿವೇಚನೆಯನ್ನು ಈ ರೀತಿಯಲ್ಲಿ ಮಾಡಬಹುದು.

**ತಾತ್ತ್ವಿಕ**

ಇಲ್ಲಿ ಮುಖ್ಯವಾಗಿ ಮೂರು ವಿಚಾರಗಳನ್ನು ಗಮನಿಸಲಾಗುವುದು.

## (ಅ) ಸಂಬೋಧನೆ

ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿ ಸಂಬೋಧನೆಯಲ್ಲಿ ಪ್ರಯುಕ್ತವಾಗುವುದು ನಿಜ (CGDL.p.306). ಕನ್ನಡದ ಸಂಬೋಧನೆಯ ನಿರ್ಮಾಣ ಒಂದು ಪ್ರತ್ಯೇಕವಾದ ರೀತಿಯಲ್ಲಾಗುವುದಾದರೂ ಕನ್ನಡ ವೈಯಾಕರಣರು ಸಂಸ್ಕೃತದ ಸಂಬೋಧನಾ ವಿಧಾನವನ್ನು ತಾತ್ವಿಕವಾಗಿ ಒಪ್ಪಿಕೊಂಡು ಸಂಬೋಧನೆಯಲ್ಲಿ ಪ್ರಥಮೆಯನ್ನು ವಿಧಿಸಿದ್ದಾರೆ. ಕನ್ನಡದಲ್ಲಿ ಪ್ರಥಮಾ ವಿಭಕ್ತಿಯಿಲ್ಲವೆಂದು ಆಧುನಿಕರು ಹೇಳುವುದನ್ನು ಪ್ರಾಚೀನ ವೈಯಾಕರಣದಲ್ಲಿ ನಿರೀಕ್ಷಿಸುವುದು ಸರಿಯಲ್ಲವಾದರೂ ಅವರ ವಿವೇಚನಾ ವಿಧಾನದಲ್ಲೇ ವಿಚಾರಿಸಿದಾಗ ಸಂಬೋಧನೆಯಲ್ಲಿ'ಮ್' ಅಥವಾ 'ಬಿಂದು'ವಿನ ಪ್ರಯೋಗವಾಗಬೇಕಷ್ಟೆ. ಆದರೆ ಕನ್ನಡದ ಸಂಬೋಧನೆಯಲ್ಲಿ ಅಂತಹ ಪ್ರಯೋಗವಿಲ್ಲ. ಕನ್ನಡ ವ್ಯಾಕರಣಗಳಲ್ಲಿ ನಿರೂಪಿತವಾದ ಸಂಬೋಧನೆಯ ವಿವರಣೆಯನ್ನು ಕೆಳಗಿನಂತೆ ಸಂಗ್ರಹಿಸಿ ಸಮೀಕ್ಷಿಸಿದರೆ ಇದು ಸ್ಫುಟವಾಗುತ್ತದೆ (ದರ್ಪಣ ಸೂ. 134, 135, 136)

### (1) ಏಕವಚನದಲ್ಲಿ

1. ಪ್ರಥಮೈಕವಚನಕ್ಕೆ ಲೋಪ–
   ಉದಾ : ದೇವ ಬಿನ್ನಪಂ, ಕೇಳ ಮಾಧವ
2. ಹ್ರಸ್ವದೀರ್ಘಕಾಕುಗಳ ಪ್ರಯೋಗ—
   ಉದಾ : ಎಲೆಗಣಪ, ಪರಮಜಿನೇಂದ್ರಾ
3. ಲಿಂಗಾಂತ್ಯಕ್ಕೆ ಎವರ್ಣ—
   ಉದಾ : ಅಳಿಕುಳನೀಳಕುಂತಳೆಯೆ, ಕೋಕಿಳನಾದೆಯೆ
4. ಕೆಲವೊಮ್ಮೆ ಎತ್ವಕ್ಕೆ ವಿಕಲ್ಪ—
   ಉದಾ : ಎಲತುಂಬಿ, ಎಲೆತುಂಬಿಯೆ
5. ಅಕಾರಾಂತದ ಮುಂದೆ ಎವರ್ಣ ಮತ್ತು ಎವರ್ಣದ ಹಿಂದೆ ಬಿಂದು—
   ಉದಾ : ಚಂದ್ರನೇ, ನಂದನವೇ

### (2) ಬಹುವಚನದಲ್ಲಿ

1. ಬಹುವಚನದ ಪ್ರತ್ಯಯದ ಮುಂದೆ ಎವರ್ಣ—
   ಉದಾ: ಭಟ್ಟರೆ, ದೇವರೇ

2. ಬಹುವಚನ ಪ್ರತ್ಯಯಗಳಾದ 'ಅರ್' 'ಗಳ್' 'ಕಳ್' ಗಳ ಮುಂದೆ 'ಇರ್' ಆಗಮ—

ಉದಾ: ನಂಟರಿರ, ದೆಸೆಗಳಿರ, ಬುಧರ್ಕಳಿರ

3. ಕೆಲವೊಮ್ಮೆ ಯಾವುದೇ ಬದಲಾವಣೆಯಿಲ್ಲ—

ಉದಾ: ........ಇರದೆಪುಗಿಂ ಪೋಗಿಮುಂಗ್ಪಾರಿಗಳ್

ವಾಸ್ತವವಾಗಿ ಇಲ್ಲೆಲ್ಲೂ ಪ್ರಥಮಾ ವಿಭಕ್ತಿಯ ಪ್ರಯೋಗ ಗೋಚರಿಸುವುದಿಲ್ಲ. (1) 5ಕ್ಕೆ ಕೊಟ್ಟಿರುವ ಪ್ರಯೋಗದಲ್ಲಿ ಮೇಲುನೋಟಕ್ಕೆ ಪ್ರಥಮಾ ವಿಭಕ್ತಿಯ (ಬಿಂದುವಿನ) ಮುಂದೆ ಏವರ್ಣ ಬಂದಂತೆ ಭಾಸವಾಗುವುದು ಸಹಜ. ಆದರೆ ಆದನ್ನು ದರ್ಪಣಕಾರ ಪ್ರಥಮಾ ವಿಭಕ್ತಿಯ ಬಿಂದುವೆಂದು ಹೇಳುವುದಿಲ್ಲ. ಮಾತ್ರವಲ್ಲ "ಅವಿಶೇಷದೆ ಲಿಂಗಾಂತ್ಯಕ್ಕೆ ವರ್ಣಮೊದವುವುದು" (ಸೂತ್ರ 135) ಎಂದೂ ಹೇಳು ತ್ತಾನೆ. ಲಿಂಗವೆಂದರೆ ಪ್ರಕೃತಿಯೆಂದರ್ಥವಷ್ಟೆ. (1) 1ಕ್ಕೆ ಕೊಟ್ಟಿರುವ ಪ್ರಯೋಗ ದಲ್ಲಿ ಮಾತ್ರ ವ್ಯಾಕರಣ ಮಾರ್ಗಾನುಸಾರ ಪ್ರಥಮಾ ವಿಭಕ್ತಿಗೆ ಲೋಪವೆಂದರೆ ಒಪ್ಪಿ ಕೊಳ್ಳಬಹುದು. ಮತ್ತೆಲ್ಲೂ "ಪ್ರಥಮಾ ವಿಭಕ್ತಿ ಸಂಬೋಧನದೊಳ್ ಪ್ರಭವಿರ್ಪುದು' (ದರ್ಪಣ ಸೂತ್ರ 137) ಎಂಬ ಮಾತು ನಿಲ್ಲಲಾರದು.

ನಿಜವಾಗಿ ಕನ್ನಡದ ಸಂಬೋಧನೆಯ ರೀತಿ ಸಂಸ್ಕೃತಕ್ಕಿಂತ ಭಿನ್ನವಾಗಿದ್ದು ವಿಶಿಷ್ಟ ವಾಗಿದೆ :

(ಅ) ಲಿಂಗಾಂತ್ಯಕ್ಕೆ ಏವರ್ಣ : ಈ ಏವರ್ಣ ಅಕಾರಾಂತ ಪ್ರಕೃತಿಗಳ ಮುಂದೆ ಬರುವಾಗ ಬಿಂದು ಆಗಮವಾಗುವುದೆಂದು ತಪ್ಪಾಗಿ ಭಾವಿಸಲಾಗಿದೆ. ಅಕಾರಾಂತ ಪ್ರಕೃತಿಗಳ ಕೊನೆಯಲ್ಲಿ ಸಹಜವಾಗಿರುವ ಮ ನ ಕಾರಗಳ ಮುಂದೆ ಏವರ್ಣ ಬಂದಾಗ (1) 5ರಲ್ಲಿ ಕೊಟ್ಟಂತಹ ಚಂದ್ರನೇ, ನಂದನವೇ ಮುಂತಾದ ರೂಪಗಳು ಸಿದ್ಧಿಸುತ್ತವೆ. ಬಹುವಚನ ಪ್ರತ್ಯಯಗಳ ಮುಂದೆ ಏವರ್ಣ ಬಂದಾಗ ಯಾವುದೇ ಬದಲಾವಣೆಯಿಲ್ಲ.

(ಆ) ಲಿಂಗಾಂತ್ಯ ಲೋಪ : ಅಕಾರಾಂತ ಪ್ರಕೃತಿಗಳ ಕೊನೆಯಲ್ಲಿರುವ ಮ ನ ಕಾರಗಳು ಲೋಪಹೊಂದುತ್ತವೆ. ಇದನ್ನೇ (1) 1ರಲ್ಲಿ ಪ್ರಥಮೈಕವಚನಲೋಪ ವೆಂದು ಭ್ರಮಿಸಲಾಗಿದೆ.

(ಇ) ಲಿಂಗಾಂತ್ಯ ದೀರ್ಘ : ಇದನ್ನೇ ಹ್ರಸ್ವ ದೀರ್ಘಕಾಕುಗಳೆಂದು ಹೇಳ ಲಾಗಿದೆ.

(ಈ) ಲಿಂಗಸ್ಥಿತಿ: ಏತ್ವಕ್ಕೆ ವಿಕಲ್ಪವೆಂದು ಹೇಳಿದುದು ಲಿಂಗಸ್ಥಿತಿಯದನ್ನಾಗಿದೆ. ಬಹುವಚನದಲ್ಲೂ ಇದನ್ನು ಕಾಣಬಹುದು. (2) 3

(ಉ) 'ಇರ' ಆಗಮ : ಬಹುವಚನ ಪ್ರತ್ಯಯಗಳ ಮುಂದೆ ಇದು ಬರುತ್ತದೆ.

(ಊ) 'ಎಲೆ' ಎಂಬ ನಿಪಾತದ ಬಳಕೆ ; (1) 4ಕ್ಕೆ ಕೊಟ್ಟ ಉದಾಹರಣೆಗಳಲ್ಲಿ 'ಎಲೆ' ಎಂಬುದುಂ ನಿಜವಾಗಿ ಸಂಬೋಧನೆಯಂ ಕೆಲಸವನ್ನು ಮಾಡುತ್ತದೆ. ಭೂಷಣವೂ ಇದನ್ನು ಒಪ್ಪುತ್ತದೆ (ಸೂತ್ರ 261).

ಒಟ್ಟಿನಲ್ಲಿ "ಹ್ರಸ್ವ ದೀರ್ಘ ಕಾಕುಗಳಂ, ಲಿಂಗಾಂತ್ಯದ ಎವರ್ಣ, ಬಹುವಚನದಲ್ಲಿ ಬರುವ ಇರ, ಎಲೆ ಎಂಬ ನಿಪಾತ, ಲಿಂಗಾಂತ್ಯದ ಅನುನಾಸಿಕಗಳ ಲೋಪ— ಇವೆಲ್ಲ ಯಥಾರ್ಥವಾಗಿ ಸಂಬೋಧನೆಯಲ್ಲಿ ದುಡಿಯುವವಾಗಿದ್ದು ಕನ್ನಡದ ಸಹಜ ಸಂಬೋಧನೆಗಳಾಗಿವೆ (CGDL.p 306). ಬಹುವಚನದಲ್ಲಿ ಬರುವ 'ಇರ' ಮಧ್ಯಮ ಪುರುಷ ಸರ್ವನಾಮದ ಬಹುವಚನದ ಮೂಲರೂಪಕ್ಕೆ ಸಂಬಂಧಿಸಿದುದಾಗಿರಬೇಕೆಂಬ ಊಹೆಯೂ ಇದೆ. ಆವುಗಳಲ್ಲಿ ಯಾವುದೊಂದೂ ಪ್ರಥಮಾ ವಿಭಕ್ತಿ ಪ್ರತ್ಯಯವಲ್ಲ. ಮಾತ್ರವಲ್ಲ, ಹಳಗನ್ನಡದ ಯಾವ ವೈಯಾಕರಣನೂ ಇವುಗಳನ್ನು ಪ್ರತ್ಯಯವೆಂದಾಗಲಿ ವಿಭಕ್ತಿಯೆಂದಾಗಲಿ ಹೆಸರಿಸಿಲ್ಲ" (ಕ. ಭಾ. 10-3). ಹಾಗಿದ್ದೂ ಸಂಬೋಧನೆಯಲ್ಲಿ ಪ್ರಥಮಾ ವಿಭಕ್ತಿ ಬರುವುದೆಂದು ಕನ್ನಡ ವೈಯಾಕರಣರು ಒಮ್ಮತದಿಂದ ಹೇಳುವುದು ಆಶ್ಚರ್ಯವನ್ನುಂಟು ಮಾಡುತ್ತದೆ.

ಆಧುನಿಕ ವಿದ್ವಾಂಸರೂ ಸಂಬೋಧನೆಯಲ್ಲಿ ದುಡಿಯುವ ಮೇಲಿನ ಯಾವುದೇ "ಅಕ್ಷರ ವರ್ಗ"ಕ್ಕೆ 'ಸಂಬೋಧನ ವಿಭಕ್ತಿ' ಎಂಬ ಸಂಜ್ಞೆಯನ್ನು ಕೊಡದಿರುವುದು ಅರ್ಥವತ್ತಾಗಿದೆ. ಕಾಲ್ಡ್‌ವೆಲ್ ಹೇಳುವ "In the Dravidian Languages there is nothing which properly deserves to be styled a suffix or case sign of the vocative. The vocative is formed merely by affixing or suffixing some sign of emphasis or in certain instances by suffixing fragments of the personal pronouns". (CGDL. p. 305-306) ಎಂಬ ಮಾತು ಈ ದೃಷ್ಟಿಯಿಂದ ಗ್ರಾಹ್ಯವಾಗಿದೆ.

## (ಋ) ವಿಶಿಷ್ಟ ಪದಪ್ರಯೋಗ :

ಸಂಸ್ಕೃತದಲ್ಲಿ ನಮಃ, ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ, ವಷಟ್ ಎಂಬ ಶಬ್ದಗಳನ್ನು ಬಳಸುವಲ್ಲಿ ಅದು ಯಾರಿಗೆ ಸಲ್ಲುವುದೋ ಅವರನ್ನು ಸೂಚಿಸುವ ನಾಮಕ್ಕೆ ಚತುರ್ಥೀ ವಿಭಕ್ತಿ ಬರುವುದಾಗಿ ಸಂಸ್ಕೃತ ವ್ಯಾಕರಣಗಳು ಹೇಳುತ್ತವೆ. ಅಲ್ಲಿ ಹಾಗಿರುವುದು ನಿಜ—

ನಮೋ ದೇವೇಭ್ಯಃ
ಸ್ವಸ್ತಿ ಪ್ರಜಾಭ್ಯಃ
ಸ್ವಾಹಾಗ್ನಯೇ
ಸ್ವಧಾ ಪಿತೃಭ್ಯಃ
ಅಲಂ ಮಲ್ಲೋಮಲ್ಲಾಯ
ವಷಡಿಂದ್ರಾಯ

ಸಂಸ್ಕೃತಕ್ಕೆ ಮಾತ್ರ ವಿಶಿಷ್ಟವಾದ ಈ ವಿಚಾರವನ್ನು ಭೂಷಣ ಯಥಾವತ್ತಾಗಿ ಎತ್ತಿಕೊಂಡು ಭಾಗಶಃ ಕನ್ನಡಿಸಿದೆ.

"ದೇವಂಗೆ ನಮಸ್ಕಾರಂಗೆಯ್ದು ಅರಸಂಗೆಜಗಿದಂ
ಪ್ರಜೆಗೆಲ್ಲಂ ಸ್ವಸ್ತಿಯಕ್ಕೆ ; ಭದ್ರಂ ಜಿನಶಾಸನಕ್ಕೆ,
ಅಗ್ನಿಗೆ ಸ್ವಾಹಾಕಾರಂ, ಪಿತೃಗಳ್ಗೆ ಸ್ವಧಾಕಾರಂ, ಮಲ್ಲಂಗೆ ಪ್ರತಿ
ಮಲ್ಲನಲಂ, ಇಂದ್ರಂಗೆ ವಷಟ್‌ಕಾರಂ ಪ್ರಿಯಂ" (ಸೂತ್ರ 83ರ ಪ್ರಯೊಗ)

ದರ್ಪಣವು ನಮಸ್ಕಾರ, ಸ್ವಾಹಾ, ಸ್ವಧಾ, ಅಲಂ, ವಷಟ್‌ಗಳನ್ನು ಬಿಟ್ಟುಳಿದವುಗಳನ್ನು ಸ್ವಸ್ತ್ಯಾದಿಯೆಂದು ಮಾತ್ರ ಹೇಳುತ್ತದೆ.

"ಸ್ವಸ್ತ್ಯಾದಿಗೆ : ಸಮನಿಸುಗೆ ಜಗಕ್ಕೆಲ್ಲಿಯುಮಾಯುಂ ಪ್ರಮೋ
ದಮುಂ ಕ್ಷೇಮ ವೃತ್ತಿ ಕುಶಲಂ ಭದ್ರಂ ಭವಿಕಂ, ಭವ್ಯಂ
ಶ್ರೇಯಂ ಶಿವಂ ಶುಭಂ ಸ್ವಸ್ತಿಕಲ್ಯಾಣಂ ಮಂಗಲಂ" (ಸೂತ್ರ 141ರ ಪ್ರಯೋಗ)

ಭೂಷಣವು ಸ್ವಾಹಾ. ಸ್ವಧಾ, ಅಲಂಗಳಿಗೆ ಕೊಡುವ ಲಕ್ಷ್ಯಗಳು ಕನ್ನಡಕ್ಕೆ ಏನೇನೂ ಸರಿಹೊಂದಲಾರವು. ಉಳಿದವುಗಳನ್ನು ಹೊಂದಿಸಿಕೊಳ್ಳುವ ಪ್ರಯತ್ನವನ್ನು ಭೂಷಣ ದರ್ಪಣಗಳು ಮಾಡಿವೆ.

## (ಇ) ವಿಶಿಷ್ಟಧಾತು ಪ್ರಯೋಗ

ಕೆಲವು ಧಾತುಗಳಿಂದ ಸಿದ್ಧವಾದ ಕ್ರಿಯಾಪದಗಳಿರುವಾಗ ಕೆಲವು ನಿರ್ದಿಷ್ಟ ಪರಿಸರಗಳಲ್ಲಿ ನಾಮಕ್ಕೆ ಚತುರ್ಥೀ ವಿಭಕ್ತಿ ಬರುವುದಾಗಿ ಸಂಸ್ಕೃತ ವ್ಯಾಕರಣಗಳು ಹೇಳುತ್ತವೆ. (ನೋಡಿರಿ : ಹಿಂದೆ ಚತುರ್ಥಿಯ ಅರ್ಥಾಭಿವ್ಯಕ್ತಿ)

ದೇವದತ್ತಾಯ ರೋಚತೇ ಮೋದಕಃ
ದೇವದತ್ತಾಯೇಪ್ಸ್ಯತಿ
ದೇವದತ್ತಾಯಾ ಸೂಯತಿ
ನತ್ವಾ ತೃಣಂ ಮನ್ಯೇ

ಮೇಲಿನ ವಾಕ್ಯಗಳಲ್ಲಿ ರುಚ್, ಕ್ರುಧ್ ಇತ್ಯಾದಿ ಧಾತುಗಳಿಂದ ನಿರ್ಮಾಣಗೊಂಡ ಕ್ರಿಯಾಪದಗಳನ್ನು ಲಕ್ಷಿಸಬೇಕು.

ಭೀ, ತ್ರಾ ಧಾತುಗಳ ಬಳಕೆಯಲ್ಲಿ ಪಂಚಮಿ ಬರುವುದಾಗಿಯೂ ಅಲ್ಲಿ ಹೇಳಲಾಗಿದೆ (ನೋಡಿರಿ: ಹಿಂದೆ ಪಂಚಮಿಯ ಅರ್ಥಗಳು).

ಚೌರೇಭ್ಯೋ ಬಿಭೇತಿ
ಚೌರೇಭ್ಯಸ್ತ್ರಾಯತೇ

'ಧಾತಂ' ಎನ್ನುವ ಜಾಗದಲ್ಲಿ 'ಅರ್ಥ' ಎಂದು ಪರಿವರ್ತಿಸಿಕೊಂಡು ಮೇಲಿನ ಪ್ರಯೋಗಗಳಲ್ಲಿನ ತತ್ವವನ್ನು ಕನ್ನಡಕ್ಕೆ ಸರಿಮಾಡಿಕೊಂಡುದನ್ನು ನೋಡಬಹುದು—

"ದೇವದತ್ತಂಗೆ ರುಚಿಯಾಯ್ತು ಮೋದಕಂ
ಆರ್ಯಂಗೆ ಸೆಣಸುಗುಂ ದುರ್ಜನಂ
ಅವನಂ ಪುಲ್ಗೆ ಕಪ್ಪವಾಗೆ ಬಗೆದಂ" ಭೂಷಣ ಸೂ. 81-82ರ ಪ್ರಯೋಗ

"ಕೂಸಿಂಗೆ ಲಡ್ಡುಗೆಯಲ್ತೆ
ಕವಿಗೆ ಕವಿ ಮುನಿವಂ
ಮಾನಸರಂ ಪುಲ್ಗೆ ಕಪ್ಪವಾಗಿ ನೆನೆವಂ
ಅರಸನತೃಣಂ ದಾಟಿಬಂದುದು" ದರ್ಪಣ ಸೂ. 141-142ರ ಪ್ರಯೋಗ

ಕನ್ನಡದಲ್ಲಿ ಸಹಜವಾಗಿ ಕ್ರಿಯೆಯನ್ನನುಸರಿಸಿ ವಿಭಕ್ತಿ ಪ್ರಯೋಗಗಳಲ್ಲಿ ಅಂತರವಿದೆ—

ಪೂವಿನೊಳ್ ಕಂಪು ಇರ್ಪುದು
ಕರ್ಬಿನೊಳ್ ರಸಂ ಇರ್ಪುದು } ಸಪ್ತಮೀ

ಪೂವಿನ ಕಂಪು ಪಸರಿಸಿದತ್ತು
ಕರ್ಬಿನ ರಸಂ ಇನಿದಾಗಿರ್ಪುದು } ಷಷ್ಠಿ

ದರ್ಪಣಕಾರ ವ್ಯಾಪಕಕ್ಕೆ ಉದಾಹರಣೆಯಾಗಿ ಕೊಟ್ಟ ಪೂವಿನೊಳ್ ಕಂಪು, ಕರ್ಬಿನೊಳ್ ರಸಂ, ಎಳ್ಳೊಳೆಣ್ಣೆ—ಇವು ಅಪರಿಪೂರ್ಣ ಉದಾಹರಣೆಗಳು. ಕಾರಕಕ್ಕೆ ಉದಾಹರಣೆಯಾಗಿ ಕೊಡುವಲ್ಲಿ ಪೂರ್ಣ ವಾಕ್ಯವನ್ನೇ ಕೊಡಬೇಕಾಗಿದೆ. ಕಾರಕ ವಾಕ್ಯ ರಚನೆಗೆ ಸಂಬಂಧಿಸಿದುದಷ್ಟೆ.

## (2) ಅನುಕರಣಾತ್ಮಕ

ಕನ್ನಡ ಭಾಷೆಗೆ ಅಸಹಜವಾದ ಕಾರಕವನ್ನಿಲ್ಲಿ ಉದಾಹರಿಸಬಹುದು. ಅವಿಚ್ಛೇದ ಕ್ರಿಯಾ ವ್ಯಾಪ್ತಿಯಿರುವ ಕಾಲಾರ್ಥದಲ್ಲಿ ದ್ವಿತೀಯಾ ವಿಭಕ್ತಿಯ ಬಳಕೆ ಸಂಸ್ಕೃತದಲ್ಲಿ ಸಹಜವಾಗಿದೆ :

ಮಾಸಮಧೀತೇ
ಸಂವತ್ಸರಮಧೀತೇ

ಸಂಸ್ಕೃತ ವ್ಯಾಕರಣಗಳನ್ನನ್ನುಸರಿಸಿ ಕನ್ನಡದಲ್ಲೂ ಅದನ್ನೇ ಹೇಳಲಾಗಿದೆ. ಅದಕ್ಕೆ ಕೊಟ್ಟ ಲಕ್ಷ್ಯಗಳು ವಿಚಾರಿಸಲು ಯೋಗ್ಯವಾಗಿವೆ.

ಒಂದು ಬರಿಸಮನಿರ್ದಂ
ಇರ್ತಿಂಗಳನೋದಿದಂ
ಅರೆಜಾವಮಂ ನಿದ್ದೆಗೆಯ್ದಂ } ಭೂಷಣ ಸೂತ್ರ 77ರ ಪ್ರಯೋಗ

ಉಪವಾಸದಿಂ ತ್ರಿರಾತ್ರಮನಿರ್ದಂ ದರ್ಪಣ ಸೂತ್ರ 139ರ ಪ್ರಯೋಗ

ಇವು ನಿಜವಾಗಿ ಕನ್ನಡಕ್ಕೆ ಸಹಜವಾದ ಪ್ರಯೋಗಗಳಲ್ಲ. ಸಂಸ್ಕೃತದ ವಿಭಕ್ತಿ ಪ್ರಯೋಗದ ಅಂಧಾನುಕರಣೆಯಿಂದ ಹುಟ್ಟಿಕೊಂಡವುಗಳು. ಇವುಗಳ ಸಹಜ ಪ್ರಯೋಗ ಕನ್ನಡ ಜಾಯಮಾನಕ್ಕನುಸರಿಸಿ ಕೆಳಗಿನಂತಿರಬೇಕು ;

"ಒಂದು ಬರಿಸಮಿರ್ದಂ"(ಕೇಶಿರಾಜ ಇದನ್ನು ವಿಭಕ್ತಿ ಪಲ್ಲಟವೆಂದು ಸ್ವೀಕರಿಸಿದ್ದಾನೆ)
"ಇರ್ತಿಂಗಳೋದಿದಂ"
"ಅರೆಜಾವಂ ನಿದ್ದೆಗೆಯ್ದಂ"
"ಉಪವಾಸದಿಂ ತ್ರಿರಾತ್ರಮಿರ್ದಂ"

ಈ ದೃಷ್ಟಿಯಿಂದ ಕೇಶಿರಾಜನ ಕೆಳಗಿನ ಪ್ರಯೋಗ ಸಾಧುವಾಗಿದೆ.

"ಅಱುದಿಂಗಳುಂ ತಳ್ವಿದಂ" (ಸೂ. 139ರ ಪ್ರಯೋಗ)

'ದುಹ್' ಮೊದಲಾದ ದ್ವಿಕರ್ಮಕ ಧಾತುಗಳ ಬಳಕೆಯಲ್ಲಿ ಗೌಣ ಕರ್ಮಕ್ಕೆ ದ್ವಿತೀಯಾ ವಿಭಕ್ತಿ ಬರುವುದನ್ನು ನೋಡಿದ ದರ್ಪಣಕಾರ ಅದನ್ನು ಕನ್ನಡ ದಲ್ಲಿ ತರುವ ಪ್ರಯತ್ನವೆಸಗಿದ್ದಾನೆ. "ಪಶುವಂ ಪಾಲಂ ಕರೆದಂ" (ಅದೇ) ಇದು "ಗಾಂ ದೋಗ್ಧಿ ಪಯಃ" ಎಂಬ ವಾಕ್ಯದ ಅನುವಾದವೆಂಬುದನ್ನು ಹಿಂದೆಯೇ ವಿಚಾರಿಸ ಲಾಗಿದೆ. ಗೌಣಕರ್ಮವಾದ ಪಶುವಿಗೆ ದ್ವಿತೀಯೆಯನ್ನು ಹಚ್ಚುವುದು ಕನ್ನಡದ ಮಟ್ಟಿಗೆ ಸಮರ್ಪಕವಲ್ಲ. ಸಂಸ್ಕೃತದ 'ದುಹ್' ನಂತೆ ಕನ್ನಡದ 'ಕರೆ' ಯಿಲ್ಲ. ಆದ್ದರಿಂದ ವಾಕ್ಯ ಕೆಳಗಿನಂತಿದ್ದರೆ ಸರಿ.

"ಪಶುವಿನ ಪಾಲಂ ಕರೆದಂ"

ಇಂತಹ ಕೆಲವನ್ನು ಬಿಟ್ಟರೆ ಸಂಸ್ಕೃತದ ಕಾರಕ ವ್ಯವಸ್ಥೆ ಸಾಂಪ್ರದಾಯಿಕವಾಗಿ ನೋಡಿದಾಗ ಕನ್ನಡಕ್ಕೆ ಸ್ಥೂಲವಾಗಿ ಒಗ್ಗಿಕೊಳ್ಳುತ್ತದೆ. ಹಾಗಾಗಿ ಅಂತಹ ಸಂದರ್ಭ ಗಳಲ್ಲಿ ಯಾವ ಪ್ರಮಾದವೂ ನಡೆದಿಲ್ಲವೆಂಬುದನ್ನು ಒಪ್ಪಿಕೊಳ್ಳಬಹುದು. ಅಂತಹ ಪ್ರಯೋಗಗಳಿಗೆ ಕೆಲವು ಉದಾಹರಣೆಗಳು—

"ಮನೆಯುಂ ಮಾಡಿದಂ
ಕುಡುಗೋಲಿಂ ಕೊಯ್ದಂ
ಉಪಾಧ್ಯಾಯಂಗೆ ದಕ್ಷಿಣೆಯುಂ ಕೊಟ್ಟಂ
ನಾಡಜಿಯುಂ
ನೆಲದೊಳ್ ಪಟ್ಟಿರ್ದಂ" ಭೂಷಣ

"ಪಡೆದಂ ಪದ್ಮಜನೀ ಜಗತ್ರಯುವುಂ........
ಪಾವಂ ಪಾಂಟಿದಂ
ಓಲಗದಿಂ ಪಡೆದಂ
ಪಾಪಕ್ಕಂಜುಗುಂ ತಕ್ಕಂ
ಭಕ್ತಂಗೆ ವರಮನಿತ್ತಂ
ಪಱುಗೋಲೊಳ್ ಕುಳ್ಳಿರ್ದಂ" ದರ್ಪಣ

## ವಿಭಕ್ತಿ ಪಲ್ಲಟ

ಒಂದು ವಿಭಕ್ತಿಗೆ ಬದಲಾಗಿ ಇನ್ನೊಂದು ವಿಭಕ್ತಿ ಕೆಲವೆಡೆಗಳಲ್ಲಿ ಬರುವುದಿದೆ ವ್ಯಾಕರಣದಲ್ಲಿ ಈ ಬದಲಾವಣೆಗೆ 'ವಿಭಕ್ತಿ ವ್ಯತ್ಯಯ' ಇಲ್ಲವೆ 'ವಿಭಕ್ತಿಪಲ್ಲಟ'ವೆಂದು ಹೇಳುತ್ತಾರೆ. ವಿಭಕ್ತಿ ಪಲ್ಲಟ ಕಾವ್ಯಭಾಷೆ ಮತ್ತು ಆಡುನುಡಿ-ಇವೆರಡರಲ್ಲೂ ಗೋಚರಿಸುತ್ತದೆ. ಕಾವ್ಯಭಾಷೆಯ ಮೇಲೆ ಆಡುನುಡಿಯ ಪ್ರಭಾವಕ್ಕೆ ವಿಭಕ್ತಿ ಪಲ್ಲಟ ಸಮುಚಿತ ದೃಷ್ಟಾಂತವಾಗಿದೆ.[28]

ಸಂಸ್ಕೃತ ವ್ಯಾಕರಣಗಳಲ್ಲಿ ವಿಭಕ್ತಿ ವ್ಯತ್ಯಯ ಗುರುತಿಸಲ್ಪಟ್ಟಿವೆ. ಅಷ್ಟಾಧ್ಯಾಯಿಯ "ಚತುರ್ಥ್ಯರ್ಥೇ ಬಹುಲಂ ಛಂದಸಿ" (2-3-62) ಎಂಬ ಸೂತ್ರ ಛಾಂದಸ ಭಾಷೆಯಲ್ಲಿನ ವಿಭಕ್ತಿ ವ್ಯತ್ಯಯವನ್ನು ಹೇಳುತ್ತದೆ. "ಯತಶ್ಚ ನಿರ್ಧಾರಣಮ್"(2-3-41), "ಪೃಥಗ್ವಿನಾನಾನಾಭಿಸ್ತೃತೀಯಾನ್ಯತರಸ್ಯಾಮ್" (2-3-32) "ದೂರಾಂತಿಕಾರ್ಥೈಃ ಷಷ್ಠ್ಯನ್ಯತರಸ್ಯಾಮ್" (2-3-34) ಮೊದಲಾದ ಅಷ್ಟಾಧ್ಯಾಯಿಯ ಸೂತ್ರಗಳು ಸಾಹಿತ್ಯ ಸಂಸ್ಕೃತದಲ್ಲಿ ಒಂದರ್ಥದಲ್ಲಿ ಒಂದಕ್ಕಿಂತ ಹೆಚ್ಚು ವಿಭಕ್ತಿಗಳು ಬರುವ ಸಂದರ್ಭಗಳನ್ನು ಹೇಳುತ್ತವೆ. ಬಹುಶಃ ಸಂಸ್ಕೃತದ ಈ ವ್ಯವಸ್ಥೆಯಿಂದ ಪ್ರೇರಿತವಾಗಿ ಪಾಲಿ, ಪ್ರಾಕೃತ ಮತ್ತು ಕನ್ನಡ ವೈಯಾಕರಣರು ವಿಭಕ್ತಿ ಪಲ್ಲಟವನ್ನು ಹೇಳಿರಬೇಕೆಂದು ತೋರುತ್ತದೆ. ಪಾಲಿ ಹಾಗೂ ಪ್ರಾಕೃತ ವ್ಯಾಕರಣಗಳಲ್ಲಿ ಈ ಪ್ರಕ್ರಿಯೆಯನ್ನು ಸಂಸ್ಕೃತದಂತೆ ಸ್ವಾಭಾವಿಕವೆಂದು ತಿಳಿದರೆ ಕನ್ನಡ ವ್ಯಾಕರಣಗಳಲ್ಲಿ ಭೂಷಣ 'ವಿಭಕ್ತಿ ವ್ಯತ್ಯಯ'ವೆಂದೂ, ದರ್ಪಣ ವಿಭಕ್ತಿ ಪಲ್ಲಟವೆಂದೂ ಹೇಳುತ್ತವೆ. "ಈ ವಿಭಕ್ತಿ ಪಲ್ಲಟ ಪ್ರಕ್ರಿಯೆ ಕನ್ನಡಕ್ಕೆ ವಿಶಿಷ್ಟವಾದದ್ದು" (ಪ್ರಾ.ಕ.ವ್ಯಾ.ಪು. 157) ಎಂಬುದು ಸರಿಯಲ್ಲ. ಇದು ಸರ್ವಭಾಷಾ ಸಾಮಾನ್ಯವಾದುದು. ಕನ್ನಡ ವೈಯಾಕರಣರು ವಿಭಕ್ತಿ ವ್ಯತ್ಯಯ ಅಥವಾ ಪಲ್ಲಟವೆಂದು ಪ್ರತ್ಯೇಕವಾಗಿ ಹೇಳಿರುವುದು ಹೆಚ್ಚು. ಕಚ್ಚಾಯನನ ಪಾಲಿ ವ್ಯಾಕರಣದಲ್ಲಿ ಕೆಳಗಿನಂತೆ ವಿಭಕ್ತಿ ವ್ಯತ್ಯಯವನ್ನು ಹೇಳಲಾಗಿದೆ.

1. ಕೆಲವೊಮ್ಮೆ ಷಷ್ಠೀ, ತೃತೀಯಾ, ಸಪ್ತಮೀ ಅರ್ಥಗಳಲ್ಲಿ ದ್ವಿತೀಯ ಬರುತ್ತದೆ (2-6-36, 37).

2. ಕೆಲವೊಮ್ಮೆ ತೃತೀಯಾ, ಸಪ್ತಮೀ, ದ್ವಿತೀಯಾ, ಪಂಚಮೀ ಅರ್ಥಗಳಲ್ಲಿ ಷಷ್ಠಿ ಬರುತ್ತದೆ (2-6-38, 39).

3. ಕೆಲವೊಮ್ಮೆ ಕರ್ಮ, ಕರಣ, ಸಂಪ್ರದಾನ, ಮತ್ತು ಪಂಚಮೀ ಅರ್ಥಗಳಲ್ಲಿ ಸಪ್ತಮೀ ಬರುತ್ತದೆ (2-6-40, 41, 42).

ಪ್ರಾಕೃತ ವೈಯಾಕರಣರು ವಿಭಕ್ತಿ ವ್ಯತ್ಯಯವನ್ನು ಸಹಜವೆಂಬಂತೆ ಸ್ವೀಕರಿಸುತ್ತಾರೆ. ಹೇಮಚಂದ್ರನು ತನ್ನ ಶಬ್ದಾನುಶಾಸನದಲ್ಲಿ ಹೇಳುವ ವಿಭಕ್ತಿ ಪಲ್ಲಟಗಳನ್ನು ಕೆಳಗಿನಂತೆ ಸಂಗ್ರಹಿಸಬಹುದು.

1. ಚತುರ್ಥೀ ಮತ್ತು ದ್ವಿತೀಯಾರ್ಥದಲ್ಲಿ ಷಷ್ಠಿ ಬರುತ್ತದೆ (8-3-131, 134).

2. ದ್ವಿತೀಯಾ ಮತ್ತು ತೃತೀಯಾರ್ಥದಲ್ಲಿ ಸಪ್ತಮೀ ಬರುತ್ತದೆ (8-3-135).

3. ಪಂಚಮ್ಯರ್ಥದಲ್ಲಿ ತೃತೀಯೆಯೂ ಸಪ್ತಮ್ಯರ್ಥದಲ್ಲಿ ದ್ವಿತೀಯೆಯೂ ಬರುವುದಿದೆ (8-3-136, 137).

ಈ ವಿಚಾರದಲ್ಲಿ ಲಕ್ಷ್ಮೀಧರನೂ ಹೇಮಚಂದ್ರನೊಡನೆ ದನಿಗೂಡಿಸುತ್ತಾನೆ.

ಕನ್ನಡ ವೈಯಾಕರಣರು ವಿಭಕ್ತಿ ಪಲ್ಲಟದ ವಿಚಾರದಲ್ಲಿ ಸಂಸ್ಕೃತಕ್ಕಿಂತಲೂ ಮಿಗಿಲಾಗಿ ಪ್ರಾಕೃತ ವ್ಯಾಕರಣಗಳಿಂದ ಪ್ರೇರಿತರಾಗಿರಬೇಕೆಂದು ತೋರುತ್ತದೆ. ಕವಿರಾಜಮಾರ್ಗದಲ್ಲಿ ನೇರವಾಗಿ ವಿಭಕ್ತಿ ಪಲ್ಲಟದ ವಿಚಾರವಿಲ್ಲ. ಕಾರಕ ದೋಷಕ್ಕೆ ಕೊಡುವ ಲಕ್ಷ್ಯದಲ್ಲಿ ವಿಭಕ್ತಿ ಪಲ್ಲಟಗೊಂಡ ವಿಚಾರವೂ ಧ್ವನಿತವಾಗುತ್ತದೆ (1-116).

"ಬರಮೆಮಗೀಗೆ ದೇವತೆಗಳಾದರದಿಂ"

"ಕರುಣಪ್ಪುದಕ್ಕೆ ಬಂಧುರಗುಣ ಬಂಧು ಸಂತತಿಯುಂ"

ಕವಿರಾಜಮಾರ್ಗಕಾರ ಈ ಪ್ರಯೋಗಗಳನ್ನು ಅಗ್ರಾಹ್ಯವೆಂದು ಹೇಳಿ ಗ್ರಾಹ್ಯ ರೂಪವನ್ನು ಕೆಳಗಿನಂತೆ ಕೊಡುತ್ತಾನೆ :

"ಬರವನಮೋಘಮಾಗೆಮಗೆ ದೇವತೆಗಳ್"

"ಕರುಣಪ್ಪುದಕ್ಕೆ ಬಂಧುರಗುಣ ಬಂಧು ಸಂತತಿಗ"

ಮಾರ್ಗಕಾರ ಅಸಾಧುವೆಂದು ಹೇಳಿದ ವಾಕ್ಯಗಳಲ್ಲಿ ಅನುಕ್ರಮವಾಗಿ ದ್ವಿತೀಯಾರ್ಥದಲ್ಲಿ ಪ್ರಥಮ ಮತ್ತು ಚತುರ್ಥದಲ್ಲಿ ದ್ವಿತೀಯೆ ಬಂದುದನ್ನು ಕಾಣಬಹುದು. ಮೊದಲು ಹೇಳಿದ ವಾಕ್ಯಗಳಲ್ಲಿ ಕಾರಕ ದೋಷಗಳನ್ನು ಹೇಳಿದುದರಿಂದ ಮಾರ್ಗಕಾರನು ವಿಭಕ್ತಿ ಪಲ್ಲಟವನ್ನು ಒಪ್ಪುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.[29] ಮಾರ್ಗಕಾರ ಅಸಾಧುವೆಂದ ಮೇಲಿನ ವಿಭಕ್ತಿ ಪಲ್ಲಟವನ್ನು ಸಾಧುವೆಂಬುದಾಗಿ ದರ್ಪಣಕಾರ ಹೇಳುವುದು ಅವರಿಬ್ಬರ ದೃಷ್ಟಿಭೇದಕ್ಕೆ ಸಾಕ್ಷಿಯಾಗಿದೆ.

ಸ್ಮೃತಿಯಲ್ಲಿ ವಿಭಕ್ತಿ ಪಲ್ಲಟವನ್ನು ಗುರುತಿಸಲಾಗಿದೆ (ಸೂ. 27). ಆದರೆ ಆ ಕುರಿತು ಹೆಚ್ಚಿನ ವಿವರಣೆಯಿಲ್ಲ. ಹೇಳಿರುವಷ್ಟು ಮಟ್ಟಿಗೆ ವಿಭಕ್ತಿ ಪಲ್ಲಟ ಸ್ವೀಕಾರಾರ್ಹವೆಂಬ ಅಭಿಪ್ರಾಯ ಹೊರಹೊಮ್ಮುತ್ತದೆ.

ಭೂಷಣವು "ಆಸಾಂ ವ್ಯತ್ಯಯೋ ಬಹುಲಂ" (ಸೂ. 88) ಎಂದು ಆರು ವಿಭಕ್ತಿ ಪಲ್ಲಟವನ್ನು ಹೇಳುತ್ತದೆ. ಭೂಷಣದ ಈ ಸೂತ್ರದ ಮೇಲೆ ಅಷ್ಟಾಧ್ಯಾಯಿಯ "ವ್ಯತ್ಯಯೋ ಬಹುಲಂ" (3–1–85) ಎಂಬ ಸೂತ್ರದ ಛಾಯೆಯಿದೆ.

"ಇಂತೀ ಪೇಳ್ದ ವಿಭಕ್ತಿಗಳೆಂತುಂ ಪಲ್ಲಟಿಸುಗುಂ ಯಥೇಷ್ಟಂ" (ಸೂತ್ರ. 145) ಎಂದು ಹೇಳುವ ದರ್ಪಣವು ಮುಂದೆ ಹದಿನಾಲ್ಕು ವಿಭಕ್ತಿ ಪಲ್ಲಟಗಳನ್ನು ಕೊಡುತ್ತದೆ. ಸ್ಮೃತಿ ಭೂಷಣ ದರ್ಪಣಗಳಲ್ಲಿ ಬರುವ ವಿಭಕ್ತಿ ಪಲ್ಲಟಗಳನ್ನು ಕೆಳಗಿನಂತೆ ಸಂಗ್ರಹಿಸಬಹುದು.

1. ಮೂರೂ ಗ್ರಂಥಗಳು ಹೇಳುವ ವಿಭಕ್ತಿ ಪಲ್ಲಟಗಳು.
   (ಅ) ಪಂಚಮ್ಯರ್ಥದಲ್ಲಿ ತೃತೀಯೆ
   (ಆ) ಷಷ್ಠಿಯ ಅರ್ಥದಲ್ಲಿ ಚತುರ್ಥಿ
   (ಇ) ಪ್ರಥಮಾರ್ಥದಲ್ಲಿ ಷಷ್ಠಿ
2. ಭೂಷಣ ಮತ್ತು ದರ್ಪಣದಲ್ಲಿ ಮಾತ್ರ ಹೇಳಲಾದ ವಿಭಕ್ತಿ ಪಲ್ಲಟಗಳು
   (ಅ) ದ್ವಿತೀಯಾರ್ಥದಲ್ಲಿ ಚತುರ್ಥಿ
   (ಆ) ತೃತೀಯಾರ್ಥದಲ್ಲಿ ಸಪ್ತಮಿ
   (ಇ) ಸಪ್ತಮ್ಯರ್ಥದಲ್ಲಿ ಷಷ್ಠಿ
3. ದರ್ಪಣದಲ್ಲಿ ಮಾತ್ರ ಹೇಳಲಾದ ವಿಭಕ್ತಿ ಪಲ್ಲಟಗಳು
   (ಅ) ಪ್ರಥಮಾ, ತೃತೀಯಾ, ಚತುರ್ಥೀ ಮತ್ತು ಪಂಚಮ್ಯರ್ಥಗಳಲ್ಲಿ ದ್ವಿತೀಯೆ
   (ಆ) ಸಪ್ತಮ್ಯರ್ಥದಲ್ಲಿ ಚತುರ್ಥಿ
   (ಇ) ದ್ವಿತೀಯಾರ್ಥದಲ್ಲಿ ಷಷ್ಠಿ
   (ಈ) ದ್ವಿತೀಯ ಮತ್ತು ಸಪ್ತಮ್ಯರ್ಥದಲ್ಲಿ ಪ್ರಥಮ

ಮೇಲಿನ ವಿಭಕ್ತಿ ಪಲ್ಲಟವನ್ನು ಸಮೀಕ್ಷಿಸಿದಾಗ ಕಚ್ಚಾಯನ ಹೇಳುವ ತೃತೀಯಾರ್ಥದ ದ್ವಿತೀಯೆ, ಸಪ್ತಮ್ಯರ್ಥದ ಷಷ್ಠಿ, ಕರಣಾರ್ಥದ ಸಪ್ತಮಿ ಕನ್ನಡದಲ್ಲಿಯೂ ಇರುವಂತೆ ತಿಳಿಯುತ್ತದೆ. ಹೇಮಚಂದ್ರನು ಹೇಳುವ ದ್ವಿತೀಯಾರ್ಥದ ಷಷ್ಠಿ, ತೃತೀಯಾರ್ಥದ ಸಪ್ತಮಿ ಮತ್ತು ಪಂಚಮ್ಯರ್ಥದ ತೃತೀಯೆಯೂ ಕನ್ನಡದಲ್ಲಿ ಬಳಕೆಗೊಳ್ಳುತ್ತದೆ. ಆದರೆ ಅವರು ಹೇಳುವ ಷಷ್ಠಿ, ಸಪ್ತಮಿಗಳಿಗೆ ಬರುವ ದ್ವಿತೀಯೆ, ತೃತೀಯೆ, ಪಂಚಮಿಗಳ ಷಷ್ಠಿ; ಚತುರ್ಥಿ ಪಂಚಮಿಗಳ ಸಪ್ತಮಿ (ಕಚ್ಚಾಯನ), ಚತುರ್ಥಿಯ ಷಷ್ಠಿ, ದ್ವಿತೀಯೆಯ ಸಪ್ತಮಿ, ಸಪ್ತಮಿಯ ದ್ವಿತೀಯೆ (ಹೇಮಚಂದ್ರ)—ಇವುಗಳನ್ನು ಕನ್ನಡ ವ್ಯಾಕರಣಗಳು ಹೇಳುವುದಿಲ್ಲ.

ಕನ್ನಡ ವೈಯಾಕರಣರು ಹೇಳುವ ವಿಭಕ್ತಿ ಪಲ್ಲಟವನ್ನು ಸಹಜ. ಭ್ರಮಿತ ಮತ್ತು ಕೃತಕವೆಂದು ಮೂರು ಗುಂಪಾಗಿ ವಿಂಗಡಿಸಬಹುದು. ಕ್ರಿಯಾಪದವನ್ನು ಹೊಂದಿಕೊಂಡು ಒಂದೇ ಅರ್ಥವನ್ನು ಹೇಳುವಲ್ಲಿ ಬೇರೆ ಬೇರೆ ವಿಭಕ್ತಿಗಳು ಬರುವುದುಂಟು. ಸಂಸ್ಕೃತದಲ್ಲಿ ಈ ದೃಷ್ಟಿಯಿಂದಲೇ "ರುಚ್ಯರ್ಥಾನಾಂ ಪ್ರೀಯಮಾಣಃ, ಭೀತ್ರಾರ್ಥಾನಾಂ ಭಯ ಹೇತುಃ" ಇತ್ಯಾದಿಯಾದ ಸೂತ್ರಗಳು ಹುಟ್ಟಿಕೊಂಡಿವೆ. ಕೆಳಗಿನ ಎರಡು ವಾಕ್ಯಗಳನ್ನು ಪರಿಶೀಲಿಸಿದರೆ ಈ ವಿಚಾರ ಮನದಟ್ಟಾಗುವುದು.

(ಅ) ಶಿಷ್ಯನಂ ಶಿಕ್ಷಿಸಿದು

(ಆ) ಶಿಷ್ಯಂಗೆ ಶಿಕ್ಷೆಯುಂ ಕೊಟ್ಟು

## ಸಹಜ ವಿಭಕ್ತಿ ಪಲ್ಲಟ

ವಾಕ್ಯದಲ್ಲಿ ಪ್ರಯುಕ್ತವಾದ ನಾಮಪದ ಮತ್ತು ಕ್ರಿಯಾಪದಗಳಿಗೆ ಹೊಂದಿಕೊಂಡು ವಿಭಕ್ತಿ ಬದಲಾಗುವುದುಂಟು. ಇಂತಹ ಬದಲಾವಣೆಗೆ ಒಳಪಡುವ ವಿಭಕ್ತಿ ಪಲ್ಲಟವನ್ನು 'ಸಹಜ' ವಿಭಕ್ತಿಪಲ್ಲಟವೆನ್ನಬಹುದು. ನಿಜವಾಗಿ ಇಲ್ಲಿ ಪಲ್ಲಟವೆಂಬುದಿಲ್ಲ. ಒಂದೇ ಅರ್ಥದಲ್ಲಿ ಒಂದಕ್ಕಿಂತ ಹೆಚ್ಚು ವಿಭಕ್ತಿಗಳು ಬಳಕೆಯಾಗುತ್ತವಷ್ಟೆ.

1. ಷಷ್ಠ್ಯರ್ಥದಲ್ಲಿ ಚತುರ್ಥಿ—ಉದಾ : ಧರಣಿಗೀಶ್ವರನ್, ನೆಲಕ್ಕೊಡೆಯಂ, ಕೊಡೆಗೊಡೆಯಂ—ಇಂತಹ ಪ್ರಯೋಗಗಳು ಕನ್ನಡಕ್ಕೆ ಸಹಜವಾಗಿವೆ.
2. ಸಪ್ತಮ್ಯರ್ಥದಲ್ಲಿ ಷಷ್ಠಿ—ಉದಾ : ಚಾಗಿಗಳ ಬಲ್ಲಹಂ, ರಸಿಕರ ಚಕ್ರವರ್ತಿ. ಇಲ್ಲಿ ಸಪ್ತಮಿಯಂತೆ ಷಷ್ಠಿಯೂ ಸಹಜ ಪ್ರಯೋಗವಾಗಿದೆ.
3. ತೃತೀಯಾರ್ಥದಲ್ಲಿ ಸಪ್ತಮಿ—ಉದಾ: ಕೊಡಲಿಯೊಳ್ ಕಡಿದಂ, ಕಿವಿಯೊಳ್ ಕೇಳ್ದಂ—ತೃತೀಯಾರ್ಥದಲ್ಲಿ ಸಪ್ತಮಿಯ ಪ್ರಯೋಗ ದ್ರಾವಿಡ ಭಾಷಾ ಮರ್ಯಾದೆಗನುಗುಣವಾಗಿದೆ. ಆದರೆ ಭೂಷಣದಲ್ಲಿ ಬರುವ 'ಚಲದೊಳ್ ಅವನ ದೊರೆಯಾಮ' ಎಂಬೀ ಪ್ರಯೋಗ ಸಮರ್ಪಕವಾಗಿಲ್ಲ.
4. ಸಪ್ತಮ್ಯರ್ಥದ ಚತುರ್ಥಿ—ಉದಾ :

"ತಾವರೆಗೆ ಪುಟ್ಟಿದಂ" ಎಂಬ ಪ್ರಯೋಗ "ತಾವರೆಯೊಳ್ ಪುಟ್ಟಿದಂ" ಎಂಬಷ್ಟೇ ಸಹಜವಾದುದು. ಆದರೆ 'ಅಲರೊಳ್ ಬೆಳ್ಪು', ಅಲರ್ಗೆ ಬೆಳ್ಪು ಇತ್ಯಾದಿಗಳು ಅಪೂರ್ಣ ಪ್ರಯೋಗಗಳು.

5. ದ್ವಿತೀಯಾರ್ಥದ ಚತುರ್ಥಿ[30] ಉದಾ :

ಶಿಷ್ಯಂಗೆ ಶಿಕ್ಷಿಸಿದಂ, ಶಿಷ್ಯಂಗೆ ಕಲ್ಪಿಸಿದಂ--ಮೊದಲನೆಯ ಉದಾಹರಣೆ ಭೂಷಣದಲ್ಲಿದೆ. ಇದು ಅಷ್ಟೊಂದು ಸಮರ್ಪಕವಲ್ಲ. ಹಿಂದೆ ಹೇಳಿದಂತೆ ಅದು ಹೀಗಿರಬೇಕು—

"ಶಿಷ್ಯಂಗೆ ಶಿಕ್ಷೆಯುಂ ಕೊಟ್ಟಂ" ಅಥವಾ

"ಶಿಷ್ಯನಂ ಶಿಕ್ಷಿಸಿದಂ"

ಎರಡನೆಯಂದಾದ 'ಶಿಷ್ಯಂಗೆ ಕಲ್ಪಿಸಿದಂ' ಎಂಬ ಪ್ರಯೋಗ "ಶಿಷ್ಯನಂ ಕಲ್ಪಿಸಿದಂ" ಎಂಬಷ್ಟೇ ಸಾಧು ಪ್ರಯೋಗ. ಬಹುಶಃ ದ್ವಿತೀಯಾ ಚತುರ್ಥಿಗಳ ವಿನಿಮಯ ಆರ್ಯ ಭಾಷೆಗಳ ಪ್ರಭಾವದಿಂದ ಕನ್ನಡದಲ್ಲಿ ಬಂದಿರಬಹುದು.

6. ಪಂಚಮ್ಯರ್ಥದ ತೃತೀಯೇ—ಉದಾ :

ಮನೆಯಿಂ ಪೊಱಮಟ್ಟಂ, ಕರಿಶಿರದಿಂ ಮುತ್ತುಕ್ಕುವು. ತೃತೀಯಾ ವಿಭಕ್ತಿಗೆ (೨೦) ಎರಡು ಅರ್ಥಗಳನ್ನು ಹೇಳುವ ಶಕ್ತಿಯಿದೆಯಷ್ಟೆ.

## ವಿಭಕ್ತಿ ಪಲ್ಲಟದ ಭ್ರಮೆ

ವಿಭಕ್ತಿ ಪಲ್ಲಟಗೊಂಡಿಲ್ಲವಾದರೂ ಪಲ್ಲಟವಾದಂತೆ ಆಭಾಸಗೊಂಡರೆ ಅದನ್ನು ವಿಭಕ್ತಿ ಪಲ್ಲಟದ ಭ್ರಮೆಯೆಂದೇ ಹೇಳಬೇಕಾಗುತ್ತದೆ. ಒಂದೆಡೆ ಮಾತ್ರ ಇದು ಗೋಚರಿಸುತ್ತದೆ.

ದ್ವಿತೀಯಾರ್ಥದಲ್ಲಿ ಷಷ್ಠಿ—ದರ್ಪಣದಲ್ಲಿ ಮಾತ್ರ ಕಂಡುಬರುವ ಪಲ್ಲಟವಿದು. ಉದಾ :

ನೀನೆನ್ನ ಕೊಂದೆ

ತೆಂಕನಾಡ ಮುಱಿಯಲ್ಕೆ

ಇಲ್ಲಿ ದ್ವಿತೀಯಾ ವಿಭಕ್ತಿಯ ಕೊನೆಯಲ್ಲಿರುವ ಅನುಸ್ವಾರ ಲೋಪಗೊಂಡುದು ಮಾತ್ರವಾಗಿದೆ. ಆದ್ದರಿಂದ ವಿಭಕ್ತಿ ಪಲ್ಲಟದ ಆಭಾಸವನ್ನದು ತೋರಿಸಿದೆಯೆನ್ನಬಹುದು.

## ಕೃತಕ ವಿಭಕ್ತಿ ಪಲ್ಲಟಗಳು

ಕೆಳಗಿನ ವಿಭಕ್ತಿ ಪಲ್ಲಟಗಳನ್ನು ಕೃತಕವೆಂದು ಹೇಳಬಹುದು.

1. ಪ್ರಥಮಾರ್ಥದ ಷಷ್ಠಿ—ಉದಾ : ನಿಶ್ಶಂಕೆಯಿಂ ನೃಪನ ಪೇೞೆ
2. ಪ್ರಥಮಾರ್ಥದ ದ್ವಿತೀಯೆ—ಉದಾ : ನುಣ್ಪನುಳ್ಳಂ
3. ತೃತೀಯಾರ್ಥದ ದ್ವಿತೀಯೆ—ಉದಾ : ದೇವರಂ ಪೂವನರ್ಚಿಸಿದಂ
4. ಪಂಚಮ್ಯರ್ಥದಲ್ಲಿ ದ್ವಿತೀಯೆ—ಉದಾ : ಮಾಣವಕನಂ ಕಾರ್ಯಮಂ ಬೆಸಗೊಂಡಂ
5. ಚತುರ್ಥ್ಯರ್ಥದ ದ್ವಿತೀಯೆ—ಉದಾ : ಪೊನ್ನಂ ಬಡ್ಡಿಯುಂ ಕೊಟ್ಟಂ
6. ಸಪ್ತಮ್ಯರ್ಥದ ಪ್ರಥಮೆ—ಉದಾ : ಒಂದು ದಿನಂ ಬಂದಂ

7. ದ್ವಿತೀಯಾರ್ಥದ ಪ್ರಥಮೆ—ಉದಾ : ಒಂದುಂ ವರ್ಷವಿಂದುಂ

ಮೇಲಿನ ಪ್ರಯೋಗಗಳಲ್ಲಿ 6 ಮತ್ತು 7ನ್ನು ವಿಭಕ್ತಿ ಪಲ್ಲಟವೆಂದು ತಪ್ಪಾಗಿ ಭಾವಿಸಲಾಗಿದೆ. ಅಲ್ಲಿ ನಿಜವಾಗಿ ಸಪ್ತಮಿ ಮತ್ತು ದ್ವಿತೀಯೆಯು ಪ್ರಯೋಗ ಕನ್ನಡಕ್ಕೆ ಅಸ್ವಾಭಾವಿಕವಾದುದು. ಉಳಿದ ವಿಭಕ್ತಿ ಪಲ್ಲಟಗಳು ಛಂದಸ್ಸಿಗೆ ಹೊಂದಿಸಿಕೊಳ್ಳಲಿಕ್ಕಾಗಲಿ, ಸಂಸ್ಕೃತದ ಅಂಧಾನುಕರಣೆಯಿಂದಾಗಲಿ ಬಂದುದಾಗಿರಬೇಕು. 1,2,3,4, 5,ರ ಪ್ರಯೋಗಗಳು ಕನ್ನಡಕ್ಕೆ ತೀರಾ ಒಗ್ಗದವು.

ವಿಭಕ್ತಿ ಪಲ್ಲಟದ ಕುರಿತು ವಿಚಾರಿಸುವಲ್ಲಿ ಗಮನಾರ್ಹವಾದ ಭಾಷಾಸ್ವಭಾವವೊಂದನ್ನು ಪರಿಗಣಿಸಬೇಕಾಗುತ್ತದೆ. ಫಿಲ್‌ಮೋರ್ ಮೊದಲಾದ ಆಧುನಿಕ ಭಾಷಾವಿಜ್ಞಾನಿಗಳು ಕಂಡುಕೊಂಡಿರುವಂತೆ ಭಾಷೆಯು ರಚನೆಯಲ್ಲಿ ಅಂತರಾಳಸ್ತರ (Deep Structure) ಮತ್ತು ಮೇಲ್ಮೈಸ್ತರ (Surface Structure) ಎಂಬೆರಡು ರಚನೆಗಳಿವೆ (KSD. p. 147) "The most apparent layer constitutes the surface structure and the structure lying beneath it is called the deep structure" (C. M. L. p. 249) ಎಂಬ ಮಾತು ಆ ಎರಡು ಸ್ತರಗಳ ಸ್ವರೂಪವನ್ನು ಹೇಳುತ್ತದೆ. ಸಾಂಪ್ರದಾಯಿಕ ಸಂಜ್ಞೆಗಳನ್ನು ಬಳಸಿ ಹೇಳುವುದಾದರೆ 'ಕಾರಕ' ಭಾಷೆಯ 'ಅಂತರಾಳಸ್ತರ'ಕ್ಕೆ ಸಂಬಂಧಿಸಿದೆ. ವಿಭಕ್ತಿ ಮೇಲ್ಮೈ ಸ್ತರವನ್ನು ತೋರಿಸುತ್ತದೆ (KSD. p 149) ಎಂದು ಹೇಳಬಹುದು. ಒಂದು ಅಂತರಾಳಸ್ತರ- ಕಾರಕ (Deep case)—ಒಂದಕ್ಕಿಂದ ಹೆಚ್ಚು ಮೇಲ್ಮೈಸ್ತರ–ವಿಭಕ್ತಿ (surface case) ಗಳಿಂದ ಅಭಿವ್ಯಕ್ತವಾಗಬಹುದು. ಎಂದರೆ ಒಂದು ಕಾರಕ ಬೇರೆ ಬೇರೆ ವಿಭಕ್ತಿಗಳಿಂದ ಅಭಿವ್ಯಕ್ತವಾಗಂತ್ತದೆ ಎಂದಂತಾಯಿತು. ಜೊತೆಯಲ್ಲಿ ಒಂದು ವಿಭಕ್ತಿ ಒಂದಕ್ಕಿಂತ ಹೆಚ್ಚು ಕಾರಕಾರ್ಥಗಳನ್ನು ಅಭಿವ್ಯಕ್ತಗೊಳಿಸಬಲ್ಲುದು ಎಂಬುದೂ ಸ್ಪಷ್ಟವಾಯಿತು.

ಪ್ರಾಚೀನ ವೈಯಾಕರಣರು ಹೇಳುವ ವಿಭಕ್ತಿ ಪಲ್ಲಟದ ಹಿಂದೆ ಅವರು ಗುರುತಿಸಿದ ಭಾಷೆಯು ಈ ಅಂತರಾಳಸ್ತರ ಮತ್ತು ಮೇಲ್ಮೈಸ್ತರದ ಸುಳುವು ಸಿಗುತ್ತದೆ. ಕೇಶಿರಾಜನು ವಿಭಕ್ತಿ ಪಲ್ಲಟವನ್ನು ಹೇಳಿ ಕೊನೆಯಲ್ಲಿ "ಇಂತು ನುಡಿವ ಬಿನ್ನಣದಿಂ ಕಾರಕಂ ನಿಯತಾರ್ಥಂ ಎಂದಱಿವುದು"[81] ಎಂದು ಹೇಳಿದುದು ಅರ್ಥವಾಗುತ್ತದೆ. ವಿಭಕ್ತಿಗಳು ಯಥೇಷ್ಟವಾಗಿ ಪಲ್ಲಟಿಸಿದರೂ ಕಾರಕಾರ್ಥ ಬದಲಾಗದು ಎಂದವನ ಅಭಿಪ್ರಾಯ. ಹೀಗೆ ವಿಚಾರಿಸಿದಾಗ "ಕೇಶಿರಾಜನಂತಹ ಸಾಂಪ್ರದಾಯಿಕ ವೈಯಾಕರಣಿಗಳಿಗೆ (traditional grammarians)—ಅಂತರಾಳಸ್ತರ ಮತ್ತು ಮೇಲ್ಮೈಸ್ತರದ ರಚನೆಗಳ ರೂಪಭೇದಗಳ ಹೊಳಹು ಮನಸ್ಸಿಗಾದಂತೆ ತೋರುತ್ತದೆ" (ಪ್ರ. ಕ. 55-4 ಪು. 85). ಎಂಬ ಅಭಿಪ್ರಾಯ ಸಮುಚಿತವೆನಿಸುತ್ತದೆ. ಒಟ್ಟಿನಲ್ಲಿ ಕನ್ನಡ ವೈಯಾಕರಣರು ಹೇಳುವ ವಿಭಕ್ತಿ ಪಲ್ಲಟಗಳಲ್ಲಿ ಕೆಲವನ್ನು ಬಿಟ್ಟರೆ ಉಳಿದವುಗಳು ಅವರು ಕಂಡುಕೊಂಡ ಭಾಷಾಸೂಕ್ಷ್ಮತೆಗೆ ಕನ್ನಡಿ ಹಿಡಿಯುತ್ತವೆಯೆನ್ನುವುದರಲ್ಲಿ ಸಂದೇಹವಿಲ್ಲ.

## ಅಡಿಟಿಪ್ಪಣಿಗಳು

1. ನೋ. ವೈದಿಕ ಸಾಹಿತ್ಯ ಚರಿತ್ರೆ : ಪು. 491. ಚತ್ವಾರಿಶೃಂಗಾ........... ಅವಿವೇಶ (ಋಕ್ಸಂಹಿತೆ. 4-58-6) ಪದಗಳು ನಾಲ್ಕು ವಿಧ ಎಂಬ ಅಭಿಪ್ರಾಯ ಇಲ್ಲಿ ಸ್ಪಷ್ಟವಾಗಿರುತ್ತದೆ.
2. Oautline of Linguistic Analysis : p. 61. "........that words inflected for number and cases are called nouns."
3. ಕೃದಂತ ಎನ್ನುವಲ್ಲಿ ಅಷ್ಟಾಧ್ಯಾಯಿ 'ಕೃತ್' ಎಂದು ಮಾತ್ರ ಹೇಳುತ್ತದೆ.
4. ಕಾತಂತ್ರ : ಸೂ. 2-5-1ರ ವೃತ್ತಿ. "ವಸ್ತುವಾಚೀನಿ ನಾಮಾನಿ"
5. ನೋ. ಕರ್ನಾಟಕ ವ್ಯಾಕರಣ ಸಾರಂ : ಪು. 14-15. ನಾಮಲಿಂಗವನ್ನು 'ನಾಮವಾಚಕ' ವೆಂದು ಕರೆದು ಅದರಲ್ಲಿ 7 ಭೇದಗಳನ್ನು ಹೇಳಲಾಗಿದೆ. ವಸ್ತುವಾಚಕ, ಗುಣವಾಚಕ, ಸರ್ವನಾಮ, ಸಂಖ್ಯಾವಾಚಕ, ಸಂಖ್ಯೇಯವಾಚಕ, ಪ್ರಮಾಣವಾಚಕ ಮತ್ತು ಪ್ರಕಾರವಾಚಕ.
6. ಹಾಗೆ ನೋಡಿದರೆ ರೂಢನಾಮದಲ್ಲಿ ಸಮಾಸವಿದೆ : ನಿಡುಮೂಗ, ಕುಸಿಗೊರಲ ಇತ್ಯಾದಿ.
7. ಈ ಪದಗಳ ಕಡೆಗೆ ನನ್ನ ಗಮನ ಸೆಳೆದವರು ದೆಹಲಿ ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರಾಧ್ಯಾಪಕ ಡಾ. ಸತ್ಯಕಾಮವರ್ಮ.
8. ಸಿ. ಹೇ. ಶ. ಮತ್ತು ಶಾಕಟಾಯನದಲ್ಲಿ ಉತ್ತಮ ಪುರುಷ ಎನ್ನುವ ಅರ್ಥದಲ್ಲಿ 'ಅಸ್ಮದ್' ಎನ್ನುವ ಶಬ್ದವೂ ಜೈನೇಂದ್ರದಲ್ಲಿ ಮಧ್ಯಮ ಪುರುಷ ಎನ್ನುವ ಅರ್ಥದಲ್ಲಿ 'ಯುಷ್ಮದ್' ಎಂಬ ಶಬ್ದವೂ ಬಳಕೆಗೊಂಡಿವೆ.
9. ಲೀಲಾತಿಲಕಂ : ಸೂ. 16. 'ಅಂತೇ ವಿಕೃತಂ ಸಂಸ್ಕೃತ ರೂಪಾ' ಪ್ರಾಕೃತದಲ್ಲಿ ಸಂಸ್ಕೃತ ಜನ್ಯ, ಸಂಸ್ಕೃತ ಸಮ ಮತ್ತು ದೇಶಿ ಎಂದು ಮೂರು ಬಗೆಯಾಗಿ ಶಬ್ದಗಳು ವಿಂಗಡಿಸಲ್ಪಟ್ಟಿವೆ.
10. ಕವಿರಾಜಮಾರ್ಗದ 'ಸ್ವಿತ್ರಮರ್ದಿರೆ, ಅಱಿದುಪೇಳ್ಗೆ' ಮೊದಲಾದ ಪ್ರಯೋಗಗಳು ದರ್ಪಣಕಾರ ಹೇಳುವ 'ಕನ್ನಡಕ್ಕೆ ಸರಿಮಾಡಿ' ಸಮಸಂಸ್ಕೃತವಾಗಿಸುವ ವಿಚಾರಕ್ಕೆ ಸಂವಾದಿಯಾಗಿವೆ.
11. ಸಂಸ್ಕೃತಕ್ಕೆ ಪುಟ್ಟಿದ ಕನ್ನಡ ಶಬ್ದಗಳನ್ನು ಹೇಳುವಲ್ಲಿ (ಅಪಭ್ರಂಶ ಪ್ರಕರಣ) ಕೊಟ್ಟಿರುವ ಸಂಸ್ಕೃತ ಶಬ್ದಗಳೆಂದರೆ ಸಮಸಂಸ್ಕೃತ ಶಬ್ದಗಳೆಂದೇ ತಿಳಿಯಬೇಕು.
12. ಆ ನಿರ್ದಿಷ್ಟ ಪದಗಳ ಸಮಾಸಗಳಲ್ಲಿ ಸ್ಮೃತಿ ಭೂಷಣಗಳು ಹೇಳುವ ಸಮಸಂಸ್ಕೃತ-ಕನ್ನಡ ಪದಗಳ ಸಮಾಸವಾಗಲಿ, ದರ್ಪಣ ಹೇಳುವ ಪೂರ್ವಕವಿ ಪ್ರಯೋಗಗಳಾಗಲಿ ಒಳಗೊಳ್ಳುತ್ತವೆ.
13. ಮುಂಡ ಭಾಷೆಯಲ್ಲಿ ದ್ವಿವಚನವಿದೆ.
14. ಶಾಸನ. ಸೂ. 232ರ ವೃತ್ತಿಯಲ್ಲಿ 'ಗಳ್' ಎಂಬುದನ್ನು ಪ್ರತ್ಯಯವೆನ್ನಲಾಗಿದೆ.

15. "ಪರಶ್ಚ ಸ ಭವತಿ ಧಾತೋರ್ವಾ
ಪ್ರಾತಿಪದಿಕಾದ್ವಾಯಃ ಪ್ರತ್ಯಯ ಸಂಜ್ಞಃ", ಕಾಶಿಕಾ. 3-1-2

16. ತೈ. ಪ್ರಾ. ಸೂ. 5-7 "ಪ್ರತ್ಯೇತಿ ಪಶ್ಚಾದಾಗಚ್ಛತಿ ಇತಿ ಪ್ರತ್ಯಯಃ ಪರಃ

17. K. S : p. 6-7 "And he seems to equate Vibhakthi with Prathyaya (which may either be nominal suffix or the verbal suffix) when he states 'antadam pratyaym' embudu thereby confusing a function with a sign.

18. ಪ್ರಕ್ರಿಯಾ ಸರ್ವಸ್ವದ ಮಂಗಳ ಶ್ಲೋಕದಲ್ಲಿಯೂ ಇದೇ ಅಭಿಪ್ರಾಯವಿದೆ.

19. CGDL. P. 283 "But a distinction is to be drawn between the existence of a case and existence of a case-sign, or regular technical suffix of case." ಇದರಲ್ಲಿ first case, second case, nominative case, case-sign, case termination, accusative case-suffix ಎಂದೆಲ್ಲಾ ಬಳಕೆಗೊಂಡಿದೆ.

20. See. CGDL. p. 254 ವಿಭಕ್ತಿಗಳೆಂಟೆಂದು ಹೇಳಲಾಗಿದೆ.

21. ಸಾ. ಪ್ರ.—ಕಾರಕ ಪ್ರಕ್ರಿಯೆ—27 "ಕರ್ತಾಕರ್ಮಚ ಕರಣಂ ಸಂಪ್ರದಾನಂ ತಥೈವ ಚ ಅಪಾದಾನಾಧಿಕರಣಮಿತ್ಯಾಹುಃ ಕಾರಕಾಣಿ ಷಟ್"

22. ನೋ. ಸಿ. ಕೌ. ಕಾರಕ ಪ್ರಕರಣ 1-4-51. ಅಪಾದಾನ, ಸಂಪ್ರದಾನ, ಅಧಿಕರಣ, ಕರ್ಮ, ಕರಣ, ಕರ್ತಾ, ಹೇತು ಎಂಬುದಾಗಿ ಕಾರಕಗಳೇಳೆಂದು ಹೇಳಲಾಗಿದೆ.

23. ಭೂಷಣ ದರ್ಪಣಗಳು ಪ್ರಥಮಾ ವಿಭಕ್ತಿಗೆ ಕರ್ತೃರ್ಥವನ್ನು ಹೇಳುವುದಿಲ್ಲ.

24. ರೂಪಾವತಾರದಲ್ಲಿ ಕಾರಕಾವತಾರದ ಆರಂಭ—"ವಿಭಕ್ತ್ಯರ್ಥಾ ಪ್ರದರ್ಶ್ಯಂತೇ" ಎಂದಾಗುತ್ತದೆ.

25. ಕಾಶಿಕಾ 2-3-47 "ಅಭಿಮುಖ್ಯ ಕರಣಂ ಸಂಬೋಧನಂ"

26. ಅಲ್ಲಿ ಹೇಳುವ ಇನ್ನೊಂದು ಪ್ರಭೇದ 'ವೈಶೇಷಿಕ' ತಪ್ಪಾಗಿ ಬಂದುದಾಗಿರಬೇಕು. ಏಕೆಂದರೆ ಅದಕ್ಕೆ ಪ್ರಯೋಗವಾಗಿ ಕೊಟ್ಟಿರುವ 'ಪಟ್ಟಣವನ್ನೈದಿದಂ' ಎಂಬುದು ಪ್ರಾಪ್ಯಾರ್ಥದ 'ಊರನ್ನೈದಿದಂ' ಎಂಬುದಕ್ಕಿಂತ ಭಿನ್ನವಲ್ಲ.

27. ಕಾತಂತ್ರ 2-4-19. ಅಧಿಕರಣಾರ್ಥದಲ್ಲಿ ಸಪ್ತಮಿಯನ್ನು ವಿಧಿಸಿದೆ.

28. Proceedings of the First All India Conference of Dravidian Linguistics. p.262. "Here we clearly observe how the coloquial language plays a predominant part in shaping the idiomatic expression of the literary language."

29. ಕ. ಮಾ. 1-117 'ಬರವಿಾಗೆ' ಎಂಬಂತೆ ಕ್ರಿಯಾಸಮಾಸಕ್ಕೆ ಒಪ್ಪಿಗೆಯಿದೆ.

30. ಕಾತಂತ್ರ. 2-4-24. ದ್ವಿತೀಯಾ ಚತುರ್ಥಿಗಳ ವಿನಿಮಯವನ್ನು ಹೇಳಲಾಗಿದೆ.

31. ಸೋ. ದರ್ಪಣ (ಕ್ರಿ.) ಸೂ. 147ರ ಪ್ರಯೋಗ ವಿವರಣೆ. ದರ್ಪಣದಲ್ಲಿ ಸ್ವೀಕೃತ ಪಾಠ, 'ಇಂತು ನುಡಿದ ಬಿನ್ನಣದಿಂ ಕಾರಕಮನಿಯತಾರ್ಥಮೆಂದಱಿವುದು' ಎಂಬುದು ಸಮರ್ಪಕವಲ್ಲ.

# ಅಧ್ಯಾಯ ೯

## ಸಮಾಸ

'ಸಮಾಸ' ಎಂಬ ಪದಕ್ಕೆ 'ಸಂಶ್ಲೇಷ' 'ಸಂಕ್ಷೇಪ' ಎಂಬುದು ವಾಚ್ಯಾರ್ಥ. ವ್ಯಾಕರಣದಲ್ಲಿ ಪಾರಿಭಾಷಿಕ ಪದವಾಗಿ ಬಳಕೆಗೊಂಡಾಗ "ಸಮಸ್ಯತೇ ಅನೇಕಂ ಪದಮಿಂತಿ ಸಮಾಸಃ" ಎಂದು ಸಂಸ್ಕೃತದಲ್ಲಿ ವಿವರಣೆ ಕೊಡುತ್ತಾರೆ. ಇದನ್ನೇ ಕನ್ನಡದಲ್ಲಿ "ಬೇರೆ ಬೇರೆ ಅರ್ಥವುಳ್ಳ ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ಸಂಖ್ಯೆಯ ಪದಗಳನ್ನು ಕೂಡಿಸಿ ಒಂದೇ ಅರ್ಥವನ್ನು ಕೊಡುವಂತೆ ಮಾಡಿದ ಕೂಡುನುಡಿ" (ಪ್ರಾ. ಕ. ವ್ಯಾ. ಪು. 170) ಎಂದು ಹೇಳುತ್ತಾರೆ. ಈ ಕೂಡುನುಡಿಗೆ ಇನ್ನೊಂದು ಹೆಸರು ಸಮಸ್ತಪದ. ಸಮಸ್ತ ಪದದಲ್ಲಿ ಕೂಡಿಕೊಂಡಿರುವ ಶಬ್ದಗಳ ಪರಸ್ಪರ ಸಂಬಂಧವನ್ನು ವಿವರಿಸಿ ಹೇಳುವ ವಾಕ್ಯಕ್ಕೆ "ವಿಗ್ರಹ ವಾಕ್ಯ"ವೆಂದು ಸಂಸ್ಕೃತದಲ್ಲಿ ರೂಢಿ.

ಒಂದು ಭಾಷೆಯಲ್ಲಿ ಹೊಸ ಶಬ್ದಗಳ ಸೃಷ್ಟಿ, ತನ್ಮೂಲಕ ಅಭಿವ್ಯಕ್ತಿ ಸಾಧ್ಯತೆಯ ಹೆಚ್ಚಳ—ಈ ದೃಷ್ಟಿಯಿಂದ 'ಸಮಾಸ'ಕ್ಕೆ ವಿಶಿಷ್ಟವಾದ ಸ್ಥಾನವಿದೆ. ಎಲ್ಲ ಭಾಷೆಗಳ ಲ್ಲಿಯೂ ಕಂಡುಬರುವ ಈ ಪ್ರಕ್ರಿಯೆ ವೈವಿಧ್ಯಪೂರ್ಣವಾಗಿದೆ.

ಕನ್ನಡ ವ್ಯಾಕರಣಗಳು 'ಸಮಾಸ' ಎಂಬ ಸಂಜ್ಞೆಯನ್ನಾಗಲಿ, ಸಮಾಸ ವಿಧಾನ ಹಾಗೂ ಹೆಚ್ಚಿನ ಸಮಾಸ ಪ್ರಭೇದಗಳನ್ನಾಗಲಿ ಸಂಸ್ಕೃತ ವ್ಯಾಕರಗಳಿಂದಲೇ ಸ್ವೀಕರಿಸಿವೆ. ಅಷ್ಟಾಧ್ಯಾಯಿ, ಕಾತಂತ್ರ ಮೊದಲಾದ ಹೆಚ್ಚಿನ ಸಂಸ್ಕೃತ ವ್ಯಾಕರಣಗಳು 'ಸಮಾಸ' ವನ್ನು ಒಂದು ಸಂಜ್ಞೆಯಾಗಿ ಬಳಸಿವೆ. ಜೈನೇಂದ್ರ ಮಾತ್ರ ಸಮಾಸ ಎನ್ನುವಲ್ಲಿ 'ಸ' ಎಂದಿದೆ ಕನ್ನಡ ವ್ಯಾಕರಣಗಳಲ್ಲಿ 'ಸಮಾಸ'ಕ್ಕೆ ಸಂವಾದಿಯಾಗಿ 'ಪದವಿಧಿ' ಎಂಬ ಪದವೂ ಬಳಕೆಯಾಗಿದೆ. "ಸಮರ್ಥಃ ಪದವಿಧಿಃ" ಎಂದು ಅಷ್ಟಾಧ್ಯಾಯಿ (2–1–1), ಜೈನೇಂದ್ರ (1–3–1), ಸರಸ್ವತೀ ಕಂಠಾಭರಣ (1–2–77) ಮೊದಲಾದ ವ್ಯಾಕರಣ ಗಳು ಸಮಾಸ ನಿರೂಪಣೆಯ ಆರಂಭದಲ್ಲಿ ಪರಿಭಾಷಾ ಸೂತ್ರವಾಗಿ ಹೇಳುತ್ತವೆ. ವಿಧಿ ಯೆಂದರೆ ನಿಯಮ. ಪದಕ್ಕೆ ಸಂಬಂಧಿಸಿದ ವಿಧಿಯೆ ಪದವಿಧಿ (ಕಾಶಿಕಾ. 2–1–1 ; ಜೈನೇಂದ್ರ 1–3–1 ಮಹಾವೃತ್ತಿ). ಮಹಾಭಾಷ್ಯದಲ್ಲಿ ಸಮಾಸ, ವಿಭಕ್ತಿ ವಿಧಾನ ಮತ್ತು ಪರಾಂಗವದ್ಭಾವಗಳನ್ನು ಪದವಿಧಿಯೆನ್ನಲಾಗಿದೆ (2–1–1). ಸಮರ್ಥವೆಂದರೆ "ವಿಗ್ರಹವಾಕ್ಯಾರ್ಥಾಭಿಧಾನೇ ಯಃ ಶಕ್ತಃ ಸ ಸಮರ್ಥೋ ವೇದಿತವ್ಯಃ" (ಕಾಶಿಕಾ 2–1–1) ಎಂಬ ವೃತ್ತಿ ವಾಕ್ಯಾನುಸಾರ ವಿಗ್ರಹಿಸಿದಾಗ ವಾಕ್ಯದ ಅರ್ಥವನ್ನು ಕೊಡುವ ಸಾಮರ್ಥ್ಯವುಳ್ಳುದು ಎಂದರ್ಥ (A O P. p. 213). ಸಮಾಸಕ್ಕೆ ಸಂಬಂಧಿ

ಸಿದಂತೆ ''ಸಮರ್ಥ ಎಂದರೆ ಸಂಶ್ಲಿಷ್ಟಾರ್ಥವುಳ್ಳ (ವಿಶೇಷ್ಯ–ವಿಶೇಷಣ ಭಾವವುಳ್ಳ)ದಾಗಿ ಅಖಂಡಸ್ಥಿತಿಯನ್ನುಂಟುಮಾಡುವ) ಶಬ್ದ ಸಮುದಾಯ'' (ಕ.ಸ.ಪ್ರ. 4) ಎಂದೂ ಹೇಳಬಹುದು. ಸಮರ್ಥಕ್ಕೆ ಸ್ವತಂತ್ರ ಎಂದೂ ಅರ್ಥವಿದೆ. ಸಮಾಸವು ಕ್ರಿಯೆಯೊಂದಿಗೆ ಅನ್ವಯವಾಗುವಲ್ಲಿ ಸ್ವತಂತ್ರವಷ್ಟೆ. ಹಾಗೆ ಅಲ್ಲಿ ಸಮರ್ಥವಾದ ಪದವಿಧಿ, ಇಲ್ಲವೆ ಪದವಿಧಿ ಸಮರ್ಥ (ಮ.ಭಾ. 2_1-1)ವಾದರೆ ಸಮಾಸ ಎಂಬ ಅಭಿಪ್ರಾಯವಾದರೆ ಕನ್ನಡ ವೈಯಾಕರಣರು ಪದವಿಧಿ ಎಂಬ ಪದವನ್ನು ಸಮಾಸದ ಪರ್ಯಾಯವಾಚಿಯಾಗಿ ಬಳಸಿದ್ದಾರೆ.

ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಸಮಾಸಗಳನ್ನು ಪ್ರತ್ಯೇಕ ಪ್ರಕರಣದಲ್ಲಿ ನಿರೂಪಿಸುವುದು ಕ್ರಮ.

| ಗ್ರಂಥ | ಪ್ರಕರಣ |
|---|---|
| ಕಾತಂತ್ರ | ಸಮಾಸ ಪ್ರಕರಣ |
| ರೂಪಾವತಾರ | ಸಮಾಸಾವತಾರ |
| ಸಾರಸ್ವತ ಪ್ರಕ್ರಿಯೆ | ಸಮಾಸ ಪ್ರಕರಣಮ್ |
| ಪ್ರಕ್ರಿಯಾ ಸಂಗ್ರಹ | ಸಮಾಸ ಸಂಗ್ರಹ |

ಕನ್ನಡ ವ್ಯಾಕರಣಗಳೂ ಸಮಾಸಗಳನ್ನು ಪ್ರತ್ಯೇಕವಾದ ಪ್ರಕರಣಗಳಲ್ಲಿ ವಿವರಿಸುತ್ತವೆ. ಸ್ಮೃತಿ ದರ್ಪಣಗಳದ್ದು 'ಸಮಾಸ ಪ್ರಕರಣ'ವಾದರೆ ಭೂಷಣದ್ದು 'ಸಮಾಸ ವಿಧಾನ'. ಇಷ್ಟೇ ಇಲ್ಲಿರುವ ಅಂತರ.

## ಸಮಾಸ ಲಕ್ಷಣ

ಸಂಸ್ಕೃತದ ಕೆಲವು ವ್ಯಾಕರಣಗಳಲ್ಲಿ ಉಕ್ತವಾದ ಸಮಾಸದ ಲಕ್ಷಣ ಕೆಳಗಿನಂತಿದೆ.

| ಗ್ರಂಥ | ಲಕ್ಷಣ |
|---|---|
| ಅಷ್ಟಾಧ್ಯಾಯಿ | ಸಹಸುಪಾ 2-1-4 |
| ಕಾತಂತ್ರ | ನಾಮ್ನಾಂ ಸಮಾಸೋ ಯುಕ್ತಾರ್ಥಃ 2-5-1 |
| ಜೈನೇಂದ್ರ | ಸುಪ್‌ಸುಪಾ 1-3-3 |
| ಚಾಂದ್ರ | ಸುಪ್ ಸುಪಾ ಏಕಾರ್ಥಂ 2-2-1 |
| ಸ.ಕಂ. | ಸುಪ್ ಸುಪಾಸಹೇಕಾರ್ಥೀಭಾವೇ ಸಮಾಸಃ 3-2-1 |
| ಸಿ.ಹೇ.ಶ. | ನಾಮನಾಮ್ನೈಕಾರ್ಥ್ಯೆ ಸಮಾಸೋ ಬಹುಲಮ್ 3-1-18 |
| ಸಾ.ಪ್ರ. | ಸಮಾಸಶ್ಚಾನ್ವಯೇನಾಮ್ನಾಮ್ (ಸಮಾಸ ಪ್ರಕರಣ) 1 |

ಉಪರ್ಯುಕ್ತವಾದ ಲಕ್ಷಣಗಳ ತಾತ್ಪರ್ಯವೆಲ್ಲ ಒಂದೇ. ನಾಮವಾಚಕ ಪದಗಳು ಏಕಾರ್ಥೀ ಭಾವದಿಂದ (ಸಿ.ಹೇ.ಶ. 3-1-96 ವೃತ್ತಿ) ಕೂಡುವುದೆ ಸಮಾಸವೆಂಬುದು ಒಮ್ಮತದ ಅಭಿಪ್ರಾಯ. ಲಕ್ಷಣವಾಕ್ಯಗಳಲ್ಲಿ ವಾಚ್ಯವಾಗಿ ಹೇಳದಿದ್ದರೂ, ನಾಮ ವಾಚಕದೊಡನೆ ಕ್ರಿಯಾವಾಚಕ ಸೇರಿ ಸಮಾಸವಾಗದು ಎಂದರ್ಥವಲ್ಲ. "ಸಹಗ್ರಹಣಂ ಯೋಗ ವಿಭಾಗಾರ್ಥಂ ತಿಙಾಪಿ ಸಹ ಯಥಾಸ್ಯಾತ್"[1] ಎಂದು ನಾಮಕ್ಕೆ ಕ್ರಿಯೆಯೊಡನೆ ಸಮಾಸ ಘಟಿಸುವುದನ್ನು ಒಪ್ಪಲಾಗಿದೆ. ಅನುವ್ಯಚಲತ್, ಅನುಪ್ರಾವರ್ಷತ್, ಪಯುನೆ ಭೂಷಯಂತ್ ಇತ್ಯಾದಿ ಉದಾಹರಣೆಗಳಾಗಿವೆ.

ಸ್ಮೃತಿ ಭೂಷಣ ದರ್ಪಣಗಳು ಮೇಲಿನ ಲಕ್ಷಣಗಳನ್ನು ಚಾಚೂ ತಪ್ಪದೆ ಅನು ಸರಿಸುತ್ತವೆ.

ಸ್ಮೃತಿ : "ಸಂಗತಿಯಿಂದಂ ನಾಮಂಪದಂಗಳ್ ಅನೇಕಾರ್ಥಗತಿಯೊಳಾಗೆ ಸಮಾಸಂ ಸಂಗಳಿಸುಗುಂ" ಸೂ. 45

ಭೂಷಣ : ನಾಮ್ನಾಂ ಸಮಾಸಃ ಸಂಗತಾರ್ಥಃ ಸೂ. 124

ವೃ : ನಾಮ್ನಾಂ ನಾಮಂಪದಾನಾಂ ಸಂಗತಾರ್ಥಃ ಸಂಬಂಧಾರ್ಥಃ ಸಮಾಸೋ ವೇದಿತವ್ಯಃ

ದರ್ಪಣ : ನಾಮಂಪದಂ ಅರ್ಥಾನುಗಂ ಆಗೆಱಗೆ ಸಮಾಸಂ ನೆಗಟ್ಟುಂ ಸೂ. 173

ಮೂರೂ ಗ್ರಂಥಗಳು ನಾಮಂಪದಗಳು ಕೂಡಿ ಆಗುವ ಸಮಾಸದ ಕುರಿತು ಸಹಮತ ವಾಗಿವೆ. ಲಕ್ಷಣ ವಾಕ್ಯಗಳಲ್ಲಿ ಬಳಸಿದ ಶಬ್ದಗಳಲ್ಲಿ ಮಾತ್ರ ಅಂತರವಿದೆಯಷ್ಟೆ.[2] ಸ್ಮೃತಿ ಹೇಳುವ "ಏಕಾರ್ಥಗತಿ"ಗೆ (ನೋ. ವ್ಯಾಕರಣಗಳು ಪು. 11) ಚಾಂದ್ರ, ಮಹಾಭಾಷ್ಯ ಹಾಗೂ ಜೈನೇಂದ್ರದ ಮಹಾವೃತ್ತಿಯಲ್ಲಿ ಹೇಳುವ "ಏಕಾರ್ಥೀಭಾವ"ದಿಂದ ಪ್ರೇರಣೆ ದೊರಕಿರಬೇಕು. ಕಾತಂತ್ರದ "ಯುಕ್ತಾರ್ಥ"ಕ್ಕೆ (ದುರ್ಗ. ವೃತ್ತಿ. 2-5-1) ಭೂಷಣದ ಸಂಗತಾರ್ಥ ಹತ್ತಿರವಾಗಿದೆ. ಇದನ್ನೇ ಹಿಗ್ಗಿಸಿ ದರ್ಪಣಕಾರ "ಅರ್ಥಾನುಗಂ ಆಗಿ ಎಱಗೆ" ಎಂದಿರುವನು. ಸಮಾಸದಲ್ಲಿ ಕೂಡುವ ಪದಗಳು ಹೊಂದಿಕೊಳ್ಳುವುದು ಅರ್ಥಾನುಸಾರ ವಾಗಿಯಷ್ಟೆ. ಕನ್ನಡ ವೈಯಾಕರಣರು ನಾಮಂಪದಗಳ ಪ್ರಸ್ತಾಪವನ್ನು ಮಾತ್ರ ಲಕ್ಷಣ ವಾಕ್ಯಗಳಲ್ಲಿ ಹೇಳಿದ್ದರೂ ಅವರು ಕ್ರಿಯೆಯೊಂದಿಗೆ ಆಗುವ ಸಮಾಸವನ್ನು ಮರೆತಿಲ್ಲ. ಆದ್ದರಿಂದ ಸ್ಮೃತಿ ಭೂಷಣಗಳಲ್ಲಿ ಕ್ರಿಯಾಸಮಾಸದ ಲಕ್ಷಣವೂ ದರ್ಪಣದಲ್ಲಿ ಲಕ್ಷಣ ದೊಂದಿಗೆ ಆ ಸಂಜ್ಞೆಯೂ ಉಕ್ತವಾಗಿವೆ. ಕನ್ನಡ ವ್ಯಾಕರಣಗಳ ಸಮಾಸ ಲಕ್ಷಣಗಳು ಮೇಲೆ ನಮೂದಿಸಿದ ಸಂಸ್ಕೃತ ವ್ಯಾಕರಣಗಳ ಲಕ್ಷಣ ವಾಕ್ಯಗಳಿಗೆ ಸಮಾನವಾಗಿರುವು ದಲ್ಲದೆ ಅಲ್ಲಿ ಮೊದಲಲ್ಲಿ ಬರುವ ಪರಿಭಾಷಾ ಸೂತ್ರಕ್ಕಲ್ಲ. ಹಾಗಾಗಿ ಇಬ್ಬರು (ನಾಗ ವರ್ಮ, ಕೇಶಿರಾಜರು) ಹೇಳಿದುದೂ "ಸಮರ್ಥಃ ಪದವಿಧಿಃ" ಎಂಬುದನ್ನೇ (ಕ.ಸ.ಪ್ರು. 4) ಎಂಬ ಅಭಿಪ್ರಾಯ ಸಮರ್ಪಕವಲ್ಲ.

## ವಿಭಕ್ತಿಲೋಪ

ನಾಮಪದಗಳು ಕೂಡಿ ಸಮಾಸವಾಗುವಲ್ಲಿ ಪದಗಳ ಮಧ್ಯದಲ್ಲಿರುವ ವಿಭಕ್ತಿಗಳು ಲೋಪ ಹೊಂದುತ್ತವೆ. ಈ ಬಗ್ಗೆ ಕನ್ನಡ ವೈಯಾಕರಣರದು ಒಕ್ಕೊರಲಿನ ಅಭಿಪ್ರಾಯ:

ಸ್ಮೃತಿ : ವಿಭಕ್ತಿಗಣಂಗಳ್ಗಂತರದೊಳಲ್ಲಿ
ಲೋಪಮುಂದಕ್ಕುಂ ಸೂ. 45

ಭೂಷಣ : ತತ್ಪ್ರಾಂತವರ್ತಿನ್ಯೋ ವಿಭಕ್ತಯೋಲೋಪ್ಯಾಃ ಸೂ. 125

ದರ್ಪಣ : ''ನೆಱಿಪೋಕುಂ ಮಧ್ಯಗತ ವಿಭಕ್ತಿಗಳವಱೊಳ್''

ಈ ವಿವರಣೆ ಕಾತಂತ್ರದ ''ತತ್‌ಸ್ಥಾಲೋಪ್ಯಾವಿಭಕ್ತಯಃ'' (2–5–2) ಎಂಬ ಸೂತ್ರದ ಕನ್ನಡ ಅವತರಣಿಕೆಯಾಗಿದೆ. ಇಲ್ಲಿ ಅಲುಕ್ ಸಮಾಸವನ್ನು ಕನ್ನಡ ವೈಯಾಕರಣರು ಏಕೆ ಗಮನಿಸಿಲ್ಲವೋ ತಿಳಿಯದು.

## ಆಗಮ, ಆಗಮಲೋಪ ಮತ್ತು ಆದೇಶ

ಸಮಾಸ ಕಾರ್ಯದಲ್ಲಿ ನಡೆಯುವ ಆಗಮ, ಆಗಮಲೋಪ ಮತ್ತು ಆದೇಶದ ವಿಚಾರ ದರ್ಪಣದಲ್ಲಿ ಮಾತ್ರ ನಿರೂಪಿತವಾಗಿದೆ. ಇದ್ದುದನ್ನು ಕೆಡಿಸದೆ ಬರುವವುಗಳು ಆಗಮಗಳು, ಅವು ವಿಭಕ್ತಿಗಳೊಡನೆ ಲೋಪ ಹೊಂದುತ್ತವೆ. ಹಗೆಯಂತೆ ಇದ್ದುದನ್ನು ನಾಶಗೊಳಿಸುವುದು ಆದೇಶ—ಇದು ಕೇಶಿರಾಜನ ವಿವರಣೆ (ಸೂ. 174). ಸಮಾಸದಲ್ಲಿ ಸಂಧಿಕಾರ್ಯ ನಡೆಯುತ್ತದೆ. ಸಂಧಿಕಾರ್ಯವನ್ನೂ ಲೋಪಾಗಮಾದೇಶಾದಿಗಳನ್ನೂ ಸಂಧಿಪ್ರಕರಣದಲ್ಲಿ ಹೇಳಿ ಮುಗಿಸಿರುವುದರಿಂದ ಇಲ್ಲಿ ಅದರ ವಿವರಣೆ ಅನಗತ್ಯವೆಂದು ಪಂಡಿತರು ತೋರಿಸಿಕೊಟ್ಟಿದ್ದಿದೆ. (ನೋ : ದರ್ಪಣ ಪು. 454). ಇರ್ದುದನ್ನು ಅಟ್ಟಿಯುವುದು ಲೋಪವೆಂದೂ, ಇದ್ದುದನ್ನು ಅಟ್ಟಯದ ನಯದಿಂ ಪೊರ್ದುವವು ಆಗಮವೆಂದೂ, ಪಗೆಯಂತಿರೆ ಇರ್ಪುದಂ ಕಿಡಿಸಿ ಬರ್ಪುದಾದೇಶವೆಂದೂ ಸಾಮಾನ್ಯವಾಗಿ ಸಂಧಿಕಾರ್ಯದಲ್ಲಿ ನಡೆಯುವ ಲೋಪಾಗಮಾದೇಶಗಳನ್ನು ವಿವರಿಸುವುದು ರೂಢಿ.[3] ಇದೇ ವಿಚಾರವನ್ನು ದರ್ಪಣಕಾರ ಸಮಾಸ ಪ್ರಕರಣದಲ್ಲಿ ಹೇಳುತ್ತಿದ್ದರೆ ಅದು ಅನಗತ್ಯವೆನಿಸುತ್ತಿತ್ತು. ಆದರೆ ಕೇಶಿರಾಜ ಹೇಳಿದ ವಿಚಾರ ಇದಕ್ಕಿಂತ ವ್ಯತಿರಿಕ್ತವಾಗಿದೆ.

ಹಿಂದಿನ ಸೂತ್ರದಲ್ಲಿ ವಿಭಕ್ತಿ ಲೋಪಹೊಂದುವ ವಿಚಾರ ಪ್ರಸ್ತಾಪಿತವಾಗಿತ್ತಷ್ಟೆ. ಈ ಸೂತ್ರದಲ್ಲಿ (174) ಅದರ ಮುಂದುವರಿಕೆಯಿದೆ. ನಾಮಪ್ರಕರಣದಲ್ಲಿ ನಿರೂಪಿತವಾಗಿರುವಂತೆ ವಿಭಕ್ತಿಗಳು ನಾಮಗಳನ್ನು (ಲಿಂಗಗಳನ್ನು) ಸೇರುವಾಗ ನ್, ಮ್, ದ್, ಇನ್, ಅಱ್ ಇತ್ಯಾದಿ ಆಗಮಗಳಾಗುತ್ತವೆ. ಅಲ್ಲಿ ನಾಗಮ, ದಾಗಮ, ಇನಾಗಮ ಹೀಗೆ ಕರೆದುದನ್ನು ಗಮನಿಸಬೇಕು. ದರ್ಪಣಕಾರ ಆ ಆಗಮವನ್ನೇ ಇಲ್ಲಿ ಮತ್ತೊಮ್ಮೆ 'ಆಗಮ' ವೆಂದುದಾಗಿದೆ. ಉದಾಹರಣೆಯಾಗಿ ಕೊಟ್ಟ 'ಮಾತಿನ ಬಲ್ಲಹಂ', 'ನೂಱುಪತ್ತು', 'ತೆಂಕಣ ನಂಕಂ' ಇತ್ಯಾದಿ ಪ್ರಯೋಗಗಳಲ್ಲಿ ಅನುಕ್ರಮವಾಗಿ ಇನಾಗಮ, ಅಱಾಗಮ

ಅಣಾಗಮಗಳಿವೆ. ಮಾತ್ರವಲ್ಲ, ಸಂಧಿಪ್ರಕರಣದಲ್ಲಿ 'ಆಗಮ' ಎಂಬುದು ಪಾರಿಭಾಷಿಕ ಪದವಾಗಿ ಪ್ರಯುಕ್ತವಾಗಿಲ್ಲವೆಂಬುದನ್ನೂ ಗಮನಿಸಬೇಕು. ಈ ಆಗಮಗಳು ಸಂಧಿಯಲ್ಲಿ ಬಂದ ಆಗಮಗಳಾಗಿರದೆ "ವಿಭಕ್ತಿಯ ಬೞಿವಿಡಿದು" ಬಂದವುಗಳಾಗಿವೆ; "ಇರ್ದುದು ಅೞಿಯದೆ ನಯದಿಂ" ಬಂದವುಗಳಾಗಿವೆ.

ವಿಭಕ್ತಿಗಳ ನಿಮಿತ್ತವಾಗಿ ಬಂದ ಆಗಮಗಳು ವಿಭಕ್ತಿ ಲೋಪವಾದೊಡನೆ ಲೋಪ ಗೊಳ್ಳುವುದು ಸ್ವಾಭಾವಿಕ. ಆದನ್ನೇ ದರ್ಪಣಕಾರ "ಅವೆಯ್ದೆ ಪೋಪುವು ಲೋಪಮ ಬೊರ್ದಿ ವಿಭಕ್ತಿಯ ಬೞಿವಿಡಿದು" ಎಂದು ವಾಚ್ಯವಾಗಿಯೇ ಹೇಳಿದ್ದಾನೆ. ಒಮ್ಮೆ ಬಂದು ಬಳಿಕ ಹೋಗುವ ಕ್ರಿಯೆಯಾದುದರಿಂದ ಅದು ಕೇವಲ ಲೋಪವಾಗಿರದೆ 'ಆಗಮ ಲೋಪ'ವಾಗಿದೆ. ಮೇಲೆ ಆಗಮಕ್ಕೆ ಕೂಡದ ಪದಗಳನ್ನು ಕೊಟ್ಟರೆ ಇಲ್ಲಿ ಆ ಪದಗಳನ್ನೇ ಕೂಡಿಸಿಕೊಟ್ಟುದು ಸಮರ್ಪಕವಾಗಿದೆ. 'ಮಾತುವಲ್ಲಹ', 'ನೂಱಿಪತ್ತು', 'ತೆಂಕವಂಕ' ಎಂಬ ಸಮಸ್ತ ಪದಗಳಲ್ಲಿ ಪೂರ್ವಪದದ ಕೊನೆಯಲ್ಲಿದ್ದ ಷಷ್ಠೀ ವಿಭಕ್ತಿಯೊಡನೆ ಇನಾ ಗಮ, ಅಱಾಗಮ, ಅಣಾಗಮಗಳು ಲೋಪ ಹೊಂದಿರುವುದು ಸ್ಪಷ್ಟವಾಗಿದೆ.

ಸಂಧಿಗಳ ವಿವೇಚನೆಯಲ್ಲಿ ದರ್ಪಣಕಾರ 'ಆದೇಶ' ಎಂಬ ಸಂಜ್ಞೆಯನ್ನೇ ಬಳಸಿಲ್ಲ. ಅವನ ದೃಷ್ಟಿಯಲ್ಲಿ ಸಂಧಿಕಾರ್ಯದಲ್ಲಿ ಒಂದು ವರ್ಣವನ್ನೋಡಿಸಿ ಅದರ ಜಾಗದಲ್ಲಿ ಇನ್ನೊಂದು ವರ್ಣ ಬಂದರೆ ಅದು ಆದೇಶವಲ್ಲ; ಆದರೆ ಸಮಾಸದಲ್ಲಿ ಒಂದು ಯಾ ಒಂದಕ್ಕಿಂತ ಹೆಚ್ಚು ವರ್ಣಗಳನ್ನೋಡಿಸಿ ಅಲ್ಲಿ ಇನ್ನೊಂದು ವರ್ಣ ಯಾ ಹೆಚ್ಚು ವರ್ಣ ಗಳು ಬಂದರೆ ಅದು ಆದೇಶ. ಕಿಱಿಯ್ಕೊಂಬು, ಒರ್ವೊಡಲ್, ಇರ್ವಯ್ ಇತ್ಯಾದಿ ಉದಾಹರಣೆಗಳಲ್ಲಿ ಕಿಱ್, ಒರ್, ಇರ್—ಇವುಗಳು ಅನುಕ್ರಮವಾಗಿ ಕೆಳಗು, ಒಂದು, ಎರಡು—ಇದಕ್ಕೆ ಬಂದ ಆದೇಶಗಳಾಗಿವೆ.

ಒಟ್ಟಿನಲ್ಲಿ ಇಲ್ಲಿ ದರ್ಪಣಕಾರ ಹೇಳುವ ಆಗಮ ಮತ್ತು ಆಗಮ ಲೋಪದ ಸಂಬಂಧ ವಿಭಕ್ತಿಯೊಡನಾದರೆ ಆದೇಶವು ಸಮಾಸಗಳಲ್ಲಿ ಪೂರ್ವಪದಕ್ಕೆ ಸಂಬಂಧಿಸಿದು ದಾಗಿದೆ. ಈ ಆಗಮ, ಆಗಮಲೋಪ, ಆದೇಶ-ಇವುಗಳಿಗೆ ಸಂಧಿಪ್ರಕರಣದಲ್ಲಿ ಸಾಮಾನ್ಯವಾಗಿ ರೂಢವಾಗಿರುವ ಲೋಪ, ಆದೇಶಗಳೊಡನೆ ಯಾವ ಸಂಬಂಧವೂ ಇಲ್ಲ. ಆದ್ದರಿಂದ ದರ್ಪಣಕಾರ ಸಂಧಿಪ್ರಕರಣದಲ್ಲಿ ಹೇಳಬೇಕಾದುದನ್ನು ಸಮಾಸ ಪ್ರಕರಣದಲ್ಲಿ ಹೇಳಿದುದು ಶಾಸ್ತ್ರೀಯವಾಗಿ ಅಕ್ರಮ (ದರ್ಪಣ (ಪ) ಪು. 4?4) ಎಂಬ ಹೇಳಿಕೆ ತೀರ ಅಸಮರ್ಪಕ.

## ಸಮಾಸ ಪ್ರಭೇದಗಳು

ಅಷ್ಟಾಧ್ಯಾಯಿ ಮತ್ತು ಮಹಾಭಾಷ್ಯದಲ್ಲಿ ನಿರೂಪಿತವಾದಂತೆ ಸಮಾಸಗಳು ನಾಲ್ಕು. ತತ್ಪುರುಷ, ದ್ವಂದ್ವ, ಬಹುವ್ರೀಹಿ, ಅವ್ಯಯೀಭಾವಗಳೆಂದು ಆ ನಾಲ್ಕು ಸಮಾಸ ಸಂಜ್ಞೆಗಳು. ಕರ್ಮಧಾರಯ ಮತ್ತು ದ್ವಿಗುವನ್ನು ತತ್ಪುರುಷದ ಪ್ರಭೇದ ಗಳೆಂದು ಅಲ್ಲಿ ಪರಿಗಣಿಸಲಾಗಿದೆ. ಸಮಾಸಗಳ ಸಂಖ್ಯೆ ಮತ್ತು ಸಂಜ್ಞೆಗಳ ವಿಚಾರದಲ್ಲಿ

ಕಾತಂತ್ರ ಪೂರ್ಣವಾಗಿ ಅಷ್ಟಾಧ್ಯಾಯಿಯನ್ನನುಸರಿಸಿದರೆ ಜೈನೇಂದ್ರ ಸಂಖ್ಯೆಯ ಮಟ್ಟಿಗೆ ಕಾತಂತ್ರದೊಂದಿಗೆ ಸಹಮಂತವಾಗಿದೆ. ಜೈನೇಂದ್ರ ಹೊರತಾದ ಹೆಚ್ಚಿನ ಎಲ್ಲ ಸಂಸ್ಕೃತ ವ್ಯಾಕರಣಗಳು ಪಾಣಿನಿ ಬಳಸಿರುವ ಸಂಜ್ಞೆಗಳನ್ನೇ ಬಳಸಿವೆ. ಜೈನೇಂದ್ರ ತನ್ನ ಸ್ವಭಾವವಕ್ಕನುಸರಿಸಿ ಏಕಾಕ್ಷರಿಗಳಾದ ಸಂಜ್ಞೆಗಳನ್ನು ಬಳಸಿದರೂ ಅದು ದ್ವಂದ್ವ ಸಮಾಸಕ್ಕೆ ಬೇರೆ ಸಂಜ್ಞೆಯನ್ನು ಕಂಡುಕೊಂಡಿಲ್ಲ.

| **ಜೈನೇಂದ್ರ** | **ಇತರ ಗ್ರಂಥಗಳು** |
|---|---|
| ಹ | ಅವ್ಯಯೀಭಾವ |
| ಷಮ್ | ತತ್ಪುರುಷ |
| ಯ | ಕರ್ಮಧಾರಯ |
| ರ | ದ್ವಿಗು |
| ಬಮ್ | ಬಹುವ್ರೀಹಿ |
| ದ್ವಂದ್ವ | ದ್ವಂದ್ವ |

ಮೊದಲಿಗೆ ನಾಲ್ಕಾಗಿದ್ದ ಸಮಾಸಗಳು ಆರಾಗಿ ರೂಢಿಯಲ್ಲಿ ಷಡ್ವಿಧ (ಸಾ. ಪ : ಸಮಾಸ ಪ್ರಕರಣ. 1) ಸಮಾಸವೆಂದಾಯಿತು. ಕಾಲಕ್ರಮೇಣ ಈ ಸಮಾಸಗಳ ಆಂತರಿಕ ಭೇದ ಗಳು ಹೆಚ್ಚಾಗಿ ಸಮಾಸಗಳ ಸಂಖ್ಯೆ ಒಟ್ಟು ಇಪ್ಪತ್ತೆಂಟಾಯಿತು (ಕ. ಸ. ಪು. 18). (ತತ್ಪುರುಷದಲ್ಲಿ ಎಂಟು, ಕರ್ಮಧಾರಯ ಬಹುವ್ರೀಹಿಗಳಲ್ಲಿ ಏಳೇಳು, ದ್ವಿಗು, ದ್ವಂದ್ವ ಮತ್ತು ಅವ್ಯಯೀಭಾವಗಳಲ್ಲಿ ಎರಡೆರಡು–ಹೀಗೆ ಒಟ್ಟು 28).

ಕನ್ನಡ ವ್ಯಾಕರಣಗಳು ಸಂಸ್ಕೃತ ವೈಯಾಕರಣರು ಹೇಳುವ ಪ್ರಸಿದ್ಧವಾದ ಆರು ಸಮಾಸಗಳನ್ನೂ ಸ್ವೀಕರಿಸಿವೆ. ದರ್ಪಣಕಾರ ಮಾತ್ರ ಸಮಾಸಗಳ ಲೆಕ್ಕವನ್ನು ಹೇಳು ತ್ತಾನೆ.

> "ಷಟ್ ಸಮಾಸಂಗಳ್ಗಂ ಸಪ್ತ ವಿಭಕ್ತಿಯುಂ ಪತ್ತಿಸುವುದು........ಎಂದು ಕ್ರಮದಿಂ ತತ್ಪುರುಷ, ಕರ್ಮಧಾರಯ ದ್ವಿಗು ದ್ವಂದ್ವ ಅವ್ಯಯೀಭಾವ ಬಹುವ್ರೀಹಿ ಸಮಾಸಂಗಳ್........
>
> (ಸೂ. 82ರ ವಿವರಣೆ)

ಸ್ಮೃತಿ ಭೂಷಣಗಳು ಹೇಳುವುದು ಈ ಆರು ಸಮಾಸಗಳನ್ನಾದರೂ ಅವು ಹೀಗೆ ಲೆಕ್ಕ ಮಾಡಿ ಹೇಳುವುದಿಲ್ಲ. ಸಮಾಸಗಳ ಸಂಜ್ಞೆ ಮತ್ತು ಅವುಗಳ ಲಕ್ಷಣಗಳನ್ನು ಅಷ್ಟಾ ಧ್ಯಾಯಿ, ಕಾತಂತ್ರ ಮೊದಲಾದ ಸಂಸ್ಕೃತ ವ್ಯಾಕರಣಗಳಿಂದಲೇ ಕನ್ನಡ ವ್ಯಾಕರಣಗಳು ಸ್ವೀಕರಿಸಿವೆ. ಈ ಸಮಾಸಗಳ ಆಂತರಿಕ ಭೇದಗಳನ್ನು ಇವು ಸ್ಪರ್ಶಿಸುವುದಿಲ್ಲ.

ಸಂಸ್ಕೃತ ವ್ಯಾಕರಣಗಳು ಹೇಳದ ಎರಡು ಸಮಾಸಗಳನ್ನು ದರ್ಪಣ ಹೇಳಿದೆ. ಅವುಗಳಲ್ಲೊಂದಾದ ಕ್ರಿಯಾಸಮಾಸದ ಲಕ್ಷಣ ಸ್ಮೃತಿ ಭೂಷಣಗಳಲ್ಲಿ ಉಕ್ತವಾಗಿದೆ.

ಆದರೆ 'ಕ್ರಿಯಾ' ಎಂಬ ಸಂಜ್ಞೆಯನ್ನು ಮೊದಲಬಾರಿಗೆ ಬಳಸಿದ್ದು ದರ್ಪಣವೇ ಆಗಿದೆ. ಮತ್ತೊಂದು ಸಮಾಸವಾದ 'ಗಮಕ'ದ ಲಕ್ಷಣ ಮತ್ತು ಸಂಜ್ಞೆ–ಇವೆರಡೂ ಕನ್ನಡ ವ್ಯಾಕರಣ ಪ್ರಪಂಚಕ್ಕೆ ದರ್ಪಣದ ಕೊಡುಗೆಯಾಗಿದೆ.

### ಸಮಾಸಾನುಕ್ರಮ

ಸಂಸ್ಕೃತದ ಎಲ್ಲ ವ್ಯಾಕರಣಗಳಲ್ಲೂ ಒಂದೇ ಕ್ರಮದಲ್ಲಿ ಆರು ಸಮಾಸಗಳನ್ನು ಹೇಳುವುದಿಲ್ಲ. ಒಂದೊಂದರಲ್ಲಿ ಒಂದೊಂದು ಕ್ರಮವನ್ನು ಅನುಸರಿಸಿದಂತೆ ತೋರುತ್ತದೆ.

### ಅಷ್ಟಾಧ್ಯಾಯಿ

ಅವ್ಯಯೀಭಾವ, ತತ್ಪುರುಷ, ದ್ವಿಗು, ಕರ್ಮಧಾರಯ, ಬಹುವ್ರೀಹಿ, ದ್ವಂದ್ವ,.

### ಕಾತಂತ್ರ

ಕರ್ಮಧಾರಯ, ದ್ವಿಗು, ತತ್ಪುರುಷ, ಬಹುವ್ರೀಹಿ, ದ್ವಂದ್ವ, ಅವ್ಯಯೀಭಾವ,

### ಜೈನೇಂದ್ರ

ಅವ್ಯಯೀಭಾವ, ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ದ್ವಂದ್ವ.

### ಸಿ. ಹೇ. ಶ

ಬಹುವ್ರೀಹಿ, ಅವ್ಯಯೀಭಾವ, ತತ್ಪುರುಷ, ದ್ವಿಗು, ಕರ್ಮಧಾರಯ, ದ್ವಂದ್ವ.

### ಸಾರರುಚ ಸಂಗ್ರಹ

ತತ್ಪುರುಷ, ಕರ್ಮಧಾರಯ, ಬಹುವ್ರೀಹಿ, ದ್ವಿಗು, ದ್ವಂದ್ವ, ಅವ್ಯಯೀಭಾವ.

### ರೂಪಾವತಾರ

ಅವ್ಯಯೀಭಾವ, ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ದ್ವಂದ್ವ,

ಸಂಸ್ಕೃತದಲ್ಲಿ ಯಾವುದೇ ನಿಶ್ಚಿತ ಕ್ರಮವನ್ನು ಇಟ್ಟುಕೊಂಡಿರುವಂತೆ ತೋರುವುದಿಲ್ಲ. ಕನ್ನಡ ವ್ಯಾಕರಣದಲ್ಲಿ ಸಮಾಸಾನುಕ್ರಮದ ಬಗ್ಗೆ ಹೆಚ್ಚು ಕಡಿಮೆ ಒಮ್ಮತದ ಅಭಿಪ್ರಾಯವಿದೆ :

| | | | | | | |
|---|---|---|---|---|---|---|
| ಸ್ಮೃತಿ : | ತತ್ಪುರುಷ, | ಕರ್ಮಧಾರಯ, | ದ್ವಿಗು, | ಬಹುವ್ರೀಹಿ, | ದ್ವಂದ್ವ, | ಅವ್ಯಯೀಭಾವ |
| ಭೂಷಣ : | ,, | ,, | ,, | ಅವ್ಯಯೀಭಾವ | ,, | ಬಹುವ್ರೀಹಿ |
| ದರ್ಪಣ : | ,, | ,, | ,, | ಬಹುವ್ರೀಹಿ | ,, | ಅವ್ಯಯೀಭಾವ |

ಸಮಾಸಾನುಕ್ರಮದಲ್ಲಿ ದರ್ಪಣ ಪೂರ್ಣವಾಗಿ ಸ್ಮೃತಿಯನ್ನು ಅನುಸರಿಸಿದರೆ ಭೂಷಣ ಅಲ್ಪ ಮಾತ್ರ ವ್ಯತ್ಯಾಸವನ್ನು ಮಾಡಿಕೊಂಡಿದೆ. ಸಂಸ್ಕೃತ ಸಮಾಸಗಳನ್ನು ಹೇಳಿದ ಬಳಿಕವೇ ಸ್ಮೃತಿ ಭೂಷಣಗಳು ಕ್ರಿಯಾ ಸಮಾಸದ ಲಕ್ಷಣವನ್ನು ಹೇಳುತ್ತವೆ. ದರ್ಪಣ ಅದೇ ಕ್ರಮದಲ್ಲಿ ಕ್ರಿಯಾಸಮಾಸವನ್ನು ಹೇಳಿ ಕೊನೆಯಲ್ಲಿ ಗಮಕವನ್ನು ನಿರೂಪಿಸುತ್ತದೆ.

**ವಿಭಜನೆಯ ತಳಹದಿ**

ಸಮಾಸದಲ್ಲಿ ಕೂಡುವ ಪದಗಳ ಅರ್ಥಪ್ರಾಧಾನ್ಯ,[4] ಇಲ್ಲವೆ ಪದಗಳ ವರ್ಗ (ವಿಶೇಷಣ, ನಾಮ ಇತ್ಯಾದಿ) ಅಥವಾ ಪದಗಳು ಹೊಂದಿರುವ ವಿಭಕ್ತಿ-ಇವುಗಳ ತಳಹದಿಯಲ್ಲಿ ಸಮಾಸಗಳ ವಿಭಜನೆಯಾಗುವುದನ್ನು ಕಾಣಬಹುದು. ಅರ್ಥಪ್ರಾಧಾನ್ಯವನ್ನು ತಳಹದಿಯಾಗಿಟ್ಟುಕೊಂಡು ಮೊತ್ತಮೊದಲು ಸಮಗ್ರವಾಗಿ ಸಮಾಸಗಳ ವಿಭಜನೆಯಾದುದು ಮಹಾಭಾಷ್ಯದಲ್ಲಾಗಿದೆ.

> "ಇಹ ಕಶ್ಚಿತ್ ಸಮಾಸಃ ಪೂರ್ವಪದಾರ್ಥ ಪ್ರಧಾನಃ। ಕಶ್ಚಿದುತ್ತರಪದಾರ್ಥ ಪ್ರಧಾನಃ। ಕಶ್ಚಿದನ್ಯಪದಾರ್ಥ ಪ್ರಧಾನಃ। ಕಶ್ಚಿದುಭಯ ಪದಾರ್ಥ ಪ್ರಧಾನಃ। ಪೂರ್ವ ಪದಾರ್ಥ ಪ್ರಧಾನೋಽವ್ಯಯೀಭಾವಃ। ಉತ್ತರ ಪದಾರ್ಥ ಪ್ರಧಾನಸ್ತತ್ಪುರುಷಃ। ಅನ್ಯ ಪದಾರ್ಥ ಪ್ರಧಾನೋ ಬಹುವ್ರೀಹಿಃ। ಉಭಯ ಪದಾರ್ಥಪ್ರಧಾನೋದ್ವಂದ್ವಃ"।

(ಮಹಾಭಾಷ್ಯ 2-1-6) ಈ ವಿಧವಾದ ವರ್ಗೀಕರಣ ಮಹಾಭಾಷ್ಯಕ್ಕಿಂತ ಹಿಂದೆಯೇ ಇದ್ದಿರಬೇಕು. ಅಷ್ಟಾಧ್ಯಾಯಿಯಲ್ಲಿ ಬಹುವ್ರೀಹಿಯ ಲಕ್ಷಣವನ್ನು ಹೇಳುವಾಗ "ಅನೇಕಮನ್ಯಪದಾರ್ಥೇ" (2-2-24) ಎಂದು 'ಪದಾರ್ಥ'ದ ಪ್ರಸ್ತಾಪ ಬಂದಿದೆ. ಪೂರ್ವೋತ್ತರ ಪದಗಳು ಹೊಂದಿರುವ ವಿಭಕ್ತಿಗಳನ್ನು ಹೊಂದಿಕೊಂಡು ಸಮಾನಾಧಿಕರಣ (ಅಷ್ಟಾಧ್ಯಾಯಿ. 1-2-42) ಇಲ್ಲವೆ ವ್ಯಧಿಕರಣವೆಂಬ ವಿಭಜನೆಯನ್ನು ಕಾಣಬಹುದು. ನಾಮ ಮತ್ತು ಕ್ರಿಯೆಗಳು ಸೇರಿ ಆಗುವ ಅಥವಾ ವಿಶೇಷಣ ವಿಶೇಷ್ಯಗಳು (ಅದೇ 2-1-57) ಕೂಡಿ ಆಗುವ ಸಮಾಸಗಳ ವಿಚಾರ ಸಂಸ್ಕೃತ ವ್ಯಾಕರಣಗಳಲ್ಲಿ ಪ್ರಸ್ತಾಪಿತವಾಗಿದೆ. ಆದರೆ ಪದಾರ್ಥ ಪ್ರಾಧಾನ್ಯವನ್ನಿಟ್ಟುಕೊಂಡು ವರ್ಗೀಕರಿಸಿದಂತೆ ಸಮಗ್ರ ಸಮಾಸಗಳ ವಿಭಜನೆ ಉಳಿದೆರಡರಲ್ಲಿ ಆದಂತೆ ಕಾಣುವುದಿಲ್ಲ. ಈ ವಿಭಜನೆಗಳು ಖಚಿತವಾಗಿ ರೇಖೆಯೆಳೆದು ತೋರಿಸುವಷ್ಟು ಭಿನ್ನವಲ್ಲ. ಒಂದೇ ಒಂದು ಸಮಸ್ತಪದವನ್ನು ತೆಗೆದುಕೊಂಡು ಈ ಮೂರು ವಿಧವಾದ ವಿಭಜನೆಯಲ್ಲೂ ಅಳವಡಿಸಲು ಬರುತ್ತದೆ. ಸಾಮಾನ್ಯವಾಗಿ ಅಷ್ಟಾಧ್ಯಾಯಿ, ಕಾತಂತ್ರ ಮೊದಲಾದ ವ್ಯಾಕರಣಗಳಲ್ಲಿ ಈ ಮೂರು ತತ್ವಗಳ ಮಿಶ್ರಣವನ್ನು ಕಾಣುತ್ತೇವೆ.

ಕನ್ನಡ ವ್ಯಾಕರಣಗಳಲ್ಲಿ, ಭೂಷಣ ನೇರವಾಗಿ ಮತ್ತು ಸ್ಮೃತಿ ದರ್ಪಣಗಳು ಆಂಶಿಕವಾಗಿ ಪದಾರ್ಥ ಪ್ರಾಧಾನ್ಯದಲ್ಲಿ ಸಮಾಸಗಳನ್ನು ವಿಭಜಿಸುತ್ತವೆ. ಕರ್ಮ

ಧಾರಯ, ದ್ವಿಗು, ಕ್ರಿಯಾ ಮತ್ತು ಗಮಕ ಸಮಾಸಗಳನ್ನು ಹೇಳುವಲ್ಲಿ ಪೂರ್ವ ಯಾ ಉತ್ತರ ಪದಗಳು ಯಾವ ವರ್ಗಕ್ಕೆ ಸೇರಿದವುಗಳೆಂಬ ಪ್ರಸ್ತಾಪ ಬರುವುದನ್ನು ಕಾಣ ಬಹುದು.

ಕನ್ನಡ ವೈಯಾಕರಣರು ಸಮಾಸಗಳನ್ನು ಸಂಸ್ಕೃತ ಸಮಾಸಗಳು ಮತ್ತು ಕನ್ನಡ ಸಮಾಸಗಳು ಎಂದೂ ವಿಭಜಿಸಿರುವಂತಿದೆ. ದರ್ಪಣದಲ್ಲಿ "ಕನ್ನಡ ಸಮಾಸಕ್ಕೆ" ಮತ್ತು "ಕನ್ನಡದೊಳ್" (ಸೂ. 82ರ ವಿವರಣೆ) ಎಂಬ ಪ್ರಯೋಗಗಳು ಈ ಊಹೆಗೆ ಒತ್ತುಕೊಡುತ್ತವೆ. ಕೂಡುವ ಪದಗಳೆಲ್ಲ ಸಂಸ್ಕೃತವಾದರೆ ಸಂಸ್ಕೃತ ಸಮಾಸ, ಕನ್ನಡ ವಾದರೆ ಕನ್ನಡ ಸಮಾಸ ಎಂಬ ಅಭಿಪ್ರಾಯವಿದ್ದಂತಿದೆ. ಇನ್ನೂ ಒಂದು ತೆರನಾದ ಸಮಾಸಗಳನ್ನು ವಿಭಜಿಸಬಹುದು. ಸಂಸ್ಕೃತದ ಪ್ರಸಿದ್ಧವಾದ ಆರು ಸಮಾಸಗಳು ಸಂಸ್ಕೃತ ಸಮಾಸಗಳು. ಕ್ರಿಯಾ ಮತ್ತು ಗಮಕ ಕನ್ನಡ ಸಮಾಸಗಳು. ಕನ್ನಡ ಸಮಾಸಗಳಲ್ಲಿ ಅರಿಸಮಾಸ ದೋಷವಿಲ್ಲ. ಸಂಸ್ಕೃತ ಸಮಾಸಗಳಲ್ಲಿ "ಸಂಸ್ಕೃತ-ಕನ್ನಡ" ಮಿಶ್ರ ಸಮಾಸ ಸಾಧುವಲ್ಲ. ಈ ಕೊನೆಯ ವಿಂಗಡಣೆಯನ್ನು ತಳಹದಿಯಾಗಿಟ್ಟುಕೊಂಡು ಮುಂದೆ ಸಮಾಸಗಳ ವಿವೇಚನೆ ಮಾಡಲಾಗುವುದು.

## ಸಂಸ್ಕೃತ ಸಮಾಸಗಳು

(1) ತತ್ಪುರುಷ : ಕನ್ನಡ ವ್ಯಾಕರಣಗಳಲ್ಲಿ ತತ್ಪುರುಷದ ವಿವರಣೆ ಕೆಳಗಿನಂತಿದೆ.

"ಉತ್ತರಪದದರ್ಥಂ ಮೆಯ್ವೆತ್ತಿರೆ ತತ್ಪುರುಷಂ" ಸ್ಮೃತಿ. ಸೂ. 46
"ಉತ್ತರ ಪದಾರ್ಥವೃತ್ತಿ ತತ್ಪುರುಷಃ" ಭೂಷಣ ಸೂ. 126
"ಪರಪದದೊಳರ್ಥವರ್ತನಮಿರೆ ತತ್ಪುರುಷಂ" ದರ್ಪಣ ಸೂ. 175

ಕೂಡುವ ಪದಗಳಲ್ಲಿ ಮುಂದಿನ ಪದದ ಅರ್ಥ ಪ್ರಧಾನವಾಗುಳ್ಳುದೆ ತತ್ಪುರುಷ ಸಮಾಸವೆಂದರ್ಥ. ಈ ವಿಚಾರದಲ್ಲಿ ಮೂರು ಗ್ರಂಥಗಳೂ ಏಕಾಭಿಪ್ರಾಯ ಹೊಂದಿವೆ. ಭೂಷಣ ಹೇಳುವ ಲಕ್ಷಣವು ಮಹಾಭಾಷ್ಯದಲ್ಲಿ ಬರುವ "ಉತ್ತರಪದಾರ್ಥ ಪ್ರಧಾನ ಸ್ತತ್ಪುರುಷಃ"[5] (2-1-6) ಎಂಬ ಮಾತಿನ ಸ್ವಲ್ಪ ಮಾರ್ಪಡಿಸಿದ ರೂಪವಾದರೆ ಸ್ಮೃತಿ ದರ್ಪಣಗಳದ್ದು ಹೆಚ್ಚು ಕಡಮೆ ಅದರ ಅನುವಾದವಾಗಿದೆ. ಸ್ಮೃತಿ ಭೂಷಣಗಳ ಉತ್ತರಪದವೆಂದಲ್ಲಿ ದರ್ಪಣ ಪರಪದ'ವೆಂದುದು ಅದರ ಪ್ರತ್ಯೇಕತೆಯಾಗಿದೆ. ಕಾತಂತ್ರ ಹೇಳುವ 'ವಿಭಕ್ತಿಯೋ ದ್ವಿತೀಯಾದ್ಯಾ ನಾಮ್ನಾಪರಪದೇನ ತು। ಸಮಸ್ಯಂತೇ ಸಮಾಸೋಽಹಿಜ್ಞೇಯಸ್ತತ್ಪುರುಷಃ ಸಚ' (2-5-8) ಎಂಬ ತತ್ಪುರುಷ ಲಕ್ಷಣದ ಛಾಯೆಯೇ ಕನ್ನಡ ವ್ಯಾಕರಣದ ಲಕ್ಷಣ ವಾಕ್ಯಗಳ ಮೇಲೆ ಬೀಳದಿರುವುದು ಗಮನಾರ್ಹ ವಾಗಿದೆ.

(2) ಕರ್ಮಧಾರಯ : ಕರ್ಮಧಾರಯವನ್ನು ತತ್ಪುರುಷದ ಒಂದು ಭೇದವೆಂದು ಪರಿಗಣಿಸಿ ಕನ್ನಡ ವ್ಯಾಕರಣಗಳು ಹೇಳುವ ಆದರ ಲಕ್ಷಣ ಕೆಳಗಿನಂತಿದೆ.

''ಅಂತದೇಕಾಶ್ರಯಮಾಗುತ್ತುಮಿರೆ ಕರ್ಮಧಾರಯಂ'' ಸ್ಮೃತಿ ಸೂ. 46
''ಸ ಏವೈಕಾಶ್ರಯಃ ಕರ್ಮಧಾರಯಃ'' ಭೂಷಣ. ಸೂ. 127
''ಸಮಂತದೇಕಾಶ್ರಯಂಬಾಗಿರೆ ಕರ್ಮಧಾರಯಂ'' ದರ್ಪಣ, ಸೂ. 175

ತತ್ಪುರುಷವು ಏಕಾಶ್ರಯವಾದರೆ ಕರ್ಮಧಾರಯವಾಗುವುದೆಂಬುದರ ಬಗ್ಗೆ ಇಲ್ಲಿ ಏಕಾಭಿಪ್ರಾಯ ಹೊರಹೊಮ್ಮಿದೆ. ಜೈನೇಂದ್ರದ ಮಹಾವೃತ್ತಿಯಲ್ಲಿ ''ಏಕಾಶ್ರಯಃ ಸಮಾನಾಧಿಕರಣಂ'' (1-3-44) ಎಂದಿದೆ. ಸಮಾನಾಧಿಕರಣವೆಂದರೆ (SED. p. 259) ಸಮಾಸವಾಗುವಲ್ಲಿ ಪೂರ್ವೋತ್ತರ ಪದಗಳೆರಡೂ ಒಂದೇ ವಿಭಕ್ತಿಯನ್ನು ಹೊಂದಿರುವುದಾಗಿದೆ. ಏಕಾಶ್ರಯ ಮತ್ತು ಸಮಾನಾಧಿಕರಣಕ್ಕೆ ಸಂವಾದಿಯಾದ ಇನ್ನೊಂದು ಪದ 'ತುಲ್ಯಾಧಿಕರಣ'.ಅಷ್ಟಾಧ್ಯಾಯಿಯಲ್ಲಿ''ತತ್ಪುರುಷ ಸಮಾನಾಧಿಕರಣಃ ಕರ್ಮಧಾರಯಃ (1-2-42) ಎಂದೂ ಕಾತಂತ್ರದಲ್ಲಿ ''ಪದೇ ತುಲ್ಯಾಧಿಕರಣೇ ವಿಜ್ಞೇಯಃ ಕರ್ಮಧಾರಯಃ''(2-5-ʻ) ಎಂದೂ ಹೇಳಿರುವುದನ್ನು ನೋಡಿದರೆ ಕನ್ನಡ ವೈಯಾಕರಣರು ಕರ್ಮಧಾರಯದ ಕಲ್ಪನೆ ಬಗ್ಗೆ ಎಷ್ಟರಮಟ್ಟಿಗೆ ಸಂಸ್ಕೃತ ವ್ಯಾಕರಣಗಳಿಗೆ ಋಣಿಗಳಾಗಿರುವರೆಂಬುದು ತಿಳಿಯುತ್ತದೆ. ಅಷ್ಟಾಧ್ಯಾಯಿಯಂತೆ ಕಾತಂತ್ರವೂ ಕರ್ಮಧಾರಯವು ತತ್ಪುರುಷದ ಭೇದವೆಂದು ಹೇಳಿದರೆ (ಕಾತಂತ್ರ 2-5-7) ಕನ್ನಡ ವ್ಯಾಕರಣಗಳು ಅದಕ್ಕೂ ಒತ್ತುಕೊಟ್ಟಿವೆ.

(3) ದ್ವಿಗು : ಅಷ್ಟಾಧ್ಯಾಯಿಯಲ್ಲಿ ದ್ವಿಗುವಿನ ಲಕ್ಷಣವನ್ನು ''ಸಂಖ್ಯಾ ಪೂರ್ವೋ ದ್ವಿಗುಃ'' (2-1-52) ಎಂದರೆ ಕಾತಂತ್ರದಲ್ಲಿ ''ಸಂಖ್ಯಾಪೂರ್ವೋ ದ್ವಿಗುರಿತಿಜ್ಞೇಯಃ'' (2-5-6) ಎಂದೆನ್ನಲಾಗಿದೆ (ಸಾ. ಪ್ರ. 18-17). ದ್ವಿಗುವನ್ನು ತತ್ಪುರುಷವೆನ್ನುವಲ್ಲಿ ಎರಡೂ ಗ್ರಂಥಗಳೂ ಸಹಮತ ಹೊಂದಿವೆ (ಅಷ್ಟಾಧ್ಯಾಯಿ 2-1-23 ; ಕಾತಂತ್ರ 2-5-7). ಈ ಗ್ರಂಥಗಳು ಹೇಳುವ ದ್ವಿಗು ಲಕ್ಷಣವನ್ನು ಕನ್ನಡ ವ್ಯಾಕರಣಗಳು ಯಥಾವತ್ತಾಗಿ ಸ್ವೀಕರಿಸಿವೆ.

''ಎತ್ತಂ ದ್ವಿಗು ಸಂಜ್ಞಮದುವೆ ಸಂಖ್ಯಾದಿಪದಂ'' ಸ್ಮೃತಿ ಸೂ. 46.
''ಸಂಖ್ಯಾದಿಶ್ಚೇತ್ ದ್ವಿಗುಃ'' ಭೂಷಣ ಸೂ. 128.
''ನೆಲಸಿರೆ ಮೊದಲೊಳ್ ಸಂಖ್ಯೆಯಂದೆ ದ್ವಿಗುವಕ್ಕುಂ'' ದರ್ಪಣ ಸೂ. 175

ಕರ್ಮಧಾರಯದ ಎಲ್ಲ ಲಕ್ಷಣಗಳನ್ನೂ ಒಳಗೊಂಡು (ಸಮಾನಾಧಿಕರಣ ಮತ್ತು ಉತ್ತರ ಪದಾರ್ಥ ವೃತ್ತಿ) ಆದುವೆ ಸಂಖ್ಯಾಪೂರ್ವಪದವಾದುದಾದರೆ ದ್ವಿಗುಸಮಾಸವೆಂಬ ಅರ್ಥ ಮೇಲಿನ ಮಾತುಗಳಿಂದ ಹೊರಬೀಳುತ್ತದೆ. ದುರ್ಗಸಿಂಹ ವೃತ್ತಿಯಲ್ಲಿ

ಹೇಳುವ "ಕರ್ಮಧಾರಯ ಇತಿ ಸಂಬಂಧಃ" ಎಂಬ ವಾಕ್ಯದ ಪ್ರಭಾವವನ್ನು ಭೂಷಣ ಕಾರನ "ಸ ಏವ ಕರ್ಮಧಾರಯಃ ದ್ವಿಗು ಸಂಜ್ಞೋಭವತಿ" ಎಂಬ ಮಾತಿನಲ್ಲಿ ಗುರುತಿಸ ಬಹುದು. ಅಲ್ಲಿನ 'ಸ ಏವ' ಎಂಬ ಅರ್ಥದಲ್ಲಿ ಸ್ಮೃತಿ ದರ್ಪಣಗಳ "ಅದುವೆ" ಎಂಬುದು ಬಂದಿದೆಯೆಂದೂ ತಿಳಿಯಬಹುದು.

(4) ಬಹುವ್ರೀಹಿ: ಅಷ್ಟಾಧ್ಯಾಯಿ, ಕಾತಂತ್ರ ಮತ್ತು ಜೈನೇಂದ್ರ ವ್ಯಾಕರಣಗಳು ಬಹುವ್ರೀಹಿ ಸಮಾಸದ ಲಕ್ಷಣವನ್ನು ಹೇಳುವಲ್ಲಿ ಮಾತ್ರ 'ಪದಾರ್ಥ' ವಿಚಾರವನ್ನು ಪ್ರಸ್ತಾಪಿಸುತ್ತವೆ. ಮಾತ್ರವಲ್ಲ, ಅದನ್ನು "ಅನ್ಯಪದಾರ್ಥ"ವೆನ್ನುವಲ್ಲಿ ಒಮ್ಮತವನ್ನು ತಳೆದಿವೆ.

ಅಷ್ಟಾಧ್ಯಾಯೀ: "ಅನೇಕಮನ್ಯಪದಾರ್ಥೇ" ಸೂ. 2–2–24

ಕಾತಂತ್ರ : ಸ್ಯಾತಾಂ ಯದಿ ಪದೇದ್ವೇತು ಯದಿ ವಾ
ಸ್ಯುರ್ಬಹೂನ್ಯಪಿ ತಾನ್ಯನ್ಯಸ್ಯ ಪದಸ್ಯಾರ್ಥೇ ಬಹುವ್ರೀಹಿ"
ಸೂ. 2–5–9

ಜೈನೇಂದ್ರ: "ಅನ್ಯಪದಾರ್ಥೇಽನೇಕಂ ಪಮ್" ಸೂ. 1–3–86

ಮಹಾಭಾಷ್ಯ: "ಅನ್ಯಪದಾರ್ಥಪ್ರಧಾನೋ ಬಹುವ್ರೀಹಿ' 2–1–6

ಸಂ. ಕಂ. : "ಅನ್ಯಪದಾರ್ಥಪ್ರಧಾನೋ ಬಹುವ್ರೀಹಿ" 2-3-51

ಬಹುವ್ರೀಹಿಯ ಲಕ್ಷಣವನ್ನು ಕೊಡುವಲ್ಲಿ ಕನ್ನಡ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳನ್ನು ಯಥಾವತ್ತಾಗಿ ಅನುಕರಿಸಿವೆ.

ಸ್ಮೃತಿ : "ದ್ವಿಪದಂ ಮೇಣ್ ಬಹುಪದಂ ಅನ್ಯಪದಾರ್ಥ
ದೊಳೊಂದಿ ನಿಲ್ಪ ಬಹುವ್ರೀಹಿ" ಸೂ. 47

ಭೂಷಣ : "ಅನ್ಯಪದಾರ್ಥ ಪ್ರಧಾನೋ ಬಹುವ್ರೀಹಿ" ಸೂ. 47

ದರ್ಪಣ : "ಪದನೆರಡು ಪಲವು ಮೇಣ್ ಪರ
ಪದಾರ್ಥಮಂ ಬಯಸುಂತಿರೆ ಬಹುವ್ರೀಹಿ" ಸೂ. 176

ಇಲ್ಲಿ ಕಾತಂತ್ರವನ್ನು ಸ್ಮೃತಿ ದರ್ಪಣಗಳು ಅನುಸರಿಸಿದಂತಿದೆ. ಸ್ಮೃತಿ ದ್ವಿ ಬಹು ಎಂದು ಸಂಸ್ಕೃತ ಶಬ್ದಗಳನ್ನು ಬಳಸಿದರೆ ಎರಡು ಪಲವು ಎಂದು ದರ್ಪಣ ಕನ್ನಡ ಪದ ಗಳನ್ನು ಬಳಸಿದೆ. ಭೂಷಣವು ಮಹಾಭಾಷ್ಯದ ಲಕ್ಷಣವಾಕ್ಯವನ್ನು ನೇರವಾಗಿ ಎತ್ತಿ ಕೊಂಡಿರುವುದು ಅದರ ಪ್ರತ್ಯೇಕತೆಯಾಗಿದೆ.

ದರ್ಪಣ ಬಹುವ್ರೀಹಿ ಸಮಾಸಕ್ಕೆ ಕೊಡುವ ಕೆಲವು ಉದಾಹರಣೆಗಳು ಸಂಸ್ಕೃತ ವ್ಯಾಕರಣದಿಂದ ನೇರವಾಗಿ ಎತ್ತಿಕೊಂಡವುಗಳಾಗಿವೆ. ದಂಡಾದಂಡಿ, ಕೇಶಾಕೇಶಿ, ಕಚಾ

ಕಚಿ, ಮುಸಲಾ ಮುಸಲಿ-ಇವು ಅಂತಹ ಕೆಲವು ಉದಾಹರಣೆಗಳು. ದಂಡಾದಂಡಿ[7] ಕೇಶಾ ಕೇಶಿ ಇವು ಜೈನೇಂದ್ರದ ಮಹಾವೃತ್ತಿ ಮತ್ತು ದುರ್ಗಸಿಂಹನ ವೃತ್ತಿಗಳಲ್ಲಿವೆ. ಕೇಶಾ ಕೇಶಿ ಮಹಾಭಾಷ್ಯ ಕಾಶಿಕಾಗಳಲ್ಲೂ ಕಾಣುತ್ತದೆ. ಕಚಾಕಚಿ ಜೈನೇಂದ್ರ ಮತ್ತು ಕಾಶಿಕೆ ಗಳಲ್ಲಿದೆ. ಮುಸಲಾಮುಸಲಿ ಕಾಶಿಕೆಯಲ್ಲಿದೆ (5-4-127). ದರ್ಪಣಕಾರ ತಾನು ಸಂಸ್ಕೃತದಿಂದ ನೇರವಾಗಿ ಎತ್ತಿಕೊಂಡುದನ್ನು "ಇಲ್ಲಿ ಘಟ್ಟಾಘಟ್ಟಿಯುಂ ಮಲ್ಲಾ ಮಲ್ಲಿಯುಂ ಮಾಟ್ಟಿಯುಂದ್ಧಂಗಳ್ ಸಂಸ್ಕೃತ ಕರ್ನಾಟಕದೊಳ್ ತತ್ಸಮಂಗಳ್" (ಸೂ. 196ರ ಪ್ರಯೋಗ) ಎಂಬ ಮಾತಿನಿಂದ ಸಮರ್ಥಿಸಿಕೊಂಡಿದ್ದಾನೆ.

(5) ದ್ವಂದ್ವ : ದ್ವಂದ್ವದ ಲಕ್ಷಣವನ್ನು ಕನ್ನಡ ವ್ಯಾಕರಣಗಳು ಒಮ್ಮತದಿಂದ ಕೆಳಗಿನಂತೆ ಹೇಳುತ್ತವೆ.

ಸ್ಮೃತಿ : "ಸಮಸ್ತಪದಾರ್ಥಂ ದ್ವಂದ್ವಂ" ಸೂ. 47

ಭೂಷಣ : "ಸರ್ವಪದಾರ್ಥ ಪ್ರಧಾನೋದ್ವಂದ್ವಃ ಸೂ. 130

ದರ್ಪಣ : "ಪದಾರ್ಥದ ಗಡಣಂ ದ್ವಂದ್ವಂ" ಸೂ. 176

ಸಮಸ್ತಪದದಲ್ಲಿ ಸೇರುವ ಎಲ್ಲ ಪದಗಳ ಅರ್ಥಕ್ಕೂ ಇಲ್ಲಿ ಪ್ರಾಧಾನ್ಯ ಕಲ್ಪಿಸ ಲಾಗಿದೆ. ಸ್ಮೃತಿ 'ಸಮಸ್ತ' ಎಂದರೆ ಭೂಷಣ 'ಸರ್ವ' ಎಂದಿದೆ. ಅದನ್ನೇ 'ಗಡಣ' ಎಂದಿದೆ ದರ್ಪಣ. ಮಹಾಭಾಷ್ಯದ ಉಭಯಪದಾರ್ಥಪ್ರಧಾನೋ ದ್ವಂದ್ವಃ (2-1-6) ಎಂಬುದರ ಛಾಯೆಯನ್ನಿಲ್ಲಿ ಕಾಣಬಹುದು. ಕಾತಂತ್ರ ಹೇಳುವ "ದ್ವಂದ್ವಃ ಸಮುಚ್ಚಯೋ ನಾಮ್ನೋರ್ಬಹೂನಾಂ ವಾಪಿಯೋಭವೇತ್" (2-5-11) ಎಂಬ ಲಕ್ಷಣದಲ್ಲಿ ಅರ್ಥದ ಪ್ರಸ್ತಾಪವಿಲ್ಲದುದನ್ನು ಗಮನಿಸಬೇಕು. ಲಕ್ಷಣವನ್ನು ಹೇಳುವಲ್ಲಿ ಕನ್ನಡ ವ್ಯಾಕರಣಗಳು, ಅದರಲ್ಲೂ ಭೂಷಣ, ನೇರವಾಗಿ ಮತ್ತು ಸ್ಮೃತಿ ದರ್ಪಣಗಳು ಅಂಶಿಕವಾಗಿ-ಮಹಾಭಾಷ್ಯದತ್ತ ಸರಿದಿರುವುದನ್ನು ಕಾಣಬಹುದು.

(6) ಅವ್ಯಯೀಭಾವ : ಕೂಡುವ ಪದಗಳಲ್ಲಿ ಪೂರ್ವಪದವು ಅವ್ಯಯವಾಗಿದ್ದು ಬಳಿಕ ಸಮಸ್ತಪದವೂ ಅವ್ಯಯವಾಗಿ ಮಾರ್ಪಡುವ ಸಮಾಸಕ್ಕೆ ಅವ್ಯಯೀಭಾವ ಎಂಬ ಸಂಜ್ಞೆ ಸಾರ್ಥಕವಾಗಿದೆ. "ಅನವ್ಯಯಮವ್ಯಯಂ ಭವತೀತ್ಯವ್ಯಯೀಭಾವಃ" (2-1-5) ಎಂದು ಮಹಾಭಾಷ್ಯದಲ್ಲಿ ವಿವರಣೆಯಿದೆ.

ಕನ್ನಡ ವ್ಯಾಕರಣಗಳಲ್ಲಿ ಅವ್ಯಯೀಭಾವದ ಲಕ್ಷಣ ಏಕರೂಪವಾಗಿದೆ.

ಸ್ಮೃತಿ : "ಪೂರ್ವಪದ ಪ್ರಾಧಾನ್ಯಮವ್ಯಯೀಭಾವಾಖ್ಯಂ" ಸೂ. 47

ಭೂಷಣ : "ಪೂರ್ವಪದಾರ್ಥ ಪ್ರಧಾನೋಽವ್ಯಯೀಭಾವಃ" ಸೂ. 129

ದರ್ಪಣ : "ಅವ್ಯಯೀಭಾವಮಾದಿಪದಮುಖ್ಯತೆಯುಂ" ಸೂ. 176

ಸ್ಮೃತಿ ದರ್ಪಣಗಳು ಪೂರ್ವಪದಕ್ಕೆ ಪ್ರಾಧಾನ್ಯ ಕೊಟ್ಟರೆ ಭೂಷಣ ಪೂರ್ವ

ಪದಾರ್ಥಕ್ಕೆ ಪ್ರಾಧಾನ್ಯವಿತ್ತಿದೆ. ಮಹಾಭಾಷ್ಯದ "ಪೂರ್ವಪದಾರ್ಥಪ್ರಧಾನೋಽ ವ್ಯಯೀಭಾವಃ" (2-1-6) ಎಂಬುದನ್ನು ಭೂಷಣ ಅನಾಮತ್ತಾಗಿ ಎತ್ತಿಕೊಂಡರೆ ಸ್ಮೃತಿ ದರ್ಪಣಗಳು ಅದನ್ನು ಕನ್ನಡಿಸುವಲ್ಲಿ "ಅರ್ಥ"ವನ್ನು ಕೈಬಿಟ್ಟಿವೆ. ಸೂತ್ರದಲ್ಲಿ ಬಳಸಿದ ಶಬ್ದಗಳಲ್ಲಿ ಅಂತರವಿದ್ದರೂ ಮೂರೂ ಗ್ರಂಥಗಳು ಹೇಳುವ ವಿಚಾರದಲ್ಲಿ ಅಂತರವಿಲ್ಲ.

## ಕನ್ನಡ ಸಮಾಸಗಳು

1) ಕ್ರಿಯಾಸಮಾಸ : 'ಕ್ರಿಯಾಸಮಾಸ' ಸಂಜ್ಞೆಯು ಮೊದಲ ಬಾರಿಗೆ ಕಾಣು ವುದು ದರ್ಪಣದಲ್ಲಾಗಿದೆ. ಪ್ರತ್ಯೇಕವಾದ ಸಂಜ್ಞೆಯನ್ನು ಕೊಡದೆ ಸಮಾಸವೊಂದರ ಲಕ್ಷಣ ಸ್ಮೃತಿ ಭೂಷಣಗಳಲ್ಲೂ ಉಕ್ತವಾಗಿದೆ.

ಸ್ಮೃತಿ : "ಪತ್ತಿರೆ ಕಾರಕದೊಳ್ ಮುಂ
ದೊತ್ತಿ ಸಮರ್ಥ ಕ್ರಿಯಾಪದಂ ಪದವಿಧಿತಾ
ನೊತ್ತರಿಸುಗುಂ" ಸೂ. 48

ಭೂಷಣ : "ಕಾರಕಂ ಪರೇಣ ಸಮರ್ಥ ಕ್ರಿಯಾಪದೇನ" ಸೂ. 133

ವೃತ್ತಿ : ಕರ್ಮಾದಿ ಯತ್ಕಾರಕಂ ತತ್ಪರತ್ರಾವಸ್ಥಿತೇನ
ಸಮರ್ಥೇನ ಕ್ರಿಯಾವಾಚಿನಾ ಪದೇನ ಸಮಸ್ಯತೇ"

ದರ್ಪಣ : "ವಿದಿತಂ ಕ್ರಿಯಾ ಸಮಾಸಂ
ಮೊದಲೊಳ್ ಕಾರಕಮುಮಗ್ರದೊಳ್ ಕ್ರಿಯೆಯುಂ
ಸನ್ನಿದಮಾಗೆ" ಸೂ. 178

ಸಮಾಸದ ಲಕ್ಷಣವನ್ನು ಸೂತ್ರಿಸುವಲ್ಲಿ ಭೂಷಣ ಪೂರ್ಣವಾಗಿ ಸ್ಮೃತಿಗೆ ಋಣಿಯಾಗಿದೆ. ಸಂಸ್ಕೃತ ವ್ಯಾಕರಣಗಳು ಸಮಾಸಾರಂಭದಲ್ಲಿ ಹೇಳುವ 'ಸಮರ್ಥ' (ಸಮರ್ಥಃ ಪದವಿಧಿಃ) ಶಬ್ದವನ್ನು ಸ್ಮೃತಿ ಭೂಷಣಗಳು ಬಳಸಿಕೊಂಡಿವೆ. ಕಾರಕ ಮತ್ತು ಕ್ರಿಯೆ ಸೇರಿ ಆಗುವ ಸಮಾಸದಲ್ಲಿ ಅರ್ಥವ್ಯಕ್ತಿಯಿರಬೇಕೆಂಬುದೇ 'ಸಮರ್ಥ' ಶಬ್ದದ ಅಂತರಾರ್ಥ. ದರ್ಪಣ ಸೂತ್ರದಲ್ಲಿ 'ಸಮರ್ಥ' ಶಬ್ದವನ್ನು ಬಳಸಿಲ್ಲವಾದರೂ ವೃತ್ತಿಯಲ್ಲಿ "ಮೊದಲೊಳ್ ಕಾರಕಮುಂ ಪರದೊಳ್ ಕ್ರಿಯೆಯುಂ ಅರ್ಥವ್ಯಕ್ತಿಯಿಂ ಕೂಡೆ ಕ್ರಿಯಾ ಸಮಾಸಂ" (ಸೂ. 178ರ ವೃತ್ತಿ) ಎಂದು ವಿವರಿಸುವಾಗ ಬಳಸಿರುವ 'ಅರ್ಥವ್ಯಕ್ತಿ' 'ಸಮರ್ಥ'ದ ಅರ್ಥವನ್ನೇ ಕೊಡುತ್ತದೆ. ಭೂಷಣದ ವೃತ್ತಿಯಲ್ಲಿ ಪೂರ್ವಪದವಾಗಿ ಬರುವುದು ಕರ್ಮಾದಿಕಾರಕಗಳೆಂದು ಸ್ಪಷ್ಟವಾದ ವಿವರಣೆಯಿದೆ. ದರ್ಪಣದಲ್ಲಿ ಮಾತ್ರ ಹೇಳಿರುವ 'ಇದಱೊಳರಿಪದುಂ ನಿರ್ದೋಷಂ' (ಸೂ. 178ರ ವೃತ್ತಿ) ಹೆಚ್ಚಿನ ವಿಚಾರವಾಗಿದೆ. ಸಮಾಸದಲ್ಲಿ ಪೂರ್ವಪದ ಅದಂತವಾಗಿದ್ದರೆ ನಡುವಿನಲ್ಲಿ ಬಂದು

ಬರುವ ಬಗ್ಗೆ ಮೂರೂ ಗ್ರಂಥಗಳು ಸಹಮತವಾಗಿವೆ. ಆದರೆ ದರ್ಪಣ ಪೂರ್ವಪದವನ್ನು ಸಂಸ್ಕೃತ ಮತ್ತು ಕನ್ನಡವೆಂದು ವಿಭಾಗಿಸಿ ಸಂಸ್ಕೃತದ ಅದಂತಕ್ಕೆ ಬಿಂದುವನ್ನು ನಿತ್ಯವಾಗಿಸಿ ಕನ್ನಡದ ಆದಂತ, ಉದಂತಗಳಿಗೆ ವಿಕಲ್ಪ ಬಿಂದುವನ್ನು ಹೇಳಿದೆ. ಹೀಗೆ ವಿಭಾಗಿಸಿದುದರಿಂದಲೇ "ಇದಱೊಳರಿಪದಂ ನಿರ್ದೋಷಂ" ಎಂದು ಹೇಳಲು ಅನುಕೂಲವಾಯಿತು. ವಾಚ್ಯವಾಗಿ ಹೇಳದಿದ್ದರೂ ಭೂಷಣ ಇದರಲ್ಲಿ ನಿರ್ದುಷ್ಟವಾದ ಅರಿಸಮಾಸವನ್ನು ಗುರುತಿಸಿದೆ. ಹಾಗಾಗಿ 'ಮನಂಗೊಳ್ಗುಂ, ಗುಣಂಗೊಂಡಂ' ಎಂಬ ಉದಾಹರಣೆಗಳನ್ನು ಕೊಟ್ಟಿದೆ. ಉದಂತದ ಮುಂದೆ ಬಿಂದುವಿನ ಪ್ರಸ್ತಾಪ ದರ್ಪಣದ ಹೊಸತನವಾಗಿದೆ. ಅರ್ಥವ್ಯಕ್ತಿ ಕೆಡುವಲ್ಲಿ ಕನ್ನಡವಾದರೂ ಸರಿ; ಬಿಂದುವನ್ನು ವಿಕಲ್ಪವೆಂದು ಕಳೆಯಲಾಗದೆಂದು ದರ್ಪಣ ಒತ್ತಿ ಹೇಳುತ್ತದೆ. ಗಡಣಂಗೊಂಡಂ, ಕರಗಂಬೊತ್ತಂ ಇತ್ಯಾದಿ ಇದಕ್ಕೆ ನಿದರ್ಶನಗಳು.

2) ಗಮಕ ಸಮಾಸ : 'ಗಮಕ' ಎಂಬ ಸಂಸ್ಕೃತ ಶಬ್ದಕ್ಕೆ ಸ್ಪಷ್ಟಪಡಿಸುವುದು, ವ್ಯಕ್ತಗೊಳಿಸುವುದು ಎಂದರ್ಥ. ಅದನ್ನು ಬಿಂದು ಸಮಾಸದ ಸಂಜ್ಞೆಯಾಗಿ ಬಳಸಿದ್ದು ಕೇಶಿರಾಜನ ಸ್ವಂತಿಕೆಯಾಗಿದೆ. ಕೇಶಿರಾಜನು ತನ್ನ ನವೀನ ಸೃಷ್ಟಿಯಾದ ಗಮಕ ಸಮಾಸಕ್ಕೆ ಉದಾಹರಣೆಗಳನ್ನು ಕೊಡುವಲ್ಲಿ, ಬೇರೆ ಸಮಾಸಗಳಿಗೆ ಉದಾಹರಿಸಿದಂತೆ, ಪೂರ್ವಕವಿ ಪ್ರಯೋಗಗಳನ್ನು ಎತ್ತಿಕೊಳ್ಳುತ್ತಾನೆನ್ನುವುದು ಗಮನಾರ್ಹ.

ದರ್ಪಣದಲ್ಲಿ ಹೇಳುವ ಗಮಕ ಸಮಾಸದ ಲಕ್ಷಣವನ್ನು (ಸೂ. 179) ಕೆಳಗಿನಂತೆ ಸಂಗ್ರಹಿಸಬಹುದು.

| ಪೂರ್ವಪದ | ಉತ್ತರಪದ | ಪ್ರಯೋಗ |
|---|---|---|
| ಸಂಖ್ಯೆ | ಕಾರಕ | ನೂಱುಪತ್ತು |
| ಸರ್ವನಾಮ | ಕಾರಕ | ಆವ ಮಾತು |
| ಗುಣವಚನ | ಕಾರಕ | ಅಸಿಯ ನಡು |
| ಕೃದಂತ | ಕಾರಕ | ಪಾಡುವ ತುಂಬಿ |

ಇತರ ವಿಷಯಗಳು :

(1) ಇದರಲ್ಲಿ ಅರಿಸಮಾಸ ದೋಷವಿಲ್ಲ. ಬೀಸುವ ಚಾಮರ
(2) ಇದು ಕರ್ಮಧಾರಯದ ಒಂದು ಭೇದ.
(3) ಸಂಖ್ಯೆ ಪೂರ್ವಪದವಾಗಿದ್ದಾಗ ಇದು ತತ್ಪುರುಷವೂ ಹೌದು ನೂಱುಪತ್ತು
(4) ಅಂತರಾಳದಲ್ಲಿ ಇಕಾರವಿರುವ ಗುಣವಚನದ ಮುಂದೆ ಅಕಾರ ಬರುವುದು. ನಿಡಿಯ ನಾಲಗೆ

(5) ಪೂರ್ವಪದವಾಗಿ ಬಂದ ಅದು, ಇದು, ಉದುಂಗಳಿಗೆ ಕ್ರಮವಾಗಿ ಆ, ಈ, ಊಗಳು ಆದೇಶವಾಗುತ್ತವೆ. ಆ ಮನೆ ಈ ಮನೆ ಊ ಮನೆ

ಈ ಸಮಾಸಕ್ಕೆ ಗಮಕ ಎಂಬ ಸಂಜ್ಞೆಯನ್ನು ವಿಧಿಸುವಲ್ಲಿ ಕವಿರಾಜಮಾರ್ಗದ ಪದ್ಯವೊಂದು (2-95) ಪ್ರೇರಕವಾಗಿದ್ದಿರಬಹುದೆಂಬ ಊಹೆಯಿದೆ. (ಪ್ರಾ.ಕ.ವ್ಯಾ. ಪು. 176-77).

ಪ್ರತ್ಯೇಕ ಸಮಾಸಗಳಲ್ಲವಾದರೂ ಇನ್ನೆರಡು ವಿಷಯಂಗಳು ಸಮಾಸ ಪ್ರಕರಣದಲ್ಲಿ ಪ್ರಸ್ತಾಪಿತವಾಗುತ್ತವೆ. ಅರಿಸಮಾಸ ಮತ್ತು ದ್ವಿರುಕ್ತಿಗಳೆ ಆ ವಿಷಯಂಗಳು.

**ಅರಿಸಮಾಸ**

ದರ್ಪಣಕಾರನ ಅಭಿಪ್ರಾಯದಂತೆ ಸಮಾಸಗಳಲ್ಲಿ ಸಂಸ್ಕೃತ ಇಲ್ಲವೆ ಸಮಸಂಸ್ಕೃತ ಮತ್ತು ಕನ್ನಡ ಪದಗಳ ಬೆರಸುವಿಕೆಗೆ (ಕೂಡಿಕೆಗೆ) ಅರಿಸಮಾಸವೆಂದು ಹೆಸರು. ಅರಿ ಸಮಾಸವೆಂದರೆ ವಿರುದ್ಧ ಸಮಾಸ (ದರ್ಪಣ ಸೂ. 185). ಅದೊಂದು ಸಮಾಸ ದೋಷ, ಸಂಸ್ಕೃತದಿಂದೆತ್ತಿಕೊಂಡ ಆರು ಸಮಾಸಗಳಲ್ಲಿ ಸಂಸ್ಕೃತ+ಕನ್ನಡ ಪದಗಳ ಮಿಶ್ರಣ ಸಾಧುವಲ್ಲ.

ಕವಿರಾಜಮಾರ್ಗದಲ್ಲಿ ಸಂಸ್ಕೃತ-ಕನ್ನಡ ಪದಗಳ ಮಿಶ್ರ ಸಮಾಸಕ್ಕೆ ವಿರೋಧ ಕಂಡುಬರುತ್ತದೆ (1-58). ಸ್ಮೃತಿ ಈ ವಿಚಾರದಲ್ಲಿ ಮಾರ್ಗವನ್ನು ಯಥಾವತ್ತಾಗಿ ಅನುಸರಿಸಿದೆ. ಆದರೆ ಸಮಸಂಸ್ಕೃತದೊಂದಿಗೆ ಕನ್ನಡ ಪದವನ್ನು ಬೆರಸುವುದಕ್ಕೆ ಸ್ಮೃತಿ ಯಲ್ಲಿ ನಿಷೇಧವಿಲ್ಲ (ಸಮಸಂಸ್ಕೃತದ ಕಲ್ಪನೆಯಲ್ಲಿ ಕವಿರಾಜಮಾರ್ಗ ಮತ್ತು ಸ್ಮೃತಿ ಭೂಷಣಗಳಲ್ಲಿರುವ ಅಂತರವನ್ನು ನಾಮಪ್ರಕರಣದಲ್ಲಿ ವಿಚಾರಿಸಲಾಗಿದೆಯಷ್ಟೆ).ಅರಸು ಗುಣ, ಪರಮೆಣ್, ಅಟಿಬಿಜನ, ಇತ್ಯಾದಿಗಳು ಸ್ಮೃತಿಕಾರನ ದೃಷ್ಟಿಯಲ್ಲಿ ಅರಿಸಮಾಸ ಗಳಲ್ಲ. ಇಲ್ಲಿ ಕನ್ನಡ ಪದಗಳಿಗೆ ಸಮಸಂಸ್ಕೃತ ಪದಗಳೊಂದಿಗೆ ಸಮಾಸವಾದುದೆ ಇದಕ್ಕೆ ಕಾರಣ. 'ಮಾಣಿಕ್ಯ ಭಂಡಾರ' ಎಂಬುದು ವಿರುದ್ಧ ಪದವಿಧಿ.

ಸಮಸಂಸ್ಕೃತ-ಕನ್ನಡಗಳ ಮಿಶ್ರಣದ ವಿಚಾರದಲ್ಲಿ ಭೂಷಣ ಸ್ಮೃತಿಯನ್ನು ಪೂರ್ಣವಾಗಿ ಅನುಸರಿಸಿದೆ. ಸಂಸ್ಕೃತ-ಕನ್ನಡಗಳ ಮಿಶ್ರಣದ ಪ್ರಸ್ತಾಪವಲ್ಲಿಲ್ಲ. ಕವಿ ರಾಜಮಾರ್ಗದಲ್ಲಾಗಲಿ, ಸ್ಮೃತಿ ಭೂಷಣಗಳಲ್ಲಾಗಲಿ 'ಅರಿಸಮಾಸ' ವೆಂಬ ಪದ ಪ್ರಯೋಗವಿಲ್ಲ. ದರ್ಪಣದಲ್ಲಿ 'ಅರಿಸಮಾಸ' ಎಂಬುದಲ್ಲದೆ 'ಅರಿಪದ' (ದರ್ಪಣ ಸೂ. 179) ಮತ್ತು 'ವಿರುದ್ಧ ಸಮಾಸ' (ದರ್ಪಣ ಸೂ. 185) ಎಂಬ ಪದಗಳೂ ಬಳಕೆ ಯಾಗಿವೆ.

ದರ್ಪಣವು "ಆ ಸಮಸಂಸ್ಕೃತ ಪದಂಗಳಂ ಅಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು" (ಸೂ. 90ರ ಪ್ರಯೋಗ) ಎಂದು ಹೇಳಿ 'ಅರಸು ಕುಮಾರ', 'ಕೆಳದಿ

ಸಮೇತಂ' ಎಂಬ ಪದಗಳನ್ನು ಉದಾಹರಿಸಿದೆ. ಮುಂದೆ ಸಮಾಸ ಪ್ರಕರಣದಲ್ಲಿ 'ಅರಿಸಮಾಸ'ದ ವಿವರಣೆಗಾಗಿ ಒಂದು ಸೂತ್ರವನ್ನೇ ವಿಾಸಲಾಗಿಟ್ಟಿದೆ (ಸೂ. 185). ಅಲ್ಲಿ ಹೇಳುವ ವಿಚಾರವನ್ನು ಕೆಳಗಿನಂತೆ ಸಂಗ್ರಹಿಸಬಹುದು.

1. ಪೂರ್ವಕವಿ ಪ್ರಯೋಗದಲ್ಲಿ ಬಂದ ಸಂಸ್ಕೃತ-ಕನ್ನಡ ಪದಗಳ ಮಿಶ್ರ ಸಮಾಸ ಸ್ವೀಕಾರಾರ್ಹ. ಉದಾ : ಕಡುರಾಗಂ, ಮಂಗಳಾರತಿ ಇತ್ಯಾದಿ.
2. ಬಿರುದಾವಳಿಯಲ್ಲಿ ಸಂಸ್ಕೃತ-ಕನ್ನಡ ಪದಗಳ ಮಿಶ್ರಸಮಾಸ ಮಾಡಬಹುದು. ಉದಾ : ಗಜದಂಟಿ, ರಾಯಕೋಳಾಹಳಂ.... ಇತ್ಯಾದಿ.
3. ಮೇಲಿನೆರಡು ಸಂದರ್ಭಗಳನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಸಂಸ್ಕೃತ-ಕನ್ನಡ ಪದಗಳ ಮಿಶ್ರಣಸಮಾಸ ಅಸಾಧು. ಇಲ್ಲಿಯೂ ಉದಾಹರಣೆಯಾಗಿ ಮುಖ ತಾವರೆ, ಅರಸುಕುಮಾರಂ, ಕೆಳದಿಸಮೇತಂ-ಎಂಬಿವುಗಳನ್ನು ಕೊಡಲಾಗಿದೆ.

ಅಂತೂ ಒಟ್ಟಿನಲ್ಲಿ ಕನ್ನಡ ವ್ಯಾಕರಣಗಳಲ್ಲಿ ಸಂಸ್ಕೃತ-ಕನ್ನಡ ಪದಗಳನ್ನು ಬೆರಸಿ ಸಮಾಸ ಮಾಡುವುದರ ವಿರುದ್ಧವಾಗಿ ಒಕ್ಕೊರಲಿನ ಏಕಾಭಿಪ್ರಾಯವಿದೆಯೆಂದು ಹೇಳ ಬಹುದು. ಸಮಸಂಸ್ಕೃತದ ಕಲ್ಪನೆಯಲ್ಲಿ ಅಂತರವಿರುವುದರಿಂದ ಸಮಸಂಸ್ಕೃತ ಮತ್ತು ಕನ್ನಡ ಪದಗಳ ಮಿಶ್ರಸಮಾಸದ ಕುರಿತು ಕವಿರಾಜಮಾರ್ಗ ಮತ್ತು ದರ್ಪಣ ಒಂದು ದಾರಿಯನ್ನು ಹಿಡಿದರೆ ಸ್ಮೃತಿ ಭೂಷಣಗಳು ಇನ್ನೊಂದು ದಾರಿಯಲ್ಲಿ ನಡೆಯುತ್ತವೆ ಯೆಂಬುದು ಸ್ಪಷ್ಟವಾಗುತ್ತದೆ. ದರ್ಪಣಕಾರ ಸ್ಪಷ್ಟೀಕರಿಸುವಂತೆ ಕ್ರಿಯಾ ಮತ್ತು ಗಮಕ ಸಮಾಸಗಳಲ್ಲಿ ಅರಿಸಮಾಸ ದೋಷವಿಲ್ಲ. ಏಂದರೆ ಕ್ರಿಯಾಸಮಾಸದಲ್ಲಿ ಪೂರ್ವ ಪದ ಮತ್ತು ಗಮಕದಲ್ಲಿ ಪರಪದ ಸಂಸ್ಕೃತವಾಗಿರಲೆಡೆಯಿದೆ. ಗಮಕದಲ್ಲಿ ಪೂರ್ವೋತ್ತರ ಪದಗಳು ವ್ಯಸ್ತವಾಗಿಯೇ ಇರುವುದರಿಂದ ಸಮಾಸ ಮಧ್ಯದಲ್ಲಿ ವಿರಾಮವಿರುತ್ತದೆ. ಆ ವಿರಾಮದಿಂದಾಗಿ ಸಂಸ್ಕೃತ-ಕನ್ನಡ ಬೆರಕೆಗೆ ಅನುಕೂಲವೇರ್ಪಟ್ಟಿದೆ.

## ದ್ವಿರುಕ್ತಿ

ಒಂದು ಪದವನ್ನಾಗಲಿ, ವಾಕ್ಯವನ್ನಾಗಲಿ ಎರಡೆರಡು ಸಾರಿ ಹೇಳುವುದಕ್ಕೆ ದ್ವಿರುಕ್ತಿಯೆಂದು ಹೆಸರು. ದ್ವಿರುಕ್ತಿಯ ಕುರಿತು ಕನ್ನಡ ವೈಯಾಕರಣರು ಹೆಚ್ಚು ಕಡಮೆ ಏಕಾಭಿಪ್ರಾಯ ಹೊಂದಿದ್ದಾರೆ. ಚಾಪಲ, ವೀಪ್ಸೆ, ಆಭೀಕ್ಷಣ, ಅನುಕರಣೆ, ಕ್ರಿಯಾ ಸಮಭಿಹಾರಗಳಲ್ಲಿ ದ್ವಿರುಕ್ತಿಯನ್ನು ಸ್ಮೃತಿ ಭೂಷಣ ದರ್ಪಣಗಳು ಒಮ್ಮತ ದಿಂದ ವಿಧಿಸಿವೆ (ಸ್ಮೃತಿ : ಸೂ. 64 ; ಭೂಷಣ ಸೂ : 192 ; ದರ್ಪಣ : ಸೂ. 204, 205, 206). ಸಂಸ್ಕೃತ ವೈಯಾಕರಣರು ಹೇಳುವಂತೆ, ಚಾಪಲವೆಂದರೆ ಕಾರ್ಯದಲ್ಲಿ ತೋರಿಸುವ ಸಂಭ್ರಮ ; ಕಾರ್ಯವು ಸಾಗುತ್ತಲೇ ಇರುವುದು ಅಥವಾ ಸಾವಕಾಶವಾಗಿ ಮುಗಿಯುತ್ತಿರುವುದು ಅಭೀಕ್ಷಣ ; ಕ್ರಿಯೆಯನ್ನು ಅಭಿಮುಖ ಮಾಡಿಕೊಳ್ಳುವುದು ಕ್ರಿಯಾಸಮಭಿಹಾರ ; ಬೇರೆ ಬೇರೆಯಾಗಿರುವುದನ್ನು ಸೇರಿಸಿ ಹೇಳುವುದೆ ವೀಪ್ಸೆ. ಈ

ಅರ್ಥಗಳಲ್ಲಿ ಅಷ್ಟಾಧ್ಯಾಯಿ ದ್ವಿರುಕ್ತಿಯನ್ನು ಹೇಳುತ್ತದೆ (8-1-4, 12) ಸಮೀಪಾರ್ಥದಲ್ಲಿ ಸ್ಮೃತಿ ದರ್ಪಣಗಳೂ ದೂರಾರ್ಥದಲ್ಲಿ ದರ್ಪಣ ಮಾತ್ರವೂ ದ್ವಿರುಕ್ತಿಯನ್ನು ಹೇಳಿವೆ. ಸಾಮೀಪ್ಯದಲ್ಲಿ ದ್ವಿರುಕ್ತಿಯ ಪ್ರಸ್ತಾಪ ಅಷ್ಟಾಧ್ಯಾಯಿಯಲ್ಲಿದೆ. ದರ್ಪಣ ಹೇಳುವಂತೆ ದ್ವಿರುಕ್ತಿ ಬರುವಲ್ಲಿ 'ತ್ರಿಪ್ರಯೋಗ' ಬರುವುದೂ ಉಂಟು.

ದ್ವಿರುಕ್ತಿಯ ವಿಚಾರ ಸ್ಮೃತಿ ದರ್ಪಣಗಳಲ್ಲಿ ಸಮಾಸ ಪ್ರಕರಣದಲ್ಲಿ ಬಂದರೆ ಭೂಷಣದಲ್ಲಿ ತದ್ಧಿತ ವಿಧಾನದ ಕೊನೆಯಲ್ಲಿ ಬರುತ್ತದೆ. ಸಮಾಸ ಪ್ರಕರಣದಲ್ಲಿ ದ್ವಿರುಕ್ತಿಯ ವಿವೇಚನೆ ಬಂದಿದೆಯೆಂದಾಗಲಿ, ಆದರಲ್ಲಿ ಎರಡು ಪದಗಳ ಕೂಡುನುಡಿಯಿದೆಯೆಂದಾಗಲಿ ಅದನ್ನು ಸಮಾಸವೆನ್ನಬೇಕಾಗಿಲ್ಲ. ಒಂದೇ ಪದ ಎರಡು ಸಾರಿ ಉಚ್ಚರಿತವಾದ್ದರಿಂದ ಯಾವುದೇ ಒಂದು ಹೊಸ ಅರ್ಥ ಹೊರಹೊಮ್ಮಲಾರದು. ಮಾತ್ರವಲ್ಲ, ಉಳಿದ ಸಮಾಸಗಳು ಲಿಂಗಗಳಾಗುವಂತೆ ದ್ವಿರುಕ್ತಿಗಳು ಲಿಂಗಗಳಾಗಲಾರವು. ಆಗ ಸ್ಮೃತಿ, ದರ್ಪಣಗಳು ಸಮಾಸ ಪ್ರಕರಣಗಳಲ್ಲಿ ಯುಗಲೋಚ್ಚರಣವನ್ನು ಹೇಳಲು ಕಾರಣವನ್ನು ಊಹಿಸಬೇಕಾಗುತ್ತದೆ. ಬಹುಶಃ ಸಮಾಸದಲ್ಲಿ ನಡೆಯುವಂತೆ ಪೂರ್ವಪದದ ಕೊನೆಗೆ ಲೋಪ ಬರುವುದರಿಂದ ಸ್ಮೃತಿ ದರ್ಪಣಗಳು ಅವನ್ನು ಸೇರಿಸಿರಬೇಕು.

ಅಂತ್ಯಲೋಪಕ್ಕೆ ಉದಾ :- ಊರು + ಊರೊಳ್ = ಊರೂರೊಳ್ ; ಇದಿರ್ಚು + ಇದಿರ್ಚು = ಇದಿರ್ಚಿದಿರ್ಚು. ಕೇಶಿರಾಜನು ವೀಪ್ಸಾ ಸಮಾಸವೆಂದು ವಾಚ್ಯವಾಗಿ ಹೇಳಿಲ್ಲವಾದರೂ ಆಧುನಿಕರು ಹಾಗೆಂದು ಅದನ್ನು ಕರೆದುದುಂಟು (ದರ್ಪಣ (ಕಿ)ಸೂತ್ರ 193ರ ಅನುವಾದ). ಆದರೆ ಭೂಷಣಕಾರ ಸಮಾಸ ವಿಧಾನದಲ್ಲಿ ದ್ವಿರುಕ್ತಿಯನ್ನು ಹೇಳದಿರುವುದು ಅರ್ಥವತ್ತಾಗಿದೆ.

ಕೇಶಿರಾಜನ ಹೇಳಿಕೆಯಂತೆ ಸಮಾಸಗಳು ಕೇವಲ ಎಂಟಲ್ಲ. ಇನ್ನೂ ಹಲವಾರು ಸಮಾಸಗಳನ್ನು ಲೋಕವ್ಯವಹಾರದಿಂದ ತಿಳಿಯಲೆಡೆಯಿದೆ. ಹಿಂದೆ ಹೇಳಿದ ಎಂಟು ಸಮಾಸಗಳು ಕವಿಮಾರ್ಗಗತವಾಗಿದ್ದು ಪ್ರಸಿದ್ಧವಾದವುಗಳು ಎಂದವನ ಅಭಿಪ್ರಾಯ. ಆದಕ್ಕಾಗಿಯೇ ಆತನು

> "ಕವಿಮಾರ್ಗಗತ ಸಮಾಸಮ
> ನವನೆನ್ನಱಿವನಿತನೆಪ್ಪು ಪೇೞ್ದಿಂ ಲೋಕ
> ವ್ಯವಹಾರದಿಂದವನುೞಿ
> ದುವನಱಿವುದು ಶಬ್ದಪಾರಮಾರ್ಗಂ ಅಶಕ್ಯಂ" ಸೂ. 203

ಎಂದು ಘೋಷಿಸಿದ್ದಾನೆ.[8]

## ತುಲನೆ-ಪರಿಶೀಲನೆ

ಸಂಸ್ಕೃತದಿಂದೆತ್ತಿಕೊಂಡ ಸಮಾಸ ಲಕ್ಷಣಗಳು ಕನ್ನಡಕ್ಕೆ ಸರಿಹೊಂದತಕ್ಕುವೇ ಎಂಬುದನ್ನು ವಿಚಾರಿಸಬೇಕಾದ್ದು ಅಗತ್ಯ. ಸಮಾಸ ತತ್ತ್ವ ಮೂಲಭೂತವಾಗಿ ಭಾಷೆಯ ರಚನೆಗೆ ಸಂಬಂಧಿಸಿದುದಾಗಿದೆ. ಭಿನ್ನರಚನೆಯ ಭಾಷೆಗಳೆರಡರಲ್ಲಿ ಸಮಾಸ ರಚನೆಯೂ ಒಂದರಿಂದ ಮತ್ತೊಂದರಲ್ಲಿ ಭಿನ್ನವಾಗಿರುವುದು ಸ್ವಾಭಾವಿಕ. ಒಂದು ಭಾಷೆಗೆ ಸಂಬಂಧಿಸಿದಂತೆ ಹೇಳಿದ ತತ್ತ್ವವನ್ನು ಇನ್ನೊಂದು ಭಾಷೆಯ ವಿವೇಚನೆಯಲ್ಲಿ ಯಂಥಾವತ್ತಾಗಿ ಅಳವಡಿಸಿದಾಗ ಸಲ್ಲದ ಹೇಳಿಕೆಗಳು ಹುಟ್ಟಿಕೊಳ್ಳಲೆಡೆಯಿದೆ. ಈ ಹಿನ್ನೆಲೆಯಲ್ಲಿ, ಕನ್ನಡ ವೈಯಾಕರಣರು ಸಂಸ್ಕೃತ ವ್ಯಾಕರಣಗಳಿಂದ ಸಮಾಸಲಕ್ಷಣಗಳನ್ನು ಇದ್ದಕ್ಕಿದ್ದಂತೆ ಸ್ವೀಕರಿಸಿ ಕನ್ನಡಕ್ಕೆ ಅಳವಡಿಸಿಕೊಂಡಿರುವುದನ್ನು ವಿಮರ್ಶಿಸಬೇಕಾಗಿದೆ.

ಕನ್ನಡ ವ್ಯಾಕರಣಗಳು ಸಮಾಸ ಲಕ್ಷಣಗಳನ್ನು ಅತ್ಯಂತ ಸ್ಥೂಲವಾಗಿ ಹೇಳುತ್ತವೆ. ಹೇಳುವಷ್ಟು ಲಕ್ಷಣಗಳು ಮಾತ್ರ ಸಂಸ್ಕೃತದಿಂದ ನೇರವಾಗಿ ಸ್ವೀಕರಿಸಿದುವಾಗಿವೆ. ಸಮಾಸ ಕಾರ್ಯಕ್ಕೆ ಎಂದರೆ ಸಮಾಸದಲ್ಲಿ ನಡೆಯುವ ಆಗಮ. ಆಗಮಲೋಪ ಮತ್ತು ಆದೇಶಕ್ಕೆ ಸಂಬಂಧಿಸಿದಂತೆ ಬರುವ ನಿರೂಪಣೆಯಲ್ಲಿ ಕನ್ನಡಭಾಷೆಯ ಸಹಜತೆಯ ಕಡೆಗೆ ಗಮನವೀಯಲಾಗಿದೆ. ಸ್ಮೃತಿ ಭೂಷಣ ದರ್ಪಣಗಳಲ್ಲಿ ಸಮಾಸ ಕಾರ್ಯದ ವಿವರಣೆಯೇ ಪ್ರಕರಣದ ಬಹುಭಾಗವನ್ನು ಆವರಿಸಿದೆ. ಸಂಸ್ಕೃತದಲ್ಲಿ ಹೇಳುವಂತೆ ಸಮಾಸಗಳ ಆಂತರಿಕ ಪ್ರಭೇದಗಳನ್ನು ಹೇಳದೆ ಇರುವುದರಿಂದ ಅನಗತ್ಯ ಹೇಳಿಕೆಗಳು ಹುಟ್ಟುವುದಕ್ಕೆಡೆಯಾಗಿಲ್ಲ. ಕಾತಂತ್ರದ ಸಮಾಸ ಪ್ರಕರಣ ಚಿಕ್ಕದಾಗಿರುವುದೂ (ಕೇವಲ 29 ಸೂತ್ರಗಳು) ಈ ಸಮಾಸ ನಿರೂಪಣೆಯ ಸಂಕ್ಷಿಪ್ತತೆಗೆ ಇನ್ನೊಂದು ಕಾರಣವಾಗಿರಬಹುದು. ಕನ್ನಡ ವ್ಯಾಕರಣಗಳು ಸಮಾಸ ಪ್ರಕರಣಗಳಲ್ಲಿ ಪಾರಿಭಾಷಿಕ ಪದಗಳ ವಿವರಣೆ ಕೊಡದಿರುವುದರಿಂದ ಕೆಲವೊಮ್ಮೆ ವಿಮರ್ಶಕರು ಸಂಸ್ಕೃತದ ಹಿನ್ನೆಲೆಯನ್ನು ವಿಚಾರಿಸದೆ ಅನಗತ್ಯವಾದ ವಿಚಾರ ನಡೆಸಲು ಅನುವಾಗುವುದುಂಟು (ಈ ವಿಚಾರ ಉಳಿದ ಪ್ರಕರಣಗಳಿಗೂ ಅನ್ವಯಿಸುತ್ತದೆ).

ಯಾವುದೇ ಒಂದು ಸಮಸ್ತಪದವು ಯಾವ ಸಮಾಸವೆಂಬುದನ್ನು ನಿರ್ಧರಿಸುವ ಒರೆಗಲ್ಲು ಅದರ 'ವಿಗ್ರಹವಾಕ್ಯ'ವಾಗಿದೆ. 'ವಿಗ್ರಹವಾಕ್ಯ'ವೆಂಬ ಪದಪ್ರಯೋಗ ಕನ್ನಡ ವ್ಯಾಕರಣಗಳಲ್ಲಿಲ್ಲ. ದರ್ಪಣವನ್ನು ಬಿಟ್ಟರೆ ಉಳಿದ ಗ್ರಂಥಗಳು "ವಿಗ್ರಹವಾಕ್ಯ"ದ ಕುರಿತ ಚಕಾರವೆತ್ತುವುದಿಲ್ಲ. ದರ್ಪಣವೂ ಕೇವಲ ಎರಡೆಡೆಗಳಲ್ಲಿ ಸಮಸ್ತಪದಗಳ ವಿಗ್ರಹವಾಕ್ಯವನ್ನು ಕೊಟ್ಟಿದೆ.

"ಮಾತಿನ ಬಲ್ಲಹಂ, ನೂಱುಪತ್ತು, ತೆಂಕಣಮಂಕಂ"ಸೂತ್ರ 174ರ ಪ್ರಯೋಗ.

"ಖಡ್ಗದಿಂ ಖಡ್ಗದಿಂ ಮಾಡುವುದಾವುದೊಂದು ಯುದ್ಧಮದು ಖಡ್ಗಾಖಡ್ಗಿ : ಮುಷ್ಟಿಯಿಂ ಮುಷ್ಟಿಯಿಂ ಮೆಯ್ಯೊಡ್ಡಿ ಯುದ್ಧಮಾಡುವುದು ಮುಷ್ಟಾಮುಷ್ಟಿ" (ಸೂ. 196ರ ವೃತ್ತಿ)

ಒಂದು ಸಮಸ್ತಪದವನ್ನು ಅದು ಬಳಕೆಗೊಂಡ ವಾಕ್ಯದಿಂದ ಪ್ರತ್ಯೇಕಿಸಿ ತೆಗೆದು ಬಿಡಿಯಾಗಿಟ್ಟರೆ ಅದರ ವಿಗ್ರಹ ವಾಕ್ಯವನ್ನು ಒಂದಕ್ಕಿಂತ ಹೆಚ್ಚು ವಿಧವಾಗಿ ಹೇಳ ಬಹುದು. ಎಂದರೆ ಒಂದು ಸಮಸ್ತಪದದ ವಿಗ್ರಹವಾಕ್ಯವನ್ನು ನಿರ್ಧರಿಸುವುದು ಅದು ಬಳಕೆಗೊಂಡ ಪರಿಸರ ಎಂದರ್ಥ. ವಿಗ್ರಹವಾಕ್ಯಕ್ಕೆ ತಳಹದಿ ಸಮಸ್ತಪದದ ಅರ್ಥ ಎಂದಭಿಪ್ರಾಯ. ಕೆಳಗಿನ ಪರಿಶೀಲನೆಯಿಂದ ವಿಗ್ರಹವಾಕ್ಯದಲ್ಲಿ ಬರುವ ವೈವಿಧ್ಯವನ್ನು ಗುರುತಿಸಬಹುದು.

| ಸಮಸ್ತಪದ | ವಿಗ್ರಹವಾಕ್ಯ | ಸಮಾಸ |
|---|---|---|
| ಬೆಂಬಿಸಿಲ್ | ಬೆಚ್ಚನೆ ಬಿಸಿಲ್ | ಕರ್ಮಧಾರಯ |
| ,, | ಬಿಸಿಲಬೆನ್ | ಅಂಶೀ |
| ಮುಂಗಾಲ್ | ಮುಂದಣಕಾಲ್ | ತತ್ಪುರುಷ |
| ,, | ಕಾಲಮುಂದು | ಅಂಶೀ |
| ಪೂಸರ | ಪೂವೆಂಬ ಸರ | ಕರ್ಮಧಾರಯ |
| ,, | ಪೂವೆಸರವಾಗಿರ್ಪುದು | ಬಹುವ್ರೀಹಿ |

ಮೊದಲು ಹೇಳಿದಂತೆ ಸಮಸ್ತಪದವನ್ನು ಬಿಡಿಯಾಗಿ ತೆಗೆದಾಗ ಮಾತ್ರ ಈ ವಿಧ ವಾದ ವೈವಿಧ್ಯ ತಲೆದೋರಲು ಸಾಧ್ಯ ಎಂಬುದು ಗಮನಾರ್ಹ. ಹಾಗಾಗಿ ''ವಿಗ್ರಹ ವಾಕ್ಯಮಾಡುವ ಶಕ್ತಿ ಓದುಗನ, ಬರಹಗಾರನ, ವೈಯಾಕರಣಿಯ ಜ್ಞಾನವನ್ನವಲಂಬಿಸಿ ಭಿನ್ನಭಿನ್ನವಾಗಿರುವುದು ಸಹಜ. ಈ ಕಾರಣದಿಂದಾಗಿ ಕನ್ನಡವ್ಯಾಕರಣ ಸಂಪ್ರದಾಯದಲ್ಲಿ ಸಮಾಸ ಲಕ್ಷಣವನ್ನು ನಿಶ್ಚಯಿಸುವ ಮಾನದಂಡ (criteria) ವಸ್ತುಗತ (objective) ಆಗಿರುವುದರ ಬದಲು ಹೆಚ್ಚಾಗಿ ವ್ಯಕ್ತಿಗತ (subjective) ವಾಗಿದೆಯೆಂದು ಪ್ರತ್ಯೇಕ ವಾಗಿ ಹೇಳಬೇಕಾಗಿಲ್ಲ'' (ಕ. ಭಾ. 4-4. ಪು. 1-1) ಎಂಬ ಹೇಳಿಕೆ ಸಮರ್ಥನೀಯ ವಲ್ಲ. ಭಾಷಾ ಪ್ರಶ್ನಪತ್ರಿಕೆಗಳಲ್ಲಿ ''ವಿಗ್ರಹವಾಕ್ಯವನ್ನು ಬರೆದು ಸಮಾಸವನ್ನು ಹೆಸರಿ ಸಿರಿ'' ಎಂದು ನಿರ್ದೇಶಿಸಿಕೊಡುವ ಸಮಸ್ತ ಪದಗಳಿಗಷ್ಟೇ ಈ ಮಾತು ಅನ್ವಯವಾ ದೀತು. ಭಾಷೆಯಲ್ಲಿ ಪೂರ್ಣಾರ್ಥವನ್ನು ಕೊಡುವ (ಸಮರ್ಥಃ ಪದವಿಧಿಃ ಎಂಬು ದನ್ನೂ ''ವಿಗ್ರಹವಾಕ್ಯ'' ಎಂಬುದನ್ನೂ ಲೆಕ್ಕಿಸಬೇಕು) ಸಮಸ್ತಪದದ ವಿಗ್ರಹವಾಕ್ಯ ವ್ಯಕ್ತಿನಿಷ್ಠವಾಗಲೆಡೆಯಿಲ್ಲ. ವಿಗ್ರಹವಾಕ್ಯದ ಈ ವೈವಿಧ್ಯ ವಿಚಾರ ಕನ್ನಡದಂತೆ ಸಂಸ್ಕೃತಕ್ಕೂ ಇತರ ಭಾಷೆಗಳಿಗೂ ಅನ್ವಯವಾಗುತ್ತದೆ.

ಸಮಾಸದಲ್ಲಿ ಕೂಡುವ ಪದಗಳ ಅರ್ಥಪ್ರಾಧಾನ್ಯದ ತಳಹದಿಯಲ್ಲಿ ಮಾಡುವ ಸಮಾಸದ ವಿಭಜನೆ ಸಂಸ್ಕೃತದಂತೆ ಕನ್ನಡಕ್ಕೂ ಸಮರ್ಥವಾಗಿ ಅನ್ವಯಿಸುವುದರಿಂದ ಅಲ್ಲಿ ಯಾವುದೇ ಆಭಾಸ ತಲೆಯಿಕ್ಕಿಲ್ಲ. ಆದರೆ ಸಂಸ್ಕೃತ ವ್ಯಾಕರಣಗಳು ಹೇಳುವ ಕರ್ಮಧಾರ ಯದ ಲಕ್ಷಣ ಮತ್ತು ಅವ್ಯಯೀಭಾವ ಎಂಬ ಸಂಜ್ಞೆ ಕನ್ನಡ ಸಮಾಸ ವ್ಯವಸ್ಥೆಗೆ ಒಪ್ಪಿಗೆ ಯಾಗುವುದಿಲ್ಲ.

## ಕರ್ಮಧಾರಯ

ತತ್ಪುರುಷ ಏಕಾಶ್ರಯವಾದರೆ ಕರ್ಮಧಾರಯವಾಗುವುದೆಂದು ಕನ್ನಡ ವೈಯಾಕರಣರು ಸಹಮತದಿಂದ ಹೇಳುತ್ತಾರೆ. ಏಕಾಶ್ರಯ ಇಲ್ಲವೆ ಅನ್ಯೋನ್ಯಾಶ್ರಯದ ಅರ್ಥವನ್ನು ಕನ್ನಡ ವೈಯಾಕರಣರು ಹೇಳದಿರುವುದರಿಂದ ಅದರ ಅರ್ಥವನ್ನು ಸರಿಯಾಗಿ ಗ್ರಹಿಸದೆ ಅಸ್ವಾಭಾವಿಕ ಹೇಳಿಕೆಗಳನ್ನು ಆಧುನಿಕರು ಹೇಳಿದುದುಂಟು. ಕೆಳಗಿನ ವಿವರಣೆ ಅದಕ್ಕೆ ನಿದರ್ಶನ.

"ಪೂರ್ವೋತ್ತರ ಪದಗಳು ಅನ್ಯೋನ್ಯ ಆಶ್ರಯ ಪಡೆಯುವುದು ಎನ್ನುವಾಗ ನನಗಂತೂ ಮೂರು ಅರ್ಥಗಳು ಹೊಳೆಯುತ್ತವೆ.

1. ಪೂರ್ವ ಪದಗಳು ಸೇರಿ ಸಮಸ್ತಪದವಾಗುವುದು.
2. ಈ ಎರಡೂ ಪದಗಳು ಅರ್ಥಪ್ರಧಾನವಾಗಿದ್ದು ಎರಡೂ ಪ್ರಥಮಾ ವಿಭಕ್ತಿಯಲ್ಲಿರುವುದು.
3. ಉತ್ತರಪದ ಮಾತ್ರ ಅರ್ಥಪ್ರಧಾನವಾಗಿದ್ದು ಎರಡೂ ಪದಗಳು ಪ್ರಥಮಾ ವಿಭಕ್ತಿಯಲ್ಲಿರುವುದು" (ಕ. ಭಾ. ಪು. 4-4 120).

ವಿವರಣೆ ಕೊಡದೆ ಪಾರಿಭಾಷಿಕ ಪದವನ್ನು ಬಳಸಿದುದೆ ಈ ವಿಧವಾದ ಕಲ್ಪನೆಗೆ ಅವಕಾಶವಾಗಿದೆ. ಕನ್ನಡ ವೈಯಾಕರಣರ ಹಿನ್ನೆಲೆಯನ್ನು ವಿಚಾರಿಸದೆ ಬಂದಿರುವ ಮೇಲಿನ ಅನ್ನಿಸಿಕೆ ಸರ್ವಥಾ ಸರಿಯಲ್ಲವೆಂಬುದನ್ನು ಮುಂದೆ ನೋಡಬಹುದು.

ಏಕಾಶ್ರಯ, ಸಮಾನಾಧಿಕರಣ, ಅನ್ಯೋನ್ಯಾಶ್ರಯ ಹಾಗೂ ತುಲ್ಯಾಧಿಕರಣ– ಇವೆಲ್ಲ ಒಂದೇ ಅರ್ಥವನ್ನು ಕೊಡುವ ಭಿನ್ನ ಪದಗಳು. ಸಮಾಸವಾಗುವಲ್ಲಿ ಪೂರ್ವೋತ್ತರಪದಗಳೆರಡೂ ಒಂದೇ ವಿಭಕ್ತಿಯನ್ನು ಹೊಂದಿರುವುದು ಏಕಾಶ್ರಯವೆನಿಸುತ್ತದೆ (ಹಿಂದೆ ಕರ್ಮಧಾರಯದ ಲಕ್ಷಣವನ್ನು ಹೇಳುವಲ್ಲಿ ಇದನ್ನು ವಿಚಾರಿಸಲಾಗಿದೆ). ಸಂಸ್ಕೃತದಲ್ಲಿ ಕರ್ಮಧಾರಯದ ಸಮಸ್ತಪದವನ್ನು ವಿಗ್ರಹಿಸಿದಾಗ ಪೂರ್ವೋತ್ತರಪದಗಳೆರಡೂ ಪ್ರಥಮಾ ವಿಭಕ್ತಿಯನ್ನು ಹೊಂದಿರುತ್ತವೆ. ಪೂರ್ವಪದವು ದ್ವಿತೀಯಾದಿ ವಿಭಕ್ತಿಗಳನ್ನು ಹೊಂದಿದ್ದು ಉತ್ತರಪದವು ಪ್ರಥಮಾವಿಭಕ್ತಿಯಲ್ಲಿದ್ದರೆ ತತ್ಪುರುಷವಷ್ಟೆ. ಹಾಗೆ ಅಲ್ಲಿಯವರೆಗೆ ಕರ್ಮಧಾರಯದ ಏಕಾಶ್ರಯತ್ವ ಸಮರ್ಪಕವಾಗಿದೆ. ಕನ್ನಡಕ್ಕೆ ಈ ಏಕಾಶ್ರಯತ್ವ ಸರಿಯಾಗದು. ವಿಶೇಷಣವಾಗಿರುವ ಪೂರ್ವಪದ ಸಹಜವಾಗಿ ಯಾವುದೇ ವಿಭಕ್ತಿಯನ್ನು ಹೊಂದದಿರುವುದು ಕನ್ನಡ ಜಾಯಮಾನ. ಸಾಮಾನ್ಯವಾಗಿ ವಿಶೇಷಣಗಳು ಲಿಂಗಸೂಚಕ ಅಂಶಗಳನ್ನು (ಅನ್, ಅಳ್, ದು ಇತ್ಯಾದಿ) ಮಾತ್ರ ಹೊಂದಿರುತ್ತವೆ. ಏಕಾಶ್ರಯತ್ವದ ಬದಲು "ವಿಶೇಷಣ+ವಿಶೇಷ್ಯ" (ಕ. ಕೈ. ಪು.21) ಎಂದಿದ್ದರೆ ಶೇಕಡಾ ನೂರು ಸಮರ್ಪಕವಾಗುತ್ತಿತ್ತು. ಅಷ್ಟಾಧ್ಯಾಯಿ (2-1-57), ಜೈನೇಂದ್ರ (1-3-52), ಸಿದ್ಧಹೇಮ ಶಬ್ದಾನುಶಾಸನ (3-1-96) ಮೊದಲಾದ ಸಂಸ್ಕೃತ ವ್ಯಾಕರಣಗಳು ಹೇಳುವ "ವಿಶೇಷಣ+ವಿಶೇಷ್ಯ" ಕರ್ಮಧಾರಯವನ್ನು

ಸ್ವೀಕರಿಸಿ ಕನ್ನಡದಲ್ಲಿ ಕರ್ಮಧಾರಯದ ಲಕ್ಷಣವನ್ನು ಹೇಳುತ್ತಿದ್ದರೆ ಮೇಲಿನ ವಿಮರ್ಶೆಗೆ ಅವಕಾಶವಿರಲಿಲ್ಲ (ನೋ: ಶಾಸನ. ಸೂ. 309).

## ಅವ್ಯಯೀಭಾವ

ಸಂಸ್ಕೃತದಲ್ಲಿ ಅವ್ಯಯೀಭಾವ ಸಮಾಸದಲ್ಲಿ ಪೂರ್ವಪದವು ಅವ್ಯಯವಾಗಿರುವುದಲ್ಲದೆ ನಿಷ್ಪನ್ನ ಪದವೂ ಅವ್ಯಯವಾಗಿ ನಿಲ್ಲುತ್ತದೆ. ಅವ್ಯಯವಲ್ಲದುದು ಅವ್ಯಯವಾಗಿ ತಿರುಗುವುದೆ ಅವ್ಯಯೀಭಾವ. ಹಾಗಾಗಿ ಸಂಸ್ಕೃತದ ಆ ಸಮಾಸದ ರೀತಿಗೆ ಅದು ಅನ್ವರ್ಥ ಸಂಜ್ಞೆಯಾಗುತ್ತದೆ. ಕನ್ನಡದಲ್ಲಿ ಅಂಶವಾಚಕವು ಅಂಶಿವಾಚಕದೊಡನೆ ಸೇರಿ ಸಮಾಸವಾಗುತ್ತದೆ. ನಿಷ್ಪನ್ನ ಪದವಿಲ್ಲಿ ಅವ್ಯಯವಾಗುವುದಿಲ್ಲ. ಬದಲಾಗಿ ನಾಮಪದವಾಗಿ ಉಳಿಯುತ್ತದೆ. ''ಈ ಕಾರಣದಿಂದ ಸಂಸ್ಕೃತದ ಅವ್ಯಯೀಭಾವವೆಂಬ ಹೆಸರು ಕನ್ನಡದ ಮಟ್ಟಿಗೆ ಸಮುಚಿತವೆನಿಸಲಾರದು'' (ಕ. ಸ. ಪು. 40). ಭಟ್ಟಾಕಳಂಕನು ಬಳಸಿದ 'ಅಂಶಿ' ಎಂಬ ಸಂಜ್ಞೆಯೇ ಕನ್ನಡದಲ್ಲಿ ಸ್ವೀಕಾರಾರ್ಹ. ಆದರೆ ಸ್ಮೃತಿ, ಭೂಷಣ. ದರ್ಪಣಗಳು ಹೇಳಿದ ಪೂರ್ವಪದ ಪ್ರಾಧಾನ್ಯದ ಕುರಿತು ಎರಡಭಿಪ್ರಾಯವಿಲ್ಲ.

## ಗಮಕ ಸಮಾಸ

ದರ್ಪಣವು ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಮೊದಲನೆಯದಾಗಿ ಹೇಳಿದ ಗಮಕ ಸಮಾಸದ ಕುರಿತು ವಿದ್ವಾಂಸರು ಸಾಕಷ್ಟು ವಾದ ಪ್ರತಿವಾದ ಹೂಡಿದ್ದಾರೆ. ಉಳಿದ ಏಳು ಸಮಾಸಗಳಿಗಿಂತ ಭಿನ್ನವಾದ ಗಮಕವೆಂಬ ಸಮಾಸವೊಂದನ್ನು ಕೆಲವರು ಒಪ್ಪುವುದಿಲ್ಲ. ಉಳಿದ ಸಮಾಸಲಕ್ಷಣಗಳಲ್ಲಿ ಒಳಗೊಳ್ಳದ, ಹಾಗೆಯೆ ಸಮಸ್ತಪದಗಳೆಂದು ಕರೆಯಿಸಿಕೊಳ್ಳಲು ಅರ್ಹವಾದ ಮತ್ತು ಭಾಷೆಯಲ್ಲಿ ವಿಪುಲವಾಗಿ ಕಂಡುಬರುವ ಪ್ರಯೋಗಗಳನ್ನು ಗಮನಿಸಿ 'ಗಮಕ ಸಮಾಸ' ಕನ್ನಡಕ್ಕೆ ಬೇಕೇಬೇಕೆಂದು ವಾದಿಸುವ ಪಂಡಿತರೂ ಕೆಲವರಿದ್ದಾರೆ. ಈ ಕುರಿತು ವಿಸ್ತಾರವಾಗಿ ಬೆಳೆದಿರುವ ವಾದ ಪ್ರತಿವಾದಗಳ ವಿವರಣೆ ಇಲ್ಲಿ ಅನಗತ್ಯ.[9] ದರ್ಪಣಕಾರನ ಸೂತ್ರೋದಾಹರಣೆಗಳಿಂದ ವ್ಯಕ್ತವಾಗುವ ವಿಚಾರಗಳನ್ನು ಮೊದಲು ಸಮೀಕ್ಷಿಸಿ ಆ ಬಳಿಕ ಪಂಡಿತರ ವಾದವನ್ನು ವಿಚಾರಿಸಬೇಕು. ದರ್ಪಣದಲ್ಲಿ ನಿರೂಪಿಸಿರುವ ಲಕ್ಷಣೋದಾಹರಣೆಗಳ ಆಧಾರದಲ್ಲಿ ಗಮಕ ಸಮಾಸದ ಕುರಿತು ಕೆಳಗಿನಂತೆ ಹೇಳಬಹುದು.

1. 'ಗಮಕ' ಎಂಬುದು ಪ್ರತ್ಯೇಕ ಸಮಾಸವಾದರೂ ಲಕ್ಷಣದಲ್ಲಿ ಅದು ಕರ್ಮಧಾರಯದ ಒಂದು ಭೇದ.
2. ಎಲ್ಲಿಯಾದರೂ ಒಂದೊಂದೆಡೆ ಎಂದರೆ ಸಂಖ್ಯಾಪೂರ್ವಪದವಿರಲು ಅದು ತತ್ಪುರುಷವಾಗುವುದು.
3. ಗಮಕದಲ್ಲಿ ಅರಿಸಮಾಸ ದೋಷವಿಲ್ಲ.

4. ಸಮಸ್ತ ಪದಗಳಲ್ಲೂ ಕೆಲವೊಮ್ಮೆ ಪೂರ್ವೋತ್ತರ ಪದಗಳು ವ್ಯಸ್ತವಾಗಿ ರುವುವು.

5. ಅಂತರಾಳದಲ್ಲಿ ಇ ಕಾರವಿರುವ ಗುಣವಚನಗಳ ಮುಂದೆ ಅ ಕಾರ ಬರುವುದು.

6. ಲಕ್ಷಣದಲ್ಲಿ ಹೇಳದಿದ್ದರೂ ಪೂರ್ವಪದದ ಮುಂದೆ ಬರುವ 'ಅ'ಕಾರ ಗುಣ ವಚನಕ್ಕಷ್ಟೇ ಸೀಮಿತವಾಗದೆ ಸಾರ್ವತ್ರಿಕವಾಗಿದೆ (ಪ್ರಾ. ಕ. ವ್ಯಾ : ಪು. 182).

7. ಪೂರ್ವಪದವಾಗಿ ಬರುವ ಅದು, ಇದು, ಉದುಗಳಿಗೆ ಆದೇಶವಾಗಿ ಅ, ಈ, ಊಗಳು ಬರುತ್ತವೆ.

ಕರ್ಮಧಾರಯದ ಲಕ್ಷಣವನ್ನು ಹೊಂದಿದ ಒಂದು ಸಮಾಸವನ್ನು ಕರ್ಮಧಾರಯವೆನ್ನದೆ ಇನ್ನೊಂದು ಹೆಸರಿನಿಂದ ಕರೆಯಬೇಕಾದ ಅಗತ್ಯ ಮೇಲುನೋಟಕ್ಕೆ ಪ್ರಶ್ನಾರ್ಹ ವಾಗುತ್ತದೆ. ಸಮಾಸ ವಿಭಜನೆಯ ತಳಹದಿ ಕೆಲವಿದೆಯೆಂಬುದನ್ನು ಇಲ್ಲಿ ಮತ್ತೊಮ್ಮೆ ನೆನಪಿಸಬೇಕಾಗುತ್ತದೆ. ಒಂದೇ ಒಂದು ಸಮಸ್ತಪದವನ್ನು ಎರಡು ಮೂರು ಸಮಾಸ ಸಂಜ್ಞೆಗಳಿಂದ ಕರೆಯಲೆಡೆಯಿದೆಯಷ್ಟೆ. ಉದಾಹರಣೆಗಾಗಿ ಒರ್ತಲೆ, ಇರ್ಕೆಯ್ ಮುಂತಾದ ಸಮಸ್ತಪದಗಳನ್ನು ತತ್ಪುರುಷ, ಕರ್ಮಧಾರಯ, ದ್ವಿಗು ಎಂಬ ಮೂರು ಹೆಸರಿನಿಂದ ಕರೆಯಬಹುದು. ಉತ್ತರ ಪದಾರ್ಥ ಪ್ರಾಧಾನ್ಯದ ದೃಷ್ಟಿಯಿಂದ ತತ್ಪುರುಷ, ಏಕಾಶ್ರಯದ ದೃಷ್ಟಿಯಿಂದ ಕರ್ಮಧಾರಯ, ಸಂಖ್ಯಾಪೂರ್ವದ ದೃಷ್ಟಿ ಯಿಂದ ದ್ವಿಗು ಎಂದು ಹೇಳಬಹುದು. ಹೀಗಿದ್ದೂ ಯಾವ ವಿದ್ವಾಂಸರೂ 'ತತ್ಪುರುಷ' ಎಂಬ ಒಂದೇ ಸಂಜ್ಞೆ ಸಾಕು ; ಉಳಿದೆರಡು ಬೇಡವೆಂದು ಹೇಳಿಲ್ಲ. ತತ್ಪುರುಷದ ಒಂದು ಭೇದ ಕರ್ಮಧಾರಯವಾಗಿದ್ದು ಅದರ ಒಂದು ಭೇದ ದ್ವಿಗುವಷ್ಟೆ. ಆದಿಯಲ್ಲಿ ಒಂದೇ ಒಂದಾಗಿದ್ದ ತತ್ಪುರುಷ ಕಾಲಾನುಕ್ರಮದಲ್ಲಿ ತತ್ಪುರುಷ, ಕರ್ಮಧಾರಯ ಮತ್ತು ದ್ವಿಗುಗಳಾಗಿ ಒಡೆದು ಸ್ವತಂತ್ರ ಸಮಾಸಗಳಾದುವು. ಈ ಹಿನ್ನೆಲೆಯನ್ನಿಟ್ಟು ಕೊಂಡೇ ಕರ್ಮಧಾರಯ ಮತ್ತು ತತ್ಪುರುಷದ ಲಕ್ಷಣವನ್ನು ಹೊಂದಿಯೂ ಹೇಗೆ ಗಮಕ ಪ್ರತ್ಯೇಕವಾದ ಸಮಾಸವಾಗಬಲ್ಲುದೆಂಬುದನ್ನು ವಿಚಾರಿಸಬೇಕು.

ದರ್ಪಣಕಾರ ಏಕಾಶ್ರಯತ್ವ ಮತ್ತು "ಪರಪದದೊಳರ್ಥವರ್ತನ"ವನ್ನು ಕರ್ಮಧಾರಯದ ಲಕ್ಷಣವನ್ನಾಗಿ ಇಟ್ಟುಕೊಂಡಿದ್ದಾನೆ. ಗಮಕಕ್ಕೆ ಕೊಟ್ಟಿರುವ ಉದಾ ಹರಣೆಗಳಲ್ಲಿ ಸಂಖ್ಯಾಪೂರ್ವಪದವನ್ನು ಬಿಟ್ಟರೆ ಉಳಿದುವೆಲ್ಲ ಸಾಂಪ್ರದಾಯಿಕ ದೃಷ್ಟಿ ಯಿಂದ ನೋಡಿದಲ್ಲಿ ಏಕಾಶ್ರಯದಲ್ಲಿರುವುದನ್ನು ಪರಪದಾರ್ಥ ಪ್ರಧಾನವಾಗಿರು ವುದನ್ನು ಕಾಣಬಹುದು. "ಆವ ಮಾತು, ಆಸಿಯ ನಡು, ಪಾಡುವ ತುಂಬಿ" ಇತ್ಯಾದಿ. ದರ್ಪಣಕಾರ ವಾಚ್ಯವಾಗಿ ಹೇಳದಿದ್ದರೂ, ಕರ್ಮಧಾರಯದ ಲಕ್ಷಣದಿಂದ ಸೂಚ್ಯ ವಾಗುವಂತೆ ಪೂರ್ವೋತ್ತರ ಪದಗಳು ವ್ಯಧಿಕರಣದಲ್ಲಿರುವುದು ತತ್ಪುರುಷ ಸಮಾಸ. ಸಂಖ್ಯಾಪೂರ್ವಪದಕ್ಕೆ ಉದಾಹರಣೆಯಾಗಿ ಬಂದ 'ನೂಱಪತ್ತು' ಎಂಬುದನ್ನು ಹಿಂದೆ

ಅವನೇ ತೋರಿಸಿಕೊಟ್ಟಿರುವಂತೆ 'ನೂಜಿಜಿಪತ್ತು' ಎಂದು ವಿಗ್ರಹಿಸಬೇಕು. ಆಗ ಪೂರ್ವಪದ ಷಷ್ಠಿಯನ್ನು ಹೊಂದಿದ್ದು ಉತ್ತರಪದ ಪ್ರಥಮೆಯಲ್ಲಿರುತ್ತದೆ; ತತ್ಪುರುಷಕ್ಕೆ ಸಮುಚಿತ ಉದಾಹರಣೆಯಾಗುತ್ತದೆ. ತತ್ಪುರುಷದಲ್ಲಿ ಸಂಖ್ಯಾವಾಚಕ ವೊಂದು ಉತ್ತರಪದವಾಗಿ ಬಾರದಿರುವುದನ್ನು ಗಮನಿಸಬೇಕು. ಆಗ ಕರ್ಮಧಾರಯತ್ವ ಮತ್ತು ತತ್ಪುರುಷತ್ವವನ್ನು ಹೊಂದಿಯೂ ಅವಕ್ಕಿಂತ ಹೇಗೆ ಭಿನ್ನವೆಂಬುದು ಸ್ಪಷ್ಟ ವಾಗುತ್ತದೆ. ಪೂರ್ವೋತ್ತರ ಪದಗಳು ವ್ಯಸ್ತವಾಗಿರುವುದೆ ಕರ್ಮಧಾರಯದ ಲಕ್ಷಣ ವನ್ನು ಹೊಂದಿಯೂ ಅದಕ್ಕಿಂತ ಭಿನ್ನವಾಗಿ ಇದನ್ನು ಹೇಳಲು ಕಾರಣವಾಗಿರಬೇಕು.

ಗುಣವಚನ ಪೂರ್ವಪದದ ಕುರಿತಾಗಿ ಕೇಶಿರಾಜ ಹೇಳುವ "ತನಗತ್ವಂ ಪೆಜಗಿತ್ವಂ" ಸಂದಿಗ್ಧತೆಗೆ ದಾರಿಮಾಡಿದೆ. ಇದನ್ನು "ಗುಣವಚನದ ಅಂತರಾಳದಲ್ಲಿ ಅಕಾರದ ಹಿಂದೆ ಇಕಾರ ಬರಬೇಕು" (ದರ್ಪಣ(ಶಾ) : ಟೀಕೆ : ಪು. 24) ಎಂದು ತಪ್ಪಾಗಿ ಅರ್ಥೈಸಿ ದ್ದಿದೆ. ಅಂತರಾಳದಲ್ಲಿ ಇಕಾರವಿರುವ ಗುಣವಚನದ ಮುಂದೆ ಅಕಾರ ಬರುವುದೆಂದು ಅರ್ಥ ಹೇಳಿದರೆ ಸಮರ್ಪಕವಾದೀತು. ಸೂತ್ರದಲ್ಲಿ ಅತಿ ಸಂಕ್ಷೇಪವಾಗಿ ಹೇಳಿದ ಮಾತನ್ನು ವೃತ್ತಿಯಲ್ಲಿ "ಗುಣವಚನದ ಅಂತರಾಳದೊಳೊಂದಕಾರಂ, ಪಿಂತಣಮೆಯ್ಯೊಳ್ ಇಕಾರ ಮಕ್ಕುಂ" (ದರ್ಪಣ ಸೂ. 179ರವೃತ್ತಿ)[10] ಎಂದು ಮತ್ತಷ್ಟು ಅಸ್ಪಷ್ಟಗೊಳಿಸಿದ್ದೇ ಹೀಗೆ ತಪ್ಪಾಗಿ ಅರ್ಥಯಿಸುವುದಕ್ಕೆ ಕಾರಣ. ಕೊಟ್ಟ ಪ್ರಯೋಗಗಳು ಈ ನಿಲುವಿಗೆ ಸಾಕ್ಷಿ ನುಡಿಯುತ್ತವೆ.

(ಅಸಿದು + ನಡು) = ಅಸಿಯ ನಡು

(ನಿಡಿದು + ನಾಲಗೆ) = ನಿಡಿಯ ನಾಲಗೆ

ಈ "ತನಗತ್ವಂ ಪೆಜಗಿತ್ವಂ" ವಿಚಾರವನ್ನು ಇನ್ನೊಂದು ರೀತಿಯಲ್ಲಿ ತಪ್ಪಾಗಿ ಅರ್ಥಯಿಸಿ ಆತನು ಕೊಟ್ಟ ಎಲ್ಲ ಉದಾಹರಣೆಗಳಲ್ಲಿ ಪೆಜಗಿತ್ವವನ್ನು ಕಾಣದೆ ಕೆಳಗಿನಂತೆ ಹೇಳಿದ್ದುಂಟು: "ಇತ್ವಂ ಇಲ್ಲದವುಗಳು" :

ಪಾಡುವ ತುಂಬಿ, ಕೊಡುವ ಪುಟಿಲ್, ತೂಗುವ ತೊಟ್ಟಿಲ್........ಇತ್ವಂ ಉಳ್ಳವು ಗಳು. ಬಿಳಿಯ ಕರ್ಬು, ನಿಡಿಯ ನಾಲಗೆ, ಕಿಜಿಯ ಮಂಗಂ, ಅಡಿದ ಪೊಲಂ, ಪಿಡಿವ ಕಹಳೆ .......(ಕ. ಭಾ : 4-4 : ಪು. 130) ತಪ್ಪಾಗಿ ಅರ್ಥಯಿಸಿದ ಮೇಲಿನ ಉದಾಹರಣೆಗಳ ಬಲದಿಂದ "ಕೆಲವೆಡೆಗಳಲ್ಲಿ 'ತನಗತ್ವಂ ಪೆಜಗಿತ್ವಂ' ಇಲ್ಲದಿದ್ದರೂ ಅವುಗಳನ್ನು ಗಮಕ ಸಮಾಸವೆಂದು ಕರೆಯುವಲ್ಲಿ ಕೇಶಿರಾಜನ ವ್ಯಾಖ್ಯೆಯಲ್ಲಿರುವ ಅನಿರ್ದಿಷ್ಟತೆ ಹಾಗೂ ಅಶಾಸ್ತ್ರೀಯತೆ ಕಣ್ಣುಕುಕ್ಕುವಂತಿದೆ" (ಅದೇ) ಎಂದು ಹೇಳುವುದು ಅನುಚಿತ.

ಗಮಕ ಸಮಾಸದಲ್ಲಿ ಪೂರ್ವಪದದ ಮುಂದೆ ಬರುವ 'ಅ' ಕಾರ ಸರ್ವನಾಮ ವನ್ನು ಬಿಟ್ಟು ಉಳಿದೆಡೆಗಳಲೆಲ್ಲ ಬರುತ್ತದೆಯೆಂಬುದು ಸ್ಪಷ್ಟ (ಕ. ಸ. ಪು. 59). ಉದಾ:—

ಪಟಿಯ ಕನ್ನಡ, ಕಂಡ ವಿಚಾರಂ
ನೂಱಪತ್ತು

ಈ ಅಕಾರದ ಕುರಿತು ಕೇಶಿರಾಜ ಏನೂ ಹೇಳುವುದಿಲ್ಲ. ಆಧುನಿಕ ವಿದ್ವಾಂಸರು ಹೇಳುವಂತೆ ಅದು ಸಂಬಂಧಸೂಚಕಾಂಶ (ಕ. ಭಾ. 4-4 : ಪು. 129). ಷಷ್ಠೀ ವಿಭಕ್ತಿ ಪ್ರತ್ಯಯ (ಕ. ಸ. ಪು. 59).

ಗಮಕ ಸಮಾಸವನ್ನು ಪ್ರತಿಪಾದಿಸುವವರು ಹೆಚ್ಚಾಗಿ ಸಂಸ್ಕೃತ–ಕನ್ನಡ ಪದಗಳ ಮಿಶ್ರಣದ ಅನುಕೂಲಕ್ಕಾಗಿ ಗಮಕ ಸಮಾಸದ ಅಗತ್ಯವನ್ನು ಹೇಳುತ್ತಾರೆ. "ಕನ್ನಡ ವ್ಯಾಕರಣದಲ್ಲಿ ಸಂಸ್ಕೃತ ಸಮಾಸ ವಿಭಾಗದ ತತ್ವವನ್ನು ಅನುಸರಿಸಲು ಹೊರಟ ಕೇಶಿ ರಾಜನಿಗೆ ಕೆಲವು ಕನ್ನಡ ಪದಗಳಲ್ಲಿ ಕಂಡುಬಂದ ಮಿಶ್ರ ಸಮಾಸ" (ದರ್ಪಣ (ಮ) : ಪೀಠಿಕೆ. ಪು. 51) ಗಮಕವೆಂಬ ಪ್ರತ್ಯೇಕ ಸಮಾಸದ ನಿರೂಪಣೆಗೆ ಕಾರಣವಾಗಿರ ಬೇಕೆಂದೂ ಪಂಡಿತರು ಊಹಿಸುತ್ತಾರೆ. "ಆದರೆ ಕ್ರಿಯಾಸಮಾಸದಲ್ಲಿಯೂ ಸಂಸ್ಕೃತ ಕನ್ನಡ ಮಿಶ್ರಣವಿದೆಯಾದುದರಿಂದ ಈ ಮಿಶ್ರಣದ ಸಮಸ್ಯೆ ಗಮಕಸಮಾಸಕ್ಕೆ ಮಾತ್ರ ಮೀಸಲಿಲ್ಲ"(ಕ.ಸ. ಪು.48). ಹಾಗಾಗಿ ಕೇವಲ ಆ ಒಂದು ಸಮಸ್ಯೆಯನ್ನು ಬಗೆಹರಿಸುವ ಸಲುವಾಗಿ ಗಮಕ ಸಮಾಸವನ್ನು ಹೇಳಿದನೆಂಬುದು ನಂಬಲರ್ಹವಲ್ಲ. ಗಮಕದಲ್ಲಿ ಪೂರ್ವೋತ್ತರ ಪದಗಳು ವ್ಯಸ್ತವಾಗಿರುವುದರಿಂದ, ಸಂಸ್ಕೃತ-ಕನ್ನಡ ಮಿಶ್ರ ಸಮಾಸಕ್ಕೆ ಅನುಕೂಲವಾಯಿತೆಂಬುದು ಸತ್ಯ. ಈ ರೀತಿಯಲ್ಲಿ ವ್ಯಸ್ತವಾಗುಳಿಯಲು ಕರ್ಮ ಧಾರಯದಲ್ಲಿ ಸಾಧ್ಯವಲ್ಲದ್ದರಿಂದ ಅಲ್ಲಿ ಮಿಶ್ರಸಮಾಸಕ್ಕೆಡೆಯಾಗಿಲ್ಲ.

ಉಳಿದ ಸಮಾಸಗಳಲ್ಲಿ ಆದೇಶ, ಆಗಮ, ವಿಭಕ್ತಿ ಲೋಪಗಳಿಂದ ಸಮಾಸದಲ್ಲಿ ಪೂರ್ವಪದವು ತನ್ನ ಸ್ವಸ್ವರೂಪವನ್ನು ಕಳೆದುಕೊಂಡು ಹೊಸರೂಪದಲ್ಲಿರುತ್ತದೆ. ಆದರೆ ಗಮಕದ ಸಮಸ್ತಪದದಲ್ಲಿ ಪೂರ್ವಪದದ ಸ್ವರೂಪವು ಬಳಕೆಯ ಮಾತಿನಂತೆ ಸ್ಪಷ್ಟವಾಗಿ ಅರ್ಥವಾಗುವಂತಿರುತ್ತದೆ. ಗಮಕವೆಂದರೆ ಸ್ಪಷ್ಟಪಡಿಸುವುದು ಎಂದರ್ಥ. ಆದ್ದರಿಂದ ಬಳಕೆಯ ಮಾತಿನಂತಿರುವುದು ಗಮಕ ಎಂದೂ ಊಹಿಸುತ್ತಾರೆ (ದರ್ಪಣ (ಮ)ಪೀಠಿಕೆ ಪು : 52). ಅಂತೂ ಗಮಕ ಸಮಾಸವನ್ನು ಒಪ್ಪುವವರು ಪೂರ್ವೋತ್ತರ ಪದಗಳು ವ್ಯಸ್ತವಾಗಿದ್ದು ಬಳಕೆಯ ಮಾತಿನಂತಿರುವುದು, ಸಮಸ್ತ ಪದಗಳು ದ್ವಿಗು, ಕರ್ಮಧಾರ ಯಂಗಳ ಸಮಸ್ತಪದಗಳಿಗಿಂತ ಭಿನ್ನವಾಗಿರುವುದು, ಅರಿಸಮಾಸದೋಷವಿಲ್ಲದಿರುವಿಕೆ, ಸರ್ವನಾಮ ಪೂರ್ವಪದವಾಗಿ ಬರುವುದು-ಈಯೆಲ್ಲ ಕಾರಣಗಳಿಂದ "ಗಮಕಸಮಾಸ ವೆಂಬುದಿದೆ : ಇದು ಕನ್ನಡದ ಅಸಾಧಾರಣ ಲಕ್ಷಣಗಳಲ್ಲೊಂದು ಎಂಬುದನ್ನು ಒಪ್ಪಿ ಕೊಳ್ಳಬೇಕಾಗುತ್ತದೆ" (ಕ. ಸ. ಪು. 60) ಎಂದು ತೀರ್ಮಾನಿಸುತ್ತಾರೆ.

ಗಮಕಸಮಾಸವನ್ನು ಒಪ್ಪದವರು ಕೊಡುವ ಕಾರಣಗಳಲ್ಲಿ ಕೆಲವು ಹೀಗಿವೆ : (ಕ. ಭಾ : 4-4 ಪು. 128-132):

1. ಗಮಕ ಸಮಾಸದಲ್ಲಿ ಸಮಸ್ತಪದಗಳೆಂದು ಕರೆಯಿಸಿಕೊಳ್ಳುವ ಪದಗಳು ಬಿಡಿಪದಗಳೇ ಹೊರತು ಸಮಸ್ತಪದಗಳಲ್ಲ.
2. ಪೂರ್ವ ಮತ್ತು ಪರಪದಗಳ ನಡುವೆ ವಿರಾಮವಿದೆ.
3. ಪೂರ್ವಪದದ ಕೊನೆಯ ವಿಭಕ್ತಿ ಲೋಪಹೊಂದುವುದಿಲ್ಲ.
4. ಸಂಖ್ಯಾಪೂರ್ವಪದವಾಗಿರುವ ಸಮಸ್ತಪದ ಒಂದೋ ತತ್ಪುರುಷ ಇಲ್ಲವೆ ದ್ವಂದ್ವವಲ್ಲದೆ ಅವುಕ್ಕಿಂತ ಭಿನ್ನವಾದ ಇನ್ನೊಂದಲ್ಲ.
5. ಸಾಮಾನ್ಯವಾಗಿ ಸಮಾಸದಲ್ಲಿ ನಡೆಯುವ ಸಂಧಿಕಾರ್ಯವಿಲ್ಲಿಲ್ಲ.
6. ಕವಿರಾಜಮಾರ್ಗಕಾರನೇ ಮೊದಲಾದವರು ಹೇಳಿಲ್ಲ.
7. ಗಮಕ ಸಮಾಸಕ್ಕೆ ಕೊಟ್ಟ ಹೆಚ್ಚಿನ ಉದಾಹರಣೆಗಳು ಪದಪುಂಜಗಳೇ (Phrases) ಹೊರತು ಸಮಸ್ತ ಪದಗಳಲ್ಲ.

ಕೆಳಗಿನ ನಾಲ್ಕು ತತ್ತ್ವಗಳನ್ನು ಆಧಾರವಾಗಿಟ್ಟುಕೊಂಡು 'ಗಮಕ ಸಮಾಸವು ಸಮಾಸವೇ ಅಲ್ಲ' ಎನ್ನುವ ತೀರ್ಮಾನ ಹುಟ್ಟಿಕೊಂಡದ್ದಿದೆ (ಮೂರು ದತ್ತಿ ಉಪನ್ಯಾಸಗಳು: ಪು: 73-93).

1. ಸಮಾಸಗಳಲ್ಲಿ ಕೂಡಿರುವ ಪ್ರಕೃತಿಗಳ ನಡುವೆ ಬೇರೆ ಯಾವ ರೂಪವನ್ನೂ ತುರುಕಲು ಸಾಧ್ಯವಾಗುವುದಿಲ್ಲ.
2. ಸಮಾಸವೇ ಅಲ್ಲವೇ ಎಂದು ನಿರ್ಧರಿಸಬೇಕಾಗಿರುವ ರೂಪದ ಅಂಗಗಳಾದ ಪ್ರಕೃತಿಗಳು ಏಕದೇಶಾನ್ವಯಕ್ಕೆ ಎಡೆಮಾಡಿಕೊಡುವಂತಿದ್ದರೆ ಆ ರೂಪವು ಸಮಾಸವಲ್ಲ.
3. ಸಮಾಸವೇ ಅಲ್ಲವೇ ಎಂದು ನಿರ್ಧರಿಸಬೇಕಾಗಿರುವ ರೂಪವೊಂದರ ಕೊನೆಯಲ್ಲಿ ಪ್ರತ್ಯಯವಿದ್ದರೆ, ಆ ಪ್ರತ್ಯಯವನ್ನು ತೆಗೆದು ಹಾಕಿದ ಮೇಲೆ ಉಳಿಯುವ ರೂಪ ತತ್ತ್ವಶಃ ಸಮಾಸವಾಗಿದ್ದರೆ ಹಾಗೂ ಸ್ವತಂತ್ರವಾಗಿ ಪ್ರಯೋಗದಲ್ಲಿಲ್ಲದಿದ್ದರೆ, ಆ ರೂಪವನ್ನು ಸಮಾಸವೆನ್ನಬಹುದು (ಹಣೆಗಣ್ಣ—ಹಣೆಗಣ್ಣು).
4. ಸಮಾಸವೇ, ಅಲ್ಲವೇ ಎಂದು ನಿರ್ಧರಿಸಬೇಕಾಗಿರುವ ರೂಪದಲ್ಲಿ ಇತರತ್ರ ಕಾಣದ ವಿಶಿಷ್ಟವಾದ ರಚನೆ ಕಂಡುಬಂದರೆ, ಆ ರೂಪ ಸಮಾಸವೆನ್ನಬಹುದು (ಕೋಲಾಕೋಲಿ, ಹಣಾಹಣಿ).

ಈವರೆಗೆ ಇಲ್ಲದಿದ್ದ ಹೊಸತೊಂದು ಸಮಾಸದ ಕಲ್ಪನೆ ಬಗ್ಗೆ ಮೇಲೆ ಹೇಳಿದಂಥ ಆಕ್ಷೇಪಗಳು ಬರುವುದು ಸಹಜ. ಈ ಆಕ್ಷೇಪಗಳಿಗೆ ಸ್ವಲ್ಪಮಟ್ಟಿಗೆ ದರ್ಪಣಕಾರನೇ ಕಾರಣನಾಗುತ್ತಾನೆ. ಸಂಸ್ಕೃತ ವೈಯಾಕರಣರು ಹೇಳಿದ ಸಮಾಸ ಲಕ್ಷಣಗಳಲ್ಲಿ ಕೆಲವನ್ನು

ಮಾತ್ರ ತೆಗೆದುಕೊಂಡು ಉಳಿದವನ್ನು ಹೇಳದೆ ಹೋದುದರಿಂದ ಮತ್ತು ಅತಿಯಾದ ಸಂಕ್ಷಿಪ್ತತೆಯಲ್ಲಿ ವ್ಯವಹರಿಸಿದ್ದರಿಂದ ಇಂಥ ಆಕ್ಷೇಪಗಳು ಹುಟ್ಟಿಕೊಂಡಿವೆ. ಸಂಸ್ಕೃತ ವೈಯಾಕರಣರು ಹೇಳಿದ ಸಮಾಸಗಳ ಸಾಮಾನ್ಯ ಲಕ್ಷಣಕ್ಕೆ ಮಾತ್ರ ಅತಿಯಾಗಿ ಅಂಟಿಕೊಂಡು ಆಚೀಚೆ ನೋಡದೆ ಹೋಗುವುದೇ ಇಂಥ ಟೀಕೆಗೆ ಕಾರಣ. ಆಧುನಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ನೋಡಿದಾಗ (ಎಚ್. ಎಸ್. ಬಿಳಿಗಿರಿಯವರ ನಾಲ್ಕು ಸೂತ್ರಗಳು) ಮೇಲಿನ ಆಕ್ಷೇಪಗಳಲ್ಲಿ ಸ್ವಲ್ಪಮಟ್ಟಿಗೆ ಹುರುಳು ಕಾಣಿಸಿಕೊಳ್ಳುವುದು ಸತ್ಯ.

ಸಮಾಸವಾಗುವಲ್ಲಿ ಪೂರ್ವೋತ್ತರಪದಗಳು ಬಿಡಬಿಡಿಯಾಗಿರಬಾರದೆಂದಾಗಲಿ, ಮಧ್ಯದ ವಿಭಕ್ತಿಲೋಪ ಆಗಲೇಬೇಕೆಂದಾಗಲಿ ಸಂಸ್ಕೃತ ವೈಯಾಕರಣರು ಹೇಳುವುದಿಲ್ಲ; ಬಿಡಿಬಿಡಿಪದವೆಂದು ಹೇಳುವುದಕ್ಕೆ ಮಧ್ಯದ ವಿಭಕ್ತಿ ಲೋಪಹೊಂದದೆ ಇರುವುದು ಅಥವಾ ವಿರಾಮವಿರುವುದು ಕಾರಣವಾಗಿದೆ. ದರ್ಪಣಕಾರ ಹೇಳುವ 'ಅರ್ಥಾನುಗಂ' ಆಗಿ ಎಱಗುವುವೆಂದರೆ ಏಕಾರ್ಥೀಭಾವವನ್ನು ಹೊಂದುವುದು ಎಂದರ್ಥ. ಅದುವೆ ಸಮಾಸದ ಒರೆಗಲ್ಲು. ಸಂಸ್ಕೃತದಲ್ಲಿ ಪಾಣಿನಿ (ಅಷ್ಟಾಧ್ಯಾಯಿ 6-3-1) ಮೊದಲಾದವರು ವಿಸ್ತಾರವಾಗಿ ಚರ್ಚಿಸುವ ಅಲುಕ್ ಸಮಾಸದಲ್ಲಿ ಪೂರ್ವೋತ್ತರ ಪದಗಳು ವ್ಯಸ್ತವಾಗಿರುತ್ತವೆ; ಪೂರ್ವ ಪದದ ವಿಭಕ್ತಿಗಳು ಲೋಪಹೊಂದುವುದಿಲ್ಲ. ಉದಾ:—

ದೇವಾನಾಂ ಪ್ರಿಯಃ, ಮನಸಾಗುಪ್ತಾ, ಆತ್ಮನೇ ಪದಂ........ಇತ್ಯಾದಿ. ಕನ್ನಡ ವೈಯಾಕರಣರು ಈ ಅಲುಕ್ ಸಮಾಸ ವಿಚಾರವನ್ನು ಸಮಾಸ ಲಕ್ಷಣದಲ್ಲಿ ಹೇಳುತ್ತಿದ್ದರೆ ಮೇಲಿನ ವಿಮರ್ಶೆಗೆಡೆಯಿರಲಿಲ್ಲ. ಪೂರ್ವೋತ್ತರ ಪದಗಳು ವ್ಯಸ್ತವಾಗಿದ್ದರೂ ಏಕಾರ್ಥೀಭಾವಕ್ಕೆ ಅಡ್ಡಿಯಿಲ್ಲ. "ಪೂರ್ವಪದದ ಅರ್ಥವು ಅಲ್ಲಿಂದ ಉತ್ತರಪದಕ್ಕೆ 'ಗಮಿಸಿ' ಅದರಲ್ಲಿನ ಅರ್ಥದೊಂದಿಗೆ ಕೂಡಿಕೊಂಡ ಮೇಲೆ ಎರಡು ವ್ಯಸ್ತ ಅಥವಾ ವಿಶಿಷ್ಟ ಪದಗಳಿಂದ ಸಮಾಸದ ಅರ್ಥವು ಬೋಧೆಯಾಗುವುದರಿಂದ" (ಪ್ರಾ. ಕ. ವ್ಯಾ: ಪು: 183) ಗಮಕ ಎಂಬ ಸಂಜ್ಞೆ ಅನ್ವರ್ಥಕವಾಗುತ್ತದೆ.

ಸಮಾಸದಲ್ಲಿ ಸಂಧಿಯಿರುವುದು ನಿಜವಾದರೂ "ಸಂಧಿಕಾರ್ಯ"ಗಳು ಜರುಗುವುದೇ ಸಮಾಸದ ಲಕ್ಷಣವೆಂದು ಪ್ರಾಚೀನ ವೈಯಾಕರಣರು ಹೇಳುವುದಿಲ್ಲ. ಸಂಧಿ ಬೇರೆ ಸಂಧಿಕಾರ್ಯ ಬೇರೆ. ಪರಪದದಾದಿಯ ತಕಾರಕ್ಕೆ ದಕಾರವನ್ನು ವಿಧಿಸಿದ ದರ್ಪಣಕಾರ "ಮುಖತಾವರೆ'ಯನ್ನು "ಅಡಿದಾವರೆ" ಯಂತೆ "ಮುಖದಾವರೆ" ಯೆಂದಿಲ್ಲ; ಕವಿರಾಜಮಾರ್ಗ ಮತ್ತು ದರ್ಪಣ "ಮುಖತಾವರೆ" ಯನ್ನು ಸಮಾಸವೆಂದು ಒಪ್ಪಿಕೊಂಡಿವೆ. ಅರಿಸಮಾಸವೆಂದರೂ ಅದು ಸಮಾಸ ಹೌದಷ್ಟೆ. ಭೂಪಣ ಹೇಳುವ "ಪರಕೊತ್ತಳಿ" (ಸೂ. 132ರ ಪ್ರಯೋಗ) ಯಲ್ಲಿ ಪರಪದದ ಆದಿಯ ಕಕಾರಕ್ಕೆ ಗಕಾರಾದೇಶವಾಗಿಲ್ಲ. ತರಕಟ್ಟು, ಬೆಸೆಕೋಲ್, ಏದುಪಂದಿ ಮೊದಲಾದೆಡೆಗಳಲ್ಲಿ ಪರಪದಾದಿಗೆ ಆದೇಶವಿಲ್ಲದುದನ್ನು ದರ್ಪಣಕಾರನೇ ಹೇಳಿದ್ದಾನೆ (ಸೂ.76ರ ಪ್ರಯೋಗ), ಎಂದರೆ ಸಮಾಸದಲ್ಲಿ ಸಾಮಾನ್ಯವಾಗಿ ಸಂಧಿಕಾರ್ಯವಿರುವುದು ಹೌದಾದರೂ ಅದನ್ನು ಒಂದು ಮಾನದಂಡವೆನ್ನಲು ಬರುವುದಿಲ್ಲ ಎಂದು ಮಾತ್ರ ಅಭಿಪ್ರಾಯ. ಗಮಕ

ಸಮಾಸದಲ್ಲಿ ಸಂಧಿಯಾಗದಿರಲು ಮೂಲಕಾರಣ ಪೂರ್ವೋತ್ತರ ಪದಗಳು ವ್ಯಸ್ತವಾಗಿರುವುದೆ ಆಗಿದೆ.

ಸಂಖ್ಯಾ ಪೂರ್ವಪದ ಗಮಕದಲ್ಲಿ ಸಮಾಸ ಹೊಂದುವ ಪದಗಳು ವ್ಯಸ್ತವಾಗಿರುವುದಿಲ್ಲ. ಆದರೆ ಪೂರ್ವಪದದ ಕೊನೆಯಲ್ಲಿ ಸಂಬಂಧ ಸೂಚಕವಾದ 'ಅ' ಉಪಸ್ಥಿತವಾಗಿರುತ್ತದೆ. ಆ ಕಾರಣಕ್ಕಾಗಿಯೇ ದರ್ಪಣಕಾರ ಅದನ್ನು ತತ್ಪುರುಷವೆಂದೂ ಹೇಳಿದ್ದಾನೆ. ''ಪೂರ್ವಪದಗಳು ವಿಶೇಷಣವಾಗಿ ಪರಪದವು ಪ್ರಥಮಾವಿಭಕ್ತಿಯಲ್ಲಿರುವುದರಿಂದ ಇವು ತತ್ಪುರುಷಗಳು'' (ಕ. ಭಾ. 4-4 : ಪು. 129) ಎಂದು ಹೇಳಿ ಆ ಕಾರಣದಿಂದ ಇವನ್ನು ಪ್ರತ್ಯೇಕವಾಗಿ ಗಮಕ ಸಮಾಸವೆನ್ನಬೇಕಾಗಿಲ್ಲವೆಂಬ ಅಭಿಪ್ರಾಯವಿದೆ. ಆದರೆ ಈ ಮಾತು ಸಮರ್ಪಕವಲ್ಲ. ಪೂರ್ವಪದದ ಕೊನೆಯಲ್ಲಿ ಷಷ್ಠೀ ವಿಭಕ್ತಿಯಿರುವುದಾದರೂ ನಿಷ್ಪನ್ನರೂಪದಲ್ಲಿ ತತ್ಪುರುಷ ದ್ವಿಗುಗಳಿಗಿಂತ ಇದು ಭಿನ್ನವಾಗಿದೆ. ನೂಜಜಿಪತ್ತು ಎಂದರೆ ''ನೂಜಜಿ'' ಮುಂದೆ ಅಥವಾ ಮತ್ತೆ ''ಪತ್ತು'' ಎಂದರ್ಥ. ವಿಗ್ರಹವಾಕ್ಯದಲ್ಲಿ ನೂಜು ಪತ್ತು ಎಂದಿದ್ದು ನೂರ್ಪತ್ತು ಎಂದು ಸಮಸ್ತಪದವಾಗುತ್ತಿದ್ದರೆ ದ್ವಂದ್ವವೆನ್ನಬಹುದಿತ್ತು. ಅಥವಾ 'ನೂಜು ಪತ್ತು' ಸೇರಿ ನೂರ್ಪತ್ತು ಆಗುತ್ತಿದ್ದರೆ ದ್ವಿಗುವೆನ್ನಬಹುದಿತ್ತು. ಆದರೆ ನೂಜಿಪತ್ತು ಎಂಬುದು ಇವೆಲ್ಲಕ್ಕಿಂತ ಭಿನ್ನವಾದ ಸಮಸ್ತಪದವಾಗಿರುವುದರಿಂದ ಅದನ್ನು ಪ್ರತ್ಯೇಕವಾಗಿ ಗಮನಿಸಬೇಕಾದುದು ಅವಶ್ಯ. ಕವಿರಾಜಮಾರ್ಗ, ಸ್ಮೃತಿ, ಮತ್ತು ಭೂಷಣದಲ್ಲಿ ಇಂಥ ಸಮಾಸವೊಂದು ನಿರೂಪಿತವಾಗಿಲ್ಲವೆಂಬುದು ಸತ್ಯ. ಸ್ಮೃತಿಯಲ್ಲಿ ಸಮಾಸಲಕ್ಷಣವನ್ನು ಹೇಳಿದ ಬಳಿಕ 'ಸಮಾಸಸ್ಥಿತಿ' ಮತ್ತು 'ಗಮಕ'ಕ್ಕೆ ಲಕ್ಷ್ಯಗಳಾಗಿ ಎರಡು ಪದ್ಯಗಳು ಬರುತ್ತವೆ (ಪದ್ಯ 200, 201). ಅಲ್ಲಿ ಗಮಕಕ್ಕೆ ಕೊಟ್ಟ ಲಕ್ಷ್ಯಪದ್ಯದಲ್ಲಿನ 'ಕಟಿದಮನಃಪ್ರಿಯು ವಿರಹದಿಂ' ಎಂಬ ಪ್ರಯೋಗ ದರ್ಪಣಕಾರ ಕೊಟ್ಟ 'ಪೂಸಿದ ಭಸ್ಮಪರಾಗಂ' (ಸೂ. 179ರ ಪ್ರಯೋಗ) ಎಂಬ ಪ್ರಯೋಗಕ್ಕೆ ಸಂವಾದಿಯಾಗಿದೆ. ಸ್ಮೃತಿಕಾರ ಸಮಾಸ ಸ್ಥಿತಿಗೆ ವಿರುದ್ಧವಾಗಿರುವುದಾಗಿ ಹೇಳಿದ ಉದಾಹರಣೆ ಕೇಶಿರಾಜನಿಗೆ 'ಗಮಕ ಸಮಾಸ'ವಾಗಿ ತೋರಿದ್ದು ಇಲ್ಲಿನ ಮುಖ್ಯಾಂಶ. ಕೇಶಿರಾಜನಿಗಿಂತ ಹಿಂದೆ ಇಂಥ ಪ್ರಯೋಗಗಳು ಸಮಸ್ತ ಪದಗಳಾಗಿ ಗುರುತಿಸಲ್ಪಟ್ಟಿರಲಿಲ್ಲವೆಂಬುದೂ ಇದರಿಂದ ಸ್ಪಷ್ಟವಾಗುತ್ತದೆ. ಆದರೆ ಹಿಂದಿನ ವ್ಯಾಕರಣ ಗ್ರಂಥಗಳಲ್ಲಿ ನಿರೂಪಿತವಾಗಿಲ್ಲವೆಂಬ ಕಾರಣಕ್ಕಾಗಿ ಮಾತ್ರ ಸಮಾಸದ ಸಾಧ್ಯತೆಯೊಂದನ್ನು ಅಲ್ಲಗಳೆಯುವುದರಲ್ಲಿ ಹುರುಳಿಲ್ಲ. ಸಾಂಪ್ರದಾಯಿಕ ದೃಷ್ಟಿಯಿಂದ ವಿಚಾರಿಸಿದಾಗ ''ಸಮಾಸವಲ್ಲ .ಪದಪುಂಜ'' ಎಂಬುದೂ ಸ್ವೀಕಾರಾರ್ಹವಲ್ಲ. ಹಾಗಾದರೆ ಕ್ರಿಯಾಸಮಾಸಕ್ಕೂ ಅದನ್ನೇ ಹೇಳಬೇಕಾಗುತ್ತದೆ.

ಸಂಸ್ಕೃತದ ಅಲುಕ್ ಸಮಾಸವನ್ನು ಒಪ್ಪಿಕೊಳ್ಳುವುದಾದರೆ ಬಿಳಿಗಿರಿಯವರು ಹೇಳಿದ ಮೊದಲೆರಡು ತತ್ತ್ವಗಳನ್ನು ಕೈಬಿಡಬೇಕು. ಮತ್ತಿನೆರಡು ತತ್ತ್ವಗಳು ಉಳಿದೆಲ್ಲ ಸಮಾಸಗಳಿಗೂ ಸಮಾಸವಾಗಿ ಅನ್ವಯಿಸಿ ಬರತಕ್ಕಂಥವು. ಆದ್ದರಿಂದ ಮೊತ್ತದಲ್ಲಿ ಹೀಗೆ ಹೇಳಬಹುದು.

1. ಉಳಿದ ಸಮಾಸಗಳ ಬಗ್ಗೆ ಸಾಂಪ್ರದಾಯಿಕ ಲಕ್ಷಣಗಳನ್ನು ಒಪ್ಪಿಕೊಳ್ಳುವುದಾದರೆ ಗಮಕವನ್ನೊಂದು ಸಮಾಸವೆಂದು ಸ್ವೀಕರಿಸಬಹುದು. ಉಳಿದ ಸಮಾಸಗಳ ಬಗ್ಗೆ ಸಾಂಪ್ರದಾಯಿಕ ದೃಷ್ಟಿಕೋನ, ಗಮಕದ ಬಗ್ಗೆ ನವೀನ ದೃಷ್ಟಿಕೋನ—ಈ ತಾರತಮ್ಯ ಸರಿಯಲ್ಲ.

2. ಪೂರ್ವಪದ ವಿಶೇಷಣವಾಗಿರುವ (ಸರ್ವನಾಮ, ಗುಣವಚನ, ಕೃದಂತ) ಮತ್ತು ಪರಪದ ನಾಮಪದವಾಗಿರುವ ಸಮಾಸವೇ ಗಮಕ. ಸಂಸ್ಕೃತ ಸಮಾಸ ಲಕ್ಷಣಗಳ ದೃಷ್ಟಿಯಿಂದ ನೋಡಿದರೆ ಅದು ಕರ್ಮಧಾರಯ. ಪೂರ್ವಪದದ ವಿಭಕ್ತಿಗಳು ಲೋಪವಾಗದಿರುವ ಹಾಗೂ ಪೂರ್ವೋತ್ತರ ಪದಗಳು ವ್ಯಸ್ತವಾಗಿರುವ ದೃಷ್ಟಿಯಿಂದ ಅದು ಅಲುಕ್ ಸಮಾಸ.

3. ಪೂರ್ವಪದ ಸಂಖ್ಯಾವಾಚಕವಾಗಿದ್ದಾಗ ಲಕ್ಷಣದಲ್ಲಿ ಅದು ತತ್ಪುರುಷವನ್ನು ಹೋಲುತ್ತದೆ, ಆದರೆ ನಿಷ್ಪನ್ನ ರೂಪದಲ್ಲಿ ತತ್ಪುರುಷಕ್ಕಿಂತ ಭಿನ್ನವಾಗಿರುತ್ತದೆ.

4. ಗಮಕ ಸಮಾಸವನ್ನು ಹೋಲುವ ರೂಪಗಳು ಇಂದಿನ ಕನ್ನಡದಲ್ಲೂ ಇವೆ. ಉದಾ : ಓದೋ ಹುಡುಗ, ಕರೆಯೋ ದನ : ಇತ್ಯಾದಿ.

### ಆಧುನಿಕ ವರ್ಗೀಕರಣ

ಆಧುನಿಕ ವಿದ್ವಾಂಸರು ಕನ್ನಡದಲ್ಲಿ ಎರಡು ವಿಧವಾದ ಸಮಾಸಗಳನ್ನು ಗುರುತಿಸುತ್ತಾರೆ (ಕ. ಭಾ. 4-4 : ಪು. 133 ; K.S.D. p. 168).

1. ಅಂತಃಕೇಂದ್ರೀಯ ಸಮಾಸ (Endocentric) : ಇದರಲ್ಲಿ ಪ್ರಾಚೀನ ವ್ಯಾಕರಣಗಳು ಹೇಳುವ ಪೂರ್ವೋತ್ತರ ಮತ್ತು ಉಭಯ ಪದಾರ್ಥ ಪ್ರಧಾನ ಸಮಾಸಗಳು ಅಡಕವಾಗುತ್ತವೆ. ಎಂದರೆ ತತ್ಪುರುಷ, ಕರ್ಮಧಾರಯ, ದ್ವಿಗು, ದ್ವಂದ್ವ, ಕ್ರಿಯಾ, ಅಂಶೀ ಮತ್ತು ಗಮಕ ಅಂತಃಕೇಂದ್ರೀಯ ಸಮಾಸಗಳು.

2. ಬಹಿಃ ಕೇಂದ್ರೀಯ (Exo-Centric) : ಅನ್ಯಪದಾರ್ಥ ಪ್ರಧಾನವೆಂದು ಸಾಂಪ್ರದಾಯಿಕ ವೈಯಾಕರಣರು ಹೇಳುವ ಬಹುವ್ರೀಹಿ ಈ ವರ್ಗಕ್ಕೆ ಸೇರುತ್ತದೆ.

## ಅಡಿಟಿಪ್ಪಣಿಗಳು

1. ನೋ: ಕಾಶಿಕಾ 2-1-4. ಅಷ್ಟಾಧ್ಯಾಯಿಯ 'ಸಹಸುಪಾ' (2-1-4) ಎಂಬ ಸೂತ್ರವನ್ನು ಎರಡು ಸರಳ ಸೂತ್ರಗಳಾಗಿ ವಿಂಗಡಿಸುತ್ತಾರೆ. 1. ಸಹಸುಪ್ ಸಮಸ್ಯತೇ ಸಮರ್ಥೇನ 2. ಸುಪಾಸಹ ಸುಪ್ ಸಮಸ್ಯತೇ. ಇಲ್ಲಿ ಮೊದಲ ಸರಳ ಸೂತ್ರ ಕ್ರಿಯಾಪದದೊಡನೆ ಸಮಾಸಕ್ಕೆ ಅನುವು ಮಾಡಿಕೊಡುತ್ತದೆ.

2. 'ಕಱುತಾಯ ಒಱಿಯನುಱಿಯದ ತೇಜದಿಂದಂ'
(ದರ್ಪಣ: ಸೂ: 173) ಎಂಬ ಹೋಲಿಕೆಯಲ್ಲಿ ಶಾಸ್ತ್ರಮನ ಕವಿಮನದೊಂದಿಗೆ ಮೇಳವಿಸಿದೆ.

3. ಸಾ. ಪ್ರ. 1-15 'ವರ್ಣಾದರ್ಶನಂ ಲೋಪಃ. ವಿಚಿತ್ರವದಾಗಮಃ, ಶತ್ರುವದಾದೇಶಃ'

4. ಅರ್ಥ ಪ್ರಧಾನವೆಂದರೆ ಪದಕ್ಕೆ ಕ್ರಿಯೆಯೊಡನಿರುವ ಸಂಬಂಧ. ಸಮಸ್ತಪದದಲ್ಲಿ ಯಾವ ಪದಕ್ಕೆ ಕ್ರಿಯೆಯ ಆಕಾಂಕ್ಷೆಯಿದೆಯೋ ಆ ಪದದ ಅರ್ಥ ಪ್ರಧಾನವೆಂದರ್ಥ.

5. ನೋ: ಸಂ. ಕಂ. 3-3-50

6. ಸಾ. ಪ್ರ. 18-1 'ದ್ವಿಗು ತತ್ಪುರುಷೌ ಪರಪದ ಪ್ರಧಾನೌ',

7. ನೋ: ಶಿ.ಹೇ.ಶ: 3-1-20. ದಂಡಾದಂಡಿ, ಕೇಶಾಕೇಶಿ ಇತ್ಯಾದಿಗಳನ್ನು ಅವ್ಯಯೀಭಾವ ಎನ್ನಲಾಗಿದೆ.

8. ಕೇಶಿರಾಜನು ಹೇಳಿರುವ 'ಗಮಕ ಸಮಾಸ'ವೊಂದೇ ನಾನಾ ವಿಧವಾದ ಚರ್ಚೆಗೆಡೆ ಮಾಡಿರುವಾಗ ಇನ್ನೂ ಹೆಚ್ಚಿನ ಸಮಾಸಗಳನ್ನು ಹೇಳುತ್ತಿದ್ದರೆ ಆಗುತ್ತಿದ್ದ ಚರ್ಚೆಯನ್ನು ಊಹಿಸಲು ಸಾಧ್ಯವಿಲ್ಲ.

9. ನೋ: ಅ) ದರ್ಪಣ (ಮ) ಪೀಠಿಕೆ
ಆ) ಕ. ನು. 28-4, 29-8
ಇ) ಕ.ಭಾ. 4-4
ಈ) ಪ್ರಾ.ಕ.ವ್ಯಾ. ಪು: 176-185
ಉ) ಮೂರು ದತ್ತಿ ಉಪನ್ಯಾಸಗಳು. ಪು: 73-93

10. ಈ ವೃತ್ತಿಯಲ್ಲಿ ಏನೋ ಪ್ರಮಾದವಾಗಿರಬೇಕು. ದರ್ಪಣ (ಮ), ದರ್ಪಣ (ಭೀ) ಇವುಗಳಲ್ಲಿನ ವೃತ್ತಿ ಈ ದೃಷ್ಟಿಯಿಂದ ಗಮನಾರ್ಹ.

11. 'ಸ್ಮೃತಿ'ಯ ಕೆಲವು ಪ್ರತಿಗಳಲ್ಲಿ ಮಾತ್ರ ಪದ್ಯ 201ರ ಮೊದಲು 'ಅಲ್ಲಿ ಗಮಕಕ್ಕೆ' ಎಂಬ ಬರಹವಿದೆ.

# ಅಧ್ಯಾಯ 10

# ಕ್ರಿಯೆ

ಧಾತುವಿಗೆ ಆಖ್ಯಾತ ವಿಭಕ್ತಿಗಳು ಸೇರಿ ಕ್ರಿಯಾಪದವಾಗುತ್ತದೆ. ಧಾತು ಸ್ವರೂಪ, ಆಖ್ಯಾತ ವಿಭಕ್ತಿಗಳ ವೈವಿಧ್ಯ, ವಿವಿಧ ಕ್ರಿಯಾರೂಪಗಳು, ಕರ್ಮಣಿ ಪ್ರಯೋಗ ಇವು ಈ ಅಧ್ಯಾಯದಲ್ಲಿ ಚರ್ಚಿತವಾಗುವ ಮುಖ್ಯ ವಿಚಾರಗಳು.

**ಧಾತು**

ವ್ಯಾಕರಣದಲ್ಲಿ ಮೊದಲು ಯಾವುದೇ ಒಂದು ಶಬ್ದದ ಮೂಲಕ್ಕೆ ಧಾತು ಎಂಬ ಸಂಜ್ಞೆಯಿತ್ತು (T.T.S.G. p. 77). ಕಾಲಕ್ರಮೇಣ 'ಧಾತು'ವಿಗೆ ಕ್ರಿಯಾವಾಚಕದ ಮೂಲ ಶಬ್ದ ಎಂಬರ್ಥ ಬಂದಿರಬೇಕು. ದರ್ಪಣದ ''ಕ್ರಿಯೆಯರ್ಥದ ಮೂಲಂ ಪ್ರತ್ಯಯರಹಿತಂ ಧಾತು'' (ಸೂತ್ರ 227) ಎಂಬ ನಿರೂಪಣೆಯಲ್ಲಿ ಕೊನೆಯ ಅರ್ಥವನ್ನು ಕಾಣಬಹುದು.

'ಧಾತು' ಎನ್ನುವ ಶಬ್ದವನ್ನು ಪ್ರಪ್ರಥಮವಾಗಿ ಕಾಣುವುದು **ಗೋಪಥ** ಬ್ರಾಹ್ಮಣದಲ್ಲಿ (1-24). ನಿರುಕ್ತದಲ್ಲಿ ಧಾತುವಿನ ಪ್ರಸ್ತಾಪವಿದೆ (1-20). ಪಾಣಿನಿಗಿಂತ ಹಿಂದೆಯೇ ಧಾತುವಿನ ಸರಿಯಾದ ಕಲ್ಪನೆಯಾಗಿದ್ದಿತು (ಅಷ್ಟಾಧ್ಯಾಯಿ 1-3-1). ಸಂಸ್ಕೃತ ವ್ಯಾಕರಣಗಳಲ್ಲಿ ಧಾತುವನ್ನು ನಾನಾವಿಧವಾಗಿ ವರ್ಣಿಸಲಾಗಿದೆ.

''ಕ್ರಿಯಾಭಾವೋ ಧಾತುಃ'' ಕಾತಂತ್ರ 3-1-9
''ಕ್ರಿಯಾರ್ಥೋ ಧಾತುಃ'' ಶಾಕಟಾಯನ ವ್ಯಾಕರಣ 1-1-22
''ಕ್ರಿಯಾರ್ಥೋ ಧಾತುಃ'' ಸಿದ್ಧಹೇಮ ಶಬ್ದಾನುಶಾಸನ 3-3-3

ಶಾಕಟಾಯನ ಮತ್ತು ಹೈಮ ವ್ಯಾಕರಣದಲ್ಲಿ (ಸಿ. ಹೇ. ಶ) ಬಂದಿರುವ ಧಾತುವಿನ ವಿವರಣೆಯನ್ನೇ ಭೂಷಣ ದರ್ಪಣಗಳು ಸ್ವೀಕರಿಸಿವೆ.

''ಕ್ರಿಯಾರ್ಥೋ ಧಾತುಃ'' ಭೂಷಣ. ಸೂ. 194
''ಕ್ರಿಯಾರ್ಥೋ ಧಾತುಃ'' ದರ್ಪಣ, ಧಾತು ಪ್ರಕರಣ

ಸ್ಮೃತಿಯಲ್ಲಿ ಧಾತು ಎಂಬ ಸಂಜ್ಞೆ ಬಳಕೆಗೊಂಡರೂ (ಸೂ. 97) ಅಲ್ಲಿ ಅದರ ವಿವರಣೆ ಯಾಗಲಿ ಅದನ್ನು ಕಂಡು ಹುಡುಕುವ ವಿಧಾನವಾಗಲಿ ನಿರೂಪಿತವಾಗಿಲ್ಲ. ಧಾತು ವೆಂದರೇನೆಂಬುದನ್ನು ಮಾತ್ರ ಹೇಳಿ ಭೂಷಣ (ಸೂ. 194 ವಿರಮಿಸುತ್ತದೆ. ದರ್ಪಣ ದಲ್ಲಿ ಧಾತುವಿನ ಸ್ವರೂಪ ಮತ್ತು ಅದನ್ನು ಗುರುತಿಸುವ ವಿಧಾನ ವಿವರಿಸಲ್ಪಟ್ಟಿದೆ.

ದರ್ಪಣದ "ಕ್ರಿಯೆಯರ್ಥದ ಮೂಲಂ ಪ್ರತ್ಯಯರಹಿತಂ ಧಾತು" (ಸೂ. 227) ಎಂಬ ಹೇಳಿಕೆಯಲ್ಲಿನ ಪೂರ್ವಾರ್ಧ (ಕ್ರಿಯೆಯರ್ಥದ ಮೂಲಂ) "ಕ್ರಿಯಾರ್ಥೋ ಧಾತುಃ" ಎಂಬುದಕ್ಕೆ ಸಮಾನವಾಗಿದೆ. "ಪ್ರತ್ಯಯ ರಹಿತಂ" (ಆಖ್ಯಾತ ವಿಭಕ್ತಿ ರಹಿತವಾದುದು) ಎಂಬ ಮಾತು ಲಿಂಗದ ವ್ಯಾಖ್ಯೆಯಲ್ಲಿ ಬರುವ ವಿಭಕ್ತಿಯಿಲ್ಲದುದು (ಸೂ. 82) ಎಂಬುದನ್ನು ನೆನಪಿಗೆ ತರುತ್ತದೆ. ನಾಮ ವಿಭಕ್ತಿರಹಿತವಾಗಿದ್ದರೆ ಮಾತ್ರ ಲಿಂಗ; ಆಖ್ಯಾತ ವಿಭಕ್ತಿರಹಿತವಾಗಿದ್ದರೆ ಮಾತ್ರ ಧಾತು (ಕ್ರಿಯಾರ್ಥ ಪ್ರಕೃತಿ). ಎಂದರೆ, ನಾಮ ವಿಭಕ್ತಿಯನ್ನು ಸ್ವೀಕರಿಸಲು ಅರ್ಹವಾದುದೆ ಲಿಂಗ. ಆಖ್ಯಾತ ವಿಭಕ್ತಿಯನ್ನು ಸ್ವೀಕರಿಸಿ ಭಾಷೆಯಲ್ಲಿ ವ್ಯವಹಾರಗೊಳ್ಳಲು ಸಮರ್ಥವಾದುದೆ ಧಾತು ಎಂದರ್ಥ. ನಾಮ ಪ್ರಕೃತಿಗೆ 'ಲಿಂಗ' ವೆಂಬ ಸಂಜ್ಞೆಯಾದರೆ ಕ್ರಿಯಾ ಪ್ರಕೃತಿಗೆ ಧಾತು ವೆಂಬ ಸಂಜ್ಞೆ (ನೋ: ದರ್ಪಣ: ಸೂ.45ರ ವೃತ್ತಿ). ಹೀಗೆ ಧಾತು ಸಂಬಂಧವಾದ ಕೇಶಿ ರಾಜನ ಕಲ್ಪನೆ ಹಾಗೂ ವಿವರಣೆ ಸ್ಪಷ್ಟವಾಗಿದೆ.

ಧಾತುವನ್ನು ಗುರುತಿಸುವ ಕುರಿತು ದರ್ಪಣದಲ್ಲಿ ಮಾತ್ರ ವಿವರಣೆಯಿದೆ. "ಅದು ಅಭಾವಕ್ರಿಯೆಯೊಳ್ ನಿಯತಂ ನಿಶ್ಚಯಿಪುದು ಬುಧಚಯಂ" (ಸೂ. 227) ಎಂಬ ಸೂತ್ರವಾಕ್ಯಕ್ಕೆ ವೃತ್ತಿಯಲ್ಲಿ "ಆ ಧಾತುವಂ ಪ್ರತಿಷೇಧ ಕ್ರಿಯೆಯ ವಿಭಕ್ತಿಯುಂ ಕಳೆಯೆ ಕಾಣಲಕ್ಕುಂ" ಎಂದಿದೆ. ಮತ್ತೂ ಸ್ಪಷ್ಟತೆಗಾಗಿ "ಮಾಡಿದನೆಂಬ ಕ್ರಿಯೆಗೆ ಪ್ರತಿಷೇಧ ಕ್ರಿಯೆ ಮಾಡನೆಂದಿರ್ಪುದು; ಅಲ್ಲಿ ಪ್ರಥಮ ಪುರುಷದೇಕವಚನದ ಅನ್ ಎಂಬ ವಿಭಕ್ತಿಯುಂ ಕಳೆಯೆ ಮಾಡು ಎಂದೆ ನಿಲ್ಬುದು; ಈ ತೆಱದಿಂದೆ ಕೊಡು, ನೋಡು, ತೀಡು, ಕಾಡು, ಸೂಡು ಎಂಬಿವು" ಎಂದು ವಿವರಿಸಲಾಗಿದೆ. ಪ್ರತಿಷೇಧ ಕ್ರಿಯೆಯಿಂದ ವಿಭಕ್ತಿ ಯನ್ನು ಕಳೆದಾಗ ಉಳಿಯುವ ರೂಪದ ಬಗ್ಗೆ ಭಿನ್ನಾಭಿಪ್ರಾಯ ಹುಟ್ಟಿಕೊಂಡದ್ದಿದೆ. "ವಾಸ್ತವವಾಗಿ ಪ್ರತಿಷೇಧದ ಪ್ರತ್ಯಯವನ್ನು ಕಳೆದರೆ ಉಳಿಯುವುದು ಮಾಡ್, ನೋಡ್ ಇತ್ಯಾದಿ. ಧಾತು ಪಾಠದ ಪ್ರಕಾರ ಇವು ಧಾತುಗಳಲ್ಲ; " (ಪ್ರಾ. ಕ. ವ್ಯಾ. ಪು. 203) ಎಂಬ ಅಭಿಪ್ರಾಯ ಸಮರ್ಪಕವಲ್ಲ. ಪ್ರಾಚೀನರ ವಿವರಣೆಯ ಧಾಟಿಯಲ್ಲಿ ನೋಡಿದರೆ ಆಖ್ಯಾತ ವಿಭಕ್ತಿಯನ್ನು ಕಳೆದಾಗ ಉಳಿಯುವ ಮೇಲಿನ ಧಾತುಗಳು ಸ್ವರಾಂತವಾಗಿಯೇ ಇರುತ್ತವೆ.

ಮಾಡು + ಅಂ = ಮಾಡಂ. ಉಕಾರಾಂತ ಧಾತುವಿನ ಮುಂದೆ ಸ್ವರಾದಿ ಪ್ರತ್ಯಯ ಬಂದಾಗ ಧಾತ್ವಂತ್ಯದ ಉಕಾರ ಲೋಪವಾಗುತ್ತದೆ. ಮುಂದಿನ ಪ್ರತ್ಯಯವನ್ನು ಕಳಚಿ ದಾಗ ಧಾತು ಮೊದಲಿನಂತೆ ನಿಲ್ಲಬೇಕಷ್ಟೆ. ಆದುದರಿಂದ 'ಈ ಸೂತ್ರ ಸ್ವಯಂ ಪೂರ್ಣ ವಾಗಿರದೆ ದೋಷಯುಕ್ತ" (ಪ್ರಾ. ಕ. ವ್ಯಾ. ಪು. 203) ಎನ್ನುವುದು ಸರ್ವಥಾ ಸರಿ

ಯಲ್ಲ. ಸ್ವರಾಂತ ಹಾಗೂ ವ್ಯಂಜನಾಂತ—ಎಲ್ಲ ಧಾತುಗಳಿಗೂ ಈ ಸೂತ್ರ ನಿರ್ದೇಶ ಒಪ್ಪಿಕೊಳ್ಳುತ್ತದೆ. ಪ್ರತಿಷೇಧ ಕ್ರಿಯೆಯಿಂದ ಧಾತುವಿನ ಸ್ವರೂಪವನ್ನು ಕಂಡು ಕೊಳ್ಳುವುದಕ್ಕೆ ಬಹುಶಃ ಭೂಷಣದ ಉದಾಹರಣೆಗಳು ಪ್ರೇರಣೆಯನ್ನಿತ್ತಂತೆ ತೋರುತ್ತದೆ.

ಭೂಷಣದಲ್ಲಿ ಆಖ್ಯಾತ ವಿಭಕ್ತಿಗಳನ್ನು ಹೇಳುವ "ತಸ್ಮಾದವುರಯಿರೆನೆವೋ ವಿಭಕ್ತಯಃ" (ಸೂ. 195) ಎಂಬ ಸೂತ್ರಕ್ಕೆ ಪ್ರಯೋಗವಾಗಿ ಧಾತುವಿಗೆ ನೇರವಾಗಿ ಆಖ್ಯಾತ ವಿಭಕ್ತಿಗಳು ಸೇರಿದ (ನಡುವಿನಲ್ಲಿ ಕಾಲಸೂಚಕ ವಿಕರಣಗಳು ತಲೆಯಿಕ್ಕದ) ರೂಪಗಳು ಬಂದಿವೆ.

ಮಾಡು (ಮಾಡು + ಉ) : ಮಾಡರ್ (ಮಾಡು + ಅರ್)
ಮಾಡಯ್ (ಮಾಡು + ಅಯ್) ; ಮಾಡಿರ್ (ಮಾಡು + ಇರ್)
ಮಾಡೆನ್ (ಮಾಡು + ಎನ್) : ಮಾಡೆವು (ಮಾಡು + ಎವು)

ವ್ಯಾಕರಣ ಪ್ರಕ್ರಿಯೆಯನ್ನು ಹಂತಹಂತವಾಗಿ ವಿವರಿಸುವ ನಿಟ್ಟಿನಲ್ಲಿ ಈ ಉದಾಹರಣೆಗಳು ಅತ್ಯಂತ ಸಮರ್ಪಕವಾಗಿವೆ.

ಸ್ಮೃತಿ ದರ್ಪಣಗಳಲ್ಲಿ ಆಖ್ಯಾತ ವಿಭಕ್ತಿಗಳು ಸೇರಿದ ರೂಪಗಳಿಗೆ ಉದಾಹರಣೆಯಾಗಿ ಬಂದ ಪದಗಳು ಮೇಲಿನವುಗಳಿಗಿಂತ ಭಿನ್ನವಾಗಿವೆ.

"ತೊಟ್ಟು, ಪೊರ್ದ್ದುಜಿದರ್, ನುಡಿದಯ್, ಕಾಣ್ಬರಿ, ಕೊಳ್ವೆನ್, ಕೊಂದೆವು"
(ಸ್ಮೃತಿಪದ್ಯ 380, 381, 382)

"ಎಸೆದು, ಆಡಿದರ್, ನೋಡಿದಯ್, ತಿರ್ದುವಿರ್, ಒಡರ್ಚಿದೆಂ, ಕಂಡೆವು"
(ದರ್ಪಣ ಸೂ. 228ರ ಪ್ರಯೋಗ)

ಈ ಉದಾಹರಣೆಗಳು ಭೂತಕಾಲ ಇಲ್ಲವೆ ಭವಿಷ್ಯತ್ ಕಾಲ ವಾಚಕ ಕ್ರಿಯೆಗಳಾಗಿವೆ. ವ್ಯಾಕರಣವನ್ನು ಮೊದಲಿಗೆ ಅಭ್ಯಸಿಸುವವನಿಗೆ ಇಲ್ಲಿ ಧಾತು ಮತ್ತು ಆಖ್ಯಾತ ವಿಭಕ್ತಿಗಳ ಮಧ್ಯದಲ್ಲಿ 'ದ' ಇಲ್ಲವೆ 'ವ' (ಕಾಲಸೂಚಕ ವಿಕರಣಗಳು) ಎಲ್ಲಿಂದ ಬಂದವು ಎಂಬ ಪ್ರಶ್ನೆ ಸಹಜವಾಗಿಯೆ ಹುಟ್ಟುತ್ತದೆ. ಏಕೆಂದರೆ ಕಾಲಸೂಚಕ ವಿಕರಣಗಳನ್ನು ಇನ್ನು ಮುಂದೆ ಹೇಳಬೇಕಾಗಿದೆಯಷ್ಟೆ. ಭೂಷಣದ ಉದಾಹರಣೆಗಳಲ್ಲಾದರೆ ಧಾತುವಿಗೆ ನೇರವಾಗಿ ಆಖ್ಯಾತ ವಿಭಕ್ತಿಗಳು ಹತ್ತುವುದರಿಂದ ಈ ಸಮಸ್ಯೆ ಉದ್ಭವಿಸುವುದೇ ಇಲ್ಲ. ಕೇಶಿರಾಜ ಉದಾಹರಣೆಗಳನ್ನು ಕೊಡುವಾಗ ಸ್ವಲ್ಪ ಹೆಚ್ಚುಕಡಿಮೆಯಾದರೂ ಧಾತುವನ್ನು ಕಂಡು ಹಿಡುಕುವ ಬಗ್ಗೆ ಭೂಷಣದ ಪ್ರಯೋಗವನ್ನು–ನಿಷೇಧಕ್ರಿಯೆಯನ್ನು–ಬಳಸಿಕೊಂಡಿರುವನು. ಮಾತ್ರವಲ್ಲ: ಮಾಡಿದು ಎಂಬ ಕ್ರಿಯೆಯ ನಿಷೇಧ ರೂಪವಾದ 'ಮಾಡು' ಎಂಬುದನ್ನೇ ಎತ್ತಿಕೊಂಡಿದ್ದಾನೆ. ಭೂಷಣದ ಉದಾಹರಣೆಯಲ್ಲಿ 'ಮಾಡು'

ಎಂಬ ಕ್ರಿಯೆಯ ನಿಷೇಧ ರೂಪವೇ ಇರುವುದು ಮಾತ್ರವಷ್ಟು ಗಮನಾರ್ಹ. ಒಟ್ಟಿನಲ್ಲಿ ಧಾತುವಿನ ನಿಶ್ಚಯಕ್ಕೆ ಅಭಾವ ಕ್ರಿಯೆಯನ್ನು ಬಳಸಲು ಭೂಷಣದ ಉದಾಹರಣೆಗಳೇ ಪ್ರೇರಣೆಯನ್ನಿತ್ತಂತೆ ಭಾಸವಾಗುವುದು ಸತ್ಯ.

## ಧಾತುಪಾಠ

ಪಂಚಾಂಗ ವ್ಯಾಕರಣಗಳಲ್ಲಿ "ಧಾತುಪಾಠ" ವೂ ಒಂದು. ಪ್ರಾಚೀನರಲ್ಲಿ ಧಾತುಗಳ ಅರ್ಥಸಹಿತವಾದ ಪರಿಜ್ಞಾನವಿಲ್ಲದೆ ವ್ಯಾಕರಣಾಭ್ಯಾಸ ಪರಿಪೂರ್ಣವಾಗದು ಎಂಬ ಅಭಿಪ್ರಾಯವಿದ್ದಿರಬೇಕು. ಆದುದರಿಂದಲೆ ಧಾತುಗಳನ್ನು ಅರ್ಥಸಮೇತವಾಗಿ ಕೊಡುವ ಕ್ರಮ ರೂಢಿಯಾಗಿದೆ. ಪಾಣಿನಿ, ಶಾಕಟಾಯನ, ಶರ್ವವರ್ಮ, ಚಂದ್ರಗೋಮಿ, ಹೇಮಚಂದ್ರ ಮೊದಲಾದ ವೈಯಾಕರಣರ ಕೃತಿಗಳಲ್ಲಿ "ಧಾತುಪಾಠ" ಸೇರಿಕೊಂಡಿರುವುದು ಗಮನಾರ್ಹ.

ಕನ್ನಡ ವ್ಯಾಕರಣಗಳಲ್ಲಿ, ದರ್ಪಣದಲ್ಲಿ ಮಾತ್ರ ಧಾತು ಪ್ರಕರಣವಿದೆ. ಆ ಧಾತು ಪ್ರಕರಣವನ್ನು ಕೊಡುವಲ್ಲಿ ಕೇಶಿರಾಜನೇ ಹೇಳುವಂತೆ (ಸೂ. 264) ವೈಯಾಕರಣ ಭೀಮನಿಂದಾದ ಸಂಸ್ಕೃತದ ಧಾತುವನ್ನು (ಧಾತುಪಾಠವನ್ನು) ಆದರ್ಶವಾಗಿಟ್ಟು ಕೊಂಡಂತಿದೆ. ಆ ವೈಯಾಕರಣ ಭೀಮನಾರು ಎಂಬುದು ವಿಚಾರಣೀಯ.

ಪಾಣಿನಿಯ ಧಾತುಪಾಠಕ್ಕೆ ಹಲವು ವ್ಯಾಖ್ಯಾನಗಳು ಹುಟ್ಟಿಕೊಂಡಿವೆ. ಅಂತಹ ವ್ಯಾಖ್ಯಾನಕಾರರ ಸಾಲಿನಲ್ಲಿ ವೈಯಾಕರಣ ಭೀಮಸೇನನ ಹೆಸರೂ ಸೇರಿಕೊಂಡಂತೆ ತಿಳಿದು ಬರುತ್ತದೆ. "ಕ್ರಿಯಾ ರತ್ನ ಸಮುಚ್ಚಯ"ದ ಗಣರತ್ನಸೂರಿ (ಕ್ರಿ.ಶ. 1410), "ಅಮರ ಟೀಕಾ ಸರ್ವಸ್ವ"ದ ಕರ್ತೃ ಸರ್ವಾನಂದ, 'ಧಾತುಪ್ರದೀಪ'ದ ಮೈತ್ರೇಯ ರಕ್ಷಿತ (ಕ್ರಿ.ಶ. 1109)) ಮೊದಲಾದವರು ಭೀಮಸೇನನನ್ನು ಉಲ್ಲೇಖಿಸುತ್ತಾರೆ. ಇವರ ಹೇಳಿಕೆಗಳಿಂದ ಪಾಣಿನಿಯ ಧಾತುಪಾಠದೊಂದಿಗೆ ಇವನಿಗೆ ನಿಕಟವಾದ ಸಂಬಂಧವಿದ್ದಂತೆ ತೋರುತ್ತದೆ. ಭೀಮಸೇನೀಯ ಧಾತುಪಾಠದ ಪ್ರತಿಗಳು ಹಸ್ತಪ್ರತಿಗಳ ಸಂಗ್ರಹಗಳಲ್ಲಿ ದೊರಕುತ್ತವೆಯೆಂದು ವಿದ್ವಾಂಸರು ಹೇಳುತ್ತಾರೆ (ಸಂ. ವ್ಯಾ. ಇ. ಭಾಗ. 2 ಪು. 73). ಪಾಣಿನಿಯ ಧಾತುಪಾಠದೊಂದಿಗೆ ಭೀಮಸೇನನ ಸಂಬಂಧದ ಬಗ್ಗೆಯೂ ಭಿನ್ನಾಭಿಪ್ರಾಯಗಳಿವೆ. ಪಾಣಿನಿಯ ಧಾತುಪಾಠದ ಧಾತುಗಳಿಗೆ ಮೊದಲ ಬಾರಿಗೆ ಅರ್ಥ ನಿರ್ದೇಶ ಮಾಡಿದವ ಭೀಮಸೇನನೆಂಬುದು ಒಂದು ಅಭಿಪ್ರಾಯವಾದರೆ ಪಾಣಿನಿಯ ಧಾತುಪಾಠಕ್ಕೆ ಈತನು ವ್ಯಾಖ್ಯಾನ ಬರೆದಿದ್ದಿರಬೇಕೆಂದು ಇನ್ನೊಂದು ಅಭಿಪ್ರಾಯ (ಅದೇ : ಪು. 75).

"ವೇದ ಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು" (ಸೂ. 264) ಎಂಬ ದರ್ಪಣಕಾರನ ಮಾತಿನಲ್ಲಿ ಬರುವ ಭೀಮ ಉಪರ್ಯುಕ್ತ ಭೀಮಸೇನನೇ ಆಗಿರಬೇಕೆಂದು ತೋರುತ್ತದೆ. ಸಂಸ್ಕೃತ ಧಾತು ಪಾಠದಲ್ಲಿ ಧಾತು ಪಾಠ ಮತ್ತು ಧಾತ್ವರ್ಥ ನಿರ್ದೇಶ ಎಂದು ವಿಭಾಗ ಮಾಡಿಕೊಂಡರೆ ಮೊದಲನೆಯದಕ್ಕೆ ಪಾಣಿನಿಯೂ ಎರಡನೆಯದಕ್ಕೆ

ಭೀಮಸೇನನೂ ಕರ್ತೃಗಳಾಗುತ್ತಾರೆ. ಭೀಮಸೇನನು ಧಾತ್ವರ್ಥ ನಿರ್ದೇಶ ಮಾಡಿರಬೇಕೆಂಬ ಊಹೆಯೂ ಇದೆಯಷ್ಟೆ. ಈ ನಿಟ್ಟಿನಲ್ಲಿ ವಿಚಾರಿಸಿದಾಗ ದರ್ಪಣಕಾರನು ಹೇಳಿರುವ ಸಂಸ್ಕೃತ ಧಾತು ಎಂಬ ಶಬ್ದಕ್ಕೆ ಸಂಸ್ಕೃತ ಧಾತುವಿನ ಅರ್ಥ ನಿರ್ದೇಶವೆಂದು ಅರ್ಥೈಸಿ ಸಂಸ್ಕೃತ ಧಾತ್ವರ್ಥ ನಿರ್ದೇಶವು ಭೀಮಸೇನನಿಂದಾದರೆ ಕನ್ನಡ ಧಾತುವಿ ಅರ್ಥ ನಿರ್ದೇಶವು ಕೇಶವನಿಂದ ಆದುದು ಎಂದು ಹೇಳಬಹುದು (ದರ್ಪಣ(ಮ) : ಪರಿಶಿಷ್ಟ : 3 ಪು. 402). 'ಭೈಮಿಶಾ ವ್ಯಾಕರಣ'ದ ಕರ್ತೃವಾದ ಭೀಮಸೇ ಕೇಶಿರಾಜನು ಉಲ್ಲೇಖಿಸಿದ ಭೀಮನೆಂದು ಎ. ಎನ್. ನರಸಿಂಹಯ್ಯನವರು ನಿರ್ಣೈಸಿದ್ದಾರೆ. ಈತನು ಪಾಣಿನಿಯ ಧಾತುಪಾಠದ 'ಸಂಹಿತಾಪಾಠ'ದ ಆಧಾರದ ಮೇಲೆಯೇ ಅರ್ಥಸಹಿತವಾದ ಧಾತುಪಾಠವನ್ನು ರಚಿಸಿದನೆಂದೂ ಇವನ ಕಾಲ ಕ್ರಿ.ಶ. 600 ಎಂದೂ ಹೇಳುವುದ ಸಾಧ್ಯವೆಂದು ಅಭಿಪ್ರಾಯ ಪಟ್ಟಿದ್ದಾರೆ (ಸಂಭಾವನೆ : ಪು. 187–191) ಭೀಮನನ ಧಾತ್ವರ್ಥ ನಿರ್ದೇಶವನ್ನು ಲೌಕಿಕ ಧಾತುಗಳೊಂದಿಗೆ ವೈದಿಕ ಧಾತುಗಳಿಗೂ ಮಾಡಿರುವುದರಿಂದ "ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತು" ಎಂದು ಕೇಶಿರಾಜನು ಹೇಳಿರುವುದೆಂಬ ಅಭಿಪ್ರಾಯವೂ ಇದೆ (ಪ್ರಾ. ಕ. ವ್ಯಾ. ಪು. 212). ಒಟ್ಟಿನಲ್ಲಿ ಭೀಮಸೇನನಿಗಿಂತ ಮೊದಲೇ ಸಂಸ್ಕೃತದಲ್ಲಿ ಧಾತುಪಾಠವು ಸೃಷ್ಟಿಯಾಗಿದ್ದಂತೆ ಕನ್ನಡದಲ್ಲಿ ಕೇಶಿರಾಜನಿಗಿಂತ ಹಿಂದೆಯೇ ಕನ್ನಡದ ಧಾತುಪಾಠ ಸೃಷ್ಟಿಯಾಗಿತ್ತು ಎಂಬುದಕ್ಕೆ ಆಧಾರವಿಲ್ಲ. ಆದ್ದರಿಂದ ಪಾಣಿನಿ ಮತ್ತು ಭೀಮಸೇನ—ಇವರಿಬ್ಬರ ಪಾತ್ರವನ್ನು ಕನ್ನಡದಲ್ಲಿ ಕೇಶಿರಾಜನೊಬ್ಬನೇ ವಹಿಸಿದಂತಾಗುತ್ತದೆ. ಅಂತೂ ಧಾತುಗಳನ್ನು ಕಲೆಹಾಕಿ ಅವುಗಳಿಗೆ ಅರ್ಥ ನಿರ್ದೇಶ ಮಾಡುವಲ್ಲಿ ಕೇಶಿರಾಜನಿಗೆ ವೈಯಾಕರಣ ಭೀಮಸೇನನ ಕೃತಿ ಮಾರ್ಗದರ್ಶಕವಾಗಿತ್ತು ಎಂಬುದು ಸತ್ಯ.

ಸಂಸ್ಕೃತದ ಧಾತುಪಾಠಗಳಲ್ಲಿ ಅರ್ಥವನ್ನು ಒಂದು ಪ್ರತ್ಯೇಕವಾದ ರೀತಿಯಲ್ಲಿ ಕೊಡುವುದು ಕ್ರಮ. "As arranged in the Dhatu-Pathas or 'glossaries of roots', the root is usually interpreted by an active or abstract noun in the locative case" (Sanskrit Grammar. p. 105-106) ಎಂಬ ವಿವರಣೆ ಅದನ್ನು ಸ್ಪಷ್ಟೀಕರಿಸುತ್ತದೆ. ದರ್ಪಣದ ಧಾತು ಪ್ರಕರಣದಲ್ಲಿ ಕೊಡಲಾದ ಧಾತುಗಳ ಅರ್ಥ ನಿರ್ದೇಶ ಮೇಲೆ ಹೇಳಿದ ರೀತಿಯಲ್ಲೇ ಇರುವುದು ಗಮನಾರ್ಹ:

ಉದಾ : ಈ = ಪ್ರದಾನೇ; ನೆಕ್ಕು = ಅಂತರ್ಲೇನೇ; ಅಡಗು = ಗೋಪನೇ

ಸಂಸ್ಕೃತದಲ್ಲಿ ಧಾತುಗಳನ್ನು 'ಗಣ'ಗಳಾಗಿ ವಿಂಗಡಿಸಿ ಧಾತುಪಾಠದಲ್ಲಿ ಕೊಡುವುದು ಸಂಪ್ರದಾಯ. ಆದರೆ ದರ್ಪಣದಲ್ಲಿ 'ಸ್ವರ ಧಾತು', ಕಾಂತ, ಗಾಂತ ಇತ್ಯಾದಿಯಾಗಿ ಅಂತದ ಆಧಾರದಲ್ಲಿ ಧಾತುಗಳನ್ನು ಪಟ್ಟಿಮಾಡಲಾಗಿದೆ. ಇದು ಸಂಸ್ಕೃತಕ್ಕಿಂತ ಬೇರೆಯಾದ ಮಾರ್ಗ.

**ಆಖ್ಯಾತ**

'ಆಖ್ಯಾತ' ಎಂದರೆ ಕ್ರಿಯಾಪದ (ಪ್ರಾ. ಕ. ವ್ಯಾ. ಪು. 202). ನಿರುಕ್ತಕಾರನ ಹೇಳಿಕೆಯಂತೆ "ಭಾವಪ್ರಧಾನಮಾಖ್ಯಾತಂ" (ನಿರುಕ್ತ: 1-1). ಕ್ರಿಯೆ ವಸ್ತು ಸಾಪೇಕ್ಷ. ಆದ್ದರಿಂದ ಅದು ಭಾವಪ್ರಧಾನ (ಪ್ರಾ. ಕ. ವ್ಯಾ, ಅಡಿಟಿಪ್ಪಣಿ. 227). ಸಂಸ್ಕೃತ ವ್ಯಾಕರಣಗಳಲ್ಲಿ ಕ್ರಿಯಾಪದವನ್ನು ವಿವರಿಸುವ ಪ್ರಕರಣಕ್ಕೆ ಆಖ್ಯಾತ ಪ್ರಕರಣ, ತಿಙ್ ವಿಧಿ ಮೊದಲಾದ ಹೆಸರುಗಳನ್ನು ಕೊಡುತ್ತಾರೆ. ಹೆಚ್ಚಾಗಿ ಪ್ರಕ್ರಿಯಾತ್ಮಕ ಗ್ರಂಥಗಳಲ್ಲಿ ಮೊದಲನೆಯ ಹೆಸರನ್ನೆ ಕಾಣಬಹುದು.

| | | |
|---|---|---|
| ಕಾತಂತ್ರ | : | ಆಖ್ಯಾತ ಪ್ರಕರಣಂ (3ನೇ ಅಧ್ಯಾಯ) |
| ಪ್ರಕ್ರಿಯಾ ಸಂಗ್ರಹ | : | ತಿಙಂತ ಸಂಗ್ರಹ |
| ಕಚ್ಚಾಯನ ವ್ಯಾಕರಣ | : | ಆಖ್ಯಾತ ಕಪ್ಪ |

ಕನ್ನಡ ವ್ಯಾಕರಣಗಳಲ್ಲಿ—

| | | |
|---|---|---|
| ಸ್ಮೃತಿ | — | ಆಖ್ಯಾತ ಪ್ರಕರಣ |
| ಭೂಷಣ | — | ಆಖ್ಯಾತ ವಿಧಾನ |
| ದರ್ಪಣ | — | ಆಖ್ಯಾತ ಪ್ರಕರಣ |

'ಆಖ್ಯಾತ'ವೆಂದರೆ ಪೂರ್ಣವಾಗಿ ವಿವರಿಸಲ್ಪಟ್ಟುದು ಎಂದರ್ಥ. ಆದರೆ ವ್ಯಾಕರಣದಲ್ಲಿ ಪೂರ್ಣವಾಗಿ ವಿವರಿಸುವುದು ಯಾವುದೋ ಅದು (that which describes fully) ಎಂಬ ಅರ್ಥ ಕ್ರಮೇಣ ಬಂದಂತಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ "ಅವಿಶಿಷ್ಟ ಲಿಂಗಮ್ ಆಖ್ಯಾತಮ್ ಕ್ರಿಯಾವಾಚಿ" ಎಂದು ಆಖ್ಯಾತವನ್ನು ವಿವರಿಸಲಾಗಿದೆ (ಅವಿಶಿಷ್ಟ ಲಿಂಗಮ್ ಎಂಬುದು ಕನ್ನಡಕ್ಕೆ ಹೊಂದತಕ್ಕುದಲ್ಲ). ಮಹಾಭಾಷ್ಯದಲ್ಲಿ ಧಾತು ಎಂಬರ್ಥದಲ್ಲೂ 'ಆಖ್ಯಾತ'ದ ಬಳಕೆಯಾಗಿದೆ. "ಸರ್ವಾಣ್ಯಾಖ್ಯಾತಜಾತಾನಿ ನಾಮಾನಿ" (ಮಹಾಭಾಷ್ಯ 3-1-1). ಧಾತು ಮತ್ತು ಕ್ರಿಯಾವಾಚಿ ಎಂಬ ಅರ್ಥಗಳಲ್ಲದೆ ಆಖ್ಯಾತ ಪ್ರತ್ಯಯಗಳು (verbal endings) ಎಂಬರ್ಥದಲ್ಲೂ ಸಂಸ್ಕೃತದಲ್ಲಿ ಪ್ರಯುಕ್ತವಾದುದಿದೆ. ವೃತ್ತಿಕಾರರ 'ಆಖ್ಯಾಯಂತೇ ಮುಖ್ಯತಯಾ ಪ್ರತಿಪಾದ್ಯಂತೇ ಯಾನಿತಾನಿ ಆಖ್ಯಾತಾನಿ ತ್ಯಾದೀನಿ' (T.T.S.G. p.69) ಎಂಬ ಹೇಳಿಕೆಯಲ್ಲಿದನ್ನು ಗಮನಿಸಬಹುದು. "ವಿಭಕ್ತಿ ತದ್ಧಿತಾಖ್ಯಾತ ಕೃತಶ್ಚಪ್ರತ್ಯಯಾ ಮತಃ" ಎಂಬ ಪ್ರಯೋಗ ರತ್ನಮಾಲಾ ವ್ಯಾಕರಣದ ಮಾತೂ (1-172) ಮೇಲಿನ ಅಭಿಪ್ರಾಯಕ್ಕೆ ಸಾಕ್ಷಿ ನುಡಿಯುತ್ತದೆ. ಸಾರಸ್ವತ ವ್ಯಾಕರಣದಲ್ಲಿ ಆಖ್ಯಾತ ಪ್ರತ್ಯಯಗಳನ್ನು ಹೇಳುವ ಮೊದಲು "ಅಥಾಖ್ಯಾತ ಪ್ರತ್ಯಯಾ ನಿರೂಪ್ಯಂತೇ" ಎಂದಿದೆ. ಹೀಗೆ ಸಂಸ್ಕೃತ ವ್ಯಾಕರಣಗಳಲ್ಲಿ

ಧಾತಂ, ಕ್ರಿಯಾವಾಚಿ, ಕ್ರಿಯಾವಿಭಕ್ತಿ (ಯಾ ಪ್ರತ್ಯಯಂ) ಎಂಬ ಮೂರುಂ ತೆರನಾದ ಅರ್ಥಗಳಲ್ಲಿ 'ಆಖ್ಯಾತ' ಬಳಕೆಗೊಂಡಿದೆ.

ಪಾಣಿನಿ "ಆಖ್ಯಾತ" ವೆಂಬ ಪದವನ್ನು ಹೇಳಿದರೂ ಅದನ್ನು ಪಾರಿಭಾಷಿಕ ಪದವಾಗಿ ಬಳಸಿಲ್ಲ. ಕಾತಂತ್ರದಲ್ಲಿ ಪ್ರಕರಣಕ್ಕೆ ಆಖ್ಯಾತವೆಂಬ ಹೆಸರಿದ್ದರೂ ಇಲ್ಲಿಯೂ ಅದು ಪಾರಿಭಾಷಿಕ ಪದವಾಗಿ ಬಂದಿಲ್ಲ. 'ಕ್ರಿಯಾಪದ' ಎಂಬ ಪ್ರಯೋಗ ಸ್ಮೃತಿ (ಸೂ. 48) ಭೂಷಣ (ಸೂತ್ರ. 133) ದರ್ಪಣ (ಸೂ. 149)ಗಳಲ್ಲಿದೆ. ಭೂಷಣದಲ್ಲಿ 'ಆಖ್ಯಾತ ವಿಧಾನ' ವೆಂಬುದು ಪ್ರಕರಣನಾಮವಾದರೂ ಆಖ್ಯಾತವೆಂಬ ಪಾರಿಭಾಷಿಕ ಪದವಲ್ಲಿಲ್ಲ. ದರ್ಪಣದಲ್ಲಿ ಕ್ರಿಯಾ ಮತ್ತು ಆಖ್ಯಾತವೆಂಬೆರಡು ಪದಗಳು ಸಮಾನಾರ್ಥಕಗಳಾಗಿ ಬಳಸಲ್ಪಟ್ಟಿದಿದೆ.

ಕ್ರಿಯಾವಿಭಕ್ತಿ (ಸೂತ್ರ 62ರ ವೃತ್ತಿ)

ಆಖ್ಯಾತವಿಭಕ್ತಿ (ಸೂತ್ರ 45ರ ವೃತ್ತಿ)

ಆದರೆ ಕ್ರಿಯಾಪದ, ಕ್ರಿಯೆಯ ಪದ (ಸೂ. 243) ಎಂಬಂತೆ ಆಖ್ಯಾತಪದವೆಂಬ ಪ್ರಯೋಗ ಕನ್ನಡ ವ್ಯಾಕರಣಗಳಲ್ಲಿ ಕಡಮೆ.[1] ಸಾಮಾನ್ಯವಾಗಿ ಕ್ರಿಯಾಪದ ಮತ್ತು ಆಖ್ಯಾತ ವಿಭಕ್ತಿ ಅಥವಾ ಆಖ್ಯಾತ ಪ್ರತ್ಯಯ ಎಂಬ ಪ್ರಯೋಗಗಳೇ ಹೆಚ್ಚು. ಒಟ್ಟಿನಲ್ಲಿ ಕ್ರಿಯಾರ್ಥಕಗಳಾದ ಧಾತುಗಳಿಗೆ ಹತ್ತುವ ಪ್ರತ್ಯಯ ಇಲ್ಲವೆ ವಿಭಕ್ತಿಗಳ ಒಂದು ಸಂಜ್ಞೆಯಾಗಿ 'ಆಖ್ಯಾತ'ದ ಬಳಕೆ ಕನ್ನಡ ವ್ಯಾಕರಣಗಳಲ್ಲಾಗಿದೆ ಎನ್ನಬಹುದು. ಪಾಣಿನಿ ಸಂಪ್ರದಾಯದಲ್ಲಿ ಆಖ್ಯಾತ ಪ್ರತ್ಯಯಗಳಿಗೆ ತಿಙ್ ಪ್ರತ್ಯಯಗಳೆಂದು ಸಂಜ್ಞೆ.

## ಆಖ್ಯಾತವಿಭಕ್ತಿ

ಸ್ಮೃತಿಯಲ್ಲಿ 'ಆಖ್ಯಾತ ವಿಭಕ್ತಿ' ಎಂಬ ಪ್ರಯೋಗವಿದೆ.

"ಭೂತವತಿ ವರ್ತಮಾನಂ
ಖ್ಯಾತ ಭವಿಷ್ಯಂತಿ ಸರ್ವಸಾಧನಿಯೆಂಬಾ
ಖ್ಯಾತ ವಿಭಕ್ತಿಗಳಕ್ಕು ಮ
ತೀತ ಭವದ್ಭಾವಿಪಕಾಲ ವಿಧ್ಯಾದಿಗಳೊಳ್" ಸ್ಮೃತಿ ಸೂ. 84

"ಧಾತುಗನೇಕಾಕ್ಷರ ಕಾ
ಖ್ಯಾತ ವಿಭಕ್ತಿಗಳ ಮೊದಲೊಳಿಸುತಾನಕ್ಕುಂ" ಸ್ಮೃತಿ. ಸೂ. 97

ದರ್ಪಣದಲ್ಲಿ "ಆಖ್ಯಾತ ವಿಭಕ್ತಿ" ಎಂಬ ಅರ್ಥ ಬರುವಂತಿದೆ.

"ವಿಭಕ್ತಿಗಳಾವುವೆಂದೊಡೆ ಮ್ ಅಮ್ ಮೊದಲಾದ
ನಾಮಾಖ್ಯಾತ ವಿಭಕ್ತಿಗಳವಂ ಪ್ರತ್ಯಯಮೆನಲಕ್ಕುಂ"

(ಸೂ. 45ರ ವೃತ್ತಿ)

'ಆಖ್ಯಾತ ನಿಯುಕ್ತ ವಿಭಕ್ತಿಗಳ್' (ಸೂ. 230)

ಭೂಷಣದಲ್ಲಿ ಆಖ್ಯಾತ ವಿಭಕ್ತಿಯೆಂಬ ಪ್ರಯೋಗವಿಲ್ಲ. ಈ ಮೂರೂ ಗ್ರಂಥಗಳಲ್ಲಿ 'ವಿಭಕ್ತಿ' ಎಂಬ ಪ್ರಯೋಗ ತೀರ ಸಾಮಾನ್ಯವಾಗಿದೆ.

> "ದ ದಪವಕಾರಂಗಳ್ ಮೂ
> ಲದೊಳಕ್ಕುಂ ಭೂತ ವರ್ತಮಾನ ಭವಿಷ್ಯದ್
> ವಿದಿತ ವಿಭಕ್ತಿತ್ರಿತಯಕ್ಕೆ ..........." ಸ್ಮೃತಿ ಸೂ. 87[2]
>
> "ತಸ್ಮಾದಮರಯಿರೆನೆವೋ ವಿಭಕ್ತಯಃ" ಭೂಷಣ ಸೂ. 195[3]
>
> "ಧಾತುಗೆ ವಿಭಕ್ತಿಯಾಖ್ಯಾಗಿರ್ಕುಂ" ದರ್ಪಣ ಸೂ. 227[4]

ಕನ್ನಡ ಮತ್ತು ಸಂಸ್ಕೃತದ ಆಖ್ಯಾತ ವಿಭಕ್ತಿಗಳಲ್ಲಿ ಇರುವ ಮುಖ್ಯವಾದ ಅಂತರ ಲಿಂಗಸಂಬಂಧವಾದುದು. ಸಂಸ್ಕೃತದಲ್ಲಿ ಆಖ್ಯಾತ ವಿಭಕ್ತಿಗಳು ಲಿಂಗಾಂಶವನ್ನು ಕೂಡಿಕೊಂಡಿಲ್ಲ. ಅದನ್ನೇ ಕೌಟಿಲ್ಯ "ಅವಿಶಿಷ್ಟ ಲಿಂಗಮ್" ಎಂದು ಹೇಳಿದ್ದಾನೆ. ಆದರೆ ಕನ್ನಡದಲ್ಲಿ ಪ್ರಥಮ ಪುರುಷದ ಆಖ್ಯಾತ ವಿಭಕ್ತಿಗಳು ಲಿಂಗಾಂಶವನ್ನು ಒಳಗೊಂಡಿವೆ :

| ಪ್ರಥಮ ಪುರುಷ | ಏಕವಚನ | ಬಹುವಚನ |
|---|---|---|
| ಪುಲ್ಲಿಂಗ | ಅಂ (ಅನ್) | ಅರ್ |
| ಸ್ತ್ರೀಲಿಂಗ | ಅಳ್ | ಅರ್ |
| ನಪುಂಸಕಲಿಂಗ | ಉದು, ಇತು, ಇತ್ತು[5] ಅತ್ತು, ಆದು (ನಿಷೇಧ) | ಉವು, ಅವು |

ಕನ್ನಡದಲ್ಲಿರುವಂತೆ ಸಂಸ್ಕೃತದಲ್ಲಿ ಪ್ರಥಮ ಪುರುಷದ ಆಖ್ಯಾತ ವಿಭಕ್ತಿಗಳಲ್ಲಿ ಸ್ತ್ರೀಲಿಂಗ ಪುಲ್ಲಿಂಗಗಳಿಗೆ ಪ್ರತ್ಯೇಕ ರೂಪಗಳಿಲ್ಲ. ಬಹುಶಃ ಸಂಸ್ಕೃತವನ್ನು ಗಾಢವಾಗಿ ಅನುಸರಿಸಿದುದರಿಂದಲೇ ಕನ್ನಡ ವೈಯಾಕರಣರು ಪ್ರಥಮ ಪುರುಷ ಸ್ತ್ರೀಲಿಂಗ ಮತ್ತು ನಪುಂಸಕಲಿಂಗದ ಪ್ರತ್ಯಯಂಗಳನ್ನು ಅವಗಣಿಸಿ ಸೂತ್ರಗಳನ್ನು ಹೆಣೆದಿರಬೇಕು.

> "ಕವದಿನವುರಯಿರೆನೆವೆನಿಪ್ಪವು........" ಸ್ಮೃತಿ ಸೂ. 85
> "ತಸ್ಮಾದಮುರಯಿರೆನೆವೋ ವಿಭಕ್ತಯಃ" ಭೂಷಣ. ಸೂ. 195
> "ಆಮುರಯಿರೆನೆವುಗಳಕ್ಕುಂ" ದರ್ಪಣ. ಸೂ. 228

ಮೇಲಿನ ಸೂತ್ರಗಳಲ್ಲಿ ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗದ ಪ್ರತ್ಯಯಗಳನ್ನು ಸೇರಿಸದಿದ್ದುದರಿಂದ ಮುಂದೆ ಆ ಪ್ರತ್ಯಯಂಗಳನ್ನು ಪ್ರಥಮ ಪುರುಷ ಪ್ರತ್ಯಯಂಗಳಿಗೆ ಆಯಾ ಲಿಂಗಗಳಲ್ಲಿ ಆದೇಶವಾಗುತ್ತವೆಂದು ನಿರೂಪಿಸಬೇಕಾದ ಅಗತ್ಯ ಬಂತು (ಸ್ಮೃತಿ: ಸೂ. 89 ; ಭೂಷಣ : ಸೂ. 205 ; ದರ್ಪಣ: ಸೂ. 236–237). ದರ್ಪಣಕಾರನು

ಮೊದಲಿಗೆ ಸ್ಪಷ್ಟವಾಗಿ "ಧಾತುಗೆ ವಿಭಕ್ತಿಯಾಜಾಗಿರ್ಕುಂ" ಎಂದು ಲೆಕ್ಕಮಾಡಿ ಹೇಳಿ ಮತ್ತೆ ಉಳಿದ ಪ್ರತ್ಯಯಂಗಳನ್ನು ಆದೇಶವೆಂಬಂತೆ ಹೇಳಿದ್ದಾನೆ. (ನಿಜವಾಗಿ ನೋಡಿದರೆ ಧಾತುಗೆ ವಿಭಕ್ತಿಯಾಜಿಲ್ಲ, ನಿಷೇಧ, ವಿಧ್ಯರ್ಥಕ ಹಾಗೂ ಗುಂ ಕುಂ ಪ್ರತ್ಯಯಗಳೂ ಸೇರಿದರೆ ಸುಮಾರು ಹತ್ತೊಂಭತ್ತು).

ಸಂಸ್ಕೃತ ಮತ್ತು ಕನ್ನಡದ ಆಖ್ಯಾತ ವಿಭಕ್ತಿಗಳಲ್ಲಿರುವ ಇನ್ನೊಂದು ಪ್ರಮುಖವಾದ ಅಂತರ ಕಾಲ ಸಂಬಂಧವಾದುದು. ಸಂಸ್ಕೃತದಲ್ಲಿ ಆಖ್ಯಾತ ಪ್ರತ್ಯಯಗಳು ಕಾಲ ಸೂಚಕಾಂಶವನ್ನು ಗರ್ಭೀಕರಿಸಿಕೊಂಡರೆ ಕನ್ನಡದಲ್ಲಿ (ವೈಯಾಕರಣರ ನಿರೂಪಣೆಯಂತೆ) ಧಾತು ಮತ್ತು ಆಖ್ಯಾತ ಪ್ರತ್ಯಯಗಳ ನಡುವೆ ವಿಕರಣಗಳಾಗಿ ಬಂದು ಸೇರುತ್ತವೆ. ಇತು, ಇತ್ತು, ಅತ್ತು ಎಂಬ ಮೂರು ಪ್ರತ್ಯಯಂಗಳನ್ನು ಬಿಟ್ಟರೆ ಉಳಿದ ಪ್ರತ್ಯಯಂಗಳು ಎಲ್ಲ ಕಾಲಗಳಿಗೂ ಸಮಾನವಾಗಿವೆ. ಸಂಸ್ಕೃತದಲ್ಲಿ ಬೇರೆ ಬೇರೆ ಕಾಲ ಮತ್ತು ಅರ್ಥಗಳಿಗೆ ಹೊಂದಿಕೊಂಡು ಆಖ್ಯಾತ ಪ್ರತ್ಯಯಂಗಳು ಬೇರೆಬೇರೆಯಾಗಿರುವುದರಿಂದ (ಆತ್ಮನೇಪದ ಮತ್ತು ಪರಸ್ಮೈಪದ ಎರಡರಲ್ಲೂ ಸೇರಿ) ಒಟ್ಟಿಗೆ 180 ಪ್ರತ್ಯಯಂಗಳಿವೆ.

ಸಂಸ್ಕೃತ ಮತ್ತು ಕನ್ನಡದ ಆಖ್ಯಾತ ವಿಭಕ್ತಿಗಳಲ್ಲಿರುವ ಸಮಾನ ಅಂಶವೆಂದರೆ ವಚನ ಸಂಬಂಧವಾದುದು. ಆಖ್ಯಾತ ಪ್ರತ್ಯಯಂಗಳು ಎರಡರಲ್ಲೂ ವಚನಾಂಶವನ್ನು ತಮ್ಮಲ್ಲಿ ಗರ್ಭೀಕರಿಸಿಕೊಂಡಿವೆ. ಎಂದರೆ ಬೇರೆ ಬೇರೆ ವಚನಗಳಿಗೆ ಬೇರೆ ಬೇರೆ ಪ್ರತ್ಯಯಗಳಿದ್ದು ಆ ಪ್ರತ್ಯಯಂಗಳಿಗೆ ಪ್ರತ್ಯೇಕವಾಗಿ ವಚನ ಸೂಚಕಾಂಶವನ್ನು ಸೇರಿಸಬೇಕಾಗಿಲ್ಲ.

## ಪುರುಷತ್ರಯ

'ಪುರುಷ' ಎನ್ನುವ ಪದ ಯಾಸ್ಕನ ನಿರುಕ್ತದಲ್ಲಿ (7-2) ಮೊದಲ ಬಾರಿಗೆ ಕಂಡುಬರುತ್ತದೆ. ಅದೂ ಪ್ರಥಮ ಪುರುಷ, ಮಧ್ಯಮ ಪುರುಷ, ಉತ್ತಮ ಪುರುಷ ಈ ವಿಧವಾದ ಪ್ರಯೋಗದಲ್ಲಿ. ಅಷ್ಟಾಧ್ಯಾಯಿ ಮತ್ತು ಕಾತಂತ್ರದಲ್ಲಿ 'ಪುರುಷ'ವನ್ನು ಬಿಟ್ಟು ಕೇವಲ ಪ್ರಥಮ, ಮಧ್ಯಮ, ಉತ್ತಮ ಎಂಬುದಾಗಿ ಪ್ರಯುಕ್ತವಾಗಿವೆ.

"ತಿಙಸ್ತ್ರೀಣಿ ತ್ರೀಣಿ ಪ್ರಥಮ ಮಧ್ಯಮೋತ್ತಮಾಃ" ಅಷ್ಟಾಧ್ಯಾಯಿ 1-4-101

"ತ್ರೀಣಿ ತ್ರೀಣಿ ಪ್ರಥಮ ಮಧ್ಯಮೋತ್ತಮಾಃ" ಕಾತಂತ್ರ 3-1-3

ಆದರೆ ಕಾತಂತ್ರದಲ್ಲಿ ಪ್ರತ್ಯೇಕವಾಗಿ 'ಪುರುಷ' ಪದ ಬಳಕೆಗೊಂಡಿದೆ.

"ಯುಗಪದ್ವಚನೇ ಪರಃ ಪುರುಷಾಣಾಮ್" (ಕಾತಂತ್ರ 3-1-4)

ಸಂಸ್ಕೃತ ವ್ಯಾಕರಣಗಳಲ್ಲಿ 'ಪುರುಷ' ಪದದ ಬಳಕೆಯಲ್ಲುಂಟಾದ ಬೆಳವಣಿಗೆಯನ್ನು ಸಮೀಕ್ಷಿಸಿದ ಪಂಡಿತರು "It would appear from the Nirukta that Purusha or Person was first used with reference to the verb and then extended to pronouns and then to nouns" (T. T. S. G. p.

129) ಎಂದು ಸರಿಯಾಗಿಯೇ ಹೇಳಿದ್ದಾರೆ. ಆರಂಭದಲ್ಲಿ ಆಖ್ಯಾತ ವಿಭಕ್ತಿಗಳನ್ನು ಪುರುಷದ ಆಧಾರದಲ್ಲಿ ವಿಂಗಡಿಸಿ ಹೇಳುತ್ತಿದ್ದುದಕ್ಕೆ ಅಷ್ಟಾಧ್ಯಾಯಿ, ಕಾತಂತ್ರಗಳು ಒತ್ತು ಕೊಡುತ್ತವೆ. ಸಾರಸ್ವತ ವ್ಯಾಕರಣದಲ್ಲಿ ''ಪ್ರಥಮ ಪುರುಷ'' ಎಂಬ ಪ್ರಯೋಗ ಇದೆ (ಸಾ. ಪ್ರ. ಉತ್ತರಾರ್ಧ 8ರ ವೃತ್ತಿ).

ಕನ್ನಡ ವ್ಯಾಕರಣಗಳಲ್ಲಿ ಆಖ್ಯಾತ ವಿಭಕ್ತಿಗಳಿಗೆ ಸಂಬಂಧಿಸಿಕೊಂಡು ಪುರುಷ ಶಬ್ದದ ಬಳಕೆಯಾಗಿದೆ. ಅಷ್ಟಾಧ್ಯಾಯಿ, ಕಾತಂತ್ರಗಳಂತೆ ಕನ್ನಡ ವ್ಯಾಕರಣಗಳಲ್ಲೂ ಆಖ್ಯಾತ ವಿಭಕ್ತಿಗಳನ್ನು ಪುರುಷದ ತಳಹದಿಯಲ್ಲಿ ವಿಂಗಡಿಸಲಾಗಿದೆ. ಭೂಷಣ ದರ್ಪಣ ಗಳಲ್ಲಿ ಸ್ಮೃತಿಗಿಂತ ನಿಚ್ಚಳವಾದ ವಿವರಣೆಯನ್ನು ಕಾಣಬಹುದು.

ಸ್ಮೃತಿ : ''ಕವದಿನಮುರಯಿರೆನೆವೆನಿ
ಪ್ಪುವು ವರ್ತಿಕುವನ್ಯಯುಷ್ಮದಸ್ಮದ್ವಿಷಯ
ವ್ಯವಹೃತಿಗಳ್ಗೇಕಾನೇ
ಕ ವಚನದಿಂ ಪ್ರತಿ ವಿಭಕ್ತಿ ಪುರುಷಾಖ್ಯಂಗಳ್'' ಸೂತ್ರ 85

ಭೂಷಣ :

ಸೂತ್ರ : 'ತಾಸುದ್ವೇ ದ್ವೇ ಪ್ರಥಮಃಮಧ್ಯಮೋತ್ತಮ ಪುರುಷಾಃ'
ಸೂತ್ರ 198

ವೃತ್ತಿ : ''ತಾಸು ತ್ರಿಧಾ ವಿಭಜ್ಯಮಾನಾಸು ವಿಭಕ್ತಿಷು ದ್ವೇದ್ವೇ ವಚನೇ ಭೂತ್ವಾ ಪ್ರಥಮ ಪುರುಷಮಧ್ಯಮ ಪುರುಷೋತ್ತಮ ಪುರುಷ ಸಂಜ್ಞಾ ಭವಂತಿ''.

ಪ್ರಥಮ ಪುರುಷ : ಅವ್, ಅರ್
ಮಧ್ಯಮ ಪುರುಷ : ಅಯ್, ಇರ್
ಉತ್ತಮ ಪುರುಷ : ಎನ್, ಎವು

ಇಲ್ಲಿ ಒಂದೊಂದು ಯುಗ್ಮಕ್ಕೆ ಆಯಾ ಪುರುಷ ಸಂಜ್ಞೆ ವಿಧಿಸಲಾಗಿದೆಯೆಂಬುದು ಸ್ಪಷ್ಟ. ಈ ವಿಚಾರವೇ ದರ್ಪಣದ ಕೆಳಗಿನ ಸೂತ್ರದಲ್ಲಿ ಅಡಕಗೊಂಡಿದೆ.

''ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕ ವಚನದೊಳ್ ಪ್ರತ್ಯೇಕಂ
ಸಮನಿಸೆ ಯುಗಲತೆಯಾಖ್ಯಾ
ತ ಮಾರ್ಗದೊಳ್ ನೆಲಸಿನಿಂದ ಪುರುಷತ್ರಯಕಂ'' ಸೂ. 228

ಈ ಸೂತ್ರವನ್ನು ವೃತ್ತಿಯ ನೆರವಿನಿಂದ ಬಿಡಿಸಿದರೆ ಕೆಳಗಿನಂತೆ ಅರ್ಥವಾಗುವುದು.

| ಪುರುಷ | ಏಕವಚನ | ಬಹುವಚನ |
|---|---|---|
| ಪ್ರಥಮ | ಅವನ್ | ಅರ್ |
| ಮಧ್ಯಮ | ಅಯ್ | ಇರ್ |
| ಉತ್ತಮ | ಎನ್ | ಎವು |

ಈ ವಿಶ್ಲೇಷಣೆಯಿಂದ ಒಂದೊಂದು ಪುರುಷದಲ್ಲಿ ಎರಡೆರಡು ಆಖ್ಯಾತ ಪ್ರತ್ಯಯಗಳಿರುವುದು ಸ್ಪಷ್ಟವಾಗುತ್ತದೆ. ಈ ವಿಚಾರವನ್ನು ಕೆಳಗಿನ ಸೂತ್ರಗಳಲ್ಲಿ ಇನ್ನಷ್ಟು ಸ್ಪಷ್ಟಗೊಳಿಸುವುದನ್ನು ಕಾಣಬಹುದು.

ಅನ್ಯಾರ್ಥೇ ಪ್ರಥಮಃ : ಭೂಷಣ ಸೂತ್ರ 199
ಯುಷ್ಮದಸ್ಮದೋರ್ಮಧ್ಯ
ಮೋತ್ತಮೌ : ,, ,, 200
ಏಕಸ್ಮಿನ್ನೇಕವಚನಂ : ,, ,, 203
ದ್ವಿತ್ವಬಹುತ್ವಯೋರಸ್ಯತ್ : ,, ,, 204

ಈ ಸೂತ್ರಗಳಲ್ಲಿ ಹೇಳಿದ ವಿಚಾರವನ್ನೇ ದರ್ಪಣದ ಕೆಳಗಿನ ಸೂತ್ರದಲ್ಲಿ ವಿವರಿಸಲಾಗಿದೆ.

ತಿಳಿ ತಾಂ ನೀನಾನೆಂಬ
ರ್ಥ ಳಂಬಿಗಳ್ ಪ್ರಥಮ ಮಧ್ಯಮೋತ್ತಮ ಪುರುಷಂ
ಗಳವೇಕ ವಚನಮೊರ್ವನ
ಬಳಕೆಗೆ ಬಹುವಚನಮೆಲ್ಲರಂ ಪೇಟ್ವೆಡೆಯೊಳ್ ದರ್ಪಣ. ಸೂತ್ರ 235

ಈ ಸೂತ್ರವನ್ನು ಬಿಡಿಸಿದಾಗ ಕೆಳಗಿನಂತೆ ಅರ್ಥವಾಗುವುದು.

1. ತಾಂ ಎಂಬ ಅರ್ಥಳಂಬಿಗಳು ಪ್ರಥಮ ಪುರುಷ ಪ್ರತ್ಯಯಗಳು
2. ನೀನ್ ,, ,, ಮಧ್ಯಮ ,,
3. ಆನ್ ,, ,, ಉತ್ತಮ ,,
4. ಒರ್ವನ ಬಳಕೆಗೆ ಏಕವಚನ
5. ಎಲ್ಲರಂ ಪೇಟ್ವೆಡೆಯೊಳ್ (ದ್ವಿ ಮತ್ತು ಬಹು) ಬಹುವಚನ.

ಮೇಲೆ ಉದ್ಧರಿಸಿದ ಭೂಷಣದ ಸೂತ್ರಗಳ (199, 200, 203, 204) ಗಾಢವಾದ ಅನುಸರಣೆಯನ್ನೇ ನಾವಿಲ್ಲಿ ಕಾಣುತ್ತೇವೆ. ಆಖ್ಯಾತ ವಿಭಕ್ತಿಗಳ ಕುರಿತೇ ಈ

ವಿವರಣೆ ಬಂದಿರುವುದು ಸುಸ್ಪಷ್ಟ. ಹಾಗಿದ್ದೂ "ತಾನ್ ಎಂಬುದು ಪ್ರಥಮ ಪುರುಷ ದಲ್ಲಿಯೂ, ನೀನ್ ಎಂಬುದು ಮಧ್ಯಮ ಪುರುಷದಲ್ಲಿಯೂ, ಆನ್ ಎಂಬುದು ಉತ್ತಮ ಪುರುಷದಲ್ಲಿಯೂ ಬರುತ್ತದೆ. ಒಬ್ಬನನ್ನು ಹೇಳಿದರೆ ಏಕವಚನವೆಂದೂ ಹಲವರನ್ನು ಹೇಳಿದರೆ ಬಹುವಚನವೆಂದೂ ಎನಿಸುವುದು" (ದರ್ಪಣ (ಪ) ಪು: 625) ಎಂಬ ಸರ್ವನಾಮಪರವಾದ ವಿವರಣೆ ಆಶ್ಚರ್ಯವನ್ನುಂಟು ಮಾಡುತ್ತದೆ. ಕನ್ನಡ ವೈಯಾಕರ ಣರು ಸರ್ವನಾಮಗಳನ್ನು ಪುರುಷಗಳ ಹಿನ್ನೆಲೆಯಲ್ಲಿ ವಿಭಾಗಿಸಿಲ್ಲವೆಂಬುದನ್ನು ಮರೆಯ ಬಾರದು. ಭೂಷಣ ದರ್ಪಣಗಳ ಮೇಲಿನ ನಿರೂಪಣೆಗೆ ಕಾತಂತ್ರದ ಹೇಳಿಕೆಗಳು ನೇರ ವಾಗಿಯೂ ಅಷ್ಟಾಧ್ಯಾಯಿಯ ನಿರೂಪಣೆ ಅಂಶಿಕವಾಗಿಯೂ ಮಾರ್ಗದರ್ಶಕಗಳೆಂಬುದ ರಲ್ಲಿ ಸಂದೇಹವಿಲ್ಲ.

**ಅಷ್ಟಾಧ್ಯಾಯಿ :**

1. ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ : 1–4–105
2. ಅಸ್ಮದ್ಯುತ್ತಮಃ : 1–4–107
3. ಶೇಷೇ ಪ್ರಥಮಃ : 1–4–108

**ಕಾತಂತ್ರ:**

1. ನಾಮ್ನಿ ಪ್ರಯುಜ್ಯಮಾನೇಪಿ ಪ್ರಥಮಃ : 2–1–5
2. ಯುಷ್ಮದಿ ಮಧ್ಯಮಃ : 2–1–6
3. ಅಸ್ಮದ್ಯುತ್ತಮಃ : 2–1–7

ಸರ್ವನಾಮಗಳನ್ನು ಹೇಳುವಲ್ಲಿ ಯುಷ್ಮದರ್ಥ, ಅಸ್ಮದರ್ಥ, ಅನ್ಯಾರ್ಥವೆಂದು ಬಳಸುವುದು ಸಂಸ್ಕೃತದಲ್ಲಿ ರೂಢಿ. ಸ್ಮೃತಿಯಲ್ಲಿ ಯುಷ್ಮದಸ್ಮತ್ ಅನ್ಯವಿಷಯವೆಂದೂ (ಸೂತ್ರ 85), ಭೂಷಣದಲ್ಲಿ ಯುಷ್ಮದಸ್ಮದನ್ಯಾರ್ಥ (ಸೂತ್ರ 199, 200)ಎಂದೂ ಸಂಸ್ಕೃತವನ್ನು ನೇರವಾಗಿ ಅನುಸರಿಸಿ ಹೇಳಿದರೆ ಕೇಶಿರಾಜ ನೀಂ ಅರ್ಥ, ನಾಂ ಅರ್ಥ, ತಾಂ ಅರ್ಥ ಎಂದು ಅದನ್ನೇ ಕನ್ನಡಿಸಿ ಹೇಳಿರುತ್ತಾನೆ. ಈ ಅರ್ಥಗಳನ್ನು ಅಥವಾ ಸರ್ವನಾಮಗಳನ್ನು ಆಶ್ರಯಿಸಿಕೊಂಡಿರುವ ಪ್ರತ್ಯಯಗಳೇ ಪುರುಷ ಪ್ರತ್ಯಯಗಳು. ಮೂರು ಅರ್ಥಗಳಿರುವುದರಿಂದ ಮೂರು ಪುರುಷಗಳು. ಅಸ್ಮದರ್ಥ ಅಥವಾ ನಾಂ ಎಂಬುದನ್ನು ಉತ್ತಮ ಪುರುಷ, ಯುಷ್ಮದರ್ಥ ಅಥವಾ ನೀಂ ಎಂಬುದನ್ನು ಮಧ್ಯಮ ಪುರುಷ ಹಾಗೂ ಅನ್ಯಾರ್ಥ ಅಥವಾ ತಾಂ ಎಂಬುದನ್ನು ಪ್ರಥಮ ಪುರುಷ ಇಲ್ಲವೆ ಅನ್ಯ ಪುರುಷ ಪ್ರತ್ಯಯಗಳು ಆಶ್ರಯಿಸಿಕೊಂಡಿರುತ್ತವೆ. ಕ್ರಿಯಾ ವಿಭಕ್ತಿಗಳು ನಾಮವನ್ನು (ಕರ್ತೃ ಯಾ ಕರ್ಮ) ಆಶ್ರಯಿಸಿಕೊಂಡಿರಬೇಕಷ್ಟೆ. ಹೀಗೆ ಪುರುಷರ ಕಲ್ಪನೆ ಮತ್ತು ವಿಭಜನೆ ಸಂಸ್ಕೃತದ ವ್ಯಾಕರಣವನ್ನು ಅನುಸರಿಸಿಯೇ ಕನ್ನಡದಲ್ಲಿ ಹುಟ್ಟಿ ಬೆಳೆದುದಾಗಿದೆ.

**ಉತ್ತಮ ಪುರುಷ :** 'ಉತ್ತಮ ಪುರುಷ' ಎಂಬ ಪದದ ಬಳಕೆ ಸ್ಮೃತಿಯ ಸೂತ್ರಗಳಲ್ಲಿಲ್ಲ. ಅಸ್ಮತ್ ವಿಷಯ (ಸೂ. 85) ಅಸ್ಮದ್ (ಸೂ. 92) ಎನ್ನುವ ಶಬ್ದಗಳನ್ನು ಆ ಅರ್ಥದಲ್ಲಿ ಬಳಸಲಾಗಿದೆ. ಭೂಷಣ (ಸೂತ್ರ 198 ಮತ್ತು 200ರವೃತ್ತಿ) ಮತ್ತು ದರ್ಪಣದಲ್ಲಿ (ಸೂತ್ರ 234 ಮತ್ತು 235) 'ಉತ್ತಮ ಪುರುಷ' ಎನ್ನುವ ಪ್ರಯೋಗವಿದೆ.

**ಮಧ್ಯಮ ಪುರುಷ :** ಸ್ಮೃತಿಯಲ್ಲಿ ಯುಷ್ಮತ್ (ಸೂ. 85), ಮಧ್ಯಮ (ಸೂ. 93 ಮತ್ತು 96) ಎಂಬ ಪದಗಳ ಬಳಕೆಯಿದ್ದರೂ 'ಮಧ್ಯಮ ಪುರುಷ' ಎನ್ನುವ ಪ್ರಯೋಗವಿಲ್ಲ. ಭೂಷಣ ದರ್ಪಣಗಳಲ್ಲಿ ಮಧ್ಯಮ ಪುರುಷ ಎಂಬ ಪದ ಪ್ರಯೋಗವಿದೆ.

**ಪ್ರಥಮ ಪುರುಷ :** ಸ್ಮೃತಿಯಲ್ಲಿ ಅನ್ಯ (ಸೂ. 84), ಅನ್ಯಾರ್ಥ (ಸೂ. 92) ಎಂಬ ಪದಗಳು ಈ ಅರ್ಥದಲ್ಲಿ ಬಂದರೆ ಭೂಷಣದಲ್ಲಿ ಪ್ರಥಮ (ಸೂ. 198), ಪ್ರಥಮ ಪುರುಷ (ಸೂ. 198, 205, 206, 207, 208, 209, 215—ಇವುಗಳ ವೃತ್ತಿಗಳಲ್ಲಿ) ಎಂಬ ಪ್ರಯೋಗವಿದೆ. ದರ್ಪಣದಲ್ಲಿ ಪ್ರಥಮಪುರುಷ (ಸೂ. 235ರ ವೃತ್ತಿ, 236) ಅನ್ಯ (ಸೂ. 238, 240) ಎಂಬ ಪದಗಳ ಬಳಕೆಯನ್ನು ಕಾಣಬಹುದು.

**ಕಾಲ**

ಸಂಸ್ಕೃತದಲ್ಲಿ ಮೂರು ಕಾಲಗಳು ಮತ್ತು ನಾಲ್ಕು ಅರ್ಥಗಳು ; ಮೂರು ವಿಧವಾದ ಭೂತಕಾಲ, ವರ್ತಮಾನ, ಎರಡು ವಿಧವಾದ ಭವಿಷ್ಯತ್‌ಕಾಲ—ಹೀಗೆ ಕಾಲ ಸಂಬಂಧವಾದ ಕ್ರಿಯಾ ರೂಪಗಳು ಆರು. ಆಜ್ಞಾ, ವಿಧಿ, ಆಶೀ ಮತ್ತು ಸಂಕೇತಗಳೆಂಬುದಾಗಿ ನಾಲ್ಕು ವಿಧವಾದ ಅರ್ಥಗಳೂ ಅಲ್ಲಿವೆ (ಕಾವ್ಯಾವಲೋಕನ : ಟಿಪ್ಪಣಿಗಳು : ಪು. 260) ಅವುಗಳಿಗೆಲ್ಲ ಹೆಚ್ಚ ತಕ್ಕ ಆಖ್ಯಾತ ವಿಭಕ್ತಿಗಳು ಬೇರೆ ಬೇರೆಯಾಗಿವೆ. ಹಿಂದೆಯೇ ಹೇಳಿರುವಂತೆ ಈ ಆಖ್ಯಾತ ವಿಭಕ್ತಿಗಳು ಕಾಲ ಸೂಚಕಾಂಶವನ್ನು ಗರ್ಭೀಕರಿಸಿಕೊಂಡವಾಗಿವೆ. ಆದುದರಿಂದ ಬೇರೆ ಬೇರೆ ಕಾಲಗಳಿಗೆ ಬೇರೆ ಬೇರೆ ಪ್ರತ್ಯಯಗಳು, ಪ್ರತಿಯೊಂದು ಕಾಲದಲ್ಲೂ ಬೇರೆ ಬೇರೆ ಪುರುಷ, ವಚನಗಳಿಗೆ ಬೇರೆ ಬೇರೆ ಪ್ರತ್ಯಯಗಳು—ಹೀಗೆ ಸಂಸ್ಕೃತದಲ್ಲಿ ಆಖ್ಯಾತ ಪ್ರತ್ಯಯಗಳ ಸಂಖ್ಯೆ 180ಕ್ಕೇರಿದೆ. ಆಯಾ ಕಾಲ ಯಾ ಅರ್ಥವನ್ನು ಹೇಳುವ ಆಖ್ಯಾತ ಪ್ರತ್ಯಯಗಳ ಸಮೂಹವನ್ನು ಪ್ರತ್ಯೇಕ ಹೆಸರಿನಿಂದ ಕರೆಯುವುದು ರೂಢಿ. ಉದಾಹರಣೆಗಾಗಿ ವರ್ತಮಾನ ಕಾಲವನ್ನು ಎತ್ತಿಕೊಳ್ಳಬಹುದು. ಕಾತಂತ್ರ ವ್ಯಾಕರಣದಲ್ಲಿ ವರ್ತಮಾನಾರ್ಥದಲ್ಲಿ ಬರುವ ಪ್ರತ್ಯಯಗಳಿಗೆ ವರ್ತಮಾನ ವಿಭಕ್ತಿಗಳೆಂದು (ಕಾತಂತ್ರ 3-1-11ರ ವೃತ್ತಿ) ಹೇಳಿದರೆ ಪಾಣಿನಿ ಸಂಪ್ರದಾಯದಲ್ಲಿ ಲಟ್ ಪ್ರತ್ಯಯಗಳೆಂದು (ಕಾಶಿಕಾ. 3-2-123) ಹೇಳುತ್ತಾರೆ. ಹೀಗೆಯೇ ಉಳಿದ ಕಾಲ ಮತ್ತು ಅರ್ಥಗಳ ವಿಭಕ್ತಿಗಳಿಗೆ ಹೆಸರು.

ಕನ್ನಡ ವ್ಯಾಕರಣಕಾರರು ಭೂತ, ವರ್ತಮಾನ, ಭವಿಷ್ಯಂತಿ ಎಂಬ ಮೂರು ಕಾಲಗಳನ್ನೂ ವಿಧ್ಯಾದಿಯೆಂದು ಒಂದೇ ಅರ್ಥವನ್ನೂ ಅಂಗೀಕರಿಸಿರುವರು (ಕಾವ್ಯಾವಲೋಕನ: ಟಿಪ್ಪಣಿಗಳು: ಪು. 260).

ಸ್ಮೃತಿಯಲ್ಲಿ ಕಾತಂತ್ರವನ್ನನುಸರಿಸಿ ಅತೀತ, ಭವತ್, ಭಾವಿಕಾಲಗಳಲ್ಲಿ ಅನುಕ್ರಮವಾಗಿ ಭೂತವತಿ, ವರ್ತಮಾನ, ಭವಿಷ್ಯಂತಿಯೆಂಬಾಖ್ಯಾತ ವಿಭಕ್ತಿಗಳು ಬರುತ್ತವೆ ಎನ್ನಲಾಗಿದೆ (ಸೂ. 84). ಮುಂದುವರಿದು

"ದ ದಪವಕಾರಂಗಳ್ ಮೂ
ಲದೊಳಕ್ಕುಂ ಭೂತವರ್ತಮಾನ ಭವಿಷ್ಯದ್
ವಿದಿತ ವಿಭಕ್ತಿತ್ರಿತಯ
ಕ್ಕೆ............... " (ಸೂತ್ರ 87)

ಎಂದು ಹಿಂದಿನ ಹೇಳಿಕೆಗೆ ಒತ್ತುಕೊಡಲಾಗಿದೆ. ಇಲ್ಲಿ ವಿಭಕ್ತಿತ್ರಿತಯ ಎಂಬುದು ಗಮನಾರ್ಹ. ಸ್ಮೃತಿಗಿಂತಲೂ ಸ್ಪಷ್ಟವಾದ ವಿವರಣೆ ಭೂಷಣದಲ್ಲಿದೆ. ಅಲ್ಲಿ ಮೊದಲು ವಿಭಕ್ತಿಗಳನ್ನು ಮಾತ್ರ ಹೇಳಿ (ಸೂ. 195) ಮತ್ತಿನ ಸೂತ್ರದಲ್ಲಿ ದ, ದಪ, ವಕಾರಗಳಿಂದ ಕೂಡಿದ ಆ ವಿಭಕ್ತಿಗಳಿಗೆ ಅನುಕ್ರಮವಾಗಿ ಭೂತವತೀ, ವರ್ತಮಾನಾ, ಭವಿಷ್ಯಂತೀ ಎಂಬ ಸಂಜ್ಞೆಗಳನ್ನು ವಿಧಿಸಲಾಗಿದ.

"ಭೂತವತ್ಯ: — ದಮ್, ದರ್, ದಯ್, ದಿರ್, ದೆನ್, ದೆವು
ವರ್ತಮಾನಾ: — ದಪಮ್, ದಪರ್, ದಪಯ್, ದಪಿರ್, ದಪೆನ್, ದಪೆವು
ಭವಿಷ್ಯಂತ್ಯಃ: — ವಮ್, ವರ್, ವಯ್, ವಿರ್, ವೆನ್, ವೆವು"

"ಈ (ಆಖ್ಯಾತ) ವಿಭಕ್ತಿಗಳ ಹಿಂದೆ ಯಥಾಕ್ರಮವಾಗಿ ಭೂತವತಿ, ವರ್ತಮಾನ, ಭವಿಷ್ಯಂತಿ ಎಂಬ ಸಂಜ್ಞೆಗಳನ್ನು ಹೊಂದಿದ ದ, ದಪ, ವಕಾರಗಳು ಹತ್ತುವುವು" (ಪ್ರಾ. ಕ. ವ್ಯಾ. ಪು. 204) ಎಂಬ ವಿವರಣೆ ಭೂಷಣಕ್ಕೆ ಸರಿಹೊಂದಲಾರದು. ಭೂಷಣದ ವಿವರಣೆಯಾಗಲಿ, ಭೂಷಣ ಅನುಸರಿಸಿದ ಕಾತಂತ್ರ ಸ್ಮೃತಿಗಳಾಗಲಿ ಈ ತೆರನಾಗಿ ಅರ್ಥಯಿಸಲು, ಎಡೆಗೊಡುವುದಿಲ್ಲ. ಒಂದು ವೇಳೆ ವಿಭಕ್ತಿಯನ್ನುಳಿದ ದ, ದಪ, ವಕಾರಗಳಿಗೆ ಮಾತ್ರ (ದರ್ಪಣದಲ್ಲಿರುವಂತೆ) ಭೂತವತಿ ಇತ್ಯಾದಿ ಸಂಜ್ಞೆಗಳಾದರೆ ಅವನ್ನು ಮೇಲಿನಂತೆ (ಸೂ. 196ರ ವೃತ್ತಿ) ಕೊಡುವ ಅಗತ್ಯವಿರಲಿಲ್ಲ. ಮುಂದೆ ಇದಾಗಮ ಪ್ರಸಕ್ತಿಯಲ್ಲಿನ (ಸೂ. 210) ದಕಾರಾದಿ ವಿಭಕ್ತಿಗಣಗಳೆಂಬ ಹೇಳಿಕೆಯೂ ಈ ದೃಷ್ಟಿಯಿಂದ ಗಮನಿಸಬೇಕಾದುದಾಗಿದೆ.

ಕಾಲ ಮತ್ತು ಕಾಲಕ್ಕೆ ಹೊಂದಿಕೊಂಡು ವಿಭಕ್ತಿಗಳನ್ನು ವರ್ಗೀಕರಿಸುವ ವಿಚಾರದಲ್ಲಿ ದರ್ಪಣ ಸ್ವಂತಿಕೆಯನ್ನು ಮೆರೆದಿದೆ. ಸ್ಮೃತಿ ಭೂಷಣಗಳಂತೆ ಆಖ್ಯಾತ ವಿಭಕ್ತಿಗಳಿಗೆ ಭೂತವತೀ ವರ್ತಮಾನಾ ಭವಿಷ್ಯಂತೀ ಎಂಬ ಸಂಜ್ಞೆಗಳನ್ನು ದರ್ಪಣ ವಿಧಿಸುವುದಿಲ್ಲ.[6] ಆಖ್ಯಾತ ವಿಭಕ್ತಿಗಳಲ್ಲಿ ಕಾಲಸಂಬಂಧವಾಗಿ ಯಾವ ವ್ಯತ್ಯಾಸವನ್ನೂ ತೋರ್ಪಡಿಸುವುದಿಲ್ಲ ಮಾತ್ರವಲ್ಲ; ಕಾಲಸೂಚಕ ವಿಕರಣಗಳು ಧಾತು ಮತ್ತು ಆಖ್ಯಾತ ವಿಭಕ್ತಿಗಳ ಮಧ್ಯದಲ್ಲಿ ಬರುವುದೆಂಬುದನ್ನು ಸ್ಪಷ್ಟೀಕರಿಸುತ್ತದೆ: "ದ, ದಪ, ವ ಎಂಬಾಗಮಂಗಳ್ ಪೋದ, ವರ್ತಿಸುವ, ಬರ್ಪ ಕಾಲಂಗಳ್ಗೆ ಸೂಚಕಂಗಳಾಗಿ ಪ್ರಥಮ ಮಧ್ಯಮೋತ್ತಮ ಪುರುಷಂಗಳ ವಿಭಕ್ತಿಗಳ ಮೊದಲೊಳಪ್ಪುವು" (ಸೂ. 232ರ ವೃತ್ತಿ). ಇಲ್ಲಿ ದರ್ಪಣಕಾರ ಸಂಸ್ಕೃತ ವ್ಯಾಕರಣದ ದೃಷ್ಟಿಗಿಂತ ಭಿನ್ನವಾಗಿ ವಿಚಾರಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಕಾಲಗಳು ಮೂರೆಂಬುದರ ಬಗ್ಗೆ ಮೂರು ವ್ಯಾಕರಣಗಳೂ ಏಕಾಭಿಪ್ರಾಯ ಹೊಂದಿವೆ.

ಭೂತ : ಭೂತಕಾಲವನ್ನು ಸೂಚಿಸಲು ಕಾತಂತ್ರವು ಅತೀತ, ಭೂತ ಎಂಬ ಪದಗಳನ್ನು ಬಳಸಿಕೊಂಡಿದೆ. ಅಷ್ಟಾಧ್ಯಾಯಿಯಲ್ಲೂ 'ಭೂತ' ಎಂಬುದು ಕಾಲಾರ್ಥದಲ್ಲಿ ಬಂದಿದೆ. ಸ್ಮೃತಿಯಲ್ಲಿ ಕಾತಂತ್ರವನ್ನನುಸರಿಸಿ 'ಅತೀತ' ಕಾಲವೆಂದೂ (ಸೂ. 84) ಭೂಷಣದಲ್ಲಿ ಭೂತಕಾಲವೆಂದೂ (ಸೂ. 202ರ ವೃತ್ತಿ) ಪ್ರಯುಕ್ತವಾದರೆ ದರ್ಪಣದಲ್ಲಿ ಭೂತಕಾಲ (ಸೂ. 238ರ ವೃತ್ತಿ) ಮತ್ತು ಭೂತವತಿ (ಸೂ. 233ರ ವೃತ್ತಿ) ಎಂಬ ಪದಗಳು ಬಳಕೆಯಾಗಿವೆ. ಸ್ಮೃತಿ ಭೂಷಣಗಳಲ್ಲಿ ವಿಭಕ್ತಿಗಳ ಸಂಜ್ಞೆಯಾಗಿ ಬಂದ 'ಭೂತವತಿ' ದರ್ಪಣದಲ್ಲಿ ಕಾಲಾರ್ಥದಲ್ಲಿ ಬಂದಿರುವುದು ದರ್ಪಣದ ವೈಶಿಷ್ಟ್ಯ.

## ವರ್ತಮಾನ

ಕಾಲಸೂಚಕವಾಗಿ 'ವರ್ತಮಾನ' ಎಂಬ ಪದ ಪ್ರಯೋಗ ಅಷ್ಟಾಧ್ಯಾಯಿಯಲ್ಲಿದೆ (3-2-123). ಕಾತಂತ್ರದ "ಸಂಪ್ರತಿ ವರ್ತಮಾನಾ" (3-1-11) ಎಂಬ ಸೂತ್ರದಲ್ಲಿ ವಿಭಕ್ತಿಗಳನ್ನು 'ವರ್ತಮಾನಾ' ಎಂದೂ ಕಾಲವನ್ನು 'ಸಂಪ್ರತಿ'ಯೆಂದೂ ಕರೆಯಲಾಗಿದೆ.[7] ಸ್ಮೃತಿ ಕಾತಂತ್ರವನ್ನನುಸರಿಸಿ ಆಖ್ಯಾತ ವಿಭಕ್ತಿಗಳಿಗೆ 'ವರ್ತಮಾನ' (ಸೂ. 84) ಎಂಬ ಸಂಜ್ಞೆಯನ್ನು ಕೊಟ್ಟು ಕಾಲಾರ್ಥದಲ್ಲಿ ಭವತ್ (ಸೂ. 84 ಮತ್ತು 88) ವರ್ತಮಾನ (ಸೂ. 94), ಸಂಪ್ರತಿ (ಸೂ. 91) ಎಂಬ ಪದಗಳನ್ನು ಬಳಸಿದೆ. 'ವರ್ತಮಾನ' ಎಂಬುದು ವಿಭಕ್ತಿ ಸಂಜ್ಞೆಯಾಗಿಯೂ ಕಾಲವಾಚಕವಾಗಿಯೂ ಬಳಕೆಗೊಂಡು ಕಾತಂತ್ರದೊಡನೆ ಹೋಲಿಸಿದಾಗ ಸ್ಮೃತಿಯ ಪ್ರತ್ಯೇಕತೆಯಾಗಿ ತೋರುತ್ತದೆ. ಈ ವಿಚಾರದಲ್ಲಿ ಭೂಷಣ ಸ್ಮೃತಿಯನ್ನನುಸರಿಸುತ್ತದೆ. ಭೂಷಣದಲ್ಲಿ 'ವರ್ತಮಾನ ವಿಭಕ್ತಿ' ಮತ್ತು 'ವರ್ತಮಾನ ಕಾಲ' (ಸೂ. 196 ಮತ್ತು 202) ಈಯೆರಡು ತೆರನಾದ ಬಳಕೆಯಿದ್ದರೂ 'ಭವತ್' ಮತ್ತು ಸಂಪ್ರತಿ ಎನ್ನುವ ಪದಗಳಿಗೆ ಅಲ್ಲಿ ಪ್ರವೇಶ ದೊರಕಿಲ್ಲ.

ದರ್ಪಣದಲ್ಲಿ ವಿಭಕ್ತಿಗಳನ್ನು ಸ್ಮೃತಿ ಭೂಷಣಗಳಂತೆ ಕಾಲದ ಆಧಾರದಲ್ಲಿ ವಿಂಗಡಿಸಿಲ್ಲವಾದ್ದರಿಂದ 'ವರ್ತಮಾನ ವಿಭಕ್ತಿ' ಎನ್ನುವ ಪ್ರಯೋಗಕ್ಕೆಡೆಯಿಲ್ಲ. ಕಾಲಾರ್ಥದಲ್ಲಿ

ವರ್ತಮಾನ (ಸೂ. 238, 243), ಸಂಪ್ರತಿ (ಸೂ. 258) ಎಂಬ ಪದಗಳು ಪ್ರಯುಕ್ತ ವಾಗಿವೆ. ಸ್ಮೃತಿಯಲ್ಲಿ ಬಂದ 'ಭವತ್ ಕಾಲ' ದರ್ಪಣದಲ್ಲಿಲ್ಲ.

### ಭವಿಷ್ಯತ್

'ಭವಿಷ್ಯತ್'ಎಂಬ ಪದ ಕಾಲಾರ್ಥದಲ್ಲಿ ಅಷ್ಟಾಧ್ಯಾಯಿ ಮತ್ತು ಕಾತಂತ್ರಗಳಲ್ಲಿದೆ. ಆದರೆ ಅಲ್ಲಿ ವಿಭಕ್ತಿಗಳಿಗೆ ಆ ಸಂಜ್ಞೆಯಿಲ್ಲ. ಕಾತಂತ್ರ (3-1-15) ಮತ್ತು ಸಿದ್ಧಹೇಮ ಶಬ್ದಾನುಶಾಸನದಲ್ಲಿ (3-3-15) ಭವಿಷ್ಯದರ್ಥದ ವಿಭಕ್ತಿಗಳಿಗೆ 'ಭವಿಷ್ಯಂತಿ' ಎಂಬ ಸಂಜ್ಞೆ.

ಸ್ಮೃತಿಯಲ್ಲಿ ವಿಭಕ್ತಿಯ ಸಂಜ್ಞೆಯಾಗಿ ಕಾತಂತ್ರವನ್ನನುಸರಿಸಿ ಭವಿಷ್ಯಂತಿ (ಸೂ. 84) ಎಂಬ ಪ್ರಯೋಗವೂ ಕಾಲಾರ್ಥದಲ್ಲಿ ಭಾವಿ (ಸೂ. 84, 88) ಮತ್ತು ಭವಿಷ್ಯತ್ (ಸೂ. 91) ಎಂಬ ಪ್ರಯೋಗವೂ ನಡೆದಿದೆ. 'ಭಾವಿ' ಎನ್ನುವ ಪದವನ್ನು ಬಳಸದ ಭೂಷಣ ಉಳಿದ ವಿಚಾರದಲ್ಲಿ ಸ್ಮೃತಿಯನ್ನನುಸರಿಸಿದೆ.

ದರ್ಪಣದಲ್ಲಿ ವಿಭಕ್ತಿಯ ಸಂಜ್ಞೆಯಾಗಿ ಯಾವುದೇ ಪದ ಬರುವ ಪ್ರಸಕ್ತಿಯಿಲ್ಲ. ಕಾಲಾರ್ಥದಲ್ಲಿ ಭವಿಷ್ಯತ್ (ಸೂ. 87, 238) ಭವಿಷ್ಯಂತಿ (ಸೂ. ·4ರ ವೃತ್ತಿ) ಭಾವಿ (ಸೂ. 258) ಭವಿಷ್ಯ (ಸೂ. 258ರ ವೃತ್ತಿ) ಎಂಬ ಪದಗಳು ಪ್ರಯುಕ್ತವಾಗಿವೆ. ಸ್ಮೃತಿ ಭೂಷಣಗಳಲ್ಲಿ ವಿಭಕ್ತಿ ಸಂಜ್ಞೆಯಾಗಿ ಬಂದ 'ಭವಿಷ್ಯಂತಿ' ದರ್ಪಣದಲ್ಲಿ ಕಾಲಾರ್ಥ ದಲ್ಲಿ ಬಂದಿರುವುದು ಅದರ ವೈಶಿಷ್ಟ್ಯ. ಮಹಾಭಾಷ್ಯದಲ್ಲಿ (3-4-1) ಭಾವಿನ್ (ಭಾವಿ) ಎಂಬ ಪದ ಕಾಲಾರ್ಥದಲ್ಲಿ ಬಳಕೆಗೊಂಡುದು ಗಮನಾರ್ಹ.

ಆಯಾಕಾಲದಲ್ಲಿ ಆಯಾ ವಿಭಕ್ತಿಗಳೇ ಬರುತ್ತವೆ ಎನ್ನುವ ವಿಚಾರ ಭೂಷಣದಲ್ಲಿ ಮಾತ್ರ ನಿರೂಪಿತವಾಗಿದೆ. ಸ್ಮೃತಿ ದರ್ಪಣಗಳಲ್ಲಿ ಅದರ ಪ್ರಸ್ತಾಪವಿಲ್ಲ.

"ಸ್ವಾರ್ಥೇಕಾಲೇ" ಭೂಷಣ ಸೂ. 202

ವೃತ್ತಿ : ಏತದುಕ್ತಂ ಭವತಿ ಭೂತಕಾಲೇ ಭೂತವತೀ ವರ್ತಮಾನಕಾಲೇ ವರ್ತಮಾನಾ ಭವಿಷ್ಯತ್ಕಾಲೇ ಭವಿಷ್ಯಂತೀ ವಿಧಾತವ್ಯಾ.

ಇದಕ್ಕೆ ಬಹುಶಃ ಭೂಷಣಕಾರನಿಗೆ ದುರ್ಗಸಿಂಹನ ವೃತ್ತಿಯಿಂದ ಪ್ರೇರಣೆ ದೊರಕಿರ ಬೇಕೆಂದು ತೋರುತ್ತದೆ.

"ಅತೀತೇ ಕಾಲೇ ಪರೋಕ್ಷಾ ವಿಭಕ್ತಿರ್ಭವತಿ" 3-1-13ರ ವೃತ್ತಿ

"ಸಂಪ್ರತಿ ಕಾಲೇ ವರ್ತಮಾನಾ ವಿಭಕ್ತಿರ್ಭವತಿ" 3-1-11ರ ವೃತ್ತಿ

"ಭವಿಷ್ಯತಿ ಕಾಲೇ ಭವಿಷ್ಯಂತಿ ಆಶೀಃ ಶ್ವಸ್ತನ್ಯಃ
ಕ್ರಿಸ್ರೋ ವಿಭಕ್ತಯೋ ಭವಂತಿ" 3-1-15ರ ವೃತ್ತಿ

ಭೂಷಣದಲ್ಲಿ ಕಾಲಪರವಾಗಿ ಆಖ್ಯಾತ ವಿಭಕ್ತಿಗಳನ್ನು ವಿಭಜಿಸಿದ್ದರಿಂದ ಈ ಹೊಂದಾಣಿಕೆಗೆ ಅನುಕೂಲವಾಯಿತು. ದರ್ಪಣದಲ್ಲಿ ಇಂತಹ ಹೇಳಿಕೆಗೆಡೆಯಿಲ್ಲವೆಂಬುದನ್ನು ಹಿಂದೆಯೇ ನೋಡಲಾಗಿದೆ.

## ವಿಧ್ಯರ್ಥಕ ಕ್ರಿಯೆ

ಸಂಸ್ಕೃತದಲ್ಲಿ ಆಜ್ಞಾ, ವಿಧಿ, ಆಶೀಃ, ಸಂಕೇತಗಳೆಂಬ ನಾಲ್ಕು ಅರ್ಥಗಳಿವೆ. ಅವುಗಳಲ್ಲಿ ವಿಧ್ಯರ್ಥವೊಂದನ್ನು ಮಾತ್ರ ಕನ್ನಡ ವೈಯಾಕರಣರು ಹೇಳುತ್ತಾರೆ. "ವಿಧಿಯೆಂದರೆ ನಿಯೋಗವು ಅಥವಾ ಕರ್ತವ್ಯೋಪದೇಶವು" (ಕ.ಶ.ಪ್ರ : ಪು. 465). "ವಿಧಿರ್ನಾಮಪ್ರೇಷಣಮ್" ಎಂದು ಮಹಾಭಾಷ್ಯದಲ್ಲಿ ಹೇಳಲಾಗಿದೆ.[8] ಅಷ್ಟಾಧ್ಯಾಯಿಯ "ವಿಧಿನಿಮಂತ್ರಣಾಮಂತ್ರಣಾಧೀಷ್ಟಸಂಪ್ರಶ್ನ ಪ್ರಾರ್ಥನೇಷು ಲಿಙ್"(3-3-161)ಎಂಬ ಸೂತ್ರದಲ್ಲಿ ಹೇಳಿದಂತೆ ವಿಧಿ, ನಿಮಂತ್ರಣ (ವಿಧಿಪೂರ್ವಕವಾಗಿ ಮಾಡತಕ್ಕ ಕಾರ್ಯದಲ್ಲಿ ನಿಯೋಜಿಸುವುದು ಅಥವಾ ಕ್ರಿಯೆಯಲ್ಲಿ ಅಭಿಮುಖವಾಗಿ ಮಾಡುವುದು), ಆಮಂತ್ರಣ (ಮಾಡತಕ್ಕ ಕೆಲಸದಲ್ಲಿ ಅನುಮೋದಿಸುವುದು), ಅಧೀಷ್ಟ(ಸತ್ಕಾರಪೂರ್ವಕ ವ್ಯಾಪಾರ), ಸಂಪ್ರಶ್ನ (ಕರ್ತವ್ಯಾಲೋಚನ), ಪ್ರಾರ್ಥನೆ (ಬೇಡುವುದು) ಈ ಅರ್ಥಗಳನ್ನು ಹೇಳುವ ಕ್ರಿಯಾರೂಪ ಒಂದೇ ವಿಧವಾಗಿದೆ. ಆದ್ದರಿಂದ ಈ ಅರ್ಥಗಳನ್ನೆಲ್ಲ ಒಟ್ಟಿಗೆ ವಿಧ್ಯಾದ್ಯರ್ಥಗಳೆನ್ನುವುದುಂಟು (ಕಾಶಿಕಾ. 3-3-161). ಕಾತಂತ್ರದಲ್ಲಿ "ವಿಧ್ಯಾದಿಷು ಸಪ್ತಮೀಚ" (ಸೂ. 3-1-20) ಎಂಬ ಹೇಳಿಕೆಯಿದೆ. ಕನ್ನಡದಲ್ಲಿ ಹೇಳುವ ವಿಧ್ಯರ್ಥಗಳಲ್ಲಿ ಈ ವಿಧ್ಯಾದ್ಯರ್ಥಗಳೆಲ್ಲ ಒಳಗೊಳ್ಳುವುದಿದ್ದರೂ ಹೆಚ್ಚಾಗಿ ವಿಧಿ, ಆಶೀರ್ವಾದ, ವಿಜ್ಞಾಪನೆ, ಆಜ್ಞೆ, ಪ್ರಶ್ನೆ ಮೊದಲಾದ ಕೆಲವು ಅರ್ಥಗಳನ್ನು ಮಾತ್ರ ಅರ್ವಾಚೀನ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ಕಾಣಬಹುದು (ಕ. ಕೈ. ಪು. 47). ಹಳೆಗನ್ನಡ ವ್ಯಾಕರಣಗಳಲ್ಲಿ ಶಬ್ದಾನುಶಾಸನವನ್ನು ಬಿಟ್ಟರೆ ಉಳಿದ ಮೂರು ಗ್ರಂಥಗಳೂ ಉಪರ್ಯುಕ್ತ ಎಲ್ಲ ಅರ್ಥಗಳನ್ನೂ ವಿಧ್ಯರ್ಥಕ ಕ್ರಿಯೆಗೆ ಹೇಳುವುದಿಲ್ಲ. ವಿಧ್ಯರ್ಥಕ ಕ್ರಿಯೆಯ ನಿರೂಪಣೆಯಲ್ಲಿ ಸ್ಮೃತಿ ಭೂಷಣ ದರ್ಪಣಗಳು ಏಕಾಭಿಪ್ರಾಯ ಹೊಂದಿಲ್ಲ. ಆದರೆ ವಿಧ್ಯರ್ಥಕ ಪ್ರತ್ಯಯಗಳ ಬಗ್ಗೆ ಹೆಚ್ಚಿನ ಭಿನ್ನಾಭಿಪ್ರಾಯವಿಲ್ಲ.

ಸ್ಮೃತಿಯಲ್ಲಿ 'ವಿಧ್ಯಾದಿ' (ಸೂ. 84) ಎನ್ನುವ ಪ್ರಯೋಗವಿದೆ. ಆ ಅರ್ಥದಲ್ಲಿ ಬರುವ ಪ್ರತ್ಯಯಗಳಿಗೆ "ಸರ್ವಸಾಧನಿ" (ಸೂತ್ರ: 84, 92, 96) ಎಂಬ ಸಂಜ್ಞೆ ಬಳಕೆಗೊಂಡಿದೆ. ಆದರೆ ಯಾವ ಯಾವ ಅರ್ಥಗಳನ್ನು ವಿಧ್ಯರ್ಥಕ ಕ್ರಿಯೆ ಒಳಗೊಳ್ಳುತ್ತದೆ ಎಂಬುದರ ಬಗ್ಗೆ ಸ್ಮೃತಿ ಮೌನ ತಾಳಿದೆ.

ಭೂಷಣದಲ್ಲಿ "ವಿಧ್ಯಾದಿ" ಎಂಬ ಪದ ಬಳಕೆಗೊಂಡಿದೆ. ಜೊತೆಯಲ್ಲಿ ಆ ಕ್ರಿಯೆಯ ಅರ್ಥದಲ್ಲಿ ಆಶೀರ್ವಾದವನ್ನೂ ಸೇರಿಸಿದೆ.

"ಗೆ ಕೆ ವಾ ಪ್ರಥಮಸ್ಯಾಶಿಷಿ ವಿಧ್ಯಾದಿಷು ಚ" ಸೂ. 215.

ವೃತ್ತಿ : "ತಾಸಾಂ ವಿಭಕ್ತೀನಾಂ ಪ್ರಥಮಪುರುಷಸ್ಯ ಸ್ಥಾನೇ ಆಶಿಷಿ ವಿಧ್ಯಾದ್ಯರ್ಥೇಷು ಚ, ಗೆ, ಕೆ ವಾ ಭವತಃ"

ಮುಂದಿನ ಎರಡು ಸೂತ್ರಗಳಲ್ಲೂ (216, 219) ಆಶೀಃ ಮತ್ತು ವಿಧ್ಯಾದಿ ಎಂಬ ಪ್ರಯೋಗವಾಗಿದೆ.

ದರ್ಪಣದಲ್ಲಿ "ವಿಧ್ಯರ್ಥ" (ಸೂ. 240), ವಿಧಿ (ಸೂ. 54, 241, 254) ಎಂಬ ಪ್ರಯೋಗ ಮಾತ್ರವಿದೆ. ವಿಧ್ಯಾದ್ಯರ್ಥವೆಂದಾಗಲಿ, ಆಶೀರ್ವಾದದ ಪ್ರಸ್ತಾಪ ವಾಗಲಿ ದರ್ಪಣದಲ್ಲಿಲ್ಲ. 'ಸರ್ವಸಾಧನಿ' ಎಂಬ ಸಂಜ್ಞೆಯ ಕುರಿತು ಭೂಷಣ ದರ್ಪಣ ಗಳಲ್ಲಿ ಉಲ್ಲೇಖವಿಲ್ಲ. ಸ್ಮೃತಿ ಭೂಷಣ ದರ್ಪಣಗಳಲ್ಲಿ ಹೇಳುವ ವಿಧ್ಯರ್ಥಕ ಪ್ರತ್ಯಯ ಗಳು ಹೀಗಿವೆ:—

| | | ಸ್ಮೃತಿ | ಭೂಷಣ | ದರ್ಪಣ |
|---|---|---|---|---|
| ಪ್ರ. ಪುರುಷ | ಏಕವಚನ | ಉಗೆ | ಗೆ | ಗೆ, ಕೆ |
| ,, | ಬಹುವಚನ | ಕೆ | ಕೆ | ಕ್ಕೆ |
| ಮ. ಪುರುಷ | ಏಕವಚನ | ಉ, ಇ | ಇ, ಉ, ಎ | (ಧಾತುಪ್ರಕೃತಿ ಸ್ವರೂಪ) |
| ,, | ಬಹುವಚನ | ಇ (ಂ) | ಇಮ್ | ಇಮ್ |
| ಉ. ಪುರುಷ | ಏಕವಚನ | – | – | – |
| ,, | ,, | ಅಮ್ | ಅಮ್ | ಅಮ್ |

ಪ್ರಥಮ ಪುರುಷ ಪ್ರತ್ಯಯಗಳಲ್ಲಿ ವಚನಭೇದವಿಲ್ಲದಿರುವುದು ಕನ್ನಡದ ವೈಶಿಷ್ಟ್ಯ. (ಸಂಸ್ಕೃತದಲ್ಲಿ ವಚನಭೇದವಿದೆ). ಉಳಿದ ಆಖ್ಯಾತ ವಿಭಕ್ತಿಗಳಲ್ಲಿರುವಂತೆ (ಸಾಮಾನ್ಯಾ ರ್ಥಕ ಕ್ರಿಯೆಗಳು) ಲಿಂಗಭೇದ ಇಲ್ಲಿಲ್ಲದಿರುವುದು ಗಮನೀಯ. ಆ ಮಟ್ಟಿಗೆ ಸಂಸ್ಕೃತ ದೊಂದಿಗೆ ಕನ್ನಡಕ್ಕೆ ಸಾಮ್ಯವಿದೆ. ಮಧ್ಯಮ ಪುರುಷ ಏಕವಚನದಲ್ಲಿ ಸ್ಮೃತಿ 'ಉ, ಇ' ಎಂಬ ಪ್ರತ್ಯಯಗಳನ್ನು ವಿಧಿಸಿದರೆ ಭೂಷಣ ಅವುಗಳ ಜೊತೆಯಲ್ಲಿ 'ಎ' ಎಂಬ ಪ್ರತ್ಯಯವನ್ನು ಹೇಳುತ್ತದೆ. ಆದರೆ ಈಯೆರಡು ಗ್ರಂಥಗಳ ಹೇಳಿಕೆಗಿಂತ ದರ್ಪಣದ "ಪರಿಣಮಿಸಿರ್ಕುಂ ಪ್ರಕೃತಿ ಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್"(ಸೂ.241) ಎಂಬ ಹೇಳಿಕೆ ಹೆಚ್ಚು ಸಮರ್ಪಕವಾಗಿದೆ. ಉತ್ತಮ ಪುರುಷ ಬಹುವಚನದಲ್ಲಿ ಹೇಳಿದ ಪ್ರತ್ಯಯ "ಅಮ್" ನ ಬಗ್ಗೆ ಮೂರೂ ಗ್ರಂಥಗಳು ಏಕಾಭಿಪ್ರಾಯ ಹೊಂದಿವೆ. ಮಾತ್ರವಲ್ಲ, ಧಾತು ಮತ್ತು ಪ್ರತ್ಯಯಗಳ ಮಧ್ಯೆ ಇರುವ 'ವ' ಕಾರದ ಬಗ್ಗೆ ಮೌನ

ವನ್ನು ಧರಿಸಿವೆ. ವಿಧ್ಯರ್ಥಕ ಕ್ರಿಯೆಗಳು "ಭವಿಷ್ಯತ್ ಕಾಲದಲ್ಲಿ ನಡೆಯುವಂತವುಗಳಾದುದರಿಂದ ಇವು ಭವಿಷ್ಯತ್ ಕಾಲದ ಕ್ರಿಯೆಗಳೆಂದೇ ಎಣಿಸಬಹುದು" (ಕ. ಭಾ. ಚ. ಪು. 527) ಎಂಬಭಿಪ್ರಾಯವಿದೆ. ಅದು ಸಮರ್ಪಕವೂ ಹೌದು. ಆಗ ನಡುವಿನಲ್ಲಿ ಬಂದ 'ವ' ಕಾರ ಭವಿಷ್ಯತ್ ಕಾಲಸೂಚಕವೆಂಬುದು ಸ್ಪಷ್ಟ.

## ನ್ಯೂನಕ್ರಿಯೆ

ಧಾತುಗಳಿಗೆ ಕೆಲವು ಆಖ್ಯಾತ ವಿಭಕ್ತಿಗಳು ಸೇರಿದಾಗ ಪೂರ್ಣ ಕ್ರಿಯೆಗಳಾಗುವಂತೆ ಇನ್ನು ಕೆಲವು ಪ್ರತ್ಯಯಗಳು ಸೇರಿದಾಗ ಅಪೂರ್ವ ಕ್ರಿಯೆಗಳಾಗುತ್ತವೆ. ಅಪೂರ್ಣ ಕ್ರಿಯೆಗೆ ನ್ಯೂನಕ್ರಿಯೆಯೆಂದು ಇನ್ನೊಂದು ಹೆಸರು. ನ್ಯೂನಕ್ರಿಯೆ ವಾಕ್ಯವನ್ನು ಪೂರ್ಣಗೊಳಿಸಲು ಬೇರೊಂದು ಪೂರ್ಣಕ್ರಿಯೆಯ ಸಹಾಯವನ್ನಪೇಕ್ಷಿಸುತ್ತದೆ.[9] ನ್ಯೂನ ಕ್ರಿಯೆಯನ್ನು ಸಾಧಿಸುವ ಪ್ರತ್ಯಯಗಳು ಸಂಸ್ಕೃತ ವ್ಯಾಕರಣ ರೀತ್ಯಾ ಕೃತ್ ಪ್ರತ್ಯಯಗಳೆನಿಸುತ್ತವೆ. ಧಾತುವಿಗೆ ಸೇರುವ ಆಖ್ಯಾತ ವಿಭಕ್ತಿರಹಿತವಾದ ಪ್ರತ್ಯಯಗಳಿಗೆ ಕೃತ್ ಪ್ರತ್ಯಯವೆಂಬ ಸಂಜ್ಞೆಯಷ್ಟೆ.[10] ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ನ್ಯೂನ ಕ್ರಿಯಾಸಾಧಕ ಪ್ರತ್ಯಯಗಳನ್ನು ಕೃತ್ಪ್ರಕರಣದಲ್ಲಿ ನಿರೂಪಿಸುವುದು ಕ್ರಮ.

ಕನ್ನಡ ವ್ಯಾಕರಣಗಳಲ್ಲಿ ನ್ಯೂನಕ್ರಿಯೆಗಳನ್ನು ನಿರ್ಮಿಸುವ ಕುರಿತು ವಿವರಣೆಯಿಂದೆ. ಆದರೆ ಇಲ್ಲಿ ಕೃತ್ಪ್ರಕರಣಗಳೇ ಇಲ್ಲದಿರುವುದರಿಂದ ಅಂತಹ ಪ್ರತ್ಯಯಗಳನ್ನು ಆಖ್ಯಾತ ಪ್ರಕರಣಗಳಲ್ಲಿ ನಿರೂಪಿಸಲಾಗುತ್ತದೆ. ಆಧುನಿಕರು ಕನ್ನಡದಲ್ಲಿನ ನ್ಯೂನಕ್ರಿಯೆಗಳನ್ನು ಕೃದಂತಾವ್ಯಯವೆನ್ನುತ್ತಾರೆ.

ನ್ಯೂನಕ್ರಿಯೆಗಳನ್ನು ಸಾಧಿಸುವ ಪ್ರತ್ಯಯಗಳಲ್ಲಿ ಮುಖ್ಯವಾಗಿ ಎರಡು ವರ್ಗವುಂಟು. ಭೂತ ಹಾಗೂ ವರ್ತಮಾನ ನ್ಯೂನವನ್ನು (Verbal Participle) ನಿರ್ಮಿಸುವ ಪ್ರತ್ಯಯಗಳು ಮತ್ತು ಭಾವಲಕ್ಷಕ ಕ್ರಿಯಾರೂಪಗಳನ್ನು (Infinitive)ಸಾಧಿಸುವ ಪ್ರತ್ಯಯಗಳು (ಕ. ಭಾ. ಚ. ಪು. 544). ಆದರೆ ಕನ್ನಡ ವ್ಯಾಕರಣಗಳು ಇಂತಹ ಸಂಜ್ಞೆ ಹಾಗೂ ವರ್ಗೀಕರಣವನ್ನು ಹೇಳದೆಯೆ ಈ ಪ್ರತ್ಯಯಗಳನ್ನು ನಿರೂಪಿಸುತ್ತವೆ.

## ಭೂತನ್ಯೂನ

ಸ್ಮೃತಿ ಭೂಷಣ ದರ್ಪಣಗಳು ಒಮ್ಮತದಿಂದ 'ಇ, ಉ' ಗಳನ್ನು ಭೂತನ್ಯೂನ ಪ್ರತ್ಯಯಗಳೆಂದು ಹೇಳುತ್ತವೆ (ಸ್ಮೃತಿ. ಸೂ: 94, ಭೂಷಣ: ಸೂ. 225 ; ದರ್ಪಣ ಸೂ. 247). ಕೊಟ್ಟಿರುವ ಪ್ರಯೋಗಗಳನ್ನು ನೋಡಿದರೆ 'ಉ' ಪ್ರತ್ಯಯದ ಹಿಂದೆ ಭೂತಕಾಲ ಸೂಚಕ 'ದ' ಸೇರಿಕೊಂಡಿರುವುದು ಸ್ಪಷ್ಟವಾಗುತ್ತದೆ :

ಎತ್ತಿ ನಡೆದು, ಮುತ್ತಿಬಿಟ್ಟು
ಬಂದು ಕಂಡು, ಒಸೆದು ಕೊಟ್ಟು

ಆದ್ದರಿಂದ ಆಧುನಿಕರು 'ಉ' ವಿನ ಸ್ಥಾನದಲ್ಲಿ 'ದು' ವನ್ನು ಭೂತನ್ಯೂನಸಾಧಕ ವೆಂದು ಹೇಳಿದ್ದಿದೆ (ಕ. ಕೈ. ಪು. 50). ಭೂತನ್ಯೂನವನ್ನು ಹೇಳುವಲ್ಲಿ ಸ್ಮೃತಿಯು ಪೂರ್ವಭವಕ್ರಿಯೆಯೆಂದೂ ಭೂಷಣ-ದರ್ಪಣಗಳು ಪೂರ್ವಕಾಲಕ್ರಿಯೆಯೆಂದೂ ಪದ ಪ್ರಯೋಗ ಮಾಡಿವೆ (ಸ್ಮೃತಿ ಸೂ. 94, ಭೂಷಣ ಸೂ. 224 ; ದರ್ಪಣ ಸೂ. 247).

ವರ್ತಮಾನ ನ್ಯೂನ : 'ಉತುಂ, ಉತ್ತುಂ'—ಇವೆರಡನ್ನು ವರ್ತಮಾನ ನ್ಯೂನ ಸಾಧಕ ಪ್ರತ್ಯಯಗಳೆಂದು ಕನ್ನಡದ ಮೂರೂ ವ್ಯಾಕರಣಗಳು ಏಕಮತದಿಂದ ಹೇಳುತ್ತವೆ (ಸ್ಮೃತಿ ಸೂ. 94 ; ಭೂಷಣ. ಸೂ. 224 ; ದರ್ಪಣ ಸೂ. 247). ದರ್ಪಣವು ಇವೆರಡರ ಜತೆಯಲ್ಲಿ 'ಉತೆ, ಉತ್ತೆ'ಗಳನ್ನು ಸೇರಿಸಿಕೊಳ್ಳುತ್ತದೆ :

ನಗುತುಂ ಬಂದಪಂ, ಕುಡುತ್ತುಂ ಬಂದು.
ಮಿಱುಗುತೆ ಪೋದಂ. ಕೆತ್ತುತ್ತೆ ಕಡಿದಂ.

ಈ ಪ್ರತ್ಯಯಗಳನ್ನು ಸೂಚಿಸುವಲ್ಲಿ ಸ್ಮೃತಿ 'ವರ್ತಮಾನ ಗತಿ'ಯೆಂದೂ ಭೂಷಣ 'ತದಾತ್ವ'ವೆಂದೂ, ದರ್ಪಣ 'ವರ್ತಮಾನ ಕ್ರಿಯೆ'ಯೆಂದೂ ಹೇಳುತ್ತದೆ.

ಈ ನ್ಯೂನ ಕ್ರಿಯಾಸಾಧಕ ಪ್ರತ್ಯಯಗಳು ಆಖ್ಯಾತ ವಿಭಕ್ತಿಗಳಿಗೆ ಬರುವ ಆದೇಶ ಗಳೆಂದು ಕನ್ನಡ ವ್ಯಾಕರಣಗಳು ತಿಳಿದಿವೆ. ದರ್ಪಣದ ಕೆಳಗಿನ ನಿರೂಪಣೆಯಿಂದ ಈ ವಿಚಾರ ಸ್ಫುಟವಾಗುತ್ತದೆ.

"ಕ್ರಿಯಾವಿಭಕ್ತಿಯಾದೇಶ ಸ್ವರಕ್ಕುಂ ಲೋಪಮುಂಟು :
ಕೂಡಿ + ಇರ್ದಂ = ಕೂಡಿರ್ದಂ. ಪಸಿದು + ಉಂಡಂ = ಪಸಿದುಂಡಂ"
(ಸೂತ್ರ 62ರ ಪ್ರಯೋಗ ವಿವರಣೆ)

ಮೇಲಿನೆರಡು ನ್ಯೂನರೂಪಗಳಲ್ಲದೆ 'ನಿಷೇಧನ್ಯೂನ' ವೆಂಬ ಇನ್ನೊಂದು ಬಗೆಯ ನ್ಯೂನರೂಪ ಬಳಕೆಯಲ್ಲಿದೆ (ಕ. ಕೈ. ಪು. 50). ಆದರೆ ಕನ್ನಡ ವ್ಯಾಕರಣಗಳ ಆಖ್ಯಾತ ಪ್ರಕರಣಗಳಲ್ಲಿ ಈ ಬಗ್ಗೆ ಯಾವುದೇ ವಿವರಣೆಯಿಲ್ಲ. ದರ್ಪಣದ ಸಂಧಿಪ್ರಕರಣದಲ್ಲಿ ಮಾತ್ರ ಇದರ ಸೂಚನೆ ಲಭಿಸುತ್ತದೆ. (ಸೂತ್ರ 81). ಪೂರ್ವಕಾಲ ಕ್ರಿಯೆಗೆ ಪ್ರತಿ ಷೇಧವನ್ನು ಹೇಳುವ 'ಅದೆ' ಎಂಬುದು ಪರವಾದಾಗ ಣಳಲಯಳಕಾರಾಂತ ಧಾತುಗಳ ಕೊನೆಗೆ ದ್ವಿತ್ವ ನಿತ್ಯವೆಂಬುದಲ್ಲಿನ ವಿವರಣೆ 'ಅದೆ' ಎಂಬುದು ನಿಷೇಧ ನ್ಯೂನದ ಪ್ರತ್ಯಯವೆಂಬ ವಿಚಾರವಿಲ್ಲಿ ಗಮನಾರ್ಹ. ಉದಾ : ಎನ್ನದೆ, ಉಣ್ಣದೆ, ಒಲ್ಲದೆ ಇತ್ಯಾದಿ.

ಈಯೆಲ್ಲ ನ್ಯೂನರೂಪಗಳುಂ ಏಕಕರ್ತೃಕ ಕ್ರಿಯೆಗಳನ್ನು ಸಮುಚ್ಚಯಗೊಳಿಸುವಂತಹವುಗಳಾಗಿವೆ (ಕ.ಭಾ.ಚ. ಪು. 549).

ಭಾವಲಕ್ಷಕ ಕ್ರಿಯಾಪದಗಳು : 'ಭಾವಲಕ್ಷಕ ಕ್ರಿಯಾರೂಪಗಳುಂ ಮತ್ತೊಂದು ಕ್ರಿಯೆಗೆ ಸೂಚಕವಾಗಿಯಾಗಲಿ ಕಾರಣವಾಗಿಯಾಗಲಿ, ಉದ್ದೇಶ್ಯವಾಗಿಯಾಗಲಿ ಇರುತ್ತದೆ'' (ಅದೇ.) ಕ್ರಿಯೆಯು ಕ್ರಿಯಾರ್ಥವಾಗುವಲ್ಲಿ ಅಲ್ ಬರುವುದಾಗಿಯೂ ಕೆಲವೊಮ್ಮೆ ಆದರ ಕೊನೆಯ 'ಲ್' ಲೋಪವಾಗುವುದಾಗಿಯೂ ಸ್ಮೃತಿ ಭೂಷಣ ದರ್ಪಣಗಳು ಒಮ್ಮತದಿಂದ ಹೇಳುತ್ತವೆ (ಸ್ಮೃತಿ : ಸೂ. 94, 95; ಭೂಷಣ : ಸೂ. 221, 223; ದರ್ಪಣ : ಸೂ. 246). ಭೂಷಣ ಈ ವಿಚಾರದಲ್ಲಿ ಮೌನ ತಾಳುತ್ತದೆ, ಕ್ರಿಯಾರ್ಥವೆಂದರೆ ಬೇರೊಂದು ಕ್ರಿಯೆಯ ಪ್ರಯೋಜನವೆಂದರ್ಥ.

ಗೆಲಲ್ ಬಗೆದಂ. ನೋಡಲ್ ಬಗೆದಂ
ಉಡಲ್ವೇಟ್ಟಂ – ಉಡವೇಟ್ಟಂ
ನುಡಿಯಲ್ಕೆ ಬಲ್ಲಂ – ಬೇಡಲ್ಕೆ ಬಂದಂ

ಅಲ್ ನ ಮುಂದೆ ಅರ್ಹಾರ್ಥದಲ್ಲಿ ತಕ್ಕ ಎಂಬ ಶಬ್ದದ ಪ್ರಯೋಗವಾಗುವುದನ್ನು ದರ್ಪಣ ಗಮನಿಸಿ ಪ್ರಯೋಜನ ವಸ್ತುಕ್ರಿಯೆಗೆ ಅಂತಹ ಪ್ರಯೋಗವಿರುವುದಾಗಿ ಹೇಳುತ್ತದೆ : (ಸೂತ್ರ. 245).

'ಈಯಲ್ ತಕ್ಕ ಸಂಪತ್ತಿ', 'ಮಾತಱಿಯಲ್ ತಕ್ಕ ವಿವೇಕಂ'

ಪಕ್ಷಾರ್ಥವನ್ನು ಹೇಳುವಲ್ಲಿ ಧಾತುವಿಗೆ ಸಾಮಾನ್ಯವಾಗಿ ಭೂತ, ಭವಿಷ್ಯತ್ ವಿಕರಣಗಳ ಮುಂದೆ 'ಒಡೆ' ಎಂಬ ಪ್ರತ್ಯಯ ಬರುವುದಾಗಿ ದರ್ಪಣ ಸೂತ್ರ ಹೇಳುತ್ತದೆ (ಸೂ. 261).

ಸತ್ಯಮಂ ನುಡಿವೊಡಮ ನುಡಿಗುಂ
ಮುಸಿದೊಡೆ ಬಿಟ್ಟಂ

ಈ ಮೇಲಿನ ಅಲ್, ಆಲ್ಕೆ, ಒಡೆ ಮೊದಲಾದ ಪ್ರತ್ಯಯಗಳು ಏಕಕರ್ತೃಕ ಕ್ರಿಯೆಯಲ್ಲಿ ಬರತಕ್ಕವುಗಳಾಗಿವೆ. ಆದರೆ ಹಾಗೆಂದು ಕನ್ನಡ ವ್ಯಾಕರಣಗಳು ವಾಚ್ಯವಾಗಿ ಹೇಳುವುದಿಲ್ಲ. ಭಿನ್ನಕರ್ತೃಗಳಾದ ಭಾವಲಕ್ಷಕ ಕ್ರಿಯೆಯನ್ನು ಸತಿಸಪ್ತಮಿಯೆಂದು ದರ್ಪಣಕಾರ ಸ್ಪಷ್ಟೀಕರಿಸುತ್ತಾನೆ,

## ಸತಿಸಪ್ತಮಿ

ಒಂದು ವಾಕ್ಯದಲ್ಲಿ ಬರುವ ನ್ಯೂನಕ್ರಿಯೆ ಮತ್ತು ಪೂರ್ಣಕ್ರಿಯೆ–ಇವೆರಡು ಭಿನ್ನ ಕರ್ತೃಕಗಳಾಗಿರುವುದುಂಟು. ಅಂತಹ ಸಂದರ್ಭದಲ್ಲಿ ನ್ಯೂನಕ್ರಿಯೆಯನ್ನು ಹೇಳುವ ರೂಪ ಕೃದಂತ ವಿಶೇಷಣವಾಗಿದ್ದು ಸಪ್ತಮೀ ವಿಭಕ್ತಿಯನ್ನು ಹೊಂದಿರುವುದು ಸಂಸ್ಕೃತ ದಲ್ಲಿ ರೂಢಿ. ಈ ಸಪ್ತಮೀ ವಿಭಕ್ತ್ಯಂತ ರೂಪಕ್ಕೆ (ಕೃದಂತ ವಿಶೇಷಣಕ್ಕೆ) 'ಸತಿಸಪ್ತಮಿ' ಎಂಬುದಾಗಿ ಸಂಸ್ಕೃತ ವ್ಯಾಕರಣಗಳು ಸಂಜ್ಞೆಯನ್ನು ವಿಧಿಸುತ್ತವೆ. 'ಸತ್' ಎಂಬ ಕೃದಂತ ವಿಶೇಷಣದ ಸಪ್ತಮ್ಯಂತ ರೂಪ 'ಸತಿ' ಎಂದಾಗಿದ್ದು ಅದಕ್ಕೆ 'ಇರುವಲ್ಲಿ' ವಿದ್ಯಮಾನದಲ್ಲಿ ಎಂದರ್ಥವಾಗುತ್ತದೆ (ದರ್ಪಣ (ಮ) ಅವತರಣಿಕೆ: ಪು. 66). ಈ ಅರ್ಥದಲ್ಲಿ ಬಳಸಿದ ಕೃದಂತ ವಿಶೇಷಣ ರೂಪಕ್ಕೆಲ್ಲ 'ಸತ್ಯರ್ಥ'ವೆಂದೇ ಸಂಸ್ಕೃತ ವ್ಯಾಕರಣ ಗಳಲ್ಲಿ ಸಂಜ್ಞೆಯಾಗಿದೆ. ಕೃದಂತ ವಿಶೇಷಣವು ಸಪ್ತಮೀ ವಿಭಕ್ತಿಯನ್ನು ಹೊಂದಿರುವು ದರಿಂದ 'ಸತಿಸಪ್ತಮಿ' ಯೆಂಬ ಸಂಜ್ಞೆಯೂ ಸಂದಿದೆ. ಸತ್ಯರ್ಥ ಹಾಗೂ ಸತಿಸಪ್ತಮಿ –ಇವೆರಡೂ ಸಮಾನಾರ್ಥಕಗಳಾದ ಸಂಜ್ಞೆಗಳು. ಮಹಾಭಾಷ್ಯದಲ್ಲಿ (6-4-23) 'ಸತ್ಸಪ್ತಮೀ' ಎಂಬ ಪ್ರಯೋಗವಿದ್ದು ಕಾಲಕ್ರಮೇಣ ಅದು 'ಸತಿಸಪ್ತಮೀ' ಎಂಬು ದಾಗಿ ಬದಲಾವಣೆಗೊಂಡಿರಬೇಕು (D. S. G. p.360).

ಸಂಸ್ಕೃತದಲ್ಲಿ 'ತಸ್ಮಿನ್ ಗತೇ ಕಿಂ ವೃತ್ತಂ' ಮುಂತಾದ ಪ್ರಯೋಗಗಳನ್ನು ಅರ್ಥ ಮಾಡಿಕೊಳ್ಳುವಾಗ 'ತಸ್ಮಿನ್ ಗತೇ ಸತಿ ಕಿಂ ವೃತ್ತಂ ಎಂದಿಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಕೃದಂತ ವಿಶೇಷಣದ ಮುಂದೆ 'ಸತಿ' ಎಂಬುದು ಅಧ್ಯಾಹಾರವಾಗಿರುವುದರಿಂದ ಸತಿಸಪ್ತಮಿಯೆಂಬ ಸಂಜ್ಞೆ ಅನ್ವರ್ಥಕವಾಗಿರುತ್ತದೆ.

ಸತಿಸಪ್ತಮಿಯೆಂದು ಕರೆಯಿಸಿಕೊಳ್ಳಲು ಅರ್ಹವಾದ ಪ್ರಯೋಗಗಳು ಕನ್ನಡ ಭಾಷೆಯಲ್ಲಿದ್ದರೂ ದರ್ಪಣಕ್ಕಿಂತ ಹಿಂದೆ ವ್ಯಾಕರಣ ಗ್ರಂಥಗಳಲ್ಲಿ ಸತಿಸಪ್ತಮಿ ಪ್ರಸ್ತಾ ವಿತವಾದಂತೆ ತೋರುವುದಿಲ್ಲ. ದರ್ಪಣದಲ್ಲಿ ಸತ್ಯರ್ಥ (ಸೂ. 144, 257), ಸತಿ ಸಪ್ತಮಿ (ಸೂ. 258, 260)–ಇವೆರಡೂ ಬಳಕೆಗೊಂಡಿವೆ. ಈ ಸಂಜ್ಞೆಗಳನ್ನು ಸಂಸ್ಕೃತದಿಂದಲೇ ಸ್ವೀಕರಿಸಲಾಗಿದೆ.

## ಕನ್ನಡದ ಸತಿಸಪ್ತಮಿ

ಸತಿಸಪ್ತಮಿಯು ಉಭಯಕರ್ತೃಕವೆಂದೂ ಅದರ ಪ್ರತ್ಯಯ ಎಕಾರವೆಂದೂ ದರ್ಪಣದಲ್ಲಿ ಹೇಳಲಾಗಿದೆ (ಸೂ. 260), ಆ ಎಕಾರದ ಸ್ಥಾನದಲ್ಲಿ ವರ್ತಮಾನ ಮತ್ತು ಭವಿಷ್ಯದರ್ಥದಲ್ಲಿ 'ಅನ್ನೆಗಂ, ಅನ್ನಂ, ಇನೆಗಂ, ಇನಂ' ಎಂಬ ಪ್ರತ್ಯಯಗಳೂ ಭೂತಾರ್ಥದಲ್ಲಿ 'ಉದುಂ, ಅಲೊಡಂ' ಎಂಬಿವುಗಳೂ ಬರುವುದಾಗಿ ನಿರೂಪಿಸಲಾಗಿದೆ (ಸೂ. 258) 'ಅಲೊಡಂ' ಎಂಬುದರ ಮುಂದೆ 'ಎ' ಬರಲೂಬಹುದು (ಸೂ. 257) ಎಂದರೆ 'ಎ' ಎಂಬುದಕ್ಕೆ ಕಾಲದ ನಿರ್ದಿಷ್ಟತೆಯಿಲ್ಲವೆಂಬುದು ಸ್ಪಷ್ಟ.

ನೆನೆವನ್ನೆಗಂ ಬಂದಂ. ಕೊಲ್ವನ್ನಮಿಕ್ಕಿಕೊಂಡಂ

ಅವಧಿಬರ್ಪಿನೆಗಂ ಸೈರಿಸಿದಂ. ಬೆಳಗಪ್ಪಿನಂ ಕೇಳಿಸಿದಂ

ಓಲಗಂ ಪರೆವುದುಮಾಳೋಚನೆಗೆ ಪೊಕ್ಕಂ

ಪಾವಸೆ ಕಿಡಲೊಡಂ ನೀರ್ ತಿಳಿದುದು

ಬರಲೊಡನೆ ಕೊಟ್ಟಂ

ಗಾಯಕಂ ಪಾಡೆ ದೇವಂ ಮೆಚ್ಚಿದಂ

ಸತಿಸಪ್ತಮಿ ಎಕಾರದ ಸ್ಥಾನದಲ್ಲಿ 'ಅಲ್' ಎಂಬ ಪ್ರತ್ಯಯದ ಬಳಕೆಯನ್ನು ದರ್ಪಣದಲ್ಲಿ ನಿಷೇಧಿಸಲಾಗಿದೆ (ಸೂ. 260). ಹಾಗಾಗಿ ಈ ಪ್ರಯೋಗವು ಅಸಮರ್ಪಕ :

'ಬೈಗಿನ ಕೆಂಬಿಸಲಳುರಲೆಸೆದುವಾಶ್ರಮ ತರುಗಳ್'

ದರ್ಪಣದ ಕಾಲಕ್ಕಿಂತ ಎಷ್ಟೋ ಹಿಂದೆಯೇ 'ಅಲ್' ಪ್ರತ್ಯಯವನ್ನು ಸತಿ ಸಪ್ತಮಿಯ ಪ್ರತ್ಯಯವಾಗಿ ಬಳಸತೊಡಗಿದ್ದರೂ ದರ್ಪಣಕಾರ ಅದನ್ನು ನಿಷೇಧಿಸುವ ಸಾಹಸವನ್ನು ಮಾಡಿದ್ದಾನೆ.

ಕನ್ನಡದ ಅಸಾಧಾರಣ ಲಕ್ಷಣಗಳಲ್ಲಿ ಸತಿಸಪ್ತಮಿಯೂ ಒಂದಾಗಿದೆ. ಸಂಸ್ಕೃತದ್ದು ಸತಿಸಪ್ತಮಿಯಾದರೆ ಕನ್ನಡದ್ದು 'ಸಮುಚಿತವಾಗಿ ಬರ್ಪ ಸತಿಸಪ್ತಮಿ' 'ಸಮುಚಿತ ವಾಗಿ' ಎಂಬುದು ಪ್ರಾಸದ ಅನುಕೂಲತೆಗಾಗಿ ಬಂದುದೆಂದು ಸಮಾಧಾನ ಹೇಳಲೆಡೆ ಯಿದ್ದರೂ ಕನ್ನಡದ ಸತಿಸಪ್ತಮಿ ಸಂಸ್ಕೃತದ್ದಕ್ಕಿಂತ ಭಿನ್ನವೆಂಬುದು ಸುಸ್ಪಷ್ಟ.

ಸಂಸ್ಕೃತದ 'ಸತಿಸಪ್ತಮಿ ಕ್ರಿಯಾರೂಪ' ಕೃದಂತ ವಿಶೇಷಣವಾಗಿದ್ದು ಸಾಮಾನ್ಯ ವಾದ ಸಪ್ತಮಿ ವಿಭಕ್ತಿಯನ್ನು ಹೊಂದಿರುತ್ತದೆ. ಮಾತ್ರವಲ್ಲ, ಆ ನ್ಯೂನಕ್ರಿಯೆಯ ಕರ್ತೃವೂ ಸಪ್ತಮೀ ವಿಭಕ್ತಿಯಲ್ಲಿರುತ್ತದೆ. 'ಉದಿತೇ ಕುಮಾರಸೂರ್ಯೇ ಕೇವಲಯ ಮುಲ್ಲಸತಿ' ಎಂಬ ಈ ಪ್ರಯೋಗದಲ್ಲಿ 'ಉದಿತೇ' ಎಂಬ ಕ್ರಿಯಾಸೂಚಕರೂಪವೂ ಕುಮಾರ ಸೂರ್ಯ ಎಂಬ ಕರ್ತೃವೂ ಸಪ್ತಮೀ ವಿಭಕ್ತ್ಯಂತವಾಗಿವೆ. ಕನ್ನಡದ ಸತಿ ಸಪ್ತಮಿ ಹೀಗಲ್ಲ. ಅದರಲ್ಲಿ ನ್ಯೂನಕ್ರಿಯೆಯು ಸಾಮಾನ್ಯವಾದ 'ಅಲ್ಲಿ, ಒಳ್'ಮುಂತಾದ ಸಪ್ತಮೀ ವಿಭಕ್ತಿಯನ್ನು ಹೊಂದದೆ 'ಎ' ಎಂಬ ಪ್ರತ್ಯೇಕವಾದ ಸಪ್ತಮಿಯನ್ನು ಹೊಂದುತ್ತದೆ, ಸತ್ಯರ್ಥದಲ್ಲಿ ಸಪ್ತಮೀ ಬರುವುದಾಗಿ ದರ್ಪಣ ಹೇಳಿದರೂ (ಸೂ. 144) ಪ್ರಯೋಗದಲ್ಲಿ ಒಳ್, ಅಲ್ಲಿ-ಈ ಎರಡು ವಿಭಕ್ತಿಗಳ ಬಳಕೆ ಕಾಣುವುದಿಲ್ಲ. ಸತಿ ಸಪ್ತಮಿಯನ್ನು ನಿರೂಪಿಸುವ ಸಂದರ್ಭದಲ್ಲಿ ಈ ಪ್ರತ್ಯಯಗಳನ್ನು ಮರೆತೂ ಪ್ರಸ್ತಾವಿ ಸುವುದಿಲ್ಲ.

ಸತಿಸಪ್ತಮಿಯ ಪ್ರತ್ಯಯಂಗಳನ್ನು ಹೊಂದಿದ ಧಾತುಗಳು ಕನ್ನಡದಲ್ಲಿ ಕೃದಂತಾವ್ಯಯಗಳಾಗಿ ನಿಲ್ಲುತ್ತವೆ. ನ್ಯೂನಕ್ರಿಯೆಯ ಕರ್ತೃವನ್ನು ಸೂಚಿಸುವ ಪದ ಸಂಸ್ಕೃತದಂತೆ ಸಪ್ತಮೀ ವಿಭಕ್ತಿಯಲ್ಲಿರದೆ ಸದಾ ಪ್ರಥಮೆಯಲ್ಲಿರುತ್ತದೆ,

ವಸಂತಂ ಬರಲೊಡಂ ಕೋಗಿಲೆಯುಲಿಗುಂ

ಈ ಪ್ರಯೋಗದಲ್ಲಿ ನ್ಯೂನಕ್ರಿಯೆ (ಬರಲೊಡಂ) ಅವ್ಯಯವಾಗಿದೆ. ಆದರ ಕರ್ತೃ (ವಸಂತಂ) ಪ್ರಥಮೆಯಲ್ಲಿದೆ. ಹಾಗೆ ಸಂಸ್ಕೃತಕ್ಕಿಂತ ಭಿನ್ನವಾಗಿದೆ.

"ಭಿನ್ನ ಕರ್ತೃಕ ವಿಚಾರ. ಒಂದು ಕ್ರಿಯಾರ್ಥದಿಂದ ಮತ್ತೊಂದು ಕ್ರಿಯೆ ಸೂಚಿತವಾಗುವ ವಿಚಾರ—ಈಯೆರಡು ಭಾಗಗಳನ್ನು ಬಿಟ್ಟರೆ ಮಿಕ್ಕ ಭಾಗಗಳಲ್ಲಿ ಸಂಸ್ಕೃತದ ಸತಿಸಪ್ತಮಿಗೂ ಕನ್ನಡದ ಸತಿಸಪ್ತಮಿಗೂ ಬಹಳ ವ್ಯತ್ಯಾಸವಿದೆ"(ದರ್ಪಣ(ಮ) : ಅವತರಣಿಕೆ. ಪು. 67). ಇದನ್ನು ಪರಿಗಣಿಸಿ "ಕೇಶಿರಾಜನು ಹೇಳುವ ಸತಿಸಪ್ತಮಿ, ಸತಿಸಪ್ತಮಿಯೇ ಅಲ್ಲ" (ನೋ: ಕ. ನು. 28–7) ಎಂಬ ಅಭಿಪ್ರಾಯ ಹುಟ್ಟಿಕೊಂಡಿದೆಯಾದರೂ ಅದು ಸಮರ್ಥನೀಯವಲ್ಲ. ಸಂಸ್ಕೃತ ವ್ಯಾಕರಣದ ಸಂಜ್ಞೆಯನ್ನು ಸ್ವೀಕರಿಸುವಾಗಲೆಲ್ಲಾ ಅಲ್ಲಿನಂತೆಯೇ ಇರುವುದಕ್ಕೆ ಮಾತ್ರ ಅಲ್ಲಿನ ಸಂಜ್ಞೆಯನ್ನು ವಿಧಿಸುವುದಾಗಿ ವ್ಯವಸ್ಥೆಯನ್ನು ಕನ್ನಡ ವ್ಯಾಕರಣಗಳು ಇಟ್ಟುಕೊಂಡಿಲ್ಲ. ಹಾಗಾದರೆ ಅಲ್ಲಿನ ವಿಭಕ್ತಿ, ವಚನ, ಕೃತ್, ತದ್ಧಿತ ಮೊದಲಾದ ಸಂಜ್ಞೆಗಳನ್ನು ಕನ್ನಡದಲ್ಲಿ ಬಳಸಿಕೊಳ್ಳುವಂತಿಲ್ಲ. ಆದ್ದರಿಂದ ಅಲ್ಲಿನ ಸಂಜ್ಞೆಯೊಂದನ್ನು, ಅಲ್ಲಿ ಬಳಸುವ, ಅರ್ಥಕ್ಕೆ ತೀರ ಹತ್ತಿರವಾದ ಅರ್ಥದಲ್ಲಿ ಇಲ್ಲಿ ಬಳಸಲಾಗಿದೆಯೆಂದಿಟ್ಟುಕೊಳ್ಳಬೇಕು. ಆಗ ಕನ್ನಡದಲ್ಲಿ ಸತಿಸಪ್ತಮಿಯಿದೆಯೆಂದೇ ಹೇಳಬೇಕಾಗುತ್ತದೆ. ಬಹುಶಃ ಇದನ್ನು ಗಮನಿಸಿಯೇ ದರ್ಪಣಕಾರ 'ಸಮುಚಿತವಾಗಿ ಬರ್ಪ ಸತಿಸಪ್ತಮಿ'ಯೆಂದು ಹೇಳಿರಬೇಕು,

## ಕರ್ಮಣಿ ಪ್ರಯೋಗ

ಕ್ರಿಯೆ ಭಾವರೂಪಿ. ಅದಕ್ಕೆ ತನ್ನದೇ ಆದ ಪುರುಷ, ಲಿಂಗ, ವಚನಗಳಿಲ್ಲ. ಅದು ಕರ್ತೃಗಾಮಿ ಯಾ ಕರ್ಮಗಾಮಿಯಾಗಿರುತ್ತದೆ. ಎಂದರೆ ಅದು ಕರ್ತೃ ಯಾ ಕರ್ಮದ ಪುರುಷ ಲಿಂಗ ವಚನಗಳನ್ನು ಪಡೆಯುತ್ತದೆ ಎಂದರ್ಥ. ಹಾಗೆ ಕ್ರಿಯೆಯು ಪುರುಷ ಲಿಂಗ ವಚನಗಳ ವಿಚಾರದಲ್ಲಿ ಕರ್ತೃವನ್ನು ಹೊಂದಿಕೊಂಡಿದ್ದರೆ 'ಕರ್ತರಿ ಪ್ರಯೋಗ'ವೆಂದೂ ಕರ್ಮವನ್ನು ಹೊಂದಿಕೊಂಡಿದ್ದರೆ 'ಕರ್ಮಣಿಪ್ರಯೋಗ'ವೆಂದೂ ಸಂಸ್ಕೃತ ವ್ಯಾಕರಣಗಳಲ್ಲಿ ಸಂಜ್ಞೆಗಳು ವಿಧಿಸಲ್ಪಟ್ಟಿವೆ. ಕ್ರಿಯೆ ಕೆಲವೊಮ್ಮೆ ಕರ್ತೃ ಯಾ ಕರ್ಮವನ್ನನುಸರಿಸದೆ ಸ್ವತಂತ್ರ ರೀತಿಯಲ್ಲಿರುವುದುಂಟು. ಅದಕ್ಕೆ ಭಾವೇ ಪ್ರಯೋಗವೆಂದು ಸಂಜ್ಞೆ.

ಕರ್ತರಿ ಮತ್ತು ಕರ್ಮಣಿ ಪ್ರಯೋಗದ ಕುರಿತು ಇನ್ನೊಂದು ವಿಧವಾಗಿ ವಿವರಣೆ ಕೊಡಬಹುದು. ವಾಕ್ಯದಲ್ಲಿ ಕರ್ತೃವಿಗೆ ಪ್ರಾಧಾನ್ಯವಿರುವುದು ಕರ್ತರಿಪ್ರಯೋಗ ;

ಕರ್ಮಕ್ಕೆ ಪ್ರಾಧಾನ್ಯವಿರುವುದು ಕರ್ಮಣಿಪ್ರಯೋಗ. ಕ್ರಿಯಾಪದವು ಪುರುಷ ಲಿಂಗ ವಚನ ವಿಚಾರದಲ್ಲಿ ಯಾವುದನ್ನು ಅನುಸರಿಸುತ್ತದೆಯೋ ಅದು ವಾಕ್ಯದಲ್ಲಿ ಪ್ರಾಧಾನ್ಯ ವನ್ನು ಹೊಂದಿದೆಯೆಂದೂ ತಿಳಿಯಬೇಕು.

ಮೇಲಿನ ಮೂರು ವಿಧವಾದ ಪ್ರಯೋಗಗಳ ವಿವರಣೆ ಸಂಸ್ಕೃತ ವ್ಯಾಕರಣಗಳಲ್ಲಿ ನಿರೂಪಿತವಾಗಿದೆ. ಕರ್ಮಣಿ ಪ್ರಯೋಗ ಸಂಸ್ಕೃತಕ್ಕೆ ತೀರ ಸಹಜವಾದುದು. ಸಂಸ್ಕೃತ ಭಾಷೆಯ ತೀರ ನಿಕಟ ಸಂಪರ್ಕದಿಂದ ಕನ್ನಡಕ್ಕೂ ಕರ್ಮಣಿ ಪ್ರಯೋಗ ಜಿಗಿದಿದೆ. ವೈಯಾಕರಣರ ಭಾಷೆಯಲ್ಲಿಯೂ ಅದು ತಲೆದೋರಿದೆ.

ಸ್ಮೃತಿ : "ಪರಮಾರ್ಥಂ ಪೇೞ್ ಪಟ್ಟಿರ್ದಧಿಕ...." (ಪದ್ಯ 6)

ದರ್ಪಣ : "ತೃತೀಯೆ ಪೇೞಲ್ಪಡೆಗುಂ ಸಲೆ...." (ಸೂ. 139)

ಭೂಷಣದ ಭಾಷೆ ಸಂಸ್ಕೃತವಾದ್ದರಿಂದ ಅದರಲ್ಲಿ ಕನ್ನಡದ ಕರ್ಮಣಿ ಪ್ರಯೋಗಕ್ಕೆ ಅವಕಾಶವಿಲ್ಲ. ಆದರೆ ಪ್ರಯೋಗಗಳಲ್ಲಿ ಕರ್ಮಣಿ ಪ್ರಯೋಗ ತಲೆಯಿಕ್ಕಿದೆ.

"ದೇವದತ್ತನಿಂ ಮಾಡಲ್ಪಟ್ಟುದು,
ಯಜ್ಞಮಿತ್ರನಿಂ ಬೇಡಲ್ಪಟ್ಟುದು" (ಸೂತ್ರ 78ರ ಪ್ರಯೋಗ)

ಸಂಸ್ಕೃತದ ಕರ್ಮಣಿ ಪ್ರಯೋಗವನ್ನು ಹೋಲುವ ಮೇಲಿನಂತಹ ಕನ್ನಡದ ಕರ್ಮಣಿ ಪ್ರಯೋಗಗಳು ಗ್ರಾಂಥಿಕ ಭಾಷೆಯಲ್ಲಿ ಬಹಳ ಹಿಂದಿನಿಂದಲೇ ಕಾಣತೊಡಗಿವೆ. ಆದರೆ ಸ್ಮೃತಿ ಭೂಷಣಗಳು ಅದನ್ನೊಂದು ಕನ್ನಡ ಭಾಷೆಯ ರಚನೆಯೆಂಬುದಾಗಿ ತಿಳಿದುಕೊಂಡಿಲ್ಲ. ಹಾಗಾಗಿಯೇ ಕರ್ಮಣಿ ಪ್ರಯೋಗದಲ್ಲಿ ಕ್ರಿಯಾರೂಪ ಸಿದ್ಧಿಯ ಕುರಿತು ಚಕಾರವೆತ್ತಿಲ್ಲ. ದರ್ಪಣದ ಆಖ್ಯಾತ ಪ್ರಕರಣದ ಕೊನೆಯಲ್ಲಿ ಕಾಣುವ "ಅನುಕ್ತಸೂತ್ರ" ಕರ್ಮಣಿ ಪ್ರಯೋಗದ ಕುರಿತು ಅಲ್ಪ ವಿವರಣೆ ನೀಡುತ್ತದೆ ಯಾದರೂ ಅದು ಕೇಶಿರಾಜಕೃತವಾಗಿರದೆ ಪ್ರಕ್ಷೇಪಗೊಂಡುದಾಗಿರಬೇಕೆಂದು ವಿದ್ವಾಂಸರು ನಂಬಿದ್ದಾರೆ (ದರ್ಪಣ (ಮ) ಪು. 229 ; ಪ್ರಾ. ಕ. ವ್ಯಾ : ಪು. 211). ಅನುಕ್ತ ಸೂತ್ರವೆಂಬ ಹೇಳಿಕೆ ; ಕೆಲವು ಹಸ್ತಪ್ರತಿಗಳಲ್ಲಿ ಆ ಸೂತ್ರವಿಲ್ಲದಿರುವುದು ಮತ್ತು ಶಬ್ದಾನುಶಾಸನದ ವಿವರಣೆಯನ್ನು ಆ ಸೂತ್ರದ ಬಳಿಕ ಕೊಡುವುದು—ಇವೆಲ್ಲ ಮೇಲಿನ ನಿಲುವಿಗೆ ಕಾರಣವಾಗಿವೆ. ಆದ್ದರಿಂದ ಸ್ಮೃತಿ ಭೂಷಣ ದರ್ಪಣಗಳು ಕರ್ಮಣಿ ಪ್ರಯೋಗದ ಕುರಿತು ವ್ಯಾಕರಣಾತ್ಮಕ ಚಿಂತನೆಯನ್ನು ನಡೆಸಿಲ್ಲವೆಂದೇ ಹೇಳ ಬೇಕಾಗಿದೆ. ಬಹುಶಃ ಅದು ಕನ್ನಡದ ಸಹಜ ಪ್ರಯೋಗವಲ್ಲವೆಂಬ ಭಾವನೆ ಆ ವೈಯಾಕರಣರಿಗಿದ್ದಿರಬೇಕು. ಆದರೆ ಭಾಷೆಯಲ್ಲಿ ಪ್ರವೇಶಿಸಿದ ಅಂತಹ ಪ್ರಯೋಗ ಗಳಿಂದ ದೂರವುಳಿಯಲು ಆ ವೈಯಾಕರಣರಿಗೆ ಸಾಧ್ಯವಾಗಿಲ್ಲವೆಂಬುದನ್ನೂ ಒಪ್ಪಿಕೊಳ್ಳ ಬೇಕಾಗುತ್ತದೆ.

## ಅಡಿಟಿಪ್ಪಣಿಗಳು

1. ದರ್ಪಣ : ಸೂ. 45ರ ವಿವರಣೆ. "ನೋಡು ಬೇಡು....ಎಂದು ಅಖ್ಯಾತ ಪದನಕ್ಕಂ" ಎಂದು ಒಂದೆಡೆ ಮಾತ್ರ 'ಆಖ್ಯಾತಪದ' ಬಳಕೆಗೊಂಡಿದೆ.
2. ಸ್ಮೃತಿ: ಸೂತ್ರ 85 ಮತ್ತು 88ರಲ್ಲಿ 'ವಿಭಕ್ತಿ' ಎಂಬ ಪ್ರಯೋಗವಿದೆ.
3. ಭೂಷಣ : ಸೂ. 197, 210. 211, 215, 227. 229 ಇವುಗಳ ವೃತ್ತಿಯಲ್ಲಿ 'ವಿಭಕ್ತಿ' ಎಂಬ ಬಳಕೆಯಿದೆ.
4. ದರ್ಪಣ : ಸೂ. 228 ಮತ್ತು 232ರಲ್ಲಿ 'ವಿಭಕ್ತಿ' ಬಳಕೆಗೊಂಡಿದೆ.
5. ಸ್ಮೃತಿ : ಸೂ. 90. ಭೂಷಣ. ಸೂ. 207 ಇತು, ಇತ್ತು, ಅತ್ತು ಎಂದು ದರ್ಪಣ ಬಳಸುವಲ್ಲಿ ಸ್ಮೃತಿಭೂಷಣಗಳು ತು, ತ್ತು ಎಂದು ಮಾತ್ರ ಬಳಸುತ್ತವೆ.
6. ಹೊಸಗನ್ನಡ ನುಡಿಗನ್ನಡಿ : ಪು. 54. ಆಖ್ಯಾತ ಪ್ರತ್ಯಯಗಳು ವರ್ತಮಾನ, ಭೂತ, ಭಾವಿ, ಭವಿಷ್ಯತ್ತು. ವಿಧಿ, ನಿಶೇಧಗಳೆಂದು ಆರು ವಿಧ.
7. ಸಿ. ಹೇ. ಶ. : ಸೂ. 3-3-6ರಲ್ಲಿ ವಿಭಕ್ತಿಗಳಿಗೆ 'ವರ್ತಮಾನಾ' ಎಂಬ ಸಂಜ್ಞೆ.
8. ನೋ. ಮಹಾಭಾಷ್ಯ : 3-3-161ರ 'ಪ್ರದೀಪ' ವ್ಯಾಖ್ಯೆ "ಭೃತ್ಯಾದೇ: ಕಸ್ಯಾಶ್ಚಿತ್ ಕ್ರಿಯಾಯಾಂ ನಿಯೋಜನಮಿತ್ಯರ್ಥಃ"
9. ನೋ. ಕ. ಭಾ. ಜ : ಪು. 544. ಹಾಗೆ ಇವುಗಳು ಸಾಪೇಕ್ಷ ಕ್ರಿಯಾರೂಪಗಳು.
10. ಅಷ್ಟಾಧ್ಯಾಯಿ : ಸೂ. 3-1-93 : ಕೃದತಿಙ್.

# ಅಧ್ಯಾಯ 11

## ನಿಷ್ಪನ್ನ ಶಬ್ದಗಳು

ನಿಷ್ಪನ್ನ ಶಬ್ದಗಳನ್ನು (Derivatives) ರೂಪಿಸಿಕೊಳ್ಳುವುದರ ಕುರಿತು ಸಂಸ್ಕೃತ ವ್ಯಾಕರಣಗಳಲ್ಲಿ ವಿಸ್ತೃತವಾದ ವಿವರಣೆ ಬರುತ್ತದೆ. ನಾಮವಾಚಕಗಳಿಗೆ ಮತ್ತು ಕ್ರಿಯಾರ್ಥಗಳಾದ ಧಾತುಗಳಿಗೆ ಕೆಲವು ಪ್ರತ್ಯಯಗಳನ್ನು ಹಚ್ಚುವುದರಿಂದ ಹೊಸ ಅರ್ಥ ವನ್ನು ಕೊಡುವ ಪ್ರಾತಿಪದಿಕಗಳ (ಲಿಂಗಗಳ) ನಿಷ್ಪತ್ತಿಯಾಗುತ್ತದೆ. ಹಾಗೆ ಹಚ್ಚುವ ಪ್ರತ್ಯಯಗಳಲ್ಲಿ ನಾಮವಾಚಿಗಳಿಗೆ ಹತ್ತುವವುಗಳನ್ನು 'ತದ್ಧಿತ'ವೆಂದೂ ಧಾತುಗಳಿಗೆ ಹತ್ತುವವುಗಳನ್ನು 'ಕೃತ್' (ಅಷ್ಟಾಧ್ಯಾಯಿ : 3–1–93) ಎಂದೂ ಪ್ರತ್ಯೇಕವಾದ ಸಂಜ್ಞೆಗಳಿಂದ ಗುರುತಿಸುತ್ತಾರೆ. ಈ ಪ್ರತ್ಯಯಗಳು ಕೊನೆಯಾಗುಳ್ಳ ಪ್ರಾತಿಪದಿಕ ಗಳಿಗೆ ಅನುಕ್ರಮವಾಗಿ 'ತದ್ಧಿತಾಂತ' ಮತ್ತು 'ಕೃದಂತ' ಎಂಬ ಸಂಜ್ಞೆಗಳು ಬಳಕೆ ಗೊಂಡಿವೆ. ಕೊನೆಯ 'ಅಂತ'ವನ್ನು ಲೋಪಿಸಿಯೂ ಮೇಲಿನ ಅರ್ಥಗಳಲ್ಲಿ ಈ ಶಬ್ದ ಗಳು (ತದ್ಧಿತ ಮತ್ತು ಕೃತ್) ಬಳಕೆಯಾಗುವುದು ಸರ್ವ ಸಾಧಾರಣವಾಗಿದೆ.

ತದ್ಧಿತ ಮತ್ತು ಕೃತ್ ಪಾರಿಭಾಷಿಕ ಪದಗಳಾಗಿ ಮೊತ್ತಮೊದಲಿಗೆ ಗೋಪಥ ಬ್ರಾಹ್ಮಣದಲ್ಲಿ ಕಾಣಿಸಿಕೊಳ್ಳುತ್ತವೆ. 'ಕೃದಂತ' ಎಂಬ ಬಳಕೆ ಅಥರ್ವವೇದದಲ್ಲಿದೆ(1-1-10). ಅಷ್ಟಾಧ್ಯಾಯಿ, ಕಾತಂತ್ರ, ಸಿದ್ಧಹೇಮಶಬ್ದಾನುಶಾಸನ ಮೊದಲಾದ ಹೆಚ್ಚಿನ ಸಂಸ್ಕೃತ ವ್ಯಾಕರಣಗಳಲ್ಲಿ ತದ್ಧಿತ ಮತ್ತು ಕೃತ್ ಸಂಜ್ಞೆಗಳಾಗಿ ಪ್ರಯುಕ್ತವಾಗಿವೆ. ಜೈನೇಂದ್ರವು ತದ್ಧಿತವನ್ನು ಮಾತ್ರ 'ಹೃತ್' ಎಂದು ಪರಿವರ್ತಿಸಿಕೊಂಡಿದೆ.

ಕನ್ನಡ ವ್ಯಾಕರಣಗಳು ನಿಷ್ಪನ್ನ ಪದಗಳನ್ನು ರೂಪಿಸಿಕೊಳ್ಳುವಲ್ಲಿ ತಾತ್ವಿಕವಾಗಿ ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸುತ್ತವೆ. 'ತದ್ಧಿತ' ಎಂಬ ಸಂಜ್ಞೆಯ ವ್ಯಾಪ್ತಿ ಅಲ್ಲಿಗಿಂತ ಇಲ್ಲಿ ಹಿರಿದಾಗಿದೆ. ಹಾಗೂ ಮೂರೂ ವ್ಯಾಕರಣಗಳಲ್ಲಿ ಅದೊಂದು ಸಂಜ್ಞೆ ಯಾಗಿ ಬಳಕೆಗೊಂಡಿದೆ. ಆದರೆ 'ತದ್ಧಿತಾಂತ' ಎಂಬ ಪ್ರಯೋಗ ಕನ್ನಡ ವ್ಯಾಕರಣ ಗಳಲ್ಲಿಲ್ಲ. ಭೂಷಣ ದರ್ಪಣಗಳು ಕೃತ್ ಹಾಗೂ ಕೃದಂತ ಎಂಬೆರಡು ಪದಗಳನ್ನು ಬಳಸಿಕೊಂಡಿವೆ. ದರ್ಪಣದಲ್ಲಿ 'ಕೃಲ್ಲಿಂಗ' ಎಂಬ ಪದವೂ ಬಳಕೆಯಾದರೆ ಸ್ಮೃತಿಯಲ್ಲಿ ಈ ಪೈಕಿ ಯಾವ ಪದವೂ ಪ್ರಯೋಗಗೊಂಡಿಲ್ಲ.

ಸಂಸ್ಕೃತ ವ್ಯಾಕರಣಗಳಲ್ಲಿ ತದ್ಧಿತ ಮತ್ತು ಕೃತ್ ಪ್ರತ್ಯಯಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿವರಿಸುವುದು ಕ್ರಮ. ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಂತೂ ಇವುಗಳಿಗೆ ಪ್ರತ್ಯೇಕವಾದ ಅಧ್ಯಾಯಗಳೇ ವಿನ್ಯಾಸಲಾಗಿರುತ್ತವೆ. ಕಾತಂತ್ರದ ಎರಡನೇ ಅಧ್ಯಾಯದ

ಆರನೇ ಪಾದದಲ್ಲಿ ತದ್ಧಿತ ಪ್ರತ್ಯಯಂಗಳನ್ನು ನಿರೂಪಿಸಿದರೆ ಅದರ ನಾಲ್ಕನೇ ಅಧ್ಯಾಯ ಪೂರ್ಣವಾಗಿ ಕೃತ್ ಪ್ರತ್ಯಯಂಗಳನ್ನು ವಿವರಿಸುತ್ತದೆ. ಸಿದ್ಧಹೇಮಶಬ್ದಾನುಶಾಸನದ 5ನೇ ಅಧ್ಯಾಯದಲ್ಲಿ ಕೃತ್ ಪ್ರತ್ಯಯಂಗಳೂ 6ನೇ ಮತ್ತು 7ನೇ ಅಧ್ಯಾಯಗಳಲ್ಲಿ ತದ್ಧಿತ ಪ್ರತ್ಯಯಗಳೂ ನಿರೂಪಿತವಾಗಿವೆ. ಪ್ರಕ್ರಿಯಾ ಸಂಗ್ರಹ, ರೂಪಾವತಾರ, ಕಚ್ಚಾಯನ ವ್ಯಾಕರಣ ಮುಂತಾದವುಗಳಲ್ಲಿ ಸಮಾಸ ಪ್ರಕರಣದ ಬಳಿಕ ತದ್ಧಿತ ಪ್ರತ್ಯಯಂಗಳನ್ನು ನಿರೂಪಿಸುವ ಪ್ರಕರಣ ಬರುತ್ತದೆ. ಅಲ್ಲಿ ಪ್ರಕರಣ ನಾಮ ಅನುಕ್ರಮವಾಗಿ ತದ್ಧಿತ ಸಂಗ್ರಹ, ತದ್ಧಿತಾವತಾರ, ತದ್ಧಿತ ಕಪ್ಪ ಎಂದಿದೆ. ಈ ಗ್ರಂಥಗಳಲ್ಲಿ ಆಖ್ಯಾತದ ಬಳಿಕ ಕೃತ್ ಪ್ರತ್ಯಯಂಗಳ ವಿವರಣೆಯಿದೆ. ಪ್ರಕ್ರಿಯಾ ಸಂಗ್ರಹದಲ್ಲಿ 'ಕೃತ್ ಸಂಗ್ರಹ', ಸಾರಸ್ವತ ಪ್ರಕ್ರಿಯೆಯಲ್ಲಿ 'ಕೃದಂತ ಪ್ರಕರಣ', ಕಚ್ಚಾಯನ ವ್ಯಾಕರಣದಲ್ಲಿ 'ಕಿಬ್ಬಿಧಾನ ಕಪ್ಪ'.

ಕನ್ನಡ ವ್ಯಾಕರಣಗಳೂ ತದ್ಧಿತ ಪ್ರತ್ಯಯಂಗಳನ್ನು ಪ್ರತ್ಯೇಕವಾದ ಪ್ರಕರಣಗಳಲ್ಲಿ ನಿರೂಪಿಸುತ್ತವೆ. ಸ್ಮೃತಿ ದರ್ಪಣಗಳಲ್ಲಿ 'ತದ್ಧಿತಪ್ರಕರಣ'ವಾದರೆ ಭೂಷಣದಲ್ಲಿ 'ತದ್ಧಿತ ವಿಧಾನ'. ಸ್ಮೃತಿ ಭೂಷಣ ದರ್ಪಣಗಳು ಕೃತ್ ಪ್ರತ್ಯಯಂಗಳನ್ನು ಪ್ರತ್ಯೇಕ ಅಧ್ಯಾಯದಲ್ಲಿ ಹೇಳದೆ ಎಷ್ಟೋ ಅಷ್ಟು ತದ್ಧಿತಪ್ರಕರಣ ಹಾಗೂ ಆಖ್ಯಾತ ಪ್ರಕರಣಗಳಲ್ಲಿ ನಿರೂಪಿಸುವುದರ ಮಟ್ಟಿಗೆ ಸಹಮತ ಹೊಂದಿವೆ.

### ತದ್ಧಿತಾಂತ

ದರ್ಪಣದಲ್ಲಿ ಹೇಳುವ ನಾಲ್ಕು ವಿಧವಾದ ಲಿಂಗಗಳಲ್ಲಿ ತದ್ಧಿತ ಲಿಂಗವೂ ಒಂದಾಗಿದೆ. ತದ್ಧಿತ ಪ್ರತ್ಯಯಂಗಳು ಕೊನೆಯಾಗುಳ್ಳ ನಾಮವಾಚಕಗಳಿಗೆ 'ತದ್ಧಿತ ಲಿಂಗ'ವೆಂಬ ಸಂಜ್ಞೆಯನ್ನು ದರ್ಪಣಕಾರನು ವಿಧಿಸಿದ್ದಾನೆ (ಸೂತ್ರ 82ರ ವೃತ್ತಿ). ಉಳಿದ ವೈಯಾಕರಣರು ಹೀಗೆ ವಾಚ್ಯವಾಗಿ ಹೇಳದಿದ್ದರೂ ಅವರ ದೃಷ್ಟಿ ಇದೇ ಆಗಿದೆಯೆಂಬುದರಲ್ಲಿ ಸಂದೇಹವಿಲ್ಲ. ತದ್ಧಿತ ಪ್ರತ್ಯಯಂಗಳನ್ನು ವಿವರಿಸುವಲ್ಲಿಯೂ ಕನ್ನಡವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳನ್ನು ಮಾದರಿಯಾಗಿಟ್ಟುಕೊಂಡಿವೆ. ಸಂಸ್ಕೃತದಲ್ಲಿ ತದ್ಧಿತ ಪ್ರತ್ಯಯಂಗಳನ್ನು ಅವುಗಳು ಯಾವ ಯಾವ ಅರ್ಥಗಳಲ್ಲಿ ಬರುತ್ತವೆಯೆಂದು ಹೇಳುವುದು ಕ್ರಮ. ಜೊತೆಯಲ್ಲಿ, ಅವು ಯಾವ ಯಾವ ಪ್ರಾತಿಪದಿಕಗಳ ಮುಂದಿನಿಂದ ಸೇರುತ್ತವೆಯೆಂದೂ ಹೇಳುವುದಿದೆ. ಕನ್ನಡ ವ್ಯಾಕರಣಗಳು ಮೊದಲಿನದನ್ನು ಮಾತ್ರ ಅನುಸರಿಸಿವೆ. ಉದಾ :

ಸ್ಮೃತಿ : "ಇದನೀತಂ ಮಾಡ್ಪನೆನಿ
ಪ್ಪುದಱೊಳ್ ಗಾಱಿಪ್ರಯೋಗಮಕ್ಕುಂ" ಸೂ. 71

ಭೂಷಣ : "ಇಚಸ್ತತ್ರ ಜಾತೇ ಭವೇವಾ" ಸೂ. 169

ದರ್ಪಣ : "ನಡೆಯಿಸುವನೀತನಿದನೆಂ
ಬೆಡೆಯೊಳ್ ವಳವಳ್ಳುವಂಕ್ಕುಂ" ಸೂ. 209

ಸ್ಮೃತಿ ಭೂಷಣ ದರ್ಪಣಗಳಲ್ಲಿ ನಿರೂಪಿಸಿರುವ ತದ್ಧಿತ ಪ್ರತ್ಯಯಂಗಳ ನಡುವಿನಲ್ಲಿ ಸೇರಿಕೊಂಡಿರುವ ಕೃತ್‌ಪ್ರತ್ಯಯಂಗಳನ್ನು ಕಳೆದುಹಾಕಿದರೆ ಉಳಿಯುವ ತದ್ಧಿತ ಪ್ರತ್ಯಯಗಳು ಕೆಳಗಿನಂತಿವೆ.

1. ಸ್ಮೃತಿ, ಭೂಷಣ ಮತ್ತು ದರ್ಪಣದಲ್ಲಿ :

| | | |
|---|---|---|
| ಇಗ | : | ತಂಬುಲಿಗಂ, ಗಂದಿಗಂ |
| ವಳ–ವಳ್ಳ | : | ಆಡಪವಳಂ, ಪಡೆವಳ್ಳಂ |
| ಕಾಱ–ಗಾಱ | : | ಬೇಹಂಕಾಱಂ, ಬಳೆಗಾಱಂ |
| ವಂತ | : | ಸಿರಿವಂತಂ, ಗುಣವಂತಂ |
| ತನ | : | ಕಲೆತನಂ, ಆಳ್ತನಂ |
| ಆಳಿ | : | ಓದಾಳಿ. ಜೂದಾಳಿ |
| ಇಚ | : | ಅಲರಿಚಂ, ಪೊಟಲಿಚಂ |
| ಅನೆಯಂ | : | ಅನಿತನೆಯಂ, ನೂಱನೆಯಂ |
| ವೆಂ | : | ಒರ್ವೆಂ, ಪಲವೆರ್ಂ |
| ವೊಲ್–ವೋಲ್ | : | ಬಲಿಯುಂತೆ ವೊಲ್, ಜಲನಿಧಿವೋಲ್ |

2. ಸ್ಮೃತಿ, ಭೂಷಣಗಳಲ್ಲಿ :

| | | |
|---|---|---|
| 'ನಿತು' | : | ಅನಿತು, ಇನಿತು, ಎನಿತು |
| 'ಂತು' | : | ಅಂತು, ಇಂತು, ಎಂತು |
| 'ಂದು' | : | ಅಂದು, ಇಂದು, ಎಂದು |

3. ಸ್ಮೃತಿ. ದರ್ಪಣಗಳಲ್ಲಿ :

| | | |
|---|---|---|
| ಒಡೆಯ | : | ಸಿರಿಯೊಡೆಯಂ, ಕೊಡೆಯೊಡೆಯಂ |
| ಉಳ್ಳ | : | ಓದುಳ್ಳಂ, ಸಿರಿಯುಳ್ಳಂ |

4. ಭೂಷಣ, ದರ್ಪಣಗಳಲ್ಲಿ :

| | | |
|---|---|---|
| ಕುಳಿ | : | ಅಂಜುಕುಳಿ, ಓಡುಂಕುಳಿ |

5. ದರ್ಪಣದಲ್ಲಿ ಮಾತ್ರ :

| | | |
|---|---|---|
| ಆಯ್ತ | : | ಸೂಟಾಯ್ತರ್, ಕಲ್ಲಾಯ್ತರ್ |

| | | |
|---|---|---|
| ವಡಿಗ | : | ಕುಂಚವಡಿಗ, ಪುಲ್ಲವಡಿಗ |
| ಕಂಟಿಗ | : | ಕಲ್ಕುಟಿಗಂ, ಮರಕಂಟಿಗಂ |
| ಗ | : | ಮಾತುಂಗಂ, ಬೂತುಗಂ |
| ಉಳಿಗ | : | ದೇವುಳಿಗಂ, ಮಣ್ಣುಳಿಗಂ |
| ಗುಳಿ | : | ಸಾಲುಂಗುಳಿ, ಲಂಚಗುಳಿ |
| ಉಣಿ | : | ಅಮರ್ದುಣಿ, ತುಡುಗುಣಿ |
| ಉಕ | : | ಬೊಂದುಕಂ, ದಿಂಡುಕಂ |
| ಅಡಿಗ | : | ದೇವಡಿಗಂ, ಪೂವಡಿಗಂ |
| ಇಕ | : | ಕರಿಕಂ, ಬಾರಿಕಂ |
| ಉಗ | : | ಸಾರುಗಂ, ಬೇರುಗರೆ |
| ಅಟಿಗ | : | ಮಾವಟಿಗಂ, ದೀವಟಿಗಂ |
| ಕ | : | ಬಡಕಂ, ನಿಡುಕಂ |
| ಇಲ | : | ಪಡೆಯಿಲಂ, ಗಾವಿಲಂ |
| ವಣಿಗ | : | ಲಂಚವಣಿಗಂ, ಸಾಲವಣಿಗಂ |

## ಸ್ತ್ರೀ ಪ್ರತ್ಯಯಗಳು

ಕನ್ನಡ ವ್ಯಾಕರಣಗಳು ಸ್ತ್ರೀ ಪ್ರತ್ಯಯಗಳನ್ನು ತದ್ಧಿತ ಪ್ರತ್ಯಯಗಳೆಂದೇ ತಿಳಿದಿವೆ. ಆ ಕಾರಣಕ್ಕಾಗಿಯೇ ಮೂರೂ ಗ್ರಂಥಗಳು ಒಟ್ಟು ನಾಲ್ಕು ಸ್ತ್ರೀ ಪ್ರತ್ಯಯಗಳನ್ನು ತದ್ಧಿತ ಪ್ರಕರಣದಲ್ಲಿ ನಿರೂಪಿಸುತ್ತವೆ:

| | | |
|---|---|---|
| ಇತಿ | : | ಬಾಣಸಿಗಿತಿ, ಕನ್ನಡಿಗಿತಿ |
| ತಿ | : | ಗಾಡಿಗಾರ್ತಿ, ಪೊಲತಿ |
| ಅಳ್ | : | ಕಿರಿಯಳ್, ಇನಿಯಳ್ |
| ಎ | : | ಸಿತಗೆ, ಚದುರೆ |

ಕೊನೆಯದಾದ 'ಎ' ಪ್ರತ್ಯಯವನ್ನು ಸ್ಮೃತಿ ಹೇಳುವುದಿಲ್ಲ. ದರ್ಪಣವು ಇತಿ ಮತ್ತು ತಿ ಪ್ರತ್ಯಯಗಳು ಉಳಿದ ಅಕಾರಾಂತ ತದ್ಧಿತ ಪ್ರತ್ಯಯಗಳ ಮುಂದಿನಿಂದ ಬರುವುದಾಗಿ ಹೇಳುತ್ತದೆ. ಉಳಿದೆರಡು ಈ ಅಭಿಪ್ರಾಯಕ್ಕೆ ಸಮ್ಮತಿ ಕೊಡುತ್ತವೆ.

ಸಂಸ್ಕೃತ ವ್ಯಾಕರಣಗಳಲ್ಲಿ ಸ್ತ್ರೀ ಪ್ರತ್ಯಯಗಳನ್ನು ತದ್ಧಿತ ಪ್ರತ್ಯಯಗಳಲ್ಲಿ ಸೇರ್ಪಡೆಗೊಳಿಸದೆ ಪ್ರತ್ಯೇಕವಾಗಿ ವಿವರಿಸುವುದು ಕ್ರಮ. ಅಷ್ಟಾಧ್ಯಾಯಿಯ ನಾಲ್ಕನೇ ಅಧ್ಯಾಯದ ಒಂದನೇ ಪಾದ (ಸೂತ್ರ 4–65), ಸಿದ್ಧ ಹೇಮ ಶಬ್ದಾನುಶಾಸನದ ಎರಡನೇ ಅಧ್ಯಾಯದ ನಾಲ್ಕನೇ ಪಾದ—ಇವುಗಳಲ್ಲಿ ಸ್ತ್ರೀ ಪ್ರತ್ಯಯಗಳ ವಿವರಣೆಯಿದೆ. ರೂಪಾವತಾರದ ಸ್ತ್ರೀಪ್ರತ್ಯಯಾವತಾರ, ಸಾರಸ್ವತ ಪ್ರಕ್ರಿಯೆಯ ಸ್ತ್ರೀಪ್ರತ್ಯಯ ಪ್ರಕ್ರಿಯೆಗಳು

ಸ್ತ್ರೀಪ್ರತ್ಯಯಂಗಳ ನಿರೂಪಣೆಗಾಗಿ ವಿಶಾಸಲಾಗಿವೆ. ಪ್ರಕ್ರಿಯಾ ಸಂಗ್ರಹದ ಸುಬಂತ ಸಂಗ್ರಹದಲ್ಲಿ ಸ್ತ್ರೀಪ್ರತ್ಯಯಂಗಳನ್ನೂ ಹೇಳಲಾಗಿದೆ. ಹೀಗೆ ಈ ವಿಚಾರದಲ್ಲಿ ಕನ್ನಡ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸದಿರುವುದು ಸ್ಪಷ್ಟ.[1] ಬಹುಶಃ ಕನ್ನಡದಲ್ಲಿ ಸ್ತ್ರೀ ಪ್ರತ್ಯಯಂಗಳ ಸಂಖ್ಯೆ ಬಹಳ ಕಡಿಮೆಯಾಗಿರುವುದೂ ಇದಕ್ಕೆ ಕಾರಣ ವಾಗಿರಬಹುದು.

ಮೇಲೆ ಹೇಳಿದ ತದ್ಧಿತ ಪ್ರತ್ಯಯಂಗಳಲ್ಲಿ ಕೆಲವು ಸಂಸ್ಕೃತ ಹಾಗೂ ಪ್ರಾಕೃತದಿಂದ ಎತ್ತಿಕೊಂಡ ಸ್ವೀಕರಣಗಳು. ಈ ಸ್ವೀಕರಣಕ್ಕೆ ಭಾಷಾ ಸಂಪರ್ಕ ಕಾರಣವಲ್ಲದೆ ವೈಯಾ ಕರಣರು ಕಾರಣರಲ್ಲ. ಕೆಲವು ಸ್ವೀಕರಣಗಳನ್ನೂ ಪರಿಶೀಲಿಸಬಹುದು (ಶ್ರೀಕಂಠತೀರ್ಥ: ಪು. 551–554).

| ಕನ್ನಡ ಪ್ರತ್ಯಯಗಳು | ಸಂಸ್ಕೃತ ಪ್ರತ್ಯಯಗಳು |
|---|---|
| ವಳ–ವಳ್ಳ | ಪಾಲ |
| ಇಕ | ಇಕ |
| ಕಾಜಿ | ಕಾರ |
| ತ | ತ |
| ತನ | ತ್ವನ |
| ವಂತ | ವಂತ |

ಇವುಗಳಲ್ಲಿ 'ತನ' ಪ್ರತ್ಯಯದ ಬಗ್ಗೆ ಸಂದೇಹ ಹುಟ್ಟಿಕೊಂಡದ್ದಿದೆ. ಬಹುಶಃ ಅದು ಆತ್ಮಾರ್ಥಕ ಸರ್ವನಾಮ; ತಾನ್ (ತನ್) ಎಂಬುದರ ರೂಪಾಂತರವಾಗಿರಬೇಕು. (ನೋ. ಪೀಠಿಕೆಗಳು–ಲೇಖನಗಳು : ಪು. 799). ದರ್ಪಣಕಾರನು ಸಂಸ್ಕೃತ ಶಬ್ದಗಳಿಗೆ 'ತನ'ವನ್ನು ಸೇರಿಸಬಾರದೆಂದು ಹೇಳುವುದಕ್ಕೆ ಇದೇ ಕಾರಣವಾಗಿರಬಹುದು. ಸಂಸ್ಕೃತ ದಿಂದ ಬಂದಿರುವ ತದ್ಧಿತ ಪ್ರತ್ಯಯಂಗಳಲ್ಲಿ ಎಲ್ಲಾ ನೇರವಾಗಿ ಸಂಸ್ಕೃತದಿಂದ ಬಂದವು ಗಳಲ್ಲ. ಕೆಲವು ಪ್ರಾಕೃತ ಅಪಭ್ರಂಶಗಳ ಮಾರ್ಗವಾಗಿ ಬಂದಿವೆ. ಸಂಸ್ಕೃತದ 'ಸ್ತ್ರೀ' ಪ್ರಾಕೃತದಲ್ಲಿ 'ಇತ್ಥೀ' ಆಗಿ ಕನ್ನಡಕ್ಕೆ ಬಂದಾಗ ಇತಿ–ತಿ ಆಗಿರಬೇಕೆಂದು ಹೇಳಬಹುದು (ಶ್ರೀಕಂಠತೀರ್ಥ: ಪು. 553). ಅಪಭ್ರಂಶದ 'ಇಲ್ಲ' ಎಂಬುದೇ ಕನ್ನಡದ 'ಇಲ' ವಾಗಿರಬೇಕು (ಅದೇ : ಪು. 611). ಒಂದು ಭಾಷೆ ಇನ್ನೊಂದು ಭಾಷೆಯಿಂದ ತದ್ಧಿತ ಪ್ರತ್ಯಯಂಗಳನ್ನು ಸ್ವೀಕರಿಸುವುದು ಸ್ವಾಭಾವಿಕವಾದ್ದರಿಂದ ಮೇಲಿನಂತೆ ಊಹಿಸಲೆಡೆ ಯಿದೆ. ಕನ್ನಡ ವೈಯಾಕರಣರೂ ಈ ಸ್ವೀಕರಣಗಳನ್ನು ಗಮನಿಸಿರಬೇಕೆಂಬುದಕ್ಕೆ ಭೂಷಣದ ಕೆಳಗಿನ ನಿರೂಪಣೆ ಆಧಾರವಾಗಿದೆ.

"ಅಪಭ್ರಂಶೇಷ್ಯೇವಂ ಕಾರಸ್ಯ" ಸೂ. 187

"ವೃತ್ತಿ : ಸಂಸ್ಕೃತಾದಪಭ್ರಂಶವಿಷಯೇ ಕಾರ ಶಬ್ದಸ್ಯಗಾಜಾದೇಶೋಭವತಿ".

ಕನ್ನಡ ವೈಯಾಕರಣರು ತದ್ಧಿತದ ಬಗ್ಗೆ (ತಾತ್ವಿಕವಾಗಿ) ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸಿವೆ ; ಜೊತೆಯಲ್ಲಿ ಅದರ ವ್ಯಾಪ್ತಿಯನ್ನು ಹಿಗ್ಗಿಸಿವೆಯೆನ್ನಬಹುದು.

### ಕೃದಂತ

ಸಂಸ್ಕೃತ ವ್ಯಾಕರಣಗಳಲ್ಲಿ ಕೃತ್ ಪ್ರತ್ಯಯಗಳನ್ನು ಪ್ರತ್ಯೇಕವಾಗಿ ನಿರೂಪಿಸುವುದು ಕ್ರಮವಾಗಿದ್ದರೂ ಕನ್ನಡ ವ್ಯಾಕರಣಗಳು ಹಾಗೆ ಮಾಡಿಲ್ಲವೆಂಬುದನ್ನು ಈ ಮೊದಲೆ ವಿಚಾರಿಸಲಾಗಿದೆ. ಯಾವುದೇ 'ಕೃತ್ ಪ್ರತ್ಯಯ'ವನ್ನೂ 'ಕೃತ್ ಪ್ರತ್ಯಯ'ವೆಂದು ಕನ್ನಡ ವ್ಯಾಕರಣಗಳು ಕರೆಯದಿರುವುದು ಅಚ್ಚರಿಗೆ ಕಾರಣವಾಗಿದೆ. ತದ್ಧಿತ ಪ್ರತ್ಯಯಗಳ ನಡುವಿನಲ್ಲಿ ಸೇರಿಕೊಂಡ ಕೃತ್‌ಪ್ರತ್ಯಯಗಳನ್ನು ಕನ್ನಡ ವೈಯಾಕರಣರು ಪರಿಗಣಿಸದಿಲ್ಲ. ಭೂಷಣದ ಕೆಳಗಿನ ಮಾತು ಈ ದೃಷ್ಟಿಯಿಂದ ಅವಲೋಕನೀಯ :

> "ಅತ್ರ ಅಸ್ಮಿನ್ ಪ್ರಕರಣೇ ತದ್ಧಿತೇ ಕೃತೇಚ ಲೋಪಾದಿ ಕಾರ್ಯಂ
> ಪದವಿಧಾನಂ ಸಮಾಸವತ್ ದ್ರಷ್ಟವ್ಯಂ–ತಥೈವೋದಾಹೃತಂ (ಸೂತ್ರ 193ರ ವೃತ್ತಿ)

ಹಾಗಿದ್ದೂ ಕೃತ್‌ಪ್ರತ್ಯಯಗಳನ್ನು ಬೆರಳೆತ್ತಿ ತೋರಿಸದಿರಲು ಕಾರಣವೇನೋ ತಿಳಿಯದು.

ಕೃತಿಗೆ ಸಂಬಂಧಿಸಿದಂತೆ ಯಾವುದೇ ಸಂಜ್ಞೆಯನ್ನೂ ಸ್ಮೃತಿ ಬಳಸುವುದಿಲ್ಲವೆಂದೂ ಭೂಷಣ, ದರ್ಪಣಗಳು ಕೃತ್ ಮತ್ತು ಕೃದಂತ—ಈ ಪದಗಳೆರಡನ್ನು ಪ್ರಯೋಗಿಸುತ್ತವೆಂದೂ ಹಿಂದೆ ಹೇಳಲಾಗಿದೆ. 'ಕೃಲ್ಲಿಂಗ' ಎಂಬ ಬಳಕೆ ದರ್ಪಣದ ವೈಶಿಷ್ಟ್ಯ. ಇವೆಲ್ಲ ಸಮಾನಾರ್ಥಕಗಳಾದ ಸಂಜ್ಞೆಗಳೆಂಬುದರಲ್ಲಿ ಎರಡಭಿಪ್ರಾಯವಿಲ್ಲ. ಭೂಷಣ ತನ್ನ ಪದ ಪ್ರಯೋಗಕ್ಕೆ ಯಾವುದೇ ಲಕ್ಷ್ಯವನ್ನೂ ಕೊಡುವುದಿಲ್ಲವಾದ್ದರಿಂದ ಕೃತ್ ಪ್ರತ್ಯಯದ ಸ್ವರೂಪ ಹಾಗೂ ಕಾರ್ಯದ ಬಗ್ಗೆ ಅದರ ದೃಷ್ಟಿಯೇನು ಎಂಬುದನ್ನು ಖಚಿತವಾಗಿ ಹೇಳಲೆಡೆಯಿಲ್ಲ. ದರ್ಪಣದಲ್ಲಿ ಕೃಲ್ಲಿಂಗದ ಸ್ಪಷ್ಟವಾದ ವಿವರಣೆಯಿದೆ.

### ಕೃಲ್ಲಿಂಗ

ನಾಲ್ದೆರನಾದ ಲಿಂಗಗಳಲ್ಲಿ ಕೃಲ್ಲಿಂಗವೂ ಒಂದೆಂದು ದರ್ಪಣ ಹೇಳುತ್ತದೆ. ಅದನ್ನು ರೂಪಿಸಿಕೊಳ್ಳುವ ವಿಧಾನವನ್ನೂ ತಿಳಿಸುತ್ತದೆ (ಸೂತ್ರ 83). ಭೂತ ಮತ್ತು ಭವಿಷ್ಯತ್ಕಾಲದ ಕ್ರಿಯೆಯಿಂದ ಆಖ್ಯಾತ ವಿಭಕ್ತಿಯನ್ನು ಕಳೆಯಲು ಉಳಿಯುವ ರೂಪವೆ ಕೃಲ್ಲಿಂಗ. ವರ್ತಮಾನ ಕ್ರಿಯೆ, ವಿಧಿಕ್ರಿಯೆ, ಮಧ್ಯಮೋತ್ತಮ ಕ್ರಿಯೆ—ಇವುಗಳಿಂದ ಈ ತೆರನಾಗಿ ಕೃಲ್ಲಿಂಗವನ್ನು ರೂಪಿಸಲು ಬಾರದು. ಇದು ದರ್ಪಣದ ನಿರೂಪಣೆಯ ಸಾರಾಂಶ.

ಸಂಸ್ಕೃತ ವ್ಯಾಕರಣಗಳಲ್ಲಿ ಕೃತ್‌ಪ್ರತ್ಯಯದ ಬಗ್ಗೆ ಇರುವ ಕಲ್ಪನೆ ಹಾಗೂ ದರ್ಪಣದ ತದ್ಧಿತಲಿಂಗದ ವಿವರಣೆಯ ಹಿನ್ನೆಲೆಯಲ್ಲಿ ವಿಚಾರಿಸಿದರೆ ಧಾತು ಕೃತ್‌ಪ್ರತ್ಯಯವನ್ನು ಪಡೆದಾಗ ಕೃಲ್ಲಿಂಗವಾಗುವುದೆಂದು ದರ್ಪಣ ಹೇಳಿದರೆ ಚೆನ್ನಾಗಿತ್ತೆಂದು ತೋರು

ತ್ತದೆ. ಆದರೆ ದರ್ಪಣವು ಕೃತ್ ಪ್ರತ್ಯಯಂಗಳನ್ನು ಪ್ರಸ್ತಾವಿಸದೆ ಮೇಲಿನ ವಿಧಾನದಿಂದ ನೇರವಾಗಿ ಕೃಲ್ಲಿಂಗ (ಕೃದಂತ)ವನ್ನು ಹೇಳುತ್ತದೆ.

ಕೃಲ್ಲಿಂಗ ವಿಧಾನವನ್ನು ದರ್ಪಣದಲ್ಲಿ ಹೀಗೆ ಬಿಡಿಸಿ ಹೇಳಲಾಗಿದೆ: "ನಲಿದಂ ಎಂಬಲ್ಲಿ ಅವನ್ ಎಂಬ ವಿಭಕ್ತಿಯಂ ಕಳೆದಂ ನಲಿದ ಎಂದಿರಿಸಿ ವನ್ ಎಂಬ ಪ್ರಥಮಾ ವಿಭಕ್ತಿಯಂ ಪತ್ತಿಸಿ ನಲಿದನೆಂದಂ ಮಾಡಂವುದಂ" (ಸೂತ್ರ 83ರ ಪ್ರಯೋಗ). ಹಾಗಾದರೆ ಇಲ್ಲಿ 'ನಲಿದ' ಎಂಬಂದಂ ಕೃಲ್ಲಿಂಗ ಎಂದಂತಾಯಿತು. ಇಂತಹ ರೂಪಗಳನ್ನು ಮಧ್ಯಮೋತ್ತಮ ಕ್ರಿಯೆಂಗಳಿಂದ ಏಕೆ ಸಾಧಿಸಲಂ ಬರಂವುದಿಲ್ಲವೆಂಬುದಂ ವಿಚಾರಣೀಯಂ. ಅದಕ್ಕೆ ಸಮಾಧಾನ ಹೀಗೆ: ಕರ್ತೃಪದ ಯಾವುದೇ ಪುರಂಷದಲ್ಲಿದ್ದರೂ ಇಂತಹ ಕೃನ್ನಾಮಂಗಳ ಯಾವಾಗಲೂ ಪ್ರಥಮಂ ಪುರಂಷದಲ್ಲೇ ಇರುವುದಂ ಕನ್ನಡದ ಸ್ವಭಾವ:

| | | |
|---|---|---|
| ಆನ್ ನೀನ್ ಅವನ್ | — | ಮಾಡಿದಂ (ಮಾಡಿದವನಂ) |
| ,, ,, ,, | — | ಮಾಡಿದಳ್ (ಮಾಡಿದವಳಂ) |
| ಆವಮ್ ನೀವಮ್ ಅವರ್ | — | ಮಾಡಿದರ್ (ಮಾಡಿದವರು) |

ಬಹಂಶಃ ಕನ್ನಡ ಭಾಷೆಯಂ ಈ ತತ್ವವು ಹೊಳೆದದ್ದರಿಂದಲೇ ದರ್ಪಣವು ಮಧ್ಯಮೋತ್ತಮಕ್ರಿಯೆಂಗಳಿಂದ ಕೃಲ್ಲಿಂಗ ನಿರ್ಮಾಣವನ್ನು ನಿಷೇಧಿಸಿರಬೇಕು (ನೋ: ರತ್ನ ಮಂಜೂಷ: ಪು. 148-149).

ದರ್ಪಣದಲ್ಲಿ ಹೇಳಂವ ಕೃಲ್ಲಿಂಗಗಳನ್ನು ಪರಾಂಬರಿಸಿದರೆ ಧಾತುವಿಗೆ 'ದ,ವ, ಉದಂ' ಎಂಬ ಪ್ರತ್ಯಯಂಗಳಂ ಸೇರಿದರೆ ಕೃಲ್ಲಿಂಗ ರೂಪ ಸಿದ್ಧವಾಗುವುದೆಂದಂ ನಿರ್ಣಯಿಸಬೇಕಾಗುತ್ತದೆ. ಆಗ, 'ದ, ವ, ಉದಂ'ಗಳಂ ಕೃಲ್ಲಿಂಗವನ್ನು ನಿರ್ಮಿಸಂವ ಪ್ರತ್ಯಯಗಳೆನಿಸಂತ್ತವೆ.

ಕೃತ್ ಮತ್ತು ಕೃದಂತ ದರ್ಪಣಕಾರನ ದೃಷ್ಟಿಯಂಲ್ಲಿ ಒಂದೇ ಸರಿ. ಸೂತ್ರದಲ್ಲಿ ಕೃದಂತವೆಂದಂ ಹೇಳಿ ವೃತ್ತಿಯಲ್ಲಿ ಕೃತ್ ಎಂಬುದಾಗಿ ದರ್ಪಣದಲ್ಲಿ ಪ್ರಯೋಗಿಸಿದ್ದುಂಟು (ಸೂ. 181 ಮತ್ತದರ ವೃತ್ತಿ). ಕೃತ್ ಮತ್ತು ಕೃಲ್ಲಿಂಗ—ಇವೆರಡೂ ಒಂದೇ ಎಂಬುದಕ್ಕೆ ದರ್ಪಣದ ಈ ಪ್ರಯೋಗಗಳಂ ಸಾಕ್ಷಿ ನಂಡಿಯಂತ್ತವೆ:

| | | |
|---|---|---|
| ಕೃಲ್ಲಿಂಗ | : | ನಲಿದಂ, ಬೇಡುವಂ (ಸೂ. 83ರ ಪ್ರಯೋಗ) |
| ಕೃತ್, ಕೃತ್ತು | : | ಪಾಡಿದಂ, ಪಾಡಿದುಂದಂ (ಸೂ. 99ರ ಪ್ರಯೋಗ)<br>ನಂಡಿದರ್, ಬೇಡಿದರ್ (ಸೂ. 109ರ ಪ್ರಯೋಗ)<br>ಮಾಡಿದುಂದಱಿಂ (ಸೂ. 120ರ ಪ್ರಯೋಗ)<br>ಪಾಡುವ ತುಂಬಿ, ಕೋಡುವ ಪುಟ್ಟಿಲ್ (ಸೂ. 179ರ ಪ್ರಯೋಗ)<br>ಎತ್ತುಂಗೋಲ್ (ಸೂ. 181ರ ಪ್ರಯೋಗ) |

ಇದರಿಂದ ದ, ವ, ಉದುಗಳನ್ನು ಕೃತ್‌ಪ್ರತ್ಯಯಂಗಳೆಂದು ಹೇಳಿದಂತಾಗುತ್ತದೆ. ಕೃತ್ ಪ್ರತ್ಯಯಗಳು ಅಂತವಾಗುಳ್ಳ ಪ್ರಕೃತಿಗಳಿಗೆ ಕೃತ್, ಕೃದಂತ ಯಾ ಕೃಲ್ಲಿಂಗವೆಂದು ಸಂಜ್ಞೆ ಯೆಂಬುದೂ ಖಚಿತವಾಗುತ್ತದೆ. ಹಳೆಗನ್ನಡ ವೈಯಾಕರಣರು ಹೇಳುವ ವರ್ತಮಾನ ಸೂಚಕ ವಿಕರಣವಾದ 'ದಪ' ಭೂತಭವಿಷ್ಯತ್ ಸೂಚಕಗಳಾದ 'ದ, ವ'ಗಳಂತೆ ಮೂಲ ಭೂತವಾಗಿ ಕೃತ್‌ಪ್ರತ್ಯಯವಲ್ಲ. ಹೆಚ್ಚೇಕೆ, ಆಧುನಿಕ ವಿದ್ವಾಂಸರು 'ದಪ' ಎಂಬ ವಿಕರ ಣದ ಅಸ್ತಿತ್ವವನ್ನೇ ನಿರಾಕರಿಸುತ್ತಾರೆ (ಕ. ಭಾ. ಚ. ಪು. 425). ಈ ಕಾರಣದಿಂದಲೇ ವರ್ತಮಾನ ಕ್ರಿಯೆಯಿಂದ ಕೃಲ್ಲಿಂಗದ ಸಿದ್ಧಿಯನ್ನು ನಿಷೇಧಿಸಿರಬೇಕು. ವಿಧಿಕ್ರಿಯೆಯಲ್ಲಿ ಧಾತು ಮತ್ತು ಆಖ್ಯಾತ ವಿಭಕ್ತಿಯ ನಡುವೆ ಕಾಲಸೂಚಕವಿಕರಣ (ಕೃತ್‌ಪ್ರತ್ಯಯ) ಬಾರದಿರುವುದರಿಂದ ವಿಧಿ ಕ್ರಿಯೆಯಿಂದ ಕೃಲ್ಲಿಂಗ ಸಿದ್ಧಿಸದೆಂದು ಹೇಳಿರಬೇಕು. ಒಟ್ಟಿನಲ್ಲಿ ದರ್ಪಣ ಹೇಳುವಂತೆ 'ದ, ವ, ಉದು' ಎಂಬಿವು ಮಾತ್ರ ಕೃಲ್ಲಿಂಗ ಸಾಧಕ ಪ್ರತ್ಯಯಂಗಳು (ಕೃತ್ ಪ್ರತ್ಯಯಂಗಳು).

**ಕೃತ್ಪ್ರವಿಷ್ಟಲಿಂಗ :** 'ಕೃತ್ಪ್ರವಿಷ್ಟಲಿಂಗ'ವೆಂಬ ಪ್ರಯೋಗ ದರ್ಪಣದಲ್ಲಿ ಮಾತ್ರ ಕಾಣಸಿಕೊಳ್ಳುತ್ತದೆ. ಸಮಾಸಲಿಂಗದ ಪರಿಚಯ ಕೊಡುವಲ್ಲಿ 'ಆದವಿಷ್ಣು ಎಂಬ ಗಮಕ ಸಮಾಸಮುಂ ; ಪಿರಿದೀವನೆಂಬ ಕ್ರಿಯಾಸಮಾಸಮುಂ ಕೃತ್ಪ್ರವಿಷ್ಟಲಿಂಗಗಳ್ ; ಇವುಮವ ಱಂತೆ ಸಲ್ವುವು' (ಸೂತ್ರ 82ರ ಪ್ರಯೋಗ ವಿವರಣೆ) ಎಂಬ ವಿವರಣೆ ಬರುತ್ತದೆ. ಕೃತ್ಪ್ರ ವಿಷ್ಟಲಿಂಗವೆಂದರೆ 'ಕೃತ್‌ನಲ್ಲಿ ನಿಯೋಜಿತವಾದ ಲಿಂಗ' ಅಥವಾ 'ಕೃತ್‌ನಿಂದ ನಿರ್ಮಿಸಿದ ಲಿಂಗ' (ಶ್ರೀಕಂಠತೀರ್ಥ : ಪು. 560) ಎಂದು ಅರ್ಥಯಿಸಬಹುದು. ಕೊಟ್ಟಿರುವ ಎರಡು ಪ್ರಯೋಗಗಳನ್ನು ಪರಾಂಬರಿಸಿದರೆ ಮೊದಲನೆಯದರಲ್ಲಿ ಪೂರ್ವಪದವೂ (ಆದ+ವಿಷ್ಣು) ಮತ್ತಿನದರಲ್ಲಿ ಉತ್ತರಪದವೂ (ಪಿರಿದು+ಈವನ್) ಕೃಲ್ಲಿಂಗವಾಗಿರುವುದು ಸ್ಪಷ್ಟ. ದರ್ಪಣಕಾರ ಕೃಲ್ಲಿಂಗ ಮತ್ತು ಕೃತ್ಪ್ರವಿಷ್ಟಲಿಂಗದಲ್ಲಿ ಸ್ಪಷ್ಟವಾದ ಅಂತರವನ್ನು ಕಲ್ಪಿಸಿ ಕೊಂಡಿದ್ದಾನೆ. ಆತನ ದೃಷ್ಟಿಯಲ್ಲಿ ಕೃಲ್ಲಿಂಗದೊಡನೆ ಸಮಾಸಗೊಂಡರೆ ಅದು ಕೃತ್ಪ್ರವಿಷ್ಟ ಲಿಂಗ. ಗಮಕ ಸಮಾಸದಲ್ಲಿ ಪೂರ್ವಪದವೂ ಕ್ರಿಯಾ ಸಮಾಸದಲ್ಲಿ ಉತ್ತರಪದವೂ ಕೃದಂತವಾಗಿರಲೆಡೆಯಿದೆ. ಹಾಗೆ ಸಮಾಸಗೊಂಡ ಪದವೆ ಕೃತ್ಪ್ರವಿಷ್ಟಲಿಂಗ. ಕೃದಂತಕ್ಕಿಂತ ಹೊರತಾದ ಪದವೊಂದು ಪೂರ್ವಪದವಾಗಿರುವ ಗಮಕಸಮಾಸವಾಗಲಿ ಉತ್ತರಪದ ವಾಗಿರುವ ಕ್ರಿಯಾಸಮಾಸವಾಗಲಿ ಕೃತ್ಪ್ರವಿಷ್ಟಲಿಂಗವಾಗಲಾರವು. ಕೃತ್ ಪೂರ್ವಪದ ವಾಗಿರುವ ಕರ್ಮಧಾರಯವೂ (ಸುಡುಗಾಡು ಇತ್ಯಾದಿ) ಕೃತ್ಪ್ರವಿಷ್ಟಲಿಂಗವಾಗಲಾರದು. ಬಹುಶಃ ಸಮಸ್ತಪದವಾಗುವಲ್ಲಿ ಅಂತಹ ಸಮಾಸಗಳ ಪೂರ್ವಪದದ ಕೊನೆಗಿರುವ ಕೃತ್ಪ್ರ ತ್ಯಯ ಲೋಪಗೊಳ್ಳುವುದೆ ಇದಕ್ಕೆ ಕಾರಣವಾಗಿರಬೇಕು (ಸುಡುವ+ಕಾಡು=ಸುಡು ಗಾಡು).

ಕೃಲ್ಲಿಂಗವು ತನ್ನ ನಿಜಸ್ವರೂಪದಲ್ಲಿ ಸಮಸ್ತ ಪದಗಳಲ್ಲಿ ಗೋಚರಿಸುವುದು ಕನ್ನಡ ಸಮಾಸಗಳಲ್ಲಿ (ಗಮಕ ಮತ್ತು ಕ್ರಿಯಾ) ಮಾತ್ರ. ಹಾಗೆ ಕನ್ನಡ ಸಮಾಸಗಳ ಬಗ್ಗೆ

ದರ್ಪಣಕಾರನಿಗಿರುವ ಧೋರಣೆ ಕೃತ್ಪ್ರವಿಷ್ಟಲಿಂಗವೆಂಬ ಪ್ರತ್ಯೇಕ ಸಂಜ್ಞೆಯಿಂದ ವ್ಯಕ್ತವಾಗುತ್ತದೆ. ಗವಂಕಸಪವಾಸದಂತೆ ಈ ಸಂಜ್ಞೆಯುೂ ಆತನ ಸಂಶೋಧನೆಯ ಫಲವಾಗಿದೆ.

## ಕೃತ್ಪ್ರತ್ಯಯಂಗಳು

ಸಂಸ್ಕೃತ ವ್ಯಾಕರಣಗಳು ಹೇಳುವ ಕೃತ್ ಪ್ರತ್ಯಯಂಗಳ ಕಾರ್ಯಸ್ವಭಾವಗಳ ಹಿನ್ನೆಲೆಯಲ್ಲಿ ವಿಚಾರಿಸಿದರೆ ಕನ್ನಡ ವ್ಯಾಕರಣಗಳ ತದ್ಧಿತ ಪ್ರಕರಣಗಳಲ್ಲಿ ಹೇಳಿರುವ ಕೆಲವು ಪ್ರತ್ಯಯಂಗಳನ್ನು ಕೃತ್ಪ್ರತ್ಯಯಂಗಳೆನ್ನಬೇಕಾಗುತ್ತದೆ. ಕಾರಣ, ಅವು ಧಾತುಗಳಿಗೆ ಸೇರಿ ನಾಮಂಗಳನ್ನು ಸಾಧಿಸುತ್ತವೆ (ಪೀಠಿಕೆಗಳು–ಲೇಖನಗಳು : ಪು. 791). ಅಂತಹ ಒಂದು ಪ್ರತ್ಯಯ ಸ್ಮೃತಿಯಲ್ಲಿಯೂ ('ಕೆ'-ಸೂತ್ರ 77) ನಾಲ್ಕು ಪ್ರತ್ಯಯಗಳು ಭೂಷಣದಲ್ಲಿಯೂ (ಕೆ, ಉ. ವು, ಅ–ಸೂತ್ರ 178, 179, 180) ನಿರೂಪಿತವಾಗಿದ್ದರೆ ದರ್ಪಣದಲ್ಲಿ ಈ ಪ್ರತ್ಯಯಂಗಳೂ ಸೇರಿದಂತೆ ಒಟ್ಟು 16 ಪ್ರತ್ಯಯಂಗಳನ್ನು ವಿವರಿಸಲಾಗಿದೆ (221, 222, 223, 224) :

| ಪ್ರತ್ಯಯ | ಪ್ರಯೋಗ |
|---|---|
| ಕೆ | ನಿಮಿರ್ಕೆ, ಕಾಣ್ಕೆ |
| ಉ | ಉರ್ಕು, ಉಗ್ಗು |
| ವು | ಕೂರ್ಪು, ಒಲ್ಮೆ |
| ಅ | ಸೋಲ, ಬೇಟ |
| ಅವಿ | ಅಳವಿ, ಬಳವಿ |
| ಅವು | ನಿಲವು, ಒಲವು |
| ಇವು | ಉೞಿವು, ಕೞಿವು |
| ಅವೆ | ಮಱವೆ, ತೆಱವೆ |
| ತ | ಅೞಿತ. ಕಡಿತ |
| ತೆ | ನೆಗೞ್ತೆ, ಪುಗುಂತೆ |
| ಉಮೆ | ತಕ್ಕುಮೆ |
| ಅಮೆ | ತೀರಮೆ, ಅೞ್ಕಮೆ |
| ಗೆ | ಉಡುಗೆ, ಪಸುಗೆ |
| ಪು | ಪಡೆಪು |
| ಪಿ | ಕಲ್ಪಿ, ನೋಂಪಿ |
| ಕ | ಉಡುಂಕ, ನಡುಂಕ |

ಸ್ಮೃತಿ ಭೂಷಣಗಳಲ್ಲಿ ಕೊಟ್ಟಿರುವ ಪ್ರಯೋಗಗಳಿಂದ ತನ, ಇಕೆ, ಇಕ್ಕೆ. ಪುಗಳನ್ನು ತದ್ಧಿತ ಪ್ರತ್ಯಯವೆಂದೇ ಹೇಳಬೇಕಾಗುತ್ತದೆ :

| ಪ್ರತ್ಯಯ | ಪ್ರಯೋಗ |
|---|---|
| ತನ | ಕಲಿತನ |
| ಇಕೆ | ಮಾನಸಿಕೆ |
| ಪು | ಗುಣ್ಪು, ತಿಣ್ಪು |

ತನ ಹಾಗೂ ಇಕೆ–ಇಕ್ಕೆಗಳ ವಿಚಾರ ದರ್ಪಣದಲ್ಲಿಯೂ ಹಾಗೆಯೇ ಇದೆ. ಆದರೆ ಇಕೆ ಕೃತ್‌ಪ್ರತ್ಯಯವಾಗಿ ಪ್ರಯೋಗವಾಗುವುದುಂಟು. ಉದಾ : ಕೂಡಿಕೆ, ಒಂದಿಕೆ.

ಕ್ರಿಯಾರ್ಥಕಗಳಾದ ಧಾತುವಿಗೆ ಬರುವ ಪ್ರತ್ಯಯವಾಗಿ 'ಅ'ವನ್ನೂ ಭೂಷಣ ಹೇಳಿದೆ (ಸೂತ್ರ 180). ಭಾವಾರ್ಥದಲ್ಲಿ ಧಾತುಗಳು ಹೊಂದುವ ಬದಲಾವಣೆಯನ್ನು ದರ್ಪಣ ತಿಳಿಸುತ್ತದೆ (ಸೂ. 224).

ಧಾತುವಿನ ಮೊದಲ ಇಕಾರಕ್ಕೆ ಏಕಾರ–ಕಿಡು = ಕೇಡು ; ಇಸ = ಏಸು
,, ,, ಉಕಾರಕ್ಕೆ ಓಕಾರ–ಕುಡು = ಕೋಡು, ತುಡು = ತೋಡು
,, ಆದಿಗೆ ದೀರ್ಘ –ಇಡು = ಈಡು ; ಬಿಡು = ಬೀಡು

ಹೀಗೆ ಧಾತುಗಳು ಬೇರೆ ಬೇರೆ ಪ್ರತ್ಯಯಗಳನ್ನು ಹೊಂದಿ ನಾಮಗಳಾಗುವುದನ್ನು ಕನ್ನಡ ವ್ಯಾಕರಣಗಳು ಹೇಳುತ್ತವೆ. ಎಂದರೆ ಈ ಪ್ರತ್ಯಯಗಳು ಸೇರಿದಾಗ ಧಾತುಗಳು ಕೃಲ್ಲಿಂಗ ಯಾ ಕೃದಂತವಾಗುತ್ತವೆ ಎಂದು ಭಾವಿಸಬೇಕಾಗುತ್ತದೆ. ಆದರೆ ದರ್ಪಣ ಅಪ್ಪಿ ತಪ್ಪಿಯೂ ಅವುಗಳನ್ನು ಕೃಲ್ಲಿಂಗವೆನ್ನುವುದಿಲ್ಲ. ಇದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ.

ಸ್ವಭಾವದ ದೃಷ್ಟಿಯಿಂದ ಕೃತ್ಪ್ರತ್ಯಯಗಳಾಗಿ ತೋರುವ ಮೇಲಿನ ಪ್ರತ್ಯಯಗಳಲ್ಲಿ ಕೆಲವು ನಾಮಗಳಿಗೂ ಹತ್ತುತ್ತವೆ. ನಾಮ ಹಾಗೂ ಗುಣವಾಚಕಗಳಿಗೆ ಹತ್ತುವವುಗಳು ತದ್ಧಿತಗಳಷ್ಟೆ.

| ಪ್ರತ್ಯಯ | ಪ್ರಯೋಗ |
|---|---|
| ಕೆ | ಜಾಣ್ಕೆ |
| ಮೆ | ಪೆರ್ಮೆ, ಜಾಣ್ಮೆ |
| ಪು | ಕರ್ಪು, ಪಸುರ್ಪು |

ಇನ್ನೂ ಒಂದು ವಿಚಾರವಿಲ್ಲಿ ಗಮನಾರ್ಹವಿದೆ. ಕನ್ನಡದಲ್ಲಿ ಎಷ್ಟೋ ಧಾತುಗಳು ಒಂದೇ ರೂಪದಲ್ಲಿ ಕ್ರಿಯಾರ್ಥ ಮತ್ತು ನಾಮಾರ್ಥ ಇವೆರಡನ್ನೂ ಕೊಡುತ್ತವೆ ;

| ಧಾತು | ಕ್ರಿಯಾರ್ಥ | ನಾಮಾರ್ಥ |
|---|---|---|
| ಬಾಳ್ | ಜೀವಿಸು | ಜೀವನ |
| ಬೆಳೆ | ವೃದ್ಧಿಯಾಗು | ವೃದ್ಧಿ |

| | | |
|---|---|---|
| ನುಡಿ | ಹೇಳು | ಮಾತು |
| ತಡೆ | ತಡೆಯು | ಅಡ್ಡಿ |

ದರ್ಪಣವೂ ಕೆಲವು ಧಾತುಗಳು ತಮ್ಮ ನಿಜಸ್ವರೂಪದಲ್ಲಿ ಭಾವನಾಮವಾಗುವುದನ್ನು ಗುರುತಿಸಿದೆ (ಸೂತ್ರ 224) :

ತಡೆ, ನಡೆ, ಸೊರ್ಕು, ದಾಂಟು....ಇತ್ಯಾದಿ. ಹೀಗೆ ಇಬ್ಬಗೆಯ ಕೆಲಸವನ್ನು ಮಾಡುವ ಸ್ವಭಾವ ಕನ್ನಡ ಧಾತುಗಳದಾಗಿರುವುದರಿಂದ ಅಂತಹ ಧಾತುಗಳಿಗೆ ಸೇರುವ ಶಬ್ದಸಾಧಕ ಪ್ರತ್ಯಯಗಳನ್ನು ಎರಡು ಗುಂಪಾಗಿ ವರ್ಗೀಕರಿಸುವ ಅಗತ್ಯ ಪ್ರಾಚೀನ ಕನ್ನಡ ವೈಯಾಕರಣರಿಗೆ ತೋರಿರಲಾರದು. ಹಾಗಾಗಿ ದ, ವ, ಉದು ಪ್ರತ್ಯಯ ಗಳನ್ನು ಕೃತ್‌ಪ್ರತ್ಯಯಗಳಾಗಿಟ್ಟುಕೊಂಡು (ಅವುಗಳನ್ನು ಈ ಹೆಸರಿನಿಂದ ಕರೆದಿಲ್ಲ) ಉಳಿದವುಗಳನ್ನೆಲ್ಲ ತದ್ಧಿತ ಪ್ರತ್ಯಯಗಳೆಂದು ಪರಿಗಣಿಸಿದ್ದಿರಬೇಕು. ದ ಹಾಗೂ ವ ಸೇರಿದಾಗ ಧಾತುಗಳು ನಾಮಗಳಾಗದೆ ವಿಶೇಷಣಗಳಾಗುತ್ತವೆ. ಉದು ಮಾತ್ರ ಭಾವಾರ್ಥದಲ್ಲಿಯೂ ಬರುತ್ತದೆ. ಆದರೆ ಉಳಿದ ಹೆಚ್ಚಿನ ಕೃತ್ ಪ್ರತ್ಯಯಗಳು ಧಾತುವಿಗೆ ಸೇರಿದಾಗ ಭಾವನಾಮಗಳಾಗುತ್ತವೆ. ಈ ಅಂತರವೂ ಗಮನಾರ್ಹ. ದ, ವ, ಉದುಗಳನ್ನು ಆಖ್ಯಾತ ಪ್ರಕರಣದಲ್ಲಿ ಹೇಳುವುದರಿಂದ ಕೃತ್‌ಪ್ರತ್ಯಯಗಳ ನಿರೂಪಣೆಗೆ ಪ್ರತ್ಯೇಕವಾದ ಪ್ರಕರಣ ಕನ್ನಡ ವೈಯಾಕರಣರಿಗೆ ಅಗತ್ಯವೆನಿಸಲಿಲ್ಲ.

ನ್ಯೂನ ಕ್ರಿಯೆಗಳನ್ನು ಹೇಳುವಲ್ಲಿ ಧಾತುವಿಗೆ ಸೇರುವ ಪ್ರತ್ಯಯಗಳನ್ನು ಸಂಸ್ಕೃತ ವ್ಯಾಕರಣಗಳು ಕೃತ್ಪ್ರತ್ಯಯಗಳೆಂದು ಹೇಳುತ್ತವೆ. ಆದರೆ ಕನ್ನಡ ವ್ಯಾಕರಣಗಳು ಆ ಸಂಜ್ಞೆಯನ್ನು ವಿಧಿಸದೆ ಅಂತಹ ಪ್ರತ್ಯಯಗಳನ್ನು ಆಖ್ಯಾತ ಪ್ರಕರಣಗಳಲ್ಲಿ ನಿರೂಪಿಸುತ್ತವೆ. ಕನ್ನಡ ವ್ಯಾಕರಣಗಳಲ್ಲಿ ಕಂಡುಬರುವಂತೆ ದು, ಇ. ಉತುಂ, ಉತ್ತುಂ, ಉತೆ, ಉತ್ತೆ, ಅಲ್, ಅಲ್ಕೆ, ಒಡೆ ಮೊದಲಾದವುಗಳು ಅಂತಹ ಪ್ರತ್ಯಯಗಳು. ಇವು ಸೇರಿದ ಧಾತುಗಳು ಅವ್ಯಯಗಳಾಗಿ ಮಾರ್ಪಡುವುದರಿಂದ ಅವುಗಳನ್ನು ಕೃದಂತಾವ್ಯಯಗಳೆಂದು ಆಧುನಿಕ ಕನ್ನಡ ವೈಯಾಕರಣರು ಹೇಳುತ್ತಾರೆ (ಕ. ಶ. ಪ್ರ : ಪು.61).

ಒಟ್ಟಿನಲ್ಲಿ ಕೃತ್‌ಪ್ರತ್ಯಯಗಳ ಬಗ್ಗೆ ಸ್ಮೃತಿ, ಭೂಷಣ, ದರ್ಪಣಗಳ ಅಭಿಪ್ರಾಯವನ್ನು ಹೀಗೆ ಸಂಕ್ಷೇಪಿಸಬಹುದು–

1. ಕೃತ್ ಪ್ರತ್ಯಯಗಳ ಕುರಿತು ಕನ್ನಡ ವ್ಯಾಕರಣಗಳ ದೃಷ್ಟಿ ಸಂಸ್ಕೃತ ವ್ಯಾಕರಣಗಳಿಗಿಂತ ಭಿನ್ನವಾಗಿದೆ. ಹಾಗಾಗಿ ಕೃತ್‌ಪ್ರತ್ಯಯಗಳೆಂಬ ಪ್ರಯೋಗವೇ ಕನ್ನಡ ವ್ಯಾಕರಣಗಳಲ್ಲಿಲ್ಲ.

2. ನಿರೂಪಣೆಯ ಧಾಟಿಯನ್ನು ನೋಡಿದರೆ 'ದ, ವ, ಉದು'ಗಳನ್ನು ಕನ್ನಡದ ಕೃತ್ ಪ್ರತ್ಯಯಗಳಾಗಿ ಪ್ರಾಚೀನ ವ್ಯಾಕರಣಗಳು ತಿಳಿದಂತೆ ಭಾಸವಾಗುತ್ತದೆ.

3. ದ, ವ, ಉದು ಎಂಬ ಪ್ರತ್ಯಯಂಗಳುಂ ಉಳಿದ ಪ್ರತ್ಯಯಂಗಳಂತೆ ನಾಮಂಗಳಿಗೆ ಹತ್ತುವುದಿಲ್ಲ. ಆದಕ್ಕಾಗಿಯೇ ಇವುಗಳನ್ನು ಪ್ರತ್ಯೇಕವಾಗಿ ಪರಿಗಣಿಸಲಾಗಿದೆ.

ಕನ್ನಡ ವ್ಯಾಕರಣಗಳಲ್ಲಿ ಕೊಟ್ಟಿರುವ ಕೃತ್ ಹಾಗೂ ತದ್ಧಿತ ಪ್ರತ್ಯಯಗಳ ಸಂಖ್ಯೆ ಅಲ್ಲಿಗೇ ಮುಗಿಯುವುದಿಲ್ಲ. ದರ್ಪಣದಲ್ಲಿ ಹೇಳಿರುವ "ಎಂಕ್ಕ ತದ್ಧಿತ ಪ್ರತ್ಯಯಂಮಂ ಅನ್ವಿತರ್ ಅಱಿವುದಂ" ಎಂಬೀ ಮಾತು ತದ್ಧಿತದಂತೆ ಕೃತ್ಪ್ರತ್ಯಯಂಗಳಿಗೂ ಅನ್ವಯವಾಗುತ್ತದೆ.

ಅಡಿಟಿಪ್ಪಣಿ

1. ನೋ: ಪ್ರಾ.ಕ.ವ್ಯಾ. ಪು. 186 "ಭಟ್ಟಾಕಳಂಕನು ಮಾತ್ರ ಪಾಣಿನಿ ಮುಂತಾದ ಸಂಸ್ಕೃತ ವ್ಯಾಕರಣಕಾರರ ಪದ್ಧತಿಯನ್ನನುಸರಿಸಿ 'ಸ್ತ್ರೀಪ್ರತ್ಯಯಗಳು' ಎಂಬ ಪ್ರತ್ಯೇಕ ಪ್ರಕರಣವನ್ನು ಕಲ್ಪಿಸಿಕೊಂಡು ಅವುಗಳನ್ನು ಬೋಧಿಸಿದ್ದಾನೆ (2 : 190–202).

# ಅಧ್ಯಾಯ 12

## ಅವ್ಯಯ

ನಾಮ ಮತ್ತು ಆಖ್ಯಾತಗಳು ಲಿಂಗ, ವಚನ ಮತ್ತು ವಿಭಕ್ತಿಗಳಿಗನುಸರಿಸಿ ರೂಪ ಭೇದಗಳನ್ನೂ ಹೊಂದುವುದರಿಂದ ವಿಕಾರಿಗಳೆನಿಸಿವೆ (Declinables). ಉಪಸರ್ಗ ನಿಪಾತಗಳು ಹಾಗೆ ರೂಪಭೇದಗಳನ್ನು ಹೊಂದದಿರುವುದರಿಂದ ಅವಿಕಾರಿಗಳಾಗಿವೆ (Indeclinables). 'ಅವಿಕಾರಿ' ಎಂಬರ್ಥದಲ್ಲಿ ಹೆಚ್ಚಿನ ಸಂಸ್ಕೃತ ವ್ಯಾಕರಣಗಳು 'ಅವ್ಯಯ' ಎಂಬ ಸಂಜ್ಞೆಯನ್ನು ಬಳಸಿವೆ. ''ಅವ್ಯಯಗಳಲ್ಲಿ ಉಪಸರ್ಗ (Preposition), ಕ್ರಿಯಾವಿಶೇಷಣ (Adverb), ಮಾರಕ ಪ್ರತ್ಯಯಗಳು (Particle), ಸಮುಚ್ಚಯ (Conjunction) ಮತ್ತು ನಿಪಾತ (Interjection) ಗಳೆಂದು ಐದು ಬಗೆಗಳನ್ನು (ಪ್ರಾ. ಕ. ವ್ಯಾ. ಪು. 214-15) ಹೇಳುತ್ತಾರೆ. ಅಷ್ಟಾಧ್ಯಾಯಿಯಲ್ಲಿ ಈ ಎಲ್ಲ ಅವ್ಯಯುಗಳನ್ನು 'ನಿಪಾತ' ಎಂಬ ವರ್ಗದಲ್ಲಿ ಸಮಾವೇಶಗೊಳಿಸಲಾಗಿದೆ (ಸೂ. 1-4-56 ರಿಂದ 1-4-97). ಆದರೂ ಸಾಮಾನ್ಯವಾಗಿ ಉಪಸರ್ಗ ಮತ್ತು ನಿಪಾತ ಎಂಬೆರಡು ವರ್ಗಗಳು ಹೆಚ್ಚು ಬಳಕೆಯಲ್ಲಿ ಬಂದಿವೆ. ಉಪಸರ್ಗಗಳೆಂದರೆ ''ಧಾತುಗಳ ಪೂರ್ವದಲ್ಲಿ ಸೇರಿ ಆ ಧಾತುಗಳಲ್ಲಿರುವ ಅರ್ಥವಿಶೇಷವನ್ನು ಪ್ರಕಾಶ ಮಾಡುವ ಕೆಲವು ಅವ್ಯಯಗಳು (ಕ. ಶ. ಪ್ರ. ಪು. 58). ಭಾಷೆಯಲ್ಲಿರುವ ಈ ಉಪಸರ್ಗಗಳನ್ನು ಕಳೆದರೆ ಉಳಿಯುವ ಅವ್ಯಯ ಪ್ರಕೃತಿಕಗಳಾದ ಶಬ್ದಗಳೆ ನಿಪಾತಗಳು. ''ನಾಮಪದಗಳಿಗೂ ಆಖ್ಯಾತ ಪದಗಳಿಗೂ ವಾಚಕತ್ವವಿರುವುದು, ಉಪಸರ್ಗಗಳಿಗೆ ದ್ಯೋತಕತ್ವವಿರುವುದು. ನಿಪಾತ ಪದಗಳಲ್ಲಿ ಕೆಲವಕ್ಕೆ ದ್ಯೋತಕವೂ ಕೆಲವಕ್ಕೆ ವಾಚಕತ್ವವೂ ಕೆಲವಕ್ಕೆ ನಿರರ್ಥಕತ್ವವೂ ಇರುವುದು'' (ಅದೇ : ಪು. 58, 59).

'ಉಪಸರ್ಗ' ಹಾಗೂ 'ನಿಪಾತ' ಎಂಬ ಸಂಜ್ಞೆಗಳು ಗೋಪಥ ಬ್ರಾಹ್ಮಣದಲ್ಲಿ ಉಕ್ತವಾಗಿವೆ. ಯಾಸ್ಕನು ಹೇಳುವ ನಾಲ್ಕು ವಿಧವಾದ ಪದಜಾತಿಯನ್ನು (ನಿರುಕ್ತ : 1-1) ಋಗ್ವೇದ ಪ್ರಾತಿಶಾಖ್ಯವೂ ಹೇಳುತ್ತದೆ (12-17). ಅಷ್ಟಾಧ್ಯಾಯಿ, ಕಾತಂತ್ರ, ಮೊದಲಾದ ವ್ಯಾಕರಣಗಳು 'ಅವ್ಯಯ'ವನ್ನು ಪಾರಿಭಾಷಿಕ ಪದವಾಗಿ ಬಳಸಿವೆ. ಜೈನೇಂದ್ರವು ಅವ್ಯಯವನ್ನು 'ಪ್ರ' ಎಂದು ಹೇಳಿದರೆ ಕಾತಂತ್ರ 'ಅಸಂಖ್ಯ' ವೆಂದೂ ಹೇಳುತ್ತದೆ. ಹೆಚ್ಚಿನ ಸಂಸ್ಕೃತ ವ್ಯಾಕರಣಗಳು 'ನಿಪಾತ'ವನ್ನು ಸಂಜ್ಞೆಯಾಗಿ ಬಳಸಿಕೊಳ್ಳುತ್ತವೆ.

ಕನ್ನಡ ಭಾಷೆಯಲ್ಲಿ ಉಪಸರ್ಗಗಳಿಲ್ಲದಿರುವುದರಿಂದ ಕನ್ನಡ ವ್ಯಾಕರಣಗಳಲ್ಲಿ 'ಉಪಸರ್ಗ' ಎಂಬ ಪದದ ಬಳಕೆಗೆ ಅವಕಾಶ ದೊರಕಿಲ್ಲ. ಸ್ಮೃತಿಯಲ್ಲಿ 'ನಿಪಾತ' ಮಾತ್ರ ಬಳಕೆಗೊಂಡರೆ ಭೂಷಣ ದರ್ಪಣಗಳಲ್ಲಿ ನಿಪಾತ, ಅವ್ಯಯ – ಈ ಎರಡು ಸಂಜ್ಞೆಗಳೂ ಪ್ರಯುಕ್ತವಾಗಿವೆ. ಸ್ಮೃತಿ ಅವ್ಯಯವನ್ನು ಹೇಳಿಲ್ಲವಾದರೂ 'ಅವ್ಯಯೀ ಭಾವ' ಸಮಾಸವನ್ನು ಹೇಳಿರುವುದು ಗಮನಾರ್ಹ.

ಹೆಚ್ಚಾಗಿ ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ನಿಪಾತಗಳೂ ಸೇರಿದಂತೆ ಅವ್ಯಯಗಳೆಲ್ಲವನ್ನೂ ಪ್ರತ್ಯೇಕವಾದ ಅಧ್ಯಾಯದಲ್ಲಿ ನಿರೂಪಿಸುವುದು ಕ್ರಮ. ರೂಪಾವತಾರದ 'ಅವ್ಯಯಾವತಾರ' ರೂಪಮಾಲೆಯ 'ಅವ್ಯಯಮಾಲಾ', ಸಾರಸ್ವತ ಪ್ರಕ್ರಿಯೆಯ 'ಅವ್ಯಯಾನಿ' ಈ ಪ್ರಕರಣಗಳು ಅವ್ಯಯಗಳ ವಿವರಣೆಗೆ ಮೀಸಲಾಗಿದೆ.

ಕನ್ನಡ ವ್ಯಾಕರಣಗಳಲ್ಲಿ ಭೂಷಣ ಮಾತ್ರ ನಿಪಾತ ಮತ್ತು ಉಳಿದ ಅವ್ಯಯ ಗಳನ್ನು ಎರಡು ಭಿನ್ನ ಅಧ್ಯಾಯಗಳಲ್ಲಿ (ಅವ್ಯಯ ವಿಧಾನ ಮತ್ತು ನಿಪಾತ ವಿಧಾನ) ನಿರೂಪಿಸುತ್ತದೆ. ದರ್ಪಣವು 'ಅವ್ಯಯ', 'ನಿಪಾತ' ಎಂಬ ವರ್ಗೀಕರಣವಿಲ್ಲದೆ ಎಲ್ಲ ಅವ್ಯಯಗಳನ್ನು 'ಅವ್ಯಯ ಪ್ರಕರಣ'ವೊಂದರಲ್ಲೇ ಹೇಳುತ್ತದೆ.

'ನಿಪಾತ'ದ ವಿವರಣೆ ಕನ್ನಡ ವ್ಯಾಕರಣಗಳಲ್ಲಿಲ್ಲ. ದರ್ಪಣ ಮಾತ್ರ ನಿಪಾತ ಗಳನ್ನು 'ನಿರ್ವಿಕಾರಿ'ಗಳೆಂದು ಹೇಳುತ್ತದೆ (ಸೂತ್ರ 66). 'ಅವ್ಯಯ'ವನ್ನು ಭೂಷಣ ದರ್ಪಣಗಳು ವಿವರಿಸುತ್ತವೆ. 'ಅಸಂಖ್ಯಮವ್ಯಯಂ' ಎಂದು ಭೂಷಣವು ವಚನಭೇದ ವಿಲ್ಲದಿರುವಿಕೆ ಅವ್ಯಯದ ಪ್ರಧಾನ ಲಕ್ಷಣವಾಗಿ ಹೇಳುತ್ತದೆ (ಸೂ. 241). ಭೂಷಣದ ಈ ಸೂತ್ರದ ಮೇಲೆ ದುರ್ಗಸಿಂಹನ 'ಅವ್ಯಯಮಸಂಖ್ಯಮ್ (ಕಾತಂತ್ರ 2–4–4ರ ವೃತ್ತಿ) ಎಂಬ ಹೇಳಿಕೆಯ ಪ್ರಭಾವ ಸ್ಪಷ್ಟವಿದೆ. ದರ್ಪಣದಲ್ಲಿ ಉಕ್ತವಾಗಿರುವ ಅವ್ಯಯದ ಲಕ್ಷಣ ಇನ್ನಷ್ಟು ವಿಸ್ತಾರವಾಗಿದ್ದು ಅಲ್ಲಿ ಸಂಸ್ಕೃತ ವ್ಯಾಕರಣದ ಗಾಢ ವಾದ ಅನುಕರಣೆ ಸ್ಪಷ್ಟವಾಗಿ ಗೋಚರಿಸುತ್ತದೆ. ಲಿಂಗತ್ರಯ, ವಚನತ್ರಯ ಮತ್ತು ಸಪ್ತವಿಭಕ್ತಿಗಳಲ್ಲಿ ಯಾವ ವಿಕಾರವನ್ನೂ ಹೊಂದದೆ ಸ್ವಸ್ವರೂಪದಲ್ಲಿ ಉಳಿದು ಕೊಂಡು ಬಳಕೆಗೊಳ್ಳುವ ಶಬ್ದವೆ ಅವ್ಯಯಲಿಂಗವೆಂಬುದು ದರ್ಪಣದ ವಿವರಣೆ (ಸೂ. 100). ಇದು ಮಹಾಭಾಷ್ಯದಲ್ಲಿ ಕಂಡು ಬರುವ ಕೆಳಗಿನ ಕಾರಿಕೆಯ ಕನ್ನಡ ಅವತರಣಿಕೆಯಾಗಿದೆ.

"ಸದೃಶಂ ತ್ರಿಷು ಲಿಂಗೇಷು ಸರ್ವಾಸುಚ ವಿಭಕ್ತಿಷು ।
ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಮ್" (ಮಹಾಭಾಷ್ಯ 1–1–37)

ಇಲ್ಲಿನ ವ್ಯಯವಾಗದೆ (ನ ವ್ಯೇತಿ) ಎಂಬುದು ದರ್ಪಣದಲ್ಲಿ 'ವಿಕಾರವಿಲ್ಲದೆ' ಎಂದು ಸಮರ್ಥವಾಗಿ ಬಂದಿದೆ. ಒಟ್ಟಿನಲ್ಲಿ ಅವುಗಳು ಲಿಂಗ ಪ್ರಯುಕ್ತವಾದ ವಿಕಾರವೂ

ವಿಭಕ್ತಿ ಪ್ರಯುಕ್ತವಾದ ವಿಕಾರವೂ ವಚನ ಪ್ರಯುಕ್ತವಾದ ವಿಕಾರವೂ ಇಲ್ಲದೆ ಏಕ ರೂಪವಾಗಿರುವುವು ಎಂದು ತಾತ್ಪರ್ಯವಾಗುವುದು'' (ಕ. ಶ. ಪ್ರ. ಪು. 61).

ಸಂಸ್ಕೃತ ವ್ಯಾಕರಣಗಳಲ್ಲಿ ಅವ್ಯಯವನ್ನು ಪದವೆಂದೇ ಪರಿಗಣಿಸಲಾಗುತ್ತದೆ. ಅವ್ಯಯಗಳಿಗೆ ವಿಭಕ್ತಿಗಳು ಬಂದು ಸೇರುವುದಾಗಿಯೂ ಆ ಬಳಿಕ ಅವು ಲೋಪ ಹೊಂದುವುದಾಗಿಯೂ ಅಲ್ಲಿ ವಿವರಣೆಯಿರುತ್ತದೆ. ಅಷ್ಟಾಧ್ಯಾಯಿ(2-4-82), ಕಾತಂತ್ರ (2-4-4) ಶಾಕಟಾಯನ ವ್ಯಾಕರಣ (1-3-87) ಮೊದಲಾದವುಗಳು ಹಾಗೆ ನಿರೂಪಿಸುತ್ತವೆ. ಹೀಗೆ ಬಂದು ಲೋಪ ಹೊಂದುವುದರ ಉದ್ದೇಶವೇನು ? ದುರ್ಗಸಿಂಹನು 'ಪದಸಂಜ್ಞಾರ್ಥವಿಂದು' (2-4-4ರ ವೃತ್ತಿ) ಎಂದದನ್ನು ಸ್ಪಷ್ಟೀಕರಿಸುತ್ತಾನೆ.

ಕನ್ನಡ ವ್ಯಾಕರಣಗಳೂ ಮೇಲಿನ ನಿಲುವನ್ನು ಹೊಂದಿವೆ. ದರ್ಪಣದ ಕೆಳಗಿನ ಮಾತು ಇದಕ್ಕೆ ಆಧಾರ :

'ಅವ್ಯಯಮುಂ ಸಮಾಸದೊಳಗಣ ನಾಮಭಾಗಮುಂ ವಿಭಕ್ತಿಯಂ ಕೊಟ್ಟುಳಿವುದಱಿಂ ಪದನೆಂದಱಿವುದು. (ಸೂತ್ರ 45ರ ವಿವರಣೆ).

## ಕನ್ನಡದ ನಿಪಾತಗಳು ಮತ್ತು ಇತರ ಅವ್ಯಯಗಳು

ಸ್ಮೃತಿಯು ಅರಮೆ, ಎಲೆ, ಏ, ಓಹೋ, ಅರೆ, ಎಂಬೈದು (ಸೂತ್ರ 10) ನಿಪಾತಗಳನ್ನು ಮಾತ್ರ ಹೇಳುತ್ತದೆ. ಉಳಿದ ನಿಪಾತ ಹಾಗೂ ಅವ್ಯಯಗಳ ಬಗ್ಗೆ ಅದು ಮೌನ ಧರಿಸಿದೆ.

ಭೂಷಣದಲ್ಲಿ ಎ, ಏ, ಎಲೆ, ಎಲೇ, ಅಃ, ಅಅಃ, ಉಃ, ಅಯ್ಯೋ, ಓಹೋ, ಅರೆ, ಅರಮೆ, ಅಲ್ತೆ ಎಂಬ 12 ನಿಪಾತಗಳನ್ನು 'ನಿಪಾತ ವಿಧಾನ'ದಲ್ಲಿ ವಿವರಿಸಲಾಗಿದೆ.

ದರ್ಪಣವು ನಿಪಾತಗಳನ್ನು ಅವ್ಯಯಗಳಲ್ಲಿ ಅಂತರ್ಗತಗೊಳಿಸಿ ಹೇಳುವುದರಿಂದ ಪ್ರತ್ಯೇಕವಾಗಿ ನಿಪಾತಗಳನ್ನಲ್ಲಿ ಕಾಣಲೆಡೆಯಿಲ್ಲ. ಪ್ರಯೋಗ ಮುಖದಿಂದ ಅರಮೆ, ಎಲೇ (ಸೂತ್ರ 66ರ ಪ್ರಯೋಗ), ಅರೆ (ಸೂತ್ರ 74ರ ವೃತ್ತಿ) ಎಂಬಿವುಗಳನ್ನು ನಿಪಾತಗಳೆಂದು ತೋರಿಸಿ ಕೊಡುತ್ತದೆ.

ಭೂಷಣದಲ್ಲಿ ಆದು, ಏಗು ಮೊದಲಾಗಿ 20 ಅವ್ಯಯಗಳನ್ನು ಕೊಡಲಾಗಿದೆ. ಅವುಗಳಲ್ಲಿ ಸಂಸ್ಕೃತದ 'ಅಪಿ' ಎಂಬ ಅವ್ಯಯವೂ ಸೇರಿಕೊಂಡಿರುವುದು ವಿಚಾರಣೀಯ. ತದ್ಧಿತ ಪ್ರಕರಣದಲ್ಲಿ ಹೇಳಿರುವ 'ವೋಲ್' ಪ್ರತ್ಯಯವನ್ನು ಇಲ್ಲಿ ಅವ್ಯಯವಾಗಿ ಪರಿಗಣಿಸಲಾಗಿದೆ.

ಭೂಷಣದಲ್ಲಿ ಹೇಳಿರುವ ನಿಪಾತ ಹಾಗೂ ಅವ್ಯಯಗಳಲ್ಲದೆ (ಅಪಿಯನ್ನು ಬಿಟ್ಟು) ಮತ್ತು ಹಲವಾರು ಅವ್ಯಯಗಳನ್ನು ದರ್ಪಣದ ಅವ್ಯಯ ಪ್ರಕರಣದಲ್ಲಿ ನಿರೂಪಿಸಲಾಗಿದೆ (ಸೂತ್ರ 315-337).

ಸಂಸ್ಕೃತ ವ್ಯಾಕರಣಗಳಲ್ಲಿ, ತದ್ಧಿತ ಪ್ರತ್ಯಯಗಳನ್ನು ವಿವರಿಸುವ ರೀತಿಯಲ್ಲಿ ಯಾವ ಅವ್ಯಯಗಳು ಯಾವ ಅರ್ಥದಲ್ಲಿ ಹಾಗೂ ಯಾವ ಶಬ್ದಗಳ ಜೊತೆಯಲ್ಲಿ ಬರುತ್ತವೆ

ಯೆಂದು ವಿವರಿಸುವುದು ಕ್ರಮ. ಭೂಷಣದ ಅವ್ಯಯ ಹಾಗೂ ನಿಪಾತಗಳ ನಿರೂಪಣೆಯು ಮೇಲೆ ಸಂಸ್ಕೃತ ವ್ಯಾಕರಣಗಳಲ್ಲದೆ ವರರುಚಿಯ ಪ್ರಾಕೃತ ಪ್ರಕಾಶದ ನಿಪಾತಗಳ ನಿರೂಪಣೆಯ (ಅಧ್ಯಾಯ 9) ಪ್ರಭಾವ ಬಿದ್ದಿರುವಂತಿದೆ. ಪ್ರಾಕೃತ ಪ್ರಕಾಶವೂ ಸಂಸ್ಕೃತದಲ್ಲಿ ರುವುದು ಗಮನಾರ್ಹ. ಅದರಲ್ಲಿ ನಿಪಾತಗಳು ಯಾವ ಅರ್ಥದಲ್ಲಿ ಬರುತ್ತವೆ; ಎಂದಲ್ಲದೆ ಯಾವ ಯಾವ ಶಬ್ದಗಳ ಜೊತೆಯಲ್ಲಿ ಬರುತ್ತವೆ ಎಂಬುದಿಲ್ಲ. ಕನ್ನಡ ವ್ಯಾಕರಣಗಳು ಈ ದೃಷ್ಟಿಯಿಂದ ಪ್ರಾಕೃತ ವ್ಯಾಕರಣಕ್ಕೆ ಹತ್ತಿರವಾಗಿವೆ.

ಪ್ರಾಕೃತ ಪ್ರಕಾಶ : 'ಹುಂದಾನ ಪೃಚ್ಛಾನಿರ್ಧಾರಣೇಷು' ಸೂತ್ರ 2

ಭೂಷಣ : 'ಹುಂ ಪೃಚ್ಛೆಯಾಂ ವಿತರ್ಕಾವಧಾರಣ ನಿವಾರಣೇಷುಂ ಚ'
ಸೂ. 244

ದರ್ಪಣ : ಸವನಿಪ್ಪುದೋಹೋ ಎನೆ
ನಿವಾರಣಾರ್ಥಂ ಸಹಾರ್ಥಮೊಡನೆನೆ ಸೂ. 324

ದರ್ಪಣ ಹೆಚ್ಚಿನ ಮಟ್ಟಿಗೆ ಭೂಷಣವನ್ನು ಅನುಸರಿಸಿದ್ದರೂ ಪ್ರತಿಯೊಂದು ಅರ್ಥದಲ್ಲಿ ಬರುವ ಅವ್ಯಯಗಳ ಸಂಖ್ಯೆ ಭೂಷಣಕ್ಕಿಂತ ದರ್ಪಣದಲ್ಲಿ ಹೆಚ್ಚಾಗಿದೆ. ಉದಾಹರಣೆಗೆ, ಉಪಮಾನಾರ್ಥದಲ್ಲಿ ಭೂಷಣವು ಪೋಲ್ ಎಂಬ ಒಂದು ಅವ್ಯಯವನ್ನು ಮಾತ್ರ ಹೇಳಿದರೆ (ಸೂ : 249) ದರ್ಪಣವು ಅಂತಿರೆ, ಅಂತೆ, ಅಂತೆ ಪೋಲ್, ಪೋಲ್ (ಸೂ. 333) ಎಂಬ ನಾಲ್ಕು ಅವ್ಯಯಂಗಳನ್ನು ಹೇಳುತ್ತದೆ. ಮತ್ತೂ ಒಂದು ವಿಚಾರದಲ್ಲಿ ದರ್ಪಣದ ವಿವರಣೆ ಭೂಷಣಕ್ಕಿಂತ ಭಿನ್ನವಾಗಿದೆ. ದರ್ಪಣದ ಅವ್ಯಯ ಪ್ರಕರಣದ ಆದ್ಯಂತ ಸೂತ್ರಗಳಿಗೆ ಮಾತ್ರ ವೃತ್ತಿಯಿದೆ. ಮೊದಲ ಸೂತ್ರಕ್ಕೆ ಮಾತ್ರ ಪ್ರಯೋಗಗಳನ್ನು ಹೇಳಲಾಗಿದೆ. ಆದರೆ ಭೂಷಣದ ಎಲ್ಲ ಸೂತ್ರಗಳಿಗೂ ವೃತ್ತಿಗಳಿದ್ದು ಪ್ರಯೋಗಗಳನ್ನು ಕೊಡಲಾಗಿದೆ.

ಅವ್ಯಯಕ್ಕೆ ಸಂಬಂಧಿಸಿದಂತೆ ದರ್ಪಣದಲ್ಲಿ ಹೆಚ್ಚಿನ ಕೆಲವು ವಿಚಾರಗಳಿವೆ. ಸಂಸ್ಕೃತದಲ್ಲಿ ಅವ್ಯಯಕ್ಕೆ ಹಚ್ಚಲಾದ ವಿಭಕ್ತಿಗಳು ಲೋಪಗೊಳ್ಳುವುದು ನಿತ್ಯವೆಂದು ಹೇಳುವುದನ್ನು ದರ್ಪಣಕಾರ ಯಥಾವತ್ತಾಗಿ ಸ್ವೀಕರಿಸಿಕೊಂಡಿದ್ದರೂ ಕೆಲವು ಅವ್ಯಯಗಳ ಕೊನೆಯಲ್ಲಿ ಕಾಣುವ ವಿಭಕ್ತಿ ಪ್ರತ್ಯಯಗಳನ್ನು ಆವನು ಗುರುತಿಸಿದ್ದಾನೆ. ''ನಿರ್ನೆರಂ'' ಮತ್ತು ''ಮತ್ತಿನ'' ಎಂಬೆರಡು ಅವ್ಯಯಗಳ ಕೊನೆಯಲ್ಲಿರುವ ಪ್ರಥಮೆ ಹಾಗೂ ಷಷ್ಠಿಯನ್ನು ಎತ್ತಿ ಹೇಳಿದ್ದಾನೆ (ಸೂತ್ರ 100ರ ಪ್ರಯೋಗ). ಕಾಲಭೇದ ವಾಚಕಗಳಾದ ಆಗಳ್, ಈಗಳ್ ಮೊದಲಾದ ಅವ್ಯಯಂಗಳಿಗೆ 'ಚತುರ್ಥಿ ಷಷ್ಠಿಗಳ್ ಪರಿಣಾಮಿಸಿರ್ಪುವು' ಎಂದು ಘೋಷಿಸಿದ್ದಾನೆ (ನೋ : ಸೂತ್ರ 336, 337). 'ಚೆಚ್ಚರಂ ನಡಿದಂ' ಎಂಬಲ್ಲಿ ದ್ವಿತೀಯೆಯನ್ನು 'ಆವರ್ಕೆ ಅಂತಟಿಂದೆ' ಎಂಬಲ್ಲಿ ತೃತೀಯೆಯನ್ನು 'ಪಚ್ಚನೆ ಕೆಚ್ಚನೆ ಬಗೆಯನೆಂಬಲ್ಲಿ' ಚತುರ್ಥಿಯನ್ನು ತಿಳಿಯಬೇಕೆಂಬುದಾಗಿ ಹೇಳುತ್ತಾನೆ (ಸೂತ್ರ 100ರ ಪ್ರಯೋಗ). ಸ್ಮೃತಿ ಭೂಷಣಗಳು ಹೇಳದೆ ಬಿಟ್ಟಿರುವ ಈ ವಿಚಾರಗಳನ್ನು ಹೇಳಿರುವಲ್ಲಿ ದರ್ಪಣಕಾರನ ಸೂಕ್ಷ್ಮ ದೃಷ್ಟಿಯನ್ನು ಅರಿಯಬಹುದು.

# ಅಧ್ಯಾಯ 13

## ವಾಕ್ಯರಚನೆ

ಹಳೆಗನ್ನಡ ವ್ಯಾಕರಣಗಳು ಪ್ರಧಾನವಾಗಿ ಶಬ್ದಶಾಸ್ತ್ರಗಳಾಗಿರುವುದರಿಂದ ಅವುಗಳು ಪದನಿರ್ಮಾಣದ ಕುರಿತು ಧಾರಾಳವಾಗಿ ಚರ್ಚಿಸುತ್ತವೆ. ವರ್ಣವಿಚಾರ ಮತ್ತು ವಾಕ್ಯವಿಚಾರದ ಕುರಿತು ಕಡಮೆ ಹೇಳುತ್ತವೆ. ವರ್ಣವಿಚಾರಕ್ಕಿಂತಲೂ ವಾಕ್ಯರಚನೆಯ ನಿರೂಪಣೆಯನ್ನು ಸ್ವಲ್ಪದರಲ್ಲಿಯೇ ಮುಗಿಸಿಬಿಡುತ್ತವೆ. ಈ ವಿಚಾರದಲ್ಲಿ, ಎಚ್. ಎಚ್. ವಿಲ್ಸನ್ ಸಂಸ್ಕೃತ ವ್ಯಾಕರಣಗಳ ಕುರಿತು ಹೇಳಿದ ಮಾತು ಕನ್ನಡ ವ್ಯಾಕರಣಗಳಿಗೂ ಅನ್ವಯವಾಗುವಂತೆ ತೋರುತ್ತದೆ :

"The great body of Sanskrit Composition is in metre and the construction of sentences has consequently been subordinate to the necessities of rhythm. Examples therefore of syntactical arrangement are not so diversified as might be expected; and it is not always certain, whether any unusual combination may not be a license of the poet, rather than a law of the language (Sanskrit Grammar ; p. 377-78).

ಹಳಗನ್ನಡ ವ್ಯಾಕರಣಗಳು ಪದ್ಯಕಾವ್ಯಗಳ ಭಾಷೆಯನ್ನೇ ಮುಖ್ಯವಾಗಿಟ್ಟುಕೊಂಡು ವಿವೇಚಿಸುತ್ತವೆ. ಕನ್ನಡ ಕಾವ್ಯಭಾಷೆಯ ಮೇಲೆ ಸಂಸ್ಕೃತ ವಾಕ್ಯರಚನೆಯ ಪ್ರಭಾವವಿದೆಯಷ್ಟೆ. ಆದುದರಿಂದ ಕನ್ನಡ ವ್ಯಾಕರಣಗಳು ವಾಕ್ಯರಚನಾ ತತ್ತ್ವಗಳಲ್ಲಿ ಸಂಸ್ಕೃತವನ್ನು ಅನುಸರಿಸಿವೆ. ಕನ್ನಡ ವ್ಯಾಕರಣಗಳಲ್ಲಿ ವಾಕ್ಯರಚನೆಯ ಕುರಿತು ಬರುವ ಕೆಲವೇ ವಿಚಾರಗಳನ್ನು ಪರಿಶೀಲಿಸಿದರೆ ಮುಖ್ಯವಾಗಿ ಎರಡು ಅಂಶಗಳು ಗಮನಕ್ಕೆ ಬರುತ್ತವೆ. ಸಂಸ್ಕೃತದೊಡನೆ ಹೋಲಿಸಿಕೊಂಡುದರಿಂದ ಎದ್ದುತೋರುವ ಕನ್ನಡದ ಪ್ರತ್ಯೇಕತೆ ಒಂದಾದರೆ, ಸಂಸ್ಕೃತ ಭಾಷೆಯ ತತ್ತ್ವಗಳ ಪೂರ್ಣವಾದ ಅನುಸರಣೆ ಇನ್ನೊಂದು ಕನ್ನಡ ವ್ಯಾಕರಣಗಳಲ್ಲಿ ಬರುವ ವಾಕ್ಯರಚನಾ ಸಂಬಂಧವಾದ ವಿಚಾರಗಳನ್ನು ಲಿಂಗ, ವಚನ, ವಿಭಕ್ತಿ, ಸರ್ವನಾಮ, ಸಮುಚ್ಚಯ ಮತ್ತು ಪುರುಷಪ್ರತ್ಯಯಗಳಿಗೆ ಹೊಂದಿಕೊಂಡಂತೆ ವಿವರಿಸಬಹುದು. ಕಾರಕ ವಿಚಾರ ಮೂಲಭೂತವಾಗಿ ವಾಕ್ಯರಚನೆಗೆ ಸಂಬಂಧಪಟ್ಟುದೆಂಬುದು ಗಮನಾರ್ಹ. ಅದನ್ನು ಪ್ರತ್ಯೇಕವಾಗಿ ವಿವರಿಸಿರುವುದರಿಂದ ಇಲ್ಲಿ ಅದರ ಪ್ರಸ್ತಾಪ ಅನಗತ್ಯ. ಮೇಲಿನ ಲಿಂಗ ಮೊದಲಾದವುಗಳಿಗೆ ಸೇರಿದಂತೆ ಕರ್ತೃ-ಕ್ರಿಯಾ ಸಂಬಂಧ ಇಲ್ಲವೆ ವಿಶೇಷಣ-ವಿಶೇಷ್ಯ ಸಂಬಂಧವನ್ನು ಪರಿಶೀಲಿಸಬೇಕಾಗಿದೆ.

**ಲಿಂಗ**

1. **ಕರ್ತೃ-ಕ್ರಿಯಾಲಿಂಗ ಸಂಬಂಧ :** ಕನ್ನಡದ ಪ್ರಥಮ ಪುರುಷ ಕ್ರಿಯಾರೂಪ ಲಿಂಗವಿವಕ್ಷೆಯನ್ನು ಹೊಂದಿದೆ. ಸಂಸ್ಕೃತದಲ್ಲಿ ಈ ತೆರನಾಗಿ ಲಿಂಗ ವಿವಕ್ಷೆಯಿಲ್ಲ. ಹಾಗಾಗಿ ಕನ್ನಡಕ್ರಿಯೆ ಸಂಸ್ಕೃತ ಕ್ರಿಯೆಗಿಂತ ಭಿನ್ನವಾಗುತ್ತದೆ. ಕನ್ನಡಕ್ರಿಯೆಯ ಲಿಂಗವು (ಕರ್ತರಿ ಪ್ರಯೋಗದಲ್ಲಿ) ಕರ್ತೃವಿನ ಲಿಂಗವನ್ನು ಅನುಸರಿಸುತ್ತದೆ. ಕರ್ತೃಸ್ಥಾನದಲ್ಲಿ ಒಂದಕ್ಕಿಂತ ಹೆಚ್ಚು ಲಿಂಗದ ನಾಮಗಳು ಬಂದಾಗ ಕ್ರಿಯೆ ಯಾವ ಲಿಂಗವನ್ನನುಸರಿಸಬೇಕೆಂಬುದರ ಕುರಿತು ದರ್ಪಣದಲ್ಲಿ ಮಾತ್ರ ವಿವರಣೆಯಿದೆ.

ದರ್ಪಣದಲ್ಲಿ ನಿರೂಪಿತವಾಗಿರುವಂತೆ ಕರ್ತೃ ಸ್ಥಾನದಲ್ಲಿ ಬರುವ ನಾಮಗಳ ಲಿಂಗ ಗಳಲ್ಲಿ ಮುಖ್ಯತಾಮುಖ್ಯತೆಗಳಿಲ್ಲ. ಆದರೆ ಕ್ರಿಯೆಯು ಆ ನಾಮಂಗಳ ಪೈಕಿ ಕೊನೆಯದನ್ನು ಅನುಸರಿಸಬೇಕು (ಸೂತ್ರ 152). ಇದನ್ನು ಕೆಳಗಿನ ಉದಾಹರಣೆಗಳಿಂದ ಸ್ಪಷ್ಟಪಡಿಸಿ ಕೊಳ್ಳಬಹುದು.

1. ಸೇನೆಯುಮರಸಿಯುಮರಸನುಂ ಬಂದರ್
2. ಆನೆಯುಂಮರಸನುಮರಸಿಯುಂ ಬಂದರ್
3. ಅರಸನುಮರಸಿಯುಂ ಚತುರಂಗ ಬಲಮುಂ ಬಂದುವು

ಮೊದಲ ವಾಕ್ಯದಲ್ಲಿ ಕ್ರಿಯೆಯು ಪುಲ್ಲಿಂಗದಲ್ಲೂ ಎರಡನೆಯದಲ್ಲಿ ಸ್ತ್ರೀಲಿಂಗದಲ್ಲೂ ಮೂರನೆಯದರಲ್ಲಿ ನಪುಂಸಕದಲ್ಲೂ ಇರುವಂತೆ ತಿಳಿಯಬೇಕು. ಹೀಗೆ ಲಿಂಗ ನಿರ್ಣಯಕ್ಕೆ ನಾಮಂಗಳಲ್ಲಿ ಕೊನೆಯದೇ ಕಾರಣವಾಗಿದೆ. ಪುಂಸ್ತ್ರೀ ಬಹುವಚನ ರೂಪವು ಸಮಾನ ವಾಗಿರುವುದರಿಂದ ಮೊದಲೆರಡು ವಾಕ್ಯಗಳಲ್ಲಿ ಕ್ರಿಯೆಯು ಏಕರೂಪವಾಗಿದೆ.

2. **ವಿಶೇಷಣ :—ವಿಶೇಷ್ಯ ಲಿಂಗ ಸಂಬಂಧ :** ವಿಶೇಷಣವು ವಾಚ್ಯಲಿಂಗ. ಆದ ಲಿಂಗ ವಿಚಾರದಲ್ಲಿ ಪೂರ್ಣವಾಗಿ ವಿಶೇಷ್ಯವನ್ನು ಅವಲಂಬಿಸಿಕೊಂಡಿರುವುದು ಸಂಸ್ಕೃತದ ಕ್ರಮ.

ವಿದ್ವಾನ್ ಪುರುಷೋಽಸ್ತಿ
ವಿದುಷ್ಯೋ ಸ್ತ್ರಿಯೌಸ್ತಃ
ಬಹೂನಿ ಕುಲಾನಿ ಸಂತಿ

ದ್ರಾವಿಡ ಭಾಷೆಗಳಲ್ಲಿ ಸಹಜವಾಗಿ ವಿಶೇಷಣಗಳು (ಗುಣವಚನಗಳು) ಲಿಂಗ ವಚನ ವಿಭಕ್ತಿ ವಿಚಾರದಲ್ಲಿ ವಿಶೇಷ್ಯವನ್ನನುಸರಿಸದೆ, ಸ್ವತಂತ್ರವಾಗಿ ನಿಲ್ಲುತ್ತವೆಯೆಂಬುದಾಗಿ ಭಾಷಾ ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಆದರೆ ಹಳೆಗನ್ನಡದ ಕಾವ್ಯಭಾಷೆಯಲ್ಲಿ ವಿಶೇಷಣ –ವಿಶೇಷ್ಯಗಳಲ್ಲಿ ಲಿಂಗಸಂಬಂಧವಾದ ಹೊಂದಾಣಿಕೆ ಗೋಚರಿಸುತ್ತದೆ. ದರ್ಪಣಕಾರ

ಹೇಳುವ ಒಳ್ಳಿತು, ಕರಿದು ಮೊದಲಾದ ತುದುಂಕಾರಾಂತ ಗುಣವಾಚಿಗಳು ನಪುಂಸಕರೂಪ ಗಳೆಂಬುದು ಸ್ಪಷ್ಟ (ಸೂ. 87). ಅವುಗಳ ಮೂಲ ರೂಪಗಳು ಒಳ್, ಕರ್ ಮೊದಲಾ ಗಿದ್ದಿರಬೇಕೆಂಬುದೂ ನಿಶ್ಚಿತ. ಈ ಗುಣವಾಚಿಗಳ ನಪುಂಸಕ ಬಹುವಚನ ರೂಪಸಿದ್ಧಿ ಗಾಗಿ 'ಅವು' ಪ್ರತ್ಯಯು ಬರುವ ವಿಚಾರ ಸ್ಮೃತಿ, ದರ್ಪಣ, ಭೂಷಣಗಳಲ್ಲಿ ಏಕಕಂಠ ದಿಂದ ಉಕ್ತವಾಗಿದೆ (ಸ್ಮೃತಿ : ಸೂ. 18, ಭೂಷಣ : ಸೂ. 41, ದರ್ಪಣ : ಸೂ. 105) ಈ ಪ್ರಯೋಗಗಳಲ್ಲಿ ನಪುಂಸಕ ವಿಶೇಷ್ಯಗಳನ್ನು ಹೊಂದಿಕೊಂಡು ವಿಶೇಷಣಗಳು ನಪುಂಸಕ ಲಿಂಗದಲ್ಲಿರುವುದನ್ನು ಗುರುತಿಸಬಹುದು—

ಅವು ಪಿರಿಯವು, ಇವು ಕಿಱಿಯುವು
ಪಿರಿಯುವು ದಿವಸಂಗಳ್
ಮೆಲ್ಲಿದುವಪ್ಪ ಪಾದತಳಮುಂ ಕಡುವೆಟ್ಟಿದುವಪ್ಪ ಹಸ್ತಮುಂ

ಒಂದು, ಎರಡು ಮೊದಲಾದ ಸಂಖ್ಯಾವಾಚಕಗಳು "ಪುಂಸ್ತ್ರೀರೂಪದೊಳವಂದರ್" ಬಂದಾಗ ಒರ್ವ, ಇರ್ವರ್ ಮೊದಲಾಗಿ ರೂಪವ್ಯತ್ಯಾಸ ಹೊಂದುವುದನ್ನು ಕನ್ನಡ ವ್ಯಾಕರಣಗಳು ಹೇಳುತ್ತವೆ (ಸ್ಮೃತಿ : ಸೂ. 19, ಭೂಷಣ : ಸೂ. 42, ದರ್ಪಣ : ಸೂ. 108).

ತಮ್ಮಿಂದಿರ್ವರುಂ ಕೈದುವಂ ಬಿಸುಟರ್

ಇದು ಕನ್ನಡ ಭಾಷೆಯ ಸ್ವಭಾವಕ್ಕನುರೂಪವಾಗಿದೆಯೆಂಬುದರಲ್ಲಿ ಅನುಮಾನ ವಿಲ್ಲ.

ಸಂಸ್ಕೃತದ ಸ್ವೀಕರಣಗಳು ವಿಶೇಷಣಗಳಾಗಿ ಬಂದಾಗ ವಿಶೇಷ್ಯದ ಲಿಂಗಕ್ಕೆ ಹೊಂದಿ ಕೊಂಡು ಬದಲಾವಣೆ ಪಡೆಯುವುದುಂಟು. ಬಹುಶಃ ಸಂಸ್ಕೃತದ ಅನುಕರಣೆಯೇ ಈ ತೆರನಾದ ಪ್ರಯೋಗಕ್ಕೆ ಕಾರಣವಾಗಿರಬೇಕು. ಈ ವಿಚಾರವಾದ ವಿವರಣೆ ದರ್ಪಣದಲ್ಲಿ ಮಾತ್ರ ಗೋಚರಿಸುತ್ತದೆ.

'ರೂಪಕಾಲಂಕಾರದಲ್ಲಿ ವಿಶೇಷ್ಯದ ಲಿಂಗವು ಆದರ ವಿಶೇಷಣದ ಲಿಂಗದಂತೆಯೂ ವಿಶೇಷಣದ ಲಿಂಗವು ವಿಶೇಷ್ಯದ ಲಿಂಗದಂತೆಯೂ ಇದ್ದರೆ ದೋಷವಿಲ್ಲ' (ಸೂ. 167).

ಇಲ್ಲಿ ವಿಶೇಷಣದ ಲಿಂಗಕ್ಕೆ ಹೊಂದಿಕೊಂಡು ವಿಶೇಷ್ಯದ ಲಿಂಗ ಬದಲಾವಣೆ ಹೊಂದುವ ವಿಚಾರ ಸ್ವಾರಸ್ಯಕರವಾಗಿದೆ. ಒಂದನ್ನು ಮತ್ತೊಂದನ್ನಾಗಿ ಭಾವಿಸಿ ಹೇಳುವ ರೂಪಕಾಲಂಕಾರದಲ್ಲಿ ಇದು ಸಾಧ್ಯ—

"ಉದಯಾಸ್ತೋನ್ನತಶೈಲಸೇತು ಹಿಮವತ್ಕುತ್ಕೀಲಪರ್ಯಂತ ಸಂ
ಪದೆಯಂ..............................
...................ನೆಲನಂ ನಿರ್ವ್ಯಾಜದಿಂದಂ"

ಇಲ್ಲಿನ 'ಸಂಪದ್' ಮೊದಲಾದ ವಿಶೇಷಣಗಳು ಸ್ತ್ರೀಲಿಂಗದಲ್ಲಿರುವುದರಿಂದ 'ನೆಲನಂ ಎಂಬೀ ನಪುಂಸಕಮಂ ಬಿಟ್ಟು ಧರಾವನಿತೆಯೆಂದು ಯೋಜಿಸಿಕೊಳ್ವುದು' (ಸೂ. 167ರ ಪ್ರಯೋಗ) ಎಂದು ದರ್ಪಣಕಾರ ವಿವರಣೆ ನೀಡುತ್ತಾನೆ.

ವಿಶೇಷ್ಯದ ಲಿಂಗಾನುಸಾರವಾಗಿ ವಿಶೇಷಣದ ಲಿಂಗವು ಬದಲಾಗುವುದನ್ನು 'ಆತಂ ಜಗದ್ದರ್ಪಣಂ (ಪು), ಆ ಪೆಣ್ ಜಗದ್ದರ್ಪಣೆ (ಸ್ತ್ರೀ), ಅದು ಜಗದ್ದರ್ಪಣಂ (ನಪ್ಪ), ಎಂಬೀ ಉದಾಹರಣೆಗಳಿಂದ ಸ್ಪಷ್ಟೀಕರಿಸಲಾಗಿದೆ. ಇಲ್ಲಿ 'ಜಗದ್ದರ್ಪಣ' ಎಂಬ ಪ್ರಕೃತಿ ಆತಂ, ಆ ಪೆಣ್, ಅದು–ಇವುಗಳನ್ನನುಸರಿಸಿ ಲಿಂಗವ್ಯತ್ಯಾಸವನ್ನು ಪಡೆದಿದೆ.

## ವಚನ

1. ಕರ್ತೃ–ಕ್ರಿಯಾ ವಚನ ಸಂಬಂಧ : ಈ ಕುರಿತು ಕೆಲವು ವಿಚಾರಗಳನ್ನು ಕವಿರಾಜಮಾರ್ಗ, ಸ್ಮೃತಿ, ಭೂಷಣ ಹಾಗೂ ದರ್ಪಣದಲ್ಲಿ ವಿವರಿಸಲಾಗಿದೆ. ಕರ್ತರಿ ಪ್ರಯೋಗದಲ್ಲಿ ಕರ್ತೃವಿನ ವಚನವನ್ನು ಹೊಂದಿಕೊಂಡು ಕ್ರಿಯಾಪದದ ವಚನವಿರುತ್ತದೆ. ಇದು ಕನ್ನಡ–ಸಂಸ್ಕೃತಗಳೆರಡಕ್ಕೂ ಸಮಾನ ತತ್ವ. ಕರ್ತೃಪದ ಮತ್ತು ಕ್ರಿಯಾಪದಗಳೊಳಗೆ ವಚನದ ಹೊಂದಾಣಿಕೆಯ ಬಗ್ಗೆ ಕವಿರಾಜಮಾರ್ಗದಲ್ಲಿ (ದೋಷ ಹಾಗೂ ಗುಣ) ಉದಾಹರಣೆಗಳಿವೆ (1-118).

ವಚನ ದೋಷ—

"ಬಂದುವು ಪಾವುಡಂ....
ಆನೆಗಳ್ ಈ ಪ್ರದೇಶದೊಳ್ ನಿಂದುದು"

ಮೊದಲ ವಾಕ್ಯದಲ್ಲಿ ಕರ್ತೃಪದ ಏಕವಚನದಲ್ಲಿದ್ದು ಕ್ರಿಯಾಪದ ಬಹುವಚನದಲ್ಲಿದೆ. ಮತ್ತಿನ ವಾಕ್ಯದಲ್ಲಿ ಕರ್ತೃಪದ ಬಹುವಚನದಲ್ಲಿದ್ದು ಕ್ರಿಯಾಪದ ಏಕವಚನದಲ್ಲಿದೆ. ಇವು ಸಮರ್ಪಕ ವಾಕ್ಯಗಳಲ್ಲ. ವಚನಗಳಲ್ಲಿ ಅನುರೂಪತೆಯನ್ನು ತಂದರೆ ಮಾತ್ರ ಈ ವಾಕ್ಯಗಳು ಸಮರ್ಪಕವಾಗುತ್ತವೆ.

ವಚನಗುಣ—

"ಬಂದುದು ಪಾವುಡಂ...."
"ಆನೆಗಳ್ ಈ ಪ್ರದೇಶದೊಳ್ ನಿಂದುವು...."

ಕರ್ತೃ ಸ್ಥಾನದಲ್ಲಿ ಪೃಥಗ್ವೈಕ ವಚನದ ಹಲವು ನಾಮಗಳಿದ್ದು (ಕರ್ತೃ ಪದಗಳಿದ್ದು) ವಾಕ್ಯ ನಿರ್ವಾಹದಲ್ಲಿ ಕ್ರಿಯಾಪದವು ಬಹುವಚನದಲ್ಲಿರುವ ರಚನೆಯಿರುವುದಾಗಿ ದರ್ಪಣ ಹೇಳುತ್ತದೆ (ಸೂ. 153). ಎಂದರೆ ಹಲವು ಕರ್ತೃಪದಗಳಿರುವುದರಿಂದ 'ಇವೆಲ್ಲವೂ' ಎಂದು ಅಧ್ಯಾಹಾರವಾಗುತ್ತದೆ. ಹಾಗಾಗಿ ಕ್ರಿಯೆಯನ್ನು ಏಕವಚನದಲ್ಲಿಡುವುದು ಅಪಪ್ರಯೋಗವೆನಿಸುತ್ತದೆಂಬುದು ಈ ನಿರೂಪಣೆಯ ಅಂತರಾರ್ಥ.

"ಅವತಂಸೋತ್ಪಲ ತಾಡನಂ, ಕನಕಕಾಂಚೀ ಬಂಧನಂ ನೂಪುರಾ
ರವಝುಂಕಾರಿತ ಚಾರುವಾಮ ಚರಣಾಘಾತಂ....
........................ ...................ಚಕ್ರಿಗಿ
ತ್ತುವಲಂಪಂ".

ಈ ಪದ್ಯದಲ್ಲಿ ಆಲಂಪನ್ನು ಕೊಡುವ ಕರ್ತೃಗಳೆಲ್ಲ ಏಕವಚನವಾಗಿದ್ದು ಕ್ರಿಯಾ ಪದ ಬಹುವಚನವಾಗಿರುವುದು (ಇತ್ತುವು) ಗಮನಾರ್ಹ.

### ಜಾತ್ಯೇಕ ವಚನ

ಜಾತಿಯನ್ನು[1] (ವರ್ಗಸಮುದಾಯ) ಹೇಳುವಲ್ಲಿ ಏಕವಚನದಲ್ಲಿರುವ ನಾಮವು ಬಹುವಚನಾರ್ಥವನ್ನು ಕೊಡುವುದುಂಟು. ಅಷ್ಟಾಧ್ಯಾಯಿ (1-2-58), ಸಿದ್ಧಹೇಮ ಶಬ್ದಾನುಶಾಸನ (2-2-121) ಮೊದಲಾದ ಸಂಸ್ಕೃತ ವ್ಯಾಕರಣಗಳು ಈ ವಿಚಾರ ವನ್ನು ಪ್ರತಿಪಾದಿಸುತ್ತವೆ. 'ಜಾತಾವೇಕವಚನಮ್' ಎಂಬ ಮಾತು ಸಂಸ್ಕೃತ ವ್ಯಾಕರಣ ಗಳಲ್ಲಿ ಪ್ರಸಿದ್ಧವಾಗಿದೆ. ಸಾಧಾರಣವಾಗಿ ಆಧುನಿಕ ವೈಯಾಕರಣರು ಇದನ್ನೇ 'ಜಾತ್ಯೇಕವಚನ'ವೆಂದು ಹೇಳುತ್ತಾರೆ.

'ಜಾತ್ಯೇಕ ವಚನ'ವೆಂಬ ತತ್ವದ ಕುರಿತು ಕವಿರಾಜಮಾರ್ಗ, ಸ್ಮೃತಿ, ಭೂಷಣ ದರ್ಪಣಗಳಲ್ಲಿ ಖಚಿತವಾದ ವಿವರಣೆಯಿದೆ. ನಿರೂಪಣೆಯಲ್ಲಿ ಅಲ್ಪ ಸ್ವಲ್ಪ ಅಂತರ ಕಾಣಿಸಿಕೊಂಡರೂ ಆ ತತ್ವದ ಮಟ್ಟಿಗೆ ಏಕಾಭಿಪ್ರಾಯ ಹೊರಹೊಮ್ಮಿದೆಯೆನ್ನ ಬಹುದು.

"ಜಾತಿವಿಭಾಗಮುಂ ಬಗೆದು ಪೇಟಿ ಬಹುತ್ವಂ....ತದೇಕ
ವಚನಂಗೊಳಳಂ ದೊರೆವೆತ್ತುಕೂಡುಗುಂ"

(1-119) ಎಂಬುದು ಕವಿರಾಜಮಾರ್ಗದ ವಿವರಣೆಯಾದರೆ "ಜಾತಿಯೊಳಂ....ಕೂಡಿ ನೆಗಟ್ಟಿಂ ಏಕಬಹುತ್ವೋದ್ಯೋತನ ಪರಂ ಏಕತ್ವಂ" ಎಂಬುದು ಸ್ಮೃತಿಯ(ಸೂ. 35) ನಿರೂಪಣೆಯಾಗಿದೆ. 'ಜಾತಿಯನ್ನು ಹೇಳುವ ಶಬ್ದವು ಬಹುತ್ವವನ್ನು ಹೇಳಬೇಕಾದಲ್ಲಿ ವಿಕಲ್ಪದಿಂದ ಏಕವಚನವಾಗುತ್ತದೆ' ಎಂಬುದು ಭೂಷಣದ (ಸೂ. 89) ನಿರೂಪಣೆಯ ಸಾರ. "ಜಾತಿಯೊಳ್ ಏಕತ್ವಕ್ಕೆ ಬಹುತ್ವಂ ಅಕ್ಕುಂ" ಎಂದು ದರ್ಪಣ (ಸೂ. 148) ಹೇಳುತ್ತದೆ. ಒಟ್ಟಿನಲ್ಲಿ ಸಂಸ್ಕೃತ ವ್ಯಾಕರಣಗಳು ಹೇಳುವಂತೆ ಏಕತ್ವಕ್ಕೆ ಬಹುತ್ವಾರ್ಥ ವಿಕಲ್ಪವೆಂಬುದನ್ನು ಈಯೆಲ್ಲ ಗ್ರಂಥಗಳು ಒಪ್ಪಿಕೊಳ್ಳುತ್ತವೆ. ಭೂಷಣ ಮಾತ್ರ 'ಬಹುತ್ವಕ್ಕೆ ಏಕತ್ವ' ಎಂದು ಪರಿವರ್ತಿಸಿಕೊಂಡಿದೆ. ದರ್ಪಣ ಹೇಳುವ "... ಅದು ಕಾರಣದಿಂ ಕ್ರಿಯಾಪದಂ ಬಹುವಚನಂ ಆಗಲಾರ್ಪುದು" (ಸೂ. 148ರ ವೃತ್ತಿ) ಎಂಬ ನಿರೂಪಣೆ ಹೊಸತಾಗಿದ್ದು ಸ್ಪಷ್ಟವಾಗಿದೆ. ಕ್ರಿಯಾಪದವು ಬಹುವಚನದಲ್ಲಿರುವ ಕಾರಣ ದಿಂದಲೇ ಕರ್ತೃಪದದ ಬಹುತ್ವವನ್ನು ಗುರುತಿಸಲಾಗುತ್ತದೆ.

'ಕಂದುರೆ ತಗುಳ್ದುವು' (ಕ. ಮಾ), 'ಕೆಯ್ ಬೆಳೆದುವು' (ಭೂಷಣ),

'ಆನೆ ನೂಂಕಿದವು' (ದರ್ಪಣ)–ಮೊದಲಾದುವು ಮೇಲಿನದಕ್ಕೆ ಲಕ್ಷ್ಯಗಳು. ಆದರೆ ಸ್ಮೃತಿಯ 'ಕರಿಯುವು, ಕರಿಯುಲ್ಲಿವು' ಮೊದಲಾದ ಉದಾಹರಣೆಗಳಲ್ಲಿ ವಿಶೇಷಣದ (ಸಾರ್ವನಾಮಿಕ) ಬಲದಿಂದ ಬಹುವಚನಾರ್ಥವನ್ನು ತಿಳಿಯಬೇಕಾಗುತ್ತದೆ. ಕಾರಣ ; ಅಲ್ಲಿ ಕ್ರಿಯಾಪದಗಳಿಲ್ಲ.

ಕರ್ತೃ ಸ್ಥಾನದಲ್ಲಿರುವ ಜಾತಿವಾಚಕ ಏಕವಚನ ನಾಮವೊಂದು (ಕಾರಕ) ಬಹು ವಚನದಲ್ಲಿರುವ ಕ್ರಿಯಾಪದದ ಕಾರಣದಿಂದಾಗಲಿ, ಇಲ್ಲವೆ ಬಹುವಚನದಲ್ಲಿರುವ ವಿಶೇಷಣದ ಬಲದಿಂದಾಗಲೀ ಬಹುವಚನಾರ್ಥವನ್ನು ಕೊಡಬಲ್ಲುದು. ಅಂತಹ ಕ್ರಿಯಾ ಪದ ಇಲ್ಲವೆ ವಿಶೇಷಣವಿಲ್ಲವಾದರೆ ಅದು ಬಹುವಚನದ ಅರ್ಥವನ್ನು ಕೊಡಲು ಅಸಮರ್ಥವಾಗುವುದರ ಮೂಲಕ ಜಾತ್ಯೇಕವಚನವಾಗಲಾರದು. ಈ ವಿಚಾರ ದರ್ಪಣ ದಲ್ಲಿ ಮಾತ್ರ ನಿರೂಪಿತವಾಗಿದೆ (ಸೂ. 149). ಪ್ರಯೋಗದ ಮೂಲಕವಿದು ಸ್ಪಷ್ಟ ವಾಗುವುದು.

1. ಇಂತುಟು ಆನೆ, ಇಂತುಟು ಕಂದುರೆ

2. ನಡೆದುದು ಹಂಸೆ, ಕೇಗಿದುದು ಸೋಗೆ

ಮೊದಲ ಲಕ್ಷ್ಯದಲ್ಲಿ 'ಇಂತುಟು' ಎಂಬುದು ಏಕವಚನದಲ್ಲಿದೆಯೆಂದಭಿಪ್ರಾಯ. ಎರಡನೆಯದರಲ್ಲಿ ಕ್ರಿಯಾಪದ ಏಕವಚನದಲ್ಲಿರುವುದು ಸುಸ್ಪಷ್ಟ. ಆದ್ದರಿಂದ ಇವು ಸಾಮಾನ್ಯ ಏಕವಚನಗಳಲ್ಲದೆ ಜಾತ್ಯೇಕವಚನಗಳಲ್ಲ.

ಜಾತ್ಯೇಕ ವಚನವನ್ನು ಹೇಳುವ ನಾಮದ (ಕರ್ತೃಪದ) ಹಿಂದೆ ಸಂಖ್ಯಾವಾಚಕ ವಿದ್ದರೆ ಅದು ದೋಷಯುಕ್ತವೆಂದು ಕವಿರಾಜಮಾರ್ಗ ಮಾತ್ರ ಹೇಳುತ್ತದೆ (1–120).

'ಕಂದುರೆ ನೂಱುಱೊಳಾ ಬಲದಾನೆ ಪತ್ತು ತಾಗಿದುವು'-ಇಂತಹ ಪ್ರಯೋಗಗಳಲ್ಲಿ "ಪಿರಿದು ಸಂಖ್ಯೆಯೊಳ್ ಏಕಬಹುತ್ವಸಂಗ"ವಾಗುತ್ತದೆ. ಅದು ತ್ಯಾಜ್ಯವೆಂಬುದು ಮಾರ್ಗಕಾರನ ಅಭಿಮತ.

ಜಾತ್ಯೇಕ ವಚನದಲ್ಲಲ್ಲದೆ ಇನ್ನೂ ಕೆಲವೆಡೆಗಳಲ್ಲಿ 'ಬಹುತ್ವದೆಡೆಗೆ' ಏಕವಚನ ಪ್ರಯೋಗವಿರುವುದಾಗಿ ವ್ಯಾಕರಣಗಳು ನುಡಿಯುತ್ತವೆ.

ಸಂಖ್ಯಾವಸ್ತು (ದೆಸೆ, ಲೋಕ, ಯುಗ ಇತ್ಯಾದಿ), ಸಂಖ್ಯಾವಾಚಕ, ಭಾವ ವಾಚಕಗಳನ್ನು ಹೇಳುವಲ್ಲಿ ಬಹುವಚನಾರ್ಥದ ವೈಕಲ್ಪಿಕ ಏಕವಚನ ಪ್ರಯೋಗವಿರು ವುದಾಗಿ ಸ್ಮೃತಿ (ಸೂ. 35), ಭೂಷಣ (ಸೂ. 90, 91) ದರ್ಪಣಗಳಲ್ಲಿ (ಸೂ. 150) ಹೇಳಲಾಗಿದೆ. ಉದಾ :

ಸಂಖ್ಯಾವಸ್ತುವಿಗೆ—ಪತ್ತು ದೆಸೆ—ಪತ್ತು ದೆಸೆಗಳ್

ಸಂಖ್ಯಾವಾಚಕಕ್ಕೆ—. ಪತ್ತುನೂಱು—ಪತ್ತುನೂಱುಗಳ್

ಭಾವಕ್ಕೆ —ಪೂಗಳಬೆಳ್ಪು—ಪೂಗಳ ಬೆಳ್ಪುಗಳ್

ಮೇಲಿನ ಬಹುವಚನಾರ್ಥದ ಏಕವಚನ ಪ್ರಯೋಗದಲ್ಲಿ ಕ್ರಿಯಾಪದ ಯಾವ ವಚನ ದಲ್ಲಿರಬೇಕೆಂಬುದರ ಬಗ್ಗೆ ವಾಚ್ಯವಾಗಿ ಈ ಗ್ರಂಥಗಳೇನೂ ಹೇಳುವುದಿಲ್ಲ. ಆದರೆ ಸ್ಮೃತಿಯ ಈ ಕೆಳಗಿನ ಪ್ರಯೋಗದ ಆಧಾರದಲ್ಲಿ ಕ್ರಿಯಾಪದವು ಏಕವಚನದಲ್ಲಿರ ಬಹುದಾಗಿ ತಿಳಿಯಬಹುದು :

'ಸಂತಮಿರ್ಪುದೆ ನವಗ್ರಹಂ' : ಪದ್ಯ 151

ಯುಗಳಾರ್ಥದಲ್ಲಿ ವರ್ತಿಸುವ ಬಹುವಚನದ ಸ್ಥಾನದಲ್ಲಿ ಏಕವಚನ ಪ್ರಯೋಗ ವಿರುವುದಾಗಿ ದರ್ಪಣ ಸೂತ್ರ ಹೇಳುತ್ತದೆ. (ಸೂ. 155). ಲಕ್ಷ್ಯವಾಗಿ 'ಪದಯು ಗಳಂಗಳ್ಗೆ ಪದಯುಗಂ' ಎಂಬುದಿದೆ. ''ಯುಗವೆಂದರೆ ಜೋಡಿ'' ಎಂದು ಅರ್ಥ ವಾಗುವುದರಿಂದ 'ಪದಯುಗಂ' ಎಂಬುದು ಸಹಜವಾಗಿ ಏಕವಚನವೇ ಆದುದರಿಂದ ''ಯುಗಳಾರ್ಥದ ಬಹುವಚನಕ್ಕೆ ಏಕತ್ವಂ ನೆಗಟ್ಟುಗಂ'' (ಸೂ. 155) ಎಂಬ ಸೂತ್ರ ಭಾಗ ಅನಾವಶ್ಯಕ (ಸಾಧನೆ : 8–4 ; ಪು. 86).

## ವಿಶೇಷಣ–ವಿಶೇಷ್ಯ ವಚನ ಸಂಬಂಧ

ವಿಶೇಷ್ಯದ ವಚನವನ್ನು ವಿಶೇಷಣ ಅನುಸರಿಸುವುದು ಸಂಸ್ಕೃತದ ಕ್ರಮ. ವಿಶೇಷಣ ಯಾವುದೇ ವಚನಾಂಶವನ್ನು ಹೊಂದದಿರುವುದು ಕನ್ನಡದ ಸ್ವಭಾವ. ಆದರೆ ಲಿಂಗವಿಚಾರದಲ್ಲಿ ಹೇಳಿದಂತೆ ಸಂಸ್ಕೃತದ ವಾಕ್ಯರಚನೆಯ ಪ್ರಭಾವದಿಂದ ಕನ್ನಡದ ಕಾವ್ಯ ಭಾಷೆಯಲ್ಲಿ ವಿಶೇಷಣಗಳಿಗೂ ವಿಶೇಷ್ಯವನ್ನನುಸರಿಸಿ ವಚನದ ನಿರ್ಣಯವಿದೆ. ದರ್ಪಣ ದಲ್ಲಿ ಮಾತ್ರ ಈ ಬಗ್ಗೆ ಸೂಚನೆ ಲಭಿಸುತ್ತದೆ.

ಜಾತಿಯಲ್ಲದಲ್ಲಿಯೂ ಬಹುವಚನ ನಾಮಕ್ಕೆ ಏಕವಚನ ವಿಶೇಷಣ ಬರುವುದಾಗಿ ದರ್ಪಣ ಹೇಳುತ್ತದೆ (ಸೂ. 148).

'ಮಹೇಂದ್ರ ಮಹೈಶ್ವರ್ಯಮಿವೆಲ್ಲಮಧ್ರುವಂ,
ಇವೆಲ್ಲಮಧ್ರುವಂಗಳ್'

ಈ ಲಕ್ಷ್ಯದಲ್ಲಿ 'ಅಧ್ರುವಂ' ವಿಶೇಷಣ. ಮೊದಲ ಸಾಲಿನಲ್ಲಿ ಅದು ಏಕ ವಚನದಲ್ಲಿದ್ದರೆ ಎರಡನೆಯದರಲ್ಲಿ ಬಹುವಚನದಲ್ಲಿದೆ. ಎರಡು ಸಾಲುಗಳಲ್ಲೂ ವಿಶೇಷ್ಯ (ಇವೆಲ್ಲಂ) ಬಹುವಚನದಲ್ಲಿದೆ ಎಂದರೆ ವಿಶೇಷ್ಯ–ವಿಶೇಷಣಗಳಲ್ಲಿ ಸಾಧಾರಣವಾಗಿ ಒಂದೇ ವಚನ ವಿರಬೇಕೆಂಬುದಿಲ್ಲ ಧ್ವನಿತವಾದಂತಾಗುತ್ತದೆ. ಮಾತ್ರವಲ್ಲ,

''ವಿಶೇಷಣವಾಗಿ ಕಾರಕಮೇಕವಚನದೊಳಿರ್ದೊಡಂ
ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುತ್ವವಿಲ್ಲ'' (ಸೂತ್ರ 149ರ ವೃತ್ತಿ)

ಎಂಬ ಹೇಳಿಕೆಯೂ ಮೇಲಿನ ನಿಲುವಿಗೆ ಒತ್ತುಕೊಡುತ್ತದೆ. ಕೆಲವೊಮ್ಮೆ ವಿಶೇಷಣವು ಬಹುವಚನದಲ್ಲಿದ್ದು ವಿಶೇಷ್ಯವು ಏಕವಚನದಲ್ಲಿರಲೆಡೆಯಿದೆಯೆಂಬುದೂ ತಿಳಿಯುತ್ತದೆ. ಮುಂದಿನ ಸೂತ್ರದಲ್ಲಿ ''ವಿಶೇಷಣಂ ಬಹುತಾನತಮೆ ವಿಶೇಷ್ಯಮೇಕವಚನಮೆಯುಕ್ಕುಂ'' (ಸೂ. 150) ಎಂದು ಹೇಳಿ, ಕೊಡುವ ''ನೇರಿದುವು ಬೆರಲ್, ತೋರಿದುವು ಜಘನಂ'' ಎಂಬ ಲಕ್ಷ್ಯಗಳು ಗಮನಿಸತಕ್ಕುವಾಗಿವೆ. ಒಟ್ಟಿನಲ್ಲಿ ವಿಶೇಷಣ ವಿಶೇಷ್ಯಗಳು ಭಿನ್ನವಚನ ಗಳಲ್ಲಿರುವ ಮೇಲಿನ ಸಂದರ್ಭಗಳನ್ನು ವಿಶೇಷವೆಂದು ಪರಿಗಣಿಸಿ ವಿಶೇಷಣ–ವಿಶೇಷ್ಯ ಗಳು ಸಾಮಾನ್ಯವಾಗಿ ಒಂದೇ ವಚನವನ್ನು ಹೊಂದಿರಬೇಕೆಂಬುದು ಪ್ರಾಚೀನ ವೈಯಾ ಕರಣರು ತಾಳಿದ ದೃಷ್ಟಿಯೆಂದು ನಿರ್ಧರಿಸಬಹುದು.

## ಅವಿಷ್ಟಲಿಂಗದ ವಚನ

ಅವಿಷ್ಟಲಿಂಗವೆಂಬ ಸಂಜ್ಞೆಯನ್ನು ವಿಶೇಷಣ–ವಿಶೇಷ್ಯಗಳ ವಚನ ಸಂಬಂಧವಾಗಿ ದರ್ಪಣ ಒಮ್ಮೆ ಮಾತ್ರ ಹೇಳುತ್ತದೆ. ಆ ಸಂಜ್ಞೆಯ ಅರ್ಥದ ಬಗ್ಗೆ ಅದು ಮೌನ ತಾಳಿದೆ. ಸಂಸ್ಕೃತದ ವೈಯಾಕರಣರ ಪ್ರಕಾರ ಅವಿಷ್ಟಲಿಂಗವೆಂದರೆ 'ನಿಯತಲಿಂಗ' ವೆಂದರ್ಥ (D.S.G. p. 60). ಮಹಾಭಾಷ್ಯದಲ್ಲಿ (1–2–52) ಇದು ಮೊದಲ ಬಾರಿಗೆ ಕಾಣಿಸಿಕೊಳ್ಳುತ್ತದೆ. ಅಷ್ಟಾಧ್ಯಾಯಿ ಜೈನೇಂದ್ರಗಳಲ್ಲಿ ಇದು ಬಳಕೆಯಾಗಿಲ್ಲ. ಕಾಶಿಕಾವೃತ್ತಿ, ಶಾಕಟಾಯನ ವ್ಯಾಕರಣದ ಅಮೋಘ ವೃತ್ತಿ, ಶೃಂಗಾರ ಪ್ರಕಾಶ ಮೊದಲಾದವುಗಳಲ್ಲಿ 'ಅವಿಷ್ಟಲಿಂಗ'ದ ವಿವರಣೆಯಿದೆ. ಈ ಗ್ರಂಥಗಳ ನಿರೂಪಣೆಯ ಆಧಾರದಲ್ಲಿ 'ಭಿನ್ನಲಿಂಗದ ಶಬ್ದಗಳಿಗೆ ವಿಶೇಷಣವಾದಾಗಲೂ ತನ್ನ ನಿಯತಲಿಂಗವನ್ನು ಬಿಡದಿರುವ ಶಬ್ದ'' (ಸಾಧನೆ : 8-4 : ಪು. 84) ಎಂದು ಈ ಸಂಜ್ಞೆಯನ್ನು ಅರ್ಥ ಯಿಸಬಹುದು. ಸಾಧಾರಣವಾಗಿ ಸಂಸ್ಕೃತದಲ್ಲಿ ವಿಶೇಷ್ಯವನ್ನು ಹೊಂದಿಕೊಂಡು ವಿಶೇಷ ಣದ ಲಿಂಗ ಬದಲಾವಣೆಗೊಳ್ಳಬೇಕಷ್ಟೆ. ಆ ನಿಯಮಕ್ಕೆ ಇದು ಅಪವಾದವಾಗಿದೆ. ಮಹಾಭಾಷ್ಯದಲ್ಲಿ ಬರುವ ''ಪ್ರಮಾಣಂ ವೇದಾಃ'' ಮೊದಲಾದ ಉದಾಹರಣೆಗಳಲ್ಲಿ ವಿಶೇಷ್ಯವು ಪುಲ್ಲಿಂಗ ಬಹುವಚನದಲ್ಲಿದ್ದರೂ ವಿಶೇಷಣವು ನಪುಂಸಕಲಿಂಗದ ಏಕವಚನ ದಲ್ಲಿದೆ.

ದರ್ಪಣವು ಬಹುವಚನದಲ್ಲಿರುವ ವಿಶೇಷ್ಯಕ್ಕೆ ಅವಿಷ್ಟಲಿಂಗವಾದ ಶಬ್ದವೊಂದು ವಿಶೇಷಣವಾಗಿ ಬಂದಾಗ ಅದು ಏಕವಚನದಲ್ಲಿರುವುದಾಗಿ ಹೇಳುತ್ತದೆ (ಸೂ. 155). ಅದಕ್ಕೊಂದು ಲಕ್ಷ್ಯವಾಗಿ ''ವೇದಂಗಳ್ ಪ್ರಮಾಣಂ'' ಎಂದು ಮಹಾಭಾಷ್ಯದ ಮಾತನ್ನೇ ಅಲ್ಪಮಾರ್ಪಾಟಿನೊಂದಿಗೆ ಕೊಡುತ್ತದೆ. ಸಂಜ್ಞೆಯೂ ಸಂಸ್ಕೃತದ್ದು, ಪ್ರಯೋಗವೂ ಸಂಸ್ಕೃತ ಮೂಲದ್ದು. ಆದರೆ ಕನ್ನಡದಲ್ಲಿ ಸಂಸ್ಕೃತದಂತೆ ನಿಯತಲಿಂಗ ವೆಂಬ ವ್ಯವಸ್ಥೆಯಿಲ್ಲದಿರುವುದನ್ನು ಗಮನಿಸಬೇಕು. ''ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ'' ಎಂಬ ಇನ್ನೊಂದು ಲಕ್ಷ್ಯ ದಲ್ಲಿ 'ಕಾರಣ'ವನ್ನು ಅವಿಷ್ಟಲಿಂಗವೆಂದು ತೋರಿಸಿಕೊಡಲಾಗಿದೆ. ಪ್ರಮಾಣ ಮತ್ತು

ಕಾರಣ-ಈಯೆರಡು ಶಬ್ದಗಳು ಸಂಸ್ಕೃತದಲ್ಲಿ ಸಾಮಾನ್ಯವಾಗಿ ಆವಿಷ್ಟಲಿಂಗಗಳಾದರೂ ಇವುಗಳನ್ನು ಏಕವಚನ ರೂಪದಲ್ಲೇ ಬಳಸಬೇಕೆಂಬ ನಿಯಮವಿಲ್ಲ. ದರ್ಪಣಕಾರ ಪ್ರಧಾನವಾಗಿ ಕನ್ನಡದ ಕಾವ್ಯಭಾಷೆಯನ್ನು ಗಮನಿಸಿದ್ದಾನೆ. ಕಾವ್ಯಾವಲೋಕನದ ''ಪ್ರತಿಭಾನಂ ಕಾವ್ಯವಿದ್ಯಾಪ್ರಚಯಂ ಪರಿಚಯಂ ವೃದ್ಧಸೇವಾನುರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ'' (ಪದ್ಯ 424) ಎಂಬಂತಹ ಪ್ರಯೋಗಗಳಿಂದ ಪ್ರೇರಿತನಾಗಿ ಮೇಲಿನ ನಿಯಮವನ್ನು ಹೇಳಿದಂತಿದೆ. ಸಂಸ್ಕೃತ ವ್ಯಾಕರಣದ ಸಂಜ್ಞೆ ಯೊಂದನ್ನು ಸ್ವೀಕರಿಸಿ ಕನ್ನಡ ಕಾವ್ಯ ಭಾಷೆಯಲ್ಲಿನ ರೀತಿಯನ್ನಾತ ವಿವರಿಸಿದ್ದಾನೆ. ಕನ್ನಡದಲ್ಲಿ ಸಹಜವಾಗಿ ವಿಶೇಷಣಗಳು ವಚನಾಂಶವನ್ನು ಹೇಳುವುದಿಲ್ಲವೆನ್ನುವುದಕ್ಕೆ ಇದು ಸರಿಯಾಗಿ ಹೊಂದಿಕೊಳ್ಳುತ್ತಿರುವುದೂ ಗಮನಾರ್ಹ.

## ವಿಭಕ್ತಿ

ನಾಮವಿಭಕ್ತಿಗೆ ಸಂಬಂಧಪಟ್ಟಂತೆ ವಿಶೇಷಣ ವಿಶೇಷ್ಯಗಳ ಸಂಬಂಧ ಪರಿಶೀಲನೆಗೆ ಅರ್ಹವಾಗಿದೆ. ಸಂಸ್ಕೃತದಲ್ಲಿ ವಿಶೇಷಣವು ವಿಶೇಷ್ಯದ ವಿಭಕ್ತಿಯನ್ನು ಪಡೆಯುತ್ತದೆ:

1. ರಾಮಸ್ತು ಸ್ವೇನ ದಿವ್ಯೇನ ತೇಜಸಾ ರಾಕ್ಷಸಾನಾಂ ವಿನಾಶನೇ ಶಕ್ತಃ
2. ರಾಜೀವಲೋಚನಂ ರಾಮಂ ದ್ರಾತುಮರ್ಹಸಿ

ಈ ವಾಕ್ಯಗಳಲ್ಲಿ ತೇಜಸಾ (ವಿಶೇಷ್ಯ) ಎಂಬುದನ್ನು ಅನುಸರಿಸಿ ದಿವ್ಯ ಎಂಬ ವಿಶೇಷಣ ತೃತೀಯೆಯನ್ನೂ, ರಾಮಂ (ವಿಶೇಷ್ಯ) ಎಂಬುದನ್ನು ಅನುಸರಿಸಿ ರಾಜೀವ ಲೋಚನ ಎಂಬ ವಿಶೇಷಣವು ದ್ವಿತೀಯೆಯನ್ನೂ ಹೊಂದಿವೆ. ಆದರೆ ಕನ್ನಡದಲ್ಲಿ ಹೀಗೆ ವಿಶೇಷಣಗಳಿಗೆ ವಿಭಕ್ತಿಗಳನ್ನು ಹಚ್ಚುವ ಕ್ರಮವಿಲ್ಲ.

ಕನ್ನಡ ವೈಯಾಕರಣರು ವಿಶೇಷಣದ ವಿಭಕ್ತಿ ವಿಚಾರದಲ್ಲಿ ಕನ್ನಡವನ್ನು ಸಂಸ್ಕೃತ ದೊಡನೆ ಹೋಲಿಸಿ ಒಂದು ನಿರ್ಣಯಕ್ಕೆ ಬಂದಿರುವಂತಿದೆ (ಸ್ಮೃತಿ ಸೂ. 33 : ದರ್ಪಣ ಸೂ. 151). ಅದು ದರ್ಪಣದ ಕೆಳಗಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ.

'ವಿಶೇಷಣ ಪದಗಳು ಪ್ರಥಮಾ ವಿಭಕ್ತಿಯನ್ನು ಪಡೆದು ವಾಕ್ಯದ ಮೊದಲ ಲ್ಲಿದ್ದು ಅನ್ವಯಿಸುವಾಗ ಕೊನೆಯ ಕಾರಕದ (ವಿಶೇಷ್ಯದ) ವಿಭಕ್ತಿಯನ್ನೇ ಹೊಂದು ತ್ತವೆ' (ಸೂ. 151)

ಇದಕ್ಕೆ ಲಕ್ಷ್ಯವಾಗಿರುವ ಪದ್ಯಭಾಗವಿದು :

ವೀರನುದಾರಂ ಶುಚಿಗಂ
ಭೀರಂ ನಯಶಾಲಿ ಕೃದುವೊತ್ತರದೇವಂ
ಗಾರೆಬಿಗರ್ ನೃಪತುಂಗಂಗೆ.......

ಈ ಪದ್ಯದಲ್ಲಿ ಆಗ್ರ ಕಾರಕಪದವು (ವಿಶೇಷ್ಯವು) ಚತುರ್ಥಿಯನ್ನು ಹೊಂದಿರುವು ದರಿಂದ "ವೀರಂಗೆ ಉದಾರಂಗೆ ಶುಚಿಗೆ ಗಂಭೀರಂಗೆ ನಯಶಾಲಿಗೆ ಕೈದುವೊತ್ತರದೇವಂಗೆ ನೃಪತುಂಗಂಗಾರೆಱಗರೆಂಬುದನ್ವಯಂ" ಎಂಬುದಾಗಿ ದರ್ಪಣಕಾರ ನಿರ್ದೇಶಿಸುತ್ತಾನೆ. ಸಾಮಾನ್ಯವಾಗಿ ವೀರನಾದ, ಉದಾರನಾದ, ಶುಚಿಯಾದ.... ನೃಪತುಂಗಂಗೆ" ಎಂಬುದು ಸಹಜವಾದ ಕನ್ನಡ ರೀತಿ. ಸಂಸ್ಕೃತ ವಾಕ್ಯರಚನೆಯ ಹಿನ್ನೆಲೆಯಲ್ಲಿ ದರ್ಪಣದ ಮೇಲಿನ ನಿರೂಪಣೆ ಬಂದಿರುತ್ತದೆ.

## ಇತರ ವಿಷಯಗಳು

ಸರ್ವನಾಮ : ಸಂಸ್ಕೃತದಲ್ಲಿ 'ಯತ್' ಎಂಬ ಸರ್ವನಾಮ ಸಂಬಂಧಾರ್ಥಕವಾಗಿದೆ (Relative Pronoun). ಅದು ಯಃ, ಯಾ, ಯತ್ ಎಂದು ಅನುಕ್ರಮವಾಗಿ ಪುಂಸ್ತ್ರೀ ನಪುಂಸಕಗಳ ಪ್ರಥಮೈಕ ವಚನಗಳನ್ನು ಹೊಂದಿದೆ. ಈ ಸರ್ವನಾಮವನ್ನು ಬಳಸಿ ಪ್ರತ್ಯೇಕವಾದ ರೀತಿಯಲ್ಲಿ ವಾಕ್ಯಗಳ ರಚನೆ ಸಂಸ್ಕೃತದಲ್ಲಿ ರೂಢವಾಗಿದೆ. ಕನ್ನಡದಲ್ಲಿ ಇಂತಹ ಸಂಬಂಧಾರ್ಥಕ ಸರ್ವನಾಮಗಳಿಲ್ಲ. ಕನ್ನಡಭಾಷೆಗೆ ಅವುಗಳ ಅಗತ್ಯವೂ ತೋರು ವುದಿಲ್ಲ. ಆದರೆ ಕನ್ನಡ ಕಾವ್ಯಭಾಷೆಯಲ್ಲಿ ಸಂಸ್ಕೃತದ ಪ್ರಭಾವದಿಂದ ಪ್ರಶ್ನಾರ್ಥಕ ಸರ್ವ ನಾಮಗಳ ಮೂಲಕ ಅಂತಹ ವಾಕ್ಯಗಳನ್ನೂ ಸೃಷ್ಟಿಸಲಾಗುತ್ತದೆ. ಹಾಗಾಗಿ ವೈಯಾ ಕರಣರು ಅದರ ಕುರಿತು ಹೇಳುತ್ತಾರೆ. ದರ್ಪಣದಲ್ಲಿ ಕಾತಂತ್ರದ "ಯ ಆಧಾರಸ್ತದಧಿ ಕರಣಮ್" (2-4-11) ಎಂಬ ಸೂತ್ರವನ್ನು "ಆವುದು ತಾನಾಧಾರಮದಧಿಕರಣಂ" (ಸೂ. 144) ಎಂದು ಅನುವಾದಿಸಿಕೊಂಡಿರುವುದನ್ನಿಲ್ಲಿ ನೆನೆಯಬಹುದು. ಇಂತಹ ವಾಕ್ಯಗಳ ಕುರಿತು ದರ್ಪಣದಲ್ಲಿ ಮಾತ್ರ ಪ್ರಸ್ತಾವವಿದೆ : "ಆವಂ, ಆವಳ್, ಆವುದು, ತಾನ್ ಎಂಬಿವುಗಳು ಅವಂ, ಅವಳ್, ಅದು ಎಂಬಿವುಗಳಿಗೆ ಅಧೀನವಾಗಿರುತ್ತವೆ. ಅರ್ಥಾತ್ ಅವಂ, ಅವಳ್, ಅದು ಎಂಬಿವುಗಳಿಲ್ಲದೆ ಅವು ಅನ್ವಯಿಸಿಕೊಳ್ಳಲಾರವು. ಹಾಗಾಗಿ ಅವು ಪರತಂತ್ರಗಳು"(ಸೂ. 154) ಕೆಳಗಿನ ಲಕ್ಷ್ಯಗಳಿಂದ ಇದು ಸ್ಪಷ್ಟವಾಗು ವುದು.

1. ಆವನಧಿಕ ಪುಣ್ಯನವನೆ ಸೇವ್ಯಂ
2. ಆವಳ್ ಪತಿವ್ರತೆಯವಳೆ ಮಾನ್ಯೆ
3. ಆವುದು ಚೆಲ್ವಾದುದದುವೆ ದರ್ಶನೀಯಂ

ಈ ವಾಕ್ಯಗಳು ಕೆಳಗಣ ಸಂಸ್ಕೃತ ವಾಕ್ಯಗಳ ಪಡಿಯಚ್ಚು :

1. ಯಃ ಅಧಿಕಪುಣ್ಯವಾನ್ ಸಃ ಸೇವ್ಯಃ
2. ಯಾ ಪತಿವ್ರತಾ ಸಾ ಮಾನ್ಯಾ
3. ಯತ್ ಸುಂದರಂ ತತ್ ದರ್ಶನೀಯಂ

ಇಲ್ಲಿ ಸಂಸ್ಕೃತದ ಸಂಬಂಧಾರ್ಥಕ ಸರ್ವನಾಮಗಳ ಸ್ಥಾನದಲ್ಲಿ ಕನ್ನಡದ ಪ್ರಶ್ನಾರ್ಥಕ ಸರ್ವನಾಮಗಳು ಬಳಕೆಗೊಂಡಿವೆ. ಕನ್ನಡದ ವಾಕ್ಯರಚನೆಯ ಮೇಲಾದ ಸಂಸ್ಕೃತದ ಪ್ರಭಾವಕ್ಕೆ ಇದೊಂದು ಸುಂದರ ನಿದರ್ಶನ. ಕನ್ನಡದ ಕಾವ್ಯಭಾಷೆಯ ವಾಕ್ಯರಚನೆಯನ್ನು ಹೇಳುವ ವ್ಯಾಕರಣದಲ್ಲಿ ಇಂತಹ ರಚನೆಯ ಪ್ರಸ್ತಾವ ಸ್ವಾಭಾವಿಕ.

ಸಮುಚ್ಚಯ : ಒಂದು ವಾಕ್ಯದಲ್ಲಿ ಕಾರಕಗಳನ್ನು ಜೋಡಿಸುವ ಕೊಂಡಿಗಳಾಗಿ ಕೆಲಸ ನಿರ್ವಹಿಸತಕ್ಕುವು ಸಮುಚ್ಚಯಗಳು. ಎಂದರೆ ಒಂದು ವಾಕ್ಯದಲ್ಲಿ ಎರಡು ಅಥವಾ ಎರಡಕ್ಕಿಂತ ಹೆಚ್ಚು ನಾಮಗಳನ್ನು ಬೆಸೆದು ಕಾರಕಸಂಪದವುಂಟುಮಾಡುವ ಸಾಧನಗಳವು ಎಂದರ್ಥ. ಭೂಷಣ ದರ್ಪಣಗಳು ''ಅಮ್ ಮತ್ತು ಉಮ್''ಎಂಬುದಾಗಿ ಸಮುಚ್ಚಯಗಳೆರಡೆಂದು ಹೇಳುತ್ತವೆ (ಭೂಷಣ: ಸೂ. 253 ; ದರ್ಪಣ : ಸೂ. 329). ಇವುಗಳಲ್ಲಿ 'ಉಮ್' ದ್ವಿತೀಯಾ ವಿಭಕ್ತಿ ಮತ್ತು ಪ್ರಕೃತಿಯ ನಡುವೆ ಬರುವುದಾಗಿಯೂ, ಮಿಕ್ಕ ವಿಭಕ್ತಿಗಳ ಮೇಲೆ ಸಮುಚ್ಚಯಗಳು ಹತ್ತುವುದಾಗಿಯೂ ದರ್ಪಣ ಹೇಳುತ್ತದೆ. ಷಷ್ಠಿಯ ಮೇಲೆ ಯಾವುದೇ ಸಮುಚ್ಚಯ ಬಾರದಿರುವುದನ್ನು ಅದು ತಿಳಿಸುತ್ತದೆ. (ಸೂ. 133) ಷಷ್ಠಿಗೆ ಕಾರಕತ್ವವಿಲ್ಲದಿರುವುದಿಲ್ಲಿ ಗಮನಾರ್ಹ. ಪ್ರಯೋಗಗಳನ್ನು ಪರಾಂಬರಿಸಿದರೆ 'ಉಮ್' ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಸಪ್ತಮೀ ವಿಭಕ್ತಿಗಳಿಗೆ ಹತ್ತುವುದಾದರೆ 'ಅಮ್' ಚತುರ್ಥೀ ಮತ್ತು ಸಪ್ತಮಿಯಲ್ಲಿ ಮಾತ್ರ ಹತ್ತುವುದು ಗೋಚರಿಸುತ್ತದೆ.

ಒಂದು ವಾಕ್ಯದಲ್ಲಿ ಒರುವ ಕೆಲವು ಕಾರಕಗಳಿಗೆ ಮಾತ್ರವೆ ಸಮುಚ್ಚಯಗಳನ್ನು ಹಚ್ಚಿ ಇನ್ನು ಕೆಲವನ್ನು ಹಾಗೆಯೆ ಬಿಟ್ಟು ಬಿಡುವುದು 'ಸಮುಚ್ಚಯದೋಷ' ವಾಗುವುದೆಂದು ಕವಿರಾಜಮಾರ್ಗ ಹೇಳುತ್ತದೆ. ಅಂತಹ ಪ್ರಯೋಗ

''ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನುಂ ಪ್ರಜೆಯುಂ ಪರಿವಾರಮುಂ'' (1-132)

ಮೇಲಿನ ಸಾಲಿನಲ್ಲಿ ಕೊನೆಗೆ ಬರುವ ಗುಣವೃದ್ಧರ್ ಎಂಬುದೂ ಎರಡನೆಯ ಸಾಲಿನಲ್ಲಿ ಬರುವ ಮೂರು ಕಾರಕಗಳೂ ಸಮುಚ್ಚಯವನ್ನು ಹೊಂದಿಲ್ಲ. ಇದು ಸಮುಚ್ಚಯ ದೋಷ. ''ಸಮುಚ್ಚಯ ಸೇರುವಲ್ಲಿ ಕಾರಕಗಳಾಗಲಿ ಕರ್ತೃಪದಗಳಾಗಲಿ ಹಲವು ಇರಲೇಬೇಕು....ಆದ್ದರಿಂದ ಅವುಗಳನ್ನು ಕ್ರಮವಿಡಿದು ನೆಲೆಗೊಳಿಸದಿದ್ದರೆ ಅರ್ಥಕ್ಕೂ ಭಂಗವಾಗುವುದು. (ಕ. ಮಾ. ವಿ. ಪು. 156). ಹಾಗೆ ಮೇಲಿನ ಸಾಲುಗಳನ್ನು ಕ್ರಮಗೊಳಿಸಿ ಕವಿರಾಜಮಾರ್ಗಕಾರ ಹೀಗೆ ಕೊಡುತ್ತಾನೆ :

ನೃಪಮುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರರುಂ ಸುರರುಂ ಗುಣವೃದ್ಧರುಂ
ವಿಪುಳರಾಗ ಪರರಾಸುಗೆ (1-133)

ದರ್ಪಣದಲ್ಲಿ ಕವಿರಾಜಮಾರ್ಗದ ಈ ಅಭಿಪ್ರಾಯಕ್ಕಿಂತ ಸ್ವಲ್ಪ ಭಿನ್ನವಾದ ನಿರೂಪಣೆಯನ್ನು ಕಾಣಬಹುದು. ಒಂದು ವಾಕ್ಯದಲ್ಲಿ ಬರುವ ಕೆಲವು ಕಾರಕಗಳಿಗೆ

ಸಮುಚ್ಚಯಗಳನ್ನು ಹಚ್ಚಿ ಇನ್ನು ಕೆಲವನ್ನು ಬಿಟ್ಟರೂ ಅದು ದೋಷವೆನಿಸುವುದಿಲ್ಲ. ಆದರೆ ಅನ್ವಯಮಾಡುವಾಗ ಸಮುಚ್ಚಯ ಹಚ್ಚದಿರುವಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು (ಸೂ. 156). "ಆಯುಂ ಸಿರಿತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹಸೇನಕ್ಷಿತೀಶಂ" (ಸೂ. 156ರ ಪ್ರಯೋಗ) ಇದನ್ನು ಅನ್ವಯ ಮಾಡುವಲ್ಲಿ "ಆಯುಂ ಸಿರಿಯುಂ, ತಾಯುಂ ತಂದೆಯುಂ ಕಣ್ಣುಂ ಗತಿಯುಂ ಎನಿಸಿದಪಂ ಸಿಂಹಸೇನ ಕ್ಷಿತೀಶಂ" ಎಂದು ಕಡೆಯ ಸಮುಚ್ಚಯದ 'ಉಮ್' ಅನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಎಂದರೆ ಹೆಚ್ಚುಕಡಮೆ ಕವಿರಾಜಮಾರ್ಗಕಾರನ ಹೇಳಿಕೆಯ ಸಮೀಪಕ್ಕೆ ಬಂದಂತಾಯಿತು.

ಇಂತಹ ಸಮುಚ್ಚಯದ ಪ್ರಯೋಗದಲ್ಲೂ ಸಂಸ್ಕೃತದ ಛಾಯೆಯಿದೆ. "ವಾಕ್ಯದಲ್ಲಿ ಬರುವ ಒಂದೇ ವಿಭಕ್ತಿಯಲ್ಲಿಯ ಪದಗಳನ್ನು ಸಮುಚ್ಚಯಗೊಳಿಸುವ ಪದ್ಧತಿಯು ಸಂಸ್ಕೃತದಿಂದ ಕನ್ನಡಕ್ಕೆ ಬಂದಂತೆ ತೋರುತ್ತದೆ (ಕ.ಭಾ.ಚ. ಪು. 468). ಏಕೆಂದರೆ ಸಂಸ್ಕೃತದಲ್ಲಿ ಸಮುಚ್ಚಯಗಳ ಬಳಕೆ ತೀರಾ ಸ್ವಾಭಾವಿಕ. ಅಂತೆಯೇ ಕನ್ನಡದಲ್ಲಿ ಸಮುಚ್ಚಯವಿಲ್ಲದೇನೇ ವಾಕ್ಯದ ನಿರ್ವಾಹವಾಗುತ್ತದೆ. "ಪೊಡೆವ ಸಿಡಿಲ್ ಕರೆವ ಮಳೆ ಬಡಿವ ಕಲ್ಗುಂಡು ದೂಳಿಡುವ ಬಿರುಗಾಳಿ" (ಅದೇ.) ಇಂತಹ ಪ್ರಯೋಗಗಳು ಕನ್ನಡಕ್ಕೆ ಸಹಜವೆನಿಸುತ್ತವೆ.

**ಯುಗಪದುಕ್ತಿಯಲ್ಲಿ ಪುರುಷ ಪ್ರಯೋಗ :** ಒಂದು ವಾಕ್ಯದ ಕರ್ತೃ ಸ್ಥಾನದಲ್ಲಿ ಬೇರೆ ಬೇರೆ ಪುರುಷವಾಚಕ ಸರ್ವನಾಮಗಳಿದ್ದಾಗ ಅಥವಾ ಸಾಂಪ್ರದಾಯಿಕ ವ್ಯಾಕರಣಗಳು ಹೇಳುವ ಅಸ್ಮದರ್ಥ, ಯುಷ್ಮದರ್ಥ ಹಾಗೂ ಅನ್ಯಾರ್ಥದ ಸರ್ವನಾಮಗಳಲ್ಲಿ ಒಂದಕ್ಕಿಂತ ಹೆಚ್ಚಿನ ಸರ್ವನಾಮಗಳಿದ್ದಾಗ ಕ್ರಿಯಾಪದವು ಯಾವ ಪುರುಷ ಪ್ರತ್ಯಯಗಳನ್ನು ಹೊಂದಿರಬೇಕಾಗಿದೆಯೆಂಬುದು ಜಿಜ್ಞಾಸೆಯ ವಿಷಯ. ಈ ಬಗ್ಗೆ ಖಚಿತವಾದ ನಿರೂಪಣೆ ಸಂಸ್ಕೃತ ವ್ಯಾಕರಣಗಳಲ್ಲಿದೆ. "ಯುಗಪದ್ವಚನೇ ಪರಃ ಪುರುಷಾಣಾಮ್" (3-1-4) ಎಂಬ ಸೂತ್ರ ಈ ಕುರಿತೇ ಗ್ರಥಿತವಾಗಿದೆ. ಈ ಸೂತ್ರದ ವೃತ್ತಿಯಲ್ಲಿ "ಯುಗಪದೇಕ ಕಾಲಾರ್ಥಃ ಯುಗಪದ್ವಚನ ಏಕಕ್ರಿಯಾ ಕಾಲಾಭಿಧಾನೇ ಪುರುಷಾಣಾಂ ಮಧ್ಯೇಯಃ ಪರಃ ಸ ಭವತಿ" ಎಂದು ದುರ್ಗಸಿಂಹ ಹೇಳುತ್ತಾನೆ. ಪುರುಷಗಳ ಏಕಕಾಲಿಕ ಪ್ರಯೋಗದಲ್ಲಿ ಶ್ರೇಷ್ಠವಾದ (ಪರಃ) ಪುರುಷವನ್ನೇ ಬಳಸಬೇಕೆಂದಿದರ ಅರ್ಥ. ಸಂಸ್ಕೃತದಲ್ಲಿ ಮೂರು ಪುರುಷಗಳ ಏಕಕಾಲಿಕ ಪ್ರಯೋಗದಲ್ಲಿ ಉತ್ತಮ ಪುರುಷಕ್ಕೆ ಸ್ಥಾನ. ಅದನ್ನುಳಿದರೆ ಮಧ್ಯಮ ಪುರುಷಕ್ಕೆ ಆದ್ಯತೆ. ಸಂಸ್ಕೃತದ ಈ ರೀತಿ ಕನ್ನಡಕ್ಕೂ ಅನ್ವಯವಾಗುತ್ತಿದ್ದು ಕನ್ನಡ ವೈಯಾಕರಣರಿಗೆ ಉಪಯುಕ್ತ ಕಾತಂತ್ರ ಸೂತ್ರ ಹಾಗೂ ದುರ್ಗಸಿಂಹನ ವೃತ್ತಿಯನ್ನು ಯಥಾವತ್ತಾಗಿ ಎತ್ತಿಕೊಳ್ಳಲು ಅನುಕೂಲವಾಗಿದೆ.

ಯುಗಪದುಕ್ತಿಯ ಕುರಿತು ಕನ್ನಡ ವ್ಯಾಕರಣಗಳು ಹೀಗೆ ಹೇಳುತ್ತವೆ :

ಸ್ಮೃತಿ : 'ಯುಗಪತ್ಪ್ರಯೋಗಮಾದುದು ಗಣನೆಯೊಳ್
ಮುಂದೆ ನಿಂದುದಾವುದದಕ್ಕುಂ" ಸೂ. 86

ಭೂಷಣ : "ಯುಗಪತ್ಪ್ರಯೋಗೇ ಪರಸ್ತೇಷಾಂ" ಸೂ. 201
ದರ್ಪಣ : "ಯುಗಪದುಕ್ತಿಗಂತ್ರಮ, ಪುರುಷಂ ಪರಂ
ಅದನುಳಿದಿರೆ ಮಧ್ಯಮ ಪುರುಷಂ
ಕ್ರಮಗಣನಮಿರೆಯಮಪೊಲ್ದುಂತಿರೆಯುಂ" ಸೂ. 238

ಸ್ಮೃತಿಯು ಕಾತಂತ್ರದ "ಪರ" ಎಂಬುದನ್ನು "ಮುಂದೆ ನಿಂದುದು" ಎಂದು ಕನ್ನಡಿಸಿ ಕೊಂಡಿದೆ. ಭೂಷಣವು ಹೆಚ್ಚೇನೂ ಬದಲಾವಣೆ ಮಾಡಿಕೊಂಡಿಲ್ಲ. ದರ್ಪಣ ಮಾತ್ರ ಮೊದಲಿನ ಗ್ರಂಥಗಳ ಹೇಳಿಕೆಗಳನ್ನು ಹಿಂಜಿ ವಿಸ್ತರಿಸಿದೆ. "ಕ್ರಮಗಣನಮಿರಯು ಮೊಲ್ದುಂತಿರೆಯುಂ" ಎಂಬ ಹೇಳಿಕೆ ಮಾತ್ರ ಹೆಚ್ಚಿನದಾಗಿದೆ. ಆದರೆ ಸಂಸ್ಕೃತ ಹಾಗೂ ಕನ್ನಡದ ಪ್ರಯೋಗಗಳನ್ನು ಗಮನಿಸಿದರೆ ಮೊದಲಿನ ಗ್ರಂಥಗಳದೂ ಅದೇ ಅಭಿಪ್ರಾಯ ಮೆಂಬುದು ದೃಢವಾಗುತ್ತದೆ. ದರ್ಪಣದ ಪ್ರಯೋಗಗಳು ವೈವಿಧ್ಯಪೂರ್ಣವಾಗಿವೆ.

1. ಆತನುಂ ನೀನುಂಮಾನುಂ ಪೋಜಿಗಾಗಿರ್ದೆವು........
2. ಆತನುಮಾನುಂ ನೀನುಂ ಕಜ್ಜದ ತೆಱನನಱಿದು ಪೇೞ್ದಿವು.
3. ಆನುಂ ನೀನುಮಾತನುಂ ಬೆಸಕೆಯ್ವೆವು
4. ಆತನುಂ ನೀನುಂ ಕೂಡಿದಿರಿ........
5. ನೀನುಮಾತನುಂ ಕೂಡಿದಪಿರ್

ಮೊದಲ ಮೂರು ವಾಕ್ಯಗಳು ಉತ್ತಮ ಪುರುಷದ ಮುಖ್ಯತ್ವವನ್ನೂ ಉಳಿದೆರಡು ವಾಕ್ಯಗಳು ಮಧ್ಯಮಪುರುಷದ ಮುಖ್ಯತ್ವವನ್ನೂ ತೋರಿಸಿಕೊಡುತ್ತವೆ. ಎಂದರೆ ಆಯಾ ವಾಕ್ಯಗಳಲ್ಲಿ ಈ ಪುರುಷ ಪ್ರತ್ಯಯಗಳನ್ನು ಕ್ರಿಯಾಪದಗಳು ಹೊಂದಿವೆ ಯೆಂದರ್ಥ. ಸಂಸ್ಕೃತ ಮತ್ತು ಕನ್ನಡಕ್ಕೆ ಸಮನಾದ ಭಾಷಾತತ್ವವನ್ನು ಕನ್ನಡ ವೈಯಾ ಕರಣರು ಸಂಸ್ಕೃತ ವ್ಯಾಕರಣದ ಸೂತ್ರವೊಂದರ ಮೂಲಕ ಸಮರ್ಥವಾಗಿ ನಿರೂಪಿಸುವು ದಕ್ಕೆ ಇದೊಂದು ಸುಂದರ ನಿದರ್ಶನ.

ಯುಗಪತ್ ಪ್ರಯೋಗವಿಲ್ಲದಲ್ಲಿ ಆಯಾ ಪುರುಷಪ್ರತ್ಯಯಗಳು ಸ್ವತಂತ್ರವಾಗಿ ಬಳಸಲ್ಪಡುತ್ತವೆಯೆಂಬುದೂ ಮೇಲಿನ ನಿರೂಪಣೆಯಿಂದ ಧ್ವನಿತವಾಗುತ್ತದೆ. ಹಾಗಿದ್ದೂ ಸ್ಮೃತಿ ದರ್ಪಣಗಳು ಅದನ್ನು ವಾಚ್ಯವಾಗಿ ಹೇಳುತ್ತವೆ.

ಸ್ಮೃತಿ : "ಎಂಗದಾ ಸ್ವಾರ್ಥದೊಳಂತವು
ನೆಗೞ್ಗುಂ ತಂತಮ್ಮ ಸಾಧನಂಗಳೊಳ್ ಅನಿತುಂ" ಸೂ. 86

ದರ್ಪಣ : "ಪುರುಷಪ್ರತ್ಯಯಮವು ಸ್ವಾರ್ಥೋಚಿತ್ತರಿತಂಗಳ್" ಸೂ. 234

ಭೂಷಣದ "ಸ್ವಾರ್ಥೇ ಕಾಲೇ" (ಸೂ. 202) ಎಂಬ ಸೂತ್ರವೂ ಇದನ್ನು ಧ್ವನಿಸುತ್ತದೆ.

**ಅಧ್ಯಾಹಾರ :** ಒಂದು ವಾಕ್ಯವು ಪೂರ್ಣವೆನಿಸಬೇಕಿದ್ದರೆ ಅದರಲ್ಲಿ ಒಂದು ಕರ್ತೃಪದವೂ ಒಂದು ಕ್ರಿಯಾಪದವೂ ಇರಬೇಕು. ಕೆಲವೊಮ್ಮೆ ಕಾವ್ಯಭಾಷೆಯಲ್ಲಿ ಇವುಗಳಲ್ಲೊಂದು ಮಾತ್ರವಿದ್ದು ಮತ್ತೊಂದನ್ನು ಅನ್ವಯುಮಾಡುವಲ್ಲಿ ಅಧ್ಯಾರೋಪ ಯಾ ಅಧ್ಯಾಹಾರ ಮಾಡಬೇಕಾಗಿ ಬರುವುದುಂಟು. ಈ ವಿಚಾರ ಸಂಸ್ಕೃತ ಹಾಗೂ ಕನ್ನಡ ಕಾವ್ಯಭಾಷೆಗಳಿಗೆ ಸಮಾನವಾಗಿದೆ. ಹಾಗೆ ಅಧ್ಯಾಹಾರದ ವಿಚಾರವಾಗಿ (ಕವಿ ರಾಜಮಾರ್ಗ ಸೂ. 1-101; ಸ್ಮೃತಿ ಸೂ. 34) ದರ್ಪಣಗಳಲ್ಲಿ ವಿವರಣೆಯಿದೆ.

"ಕಾರಕವನ್ನಾಗಲಿ, ಕ್ರಿಯೆಯನ್ನಾಗಲೀ ನೇಯದ ದೋಷವಿಲ್ಲದಂತೆ ಅಧ್ಯಾರೋಪ ಮಾಡಬೇಕು. ವಿಶಂಕೆಯ ಎಕಾರಕ್ಕೂ 'ಉಮ್' ಎಂಬ ಸಮುಚ್ಚಯಕ್ಕೂ ಅಧ್ಯಾರೋಪವುಂಟು. ಆದರೆ ಈ ಅಧ್ಯಾರೋಪವು ಅಸಮರ್ಥವಾದರೆ ಎಂದರೆ ಉದ್ದಿಷ್ಟಾರ್ಥವನ್ನು ಕೊಡದೆ ಹೋದರೆ ಅದು 'ನೇಯದ ದೋಷ'ವೆನಿಸುತ್ತದೆ" (ದರ್ಪಣ ಸೂ. 156).

ಪ್ರಯೋಗಗಳಿಂದ ಈ ವಿಚಾರ ಸ್ಪಷ್ಟವಾಗುತ್ತದೆ :

1. ಕರ್ಣನುಂ ದಾನಿ ಮೇಣೇತನುಂ
2. ಧೃತರಾಷ್ಟ್ರಂ ನುಡಿದಾರ್ತನೇ... ....
3. ಉಚಿತವುಂಚಿಪೆಂ ಬೆರ್ಚಿಪೇ—...

ಮೊದಲ ವಾಕ್ಯ ಅರ್ಥಪೂರ್ಣವಾಗಬೇಕಾದರೆ 'ದಾನಿ' ಎಂಬ ಕಾರಕವನ್ನೂ ಎರಡನೆಯ ವಾಕ್ಯದಲ್ಲಿ 'ಆಜಿಂ' ಎಂಬ ಕ್ರಿಯೆಯನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಮೂರನೇ ವಾಕ್ಯದಲ್ಲಿ 'ಉಚಿತಮೆ ಅಂಚಿಪೆಂ ಬೆರ್ಚಿಪೆ' ಎಂದು ಬಿಡಿಸಿಕೊಂಡು ವಿಶಂಕೆಯ ಎಕಾರವನ್ನು ಅಧ್ಯಾರೋಪ ಮಾಡಿಕೊಂಡರೆ ಮಾತ್ರ ಅರ್ಥ ಸ್ಪಷ್ಟವಾಗುವುದು.

ಸಮುಚ್ಚಯದ ಉಮುವಿನ ಅಧ್ಯಾಹಾರವನ್ನು ಹಿಂದೆಯೇ ಸನಿಶಾಕ್ಷಿಸಲಾಗಿದೆ.

ಸ್ಮೃತಿ ಭೂಷಣ ದರ್ಪಣಗಳಲ್ಲಿ 'ಅಲ್ಲಿ ಇಲ್ಲಿ' ಹಲವಾರು ವಿಷಯಗಳ ನಿರೂಪಣೆಯ ಜೊತೆಯಲ್ಲಿ ಬರುವ ವಾಕ್ಯರಚನೆಗೆ ಸಂಬಂಧಿಸಿದ ವಿಚಾರಗಳು ಮೇಲಿನವು. ವಾಕ್ಯರಚನೆಯ ತತ್ವಗಳನ್ನು ಪ್ರತ್ಯೇಕವಾದ ಅಧ್ಯಾಯವಾಗಿ ಕನ್ನಡ ವ್ಯಾಕರಣಗಳಲ್ಲಿ ನಿರೀಕ್ಷಿಸಲೆಡೆಯಿಲ್ಲ.

### ಅಡಿಟಿಪ್ಪಣಿ

1. ನೋಡಿ : ಕ.ಮಾ.ವಿ. ಪು. 150 'ಸಮಾನ ಸ್ವರೂಪ ಗುಣಾದಿಗಳಿಂದ ಕೂಡಿದ ಪದಾರ್ಥ ವರ್ಗಕೆ ಜಾತಿಯೆಂದು ಹೆಸರು'.

# ಅಧ್ಯಾಯ 14

## ಉಪಸಂಹಾರ

ವ್ಯಾಕರಣ ಗ್ರಂಥಗಳು ನಿರ್ಮಾಣಗೊಳ್ಳುವ ಪೂರ್ವದಲ್ಲೇ ಹಳಗನ್ನಡ ಕಾವ್ಯ ಭಾಷೆಯಲ್ಲಿ ಧಾರಾಳ ಸಂಸ್ಕೃತ ಶಬ್ದಗಳು ಬಳಕೆಯಾಗತೊಡಗಿದ್ದುವು. ವೈಯಾಕರಣರು ಕನ್ನಡ ಭಾಷೆಯ ಮೇಲಾಗಿದ್ದ ಸಂಸ್ಕೃತದ ಪ್ರಭಾವವನ್ನೂ ಕನ್ನಡದ ಸ್ವಂತಿಕೆಯನ್ನೂ ಕಾವ್ಯಪ್ರಯೋಗಗಳಲ್ಲಿ ಗುರುತಿಸಿದರು. ಸಂಸ್ಕೃತ ವ್ಯಾಕರಣಗಳ ನಿಯಮಗಳು, ಚೌಕಟ್ಟು ಯಾವುದೇ ಭಾಷೆಯ ನಿರೂಪಣೆಗೆ ಸಮರ್ಪಕವಾಗಿ ಹೊಂದುತ್ತವೆಯೆಂಬ ನಂಬಿಕೆ ಯಿಂದ್ದ ಅವರು ಸಂಸ್ಕೃತ ವ್ಯಾಕರಣ ವಿಧಾನವನ್ನನುಸರಿಸಿ ಹಳಗನ್ನಡ ಕಾವ್ಯಭಾಷೆ ಯನ್ನು ವಿಶ್ಲೇಷಿಸಿದರು. ಇದರ ಪರಿಣಾಮವಾಗಿ ಸ್ಮೃತಿ ಭೂಷಣ ದರ್ಪಣಗಳು ಸಂಸ್ಕೃತದ ವಿಭಿನ್ನ ವ್ಯಾಕರಣಗಳ ಪ್ರಭಾವಕ್ಕೊಳಗಾದುದನ್ನು ಹಿಂದಿನ ಅಧ್ಯಾಯಗಳಲ್ಲಿ ಸಮೀಕ್ಷಿಸಲಾಗಿದೆ. ಈ ಸಮೀಕ್ಷೆಯ ಪ್ರಧಾನವಾದ ವಿಚಾರಗಳನ್ನು ಹೀಗೆ ಸಂಗ್ರಹಿಸ ಬಹುದು.

**1. ಸಾಮಾನ್ಯ ವಿಚಾರಗಳು :**

(ಅ) ಕನ್ನಡ ವ್ಯಾಕರಣಗಳು ಐಂದ್ರ ಪದ್ಧತಿಗೆ ಸೇರಿದ ಕಾತಂತ್ರ ವ್ಯಾಕರಣವನ್ನನು ಸರಿಸಿವೆ. 'ಕಾತಂತ್ರ' ಜೈನ ವ್ಯಾಕರಣವಲ್ಲ.

(ಆ) ಕನ್ನಡ ವ್ಯಾಕರಣಗಳು ಪ್ರಕ್ರಿಯಾ ಪದ್ಧತಿಯ ವ್ಯಾಕರಣಗಳು.

(ಇ) ಸ್ಮೃತಿ ಭೂಷಣಕರ್ತರು ಜೈನರಾದರೂ ಅವರ ವ್ಯಾಕರಣದ ಮೇಲೆ ಜೈನ ಧರ್ಮದ ಪ್ರಭಾವವಿಲ್ಲ. ಸ್ಮೃತಿ ಭೂಷಣಗಳು ಜೈನೇಂದ್ರ, ಶಾಕಟಾಯನ ವ್ಯಾಕರಣಗಳಿಂದ ವ್ಯಾಕರಣ ವಿಚಾರಗಳನ್ನು ಎತ್ತಿಕೊಂಡುದು ಬಹಳ ಕಡಿಮೆ.

(ಈ) ಭೂಷಣಕಾರ ನಾಗವರ್ಮ ಸ್ಮೃತಿಕಾರನಿಗಿಂತ ಭಿನ್ನನೂ ಅರ್ವಾಚೀನನೂ ಆಗಿದ್ದಾನೆ (ಅಧ್ಯಾಯ : 3).

**2. ಸಂಸ್ಕೃತ ವ್ಯಾಕರಣಗಳ ಪ್ರಭಾವ ಎಲ್ಲೆಲ್ಲಿ?**

(ಅ) **ನಿರೂಪಣಾ ಪದ್ಧತಿ :**

1. ಸೂತ್ರ–ವೃತ್ತಿ–ಪ್ರಯೋಗ–ಹೀಗೆ ವ್ಯಾಕರಣ ವಿಷಯಗಳ ನಿರೂಪಣೆ

ಸಂಸ್ಕೃತದ ಪ್ರಕ್ರಿಯಾ ಗ್ರಂಥಗಳಲ್ಲಿ ಗೋಚರಿಸುತ್ತದೆ. ಭೂಷಣ ದರ್ಪಣಗಳು ಈ ತೆರನಾಗಿಯೇ ಕನ್ನಡ ವ್ಯಾಕರಣವನ್ನು ನಿರೂಪಿಸುತ್ತವೆ. ಆದರೆ ಸ್ಮೃತಿ ಮಾತ್ರ ವೃತ್ತಿಯನ್ನು ಕೈಬಿಟ್ಟಿದೆ.

2. ಸ್ಮೃತಿ ದರ್ಪಣಗಳು ಸೂತ್ರ ರಚನೆಯಲ್ಲಿ ಪ್ರಾತಿಶಾಖ್ಯಗಳು ಮತ್ತು ಕಾತಂತ್ರವನ್ನು ಪ್ರಧಾನ ಮಾದರಿಯಾಗಿಟ್ಟುಕೊಂಡಿವೆ. ಕಾರಕಗಳನ್ನು ನಿರೂಪಿಸುವಲ್ಲಿ ಅಷ್ಟಾಧ್ಯಾಯಿಗೂ ಋಣಿಗಳಾಗಿವೆ. ಹಲವೆಡೆಗಳಲ್ಲಿ ಈ ಗ್ರಂಥಗಳ ಸೂತ್ರಗಳನ್ನು ಕನ್ನಡಕ್ಕೆ ಅನುವಾದಿಸಿವೆ. ಭೂಷಣ ಈ ವ್ಯಾಕರಣಗಳನ್ನಲ್ಲದೆ ಸಿ.ಹೇ.ಶದ ಸೂತ್ರಗಳನ್ನು ಅನುಸರಿಸುತ್ತದೆ. ಸಂಸ್ಕೃತ ವ್ಯಾಕರಣಗಳ ಸೂತ್ರಗಳು ಇಲ್ಲಿ ವೃತ್ತಿಯಾಗಿ, ಅಲ್ಲಿನ ವೃತ್ತಿವಾಕ್ಯಗಳು ಇಲ್ಲಿ ಸೂತ್ರಗಳಾಗಿ ಬಂದುದೂ ಇದೆ.

3. ಭೂಷಣ ದರ್ಪಣಗಳು ಅಷ್ಟಾಧ್ಯಾಯಿ-ಕಾತಂತ್ರಗಳಿಂದ ಪ್ರಯೋಗ ವಾಕ್ಯಗಳನ್ನು ಕೆಲವೊಮ್ಮೆ ಅನುವಾದಿಸಿ ಕೊಡುತ್ತವೆ (ಅಧ್ಯಾಯ : 4).

## ಆ) ಪಾರಿಭಾಷಿಕ ಪದಗಳು

ಕನ್ನಡ ವ್ಯಾಕರಣಗಳು ಐಂದ್ರ ಪದ್ಧತಿಗೆ ಸೇರಿದವುಗಳಾದ್ದರಿಂದ ಪ್ರಾತಿಶಾಖ್ಯಗಳು ಮತ್ತು ಕಾತಂತ್ರದಿಂದ ಪಾರಿಭಾಷಿಕ ಪದಗಳನ್ನು ಸ್ವೀಕರಿಸಿವೆ. ಸ್ವರ, ವ್ಯಂಜನ, ಸಂಧ್ಯಕ್ಷರ, ಸಮಾನ ಇತ್ಯಾದಿ. ಅಷ್ಟಾಧ್ಯಾಯಿ ಮತ್ತು ಕಾತಂತ್ರ ಇವೆರಡರಲ್ಲೂ ಗೋಚರಿಸುವ ಸಂಧಿ, ಸಂಹಿತೆ, ಕಾರಕ, ಸಮಾಸ ಮೊದಲಾದುವು ಇಲ್ಲಿ ಬಳಕೆಗೊಂಡಿವೆ. ಲಿಂಗ, ಯೋಗವಾಹ ಮೊದಲಾದುವು ಕಾತಂತ್ರ ಸಂಪ್ರದಾಯದಿಂದಲೂ ವಿಸರ್ಗ ಸಿ.ಹೇ.ಶ. ದಿಂದಲೂ 'ನಪ್' ಜೈನೇಂದ್ರದಿಂದಲೂ 'ಉಪಾಂತ' ಚಾಂದ್ರದಿಂದಲೂ ಎತ್ತಿಕೊಂಡ ಕೆಲವು ಪಾರಿಭಾಷಿಕ ಪದಗಳು. 'ಅವರ್ಗ' ಮತ್ತು ಕೃತ್ರಿಮಪ್ಟಲಿಂಗ ಹೀಗೆ ಕೆಲವು ಕನ್ನಡ ವೈಯಾಕರಣರೇ ನಿರ್ಮಿಸಿಕೊಂಡ ಪಾರಿಭಾಷಿಕ ಪದಗಳೂ ಇವೆ (ಅಧ್ಯಾಯ : 4).

## ಇ) ವಿಷಯ ವರ್ಗೀಕರಣ

ಮೊದಲ ಅಧ್ಯಾಯದಲ್ಲಿ ಸಂಜ್ಞೆಗಳನ್ನು ನಿರೂಪಿಸಿದ ಬಳಿಕ ಸಂಧಿ, ನಾಮ (ವಿಭಕ್ತಿ, ಕಾರಕ, ಸರ್ವನಾಮ) ಸಮಾಸ, ತದ್ಧಿತ, ಕ್ರಿಯೆ, ಕೃದಂತ ಅವ್ಯಯಗಳನ್ನು ಪ್ರಕ್ರಿಯೆಗನುಸಾರವಾಗಿ ನಿರೂಪಿಸುವುದು ಸಂಸ್ಕೃತದ ಪ್ರಕ್ರಿಯಾತ್ಮಕ ವ್ಯಾಕರಣಗಳಲ್ಲಿ ಹೆಚ್ಚಾಗಿ ಕಂಡುಬರುವ ಕ್ರಮ. ಇದೇ ಕ್ರಮವನ್ನು ಕನ್ನಡ ವ್ಯಾಕರಣಗಳಲ್ಲಿ ಅನುಸರಿಸಲಾಗಿದೆ. ವಿಷಯ ವರ್ಗೀಕರಣದಲ್ಲಿ ಸ್ಮೃತಿ ದರ್ಪಣಗಳಿಗೆ ಕಾತಂತ್ರವೂ, ಭೂಷಣಕೆ ಕಾತಂತ್ರದ ಜೊತೆಯಲ್ಲಿ ರೂಪಾವತಾರವೂ ಮಾದರಿಯಾಗಿವೆ (ಅಧ್ಯಾಯ : 5).

## (ಈ) ವರ್ಣಮಾಲೆ :

ಶಬ್ದ ಹುಟ್ಟುತ್ತದೆ. ಶಬ್ದದ್ರವ್ಯದ ಕಾರ್ಯ ಶಬ್ದ–ಈ ಹೇಳಿಕೆಗಳಲ್ಲಿನ ಹುಟ್ಟುವಿಕೆ ಮತ್ತು ಕಾರ್ಯ ಎಂಬ ವಿಚಾರದ ಮೇಲೆ ನೈಯಾಯಿಕರ ಪ್ರಭಾವವಿದೆ. ಬರೆಯಲೂ ಉಚ್ಚರಿಸಲೂ ಬರುವವುಗಳು ಮಾತ್ರ ವರ್ಣಗಳು ಎಂಬುದಕ್ಕೆ ಅಂಥ ಚಿಂತನೆ ಸಂಸ್ಕೃತದಲ್ಲಿರುವುದು ಕಾರಣವಾಗಿದೆ. ಸ್ಮೃತಿ ಭೂಷಣ ದರ್ಪಣಗಳು ಕಾತಂತ್ರ ಹೇಳುವ ಸಂಸ್ಕೃತ ವರ್ಣಮಾಲೆಯನ್ನೇ ದೃಷ್ಟಿಯಲ್ಲಿಟ್ಟುಕೊಂಡಿವೆ. ವರ್ಣಮಾಲೆಯ ನಿರೂಪಣೆಯಲ್ಲಿ ಕನ್ನಡ ವ್ಯಾಕರಣಗಳು ಪ್ರಾತಿಶಾಖ್ಯ ಪದ್ಧತಿಯನ್ನು ಅನುಸರಿಸುತ್ತವೆ. ಹೀಗಾಗಿ ಪ್ರಾತಿಶಾಖ್ಯಗಳು ಮತ್ತು ಕಾತಂತ್ರದ ದಟ್ಟವಾದ ಪ್ರಭಾವವಿದೆ. ಯ ವ ಲ ಗಳ ಅನುನಾಸಿಕತೆಯನ್ನು ಹೇಳುವಲ್ಲಿ ಬಿಂದು ವಿಸರ್ಗಗಳ ಸ್ವರಾಂಗ ವ್ಯಂಜನಾಂಗತ್ವವನ್ನು ನಿರೂಪಿಸುವಲ್ಲಿ ಸಂಸ್ಕೃತ ವ್ಯಾಕರಣಗಳ ಪ್ರಭಾವ ಕಣ್ಣೊತ್ತಾಗಿದೆ (ಅಧ್ಯಾಯ : 6).

## (ಉ) ಸಂಧಿ :

ಪ್ರಾತಿಶಾಖ್ಯಗಳು ಮತ್ತು ಕಾತಂತ್ರ ಪ್ರಕೃತಿ ಭಾವವನ್ನು ಸ್ವರಸಂಧಿಯ ಒಂದು ಅಂಗವಾಗಿ ಹೇಳುತ್ತವೆ. ಸ್ವರಸಂಧಿ, ಪ್ರಕೃತಿಭಾವ, ವ್ಯಂಜನಸಂಧಿ, ಈ ಕ್ರಮದಲ್ಲಿ ಕನ್ನಡ ಸಂಧಿಗಳನ್ನು ನಿರೂಪಿಸುವಲ್ಲಿ ಈ ಗ್ರಂಥಗಳ ಪ್ರಭಾವ ನಿಚ್ಚಳವಾಗಿದೆ (ಅಧ್ಯಾಯ : 7).

## (ಊ) ನಾಮ :

'ನಾಮಪ್ರಕೃತಿ' ಯನ್ನು 'ಲಿಂಗ' ವೆಂದು ಕರೆದಿರುವಲ್ಲಿ, ಲಿಂಗದ ವ್ಯಾಖ್ಯೆಯಲ್ಲಿ ಕಾತಂತ್ರದ ಪ್ರಭಾವ ಸ್ಪಷ್ಟವಾಗಿದೆ. ಸಂಸ್ಕೃತ ವ್ಯಾಕರಣಗಳಲ್ಲಿ ಪುರುಷವನ್ನು ತಳಹದಿಯಾಗಿಟ್ಟುಕೊಂಡು ಸರ್ವನಾಮಗಳನ್ನು (ಉತ್ತಮಪುರುಷ, ಮಧ್ಯಮಪುರುಷ, ಪ್ರಥಮಪುರುಷ) ವಿಭಜಿಸುವುದಿಲ್ಲ. ಆ ಮಟ್ಟಿಗೆ ಕನ್ನಡ ವ್ಯಾಕರಣಗಳು ಸಂಸ್ಕೃತ ವ್ಯಾಕರಣಗಳನ್ನು ನೇರವಾಗಿ ಅನುಸರಿಸಿವೆ. ನವವಿಧ ಲಿಂಗಗಳ, ಮೂರು ವಚನಗಳ ಕಲ್ಪನೆಯಲ್ಲಿ ಸಂಸ್ಕೃತ ವ್ಯಾಕರಣಗಳ ಪ್ರಭಾವ ನಿಚ್ಚಳವಾಗಿದೆ. ಕವಿರಾಜಮಾರ್ಗ ಮೊದಲಾಗಿ ಕನ್ನಡ ವ್ಯಾಕರಣಗಳು ಆರು ಕಾರಕಗಳಲ್ಲಿ ಕರ್ತೃವನ್ನು ಸೇರಿಸುತ್ತವೆ, ಷಷ್ಠಿಗೆ ಕಾರಕತ್ವವನ್ನು ವಿಧಿಸುವುದಿಲ್ಲ. ಇಲ್ಲಿ ಸಂಸ್ಕೃತ ವ್ಯಾಕರಣಗಳ ಪ್ರಭಾವ ಸುಸ್ಪಷ್ಟ.

ಕಾರಕಾನುಕ್ರಮದಲ್ಲಿ ಕನ್ನಡ ವ್ಯಾಕರಣಗಳು ಸರಸ್ವತೀ ಕಂಠಾಭರಣಕ್ಕೆ ಋಣಿಗಳು. ಭೂಷಣ ದರ್ಪಣಗಳು ರೂಪಾವತಾರ ಮತ್ತು ಸಿ. ಹೇ. ಶ ವನ್ನೂ ಮಾದರಿಯಾಗಿಟ್ಟುಕೊಂಡಿವೆ. ಕಾರಕಗಳ ನಿರೂಪಣೆಯಲ್ಲಿ ಭೂಷಣ ಹೆಚ್ಚಾಗಿ ಅಷ್ಟಾಧ್ಯಾಯಿಯನ್ನು, ದರ್ಪಣ ಹೆಚ್ಚಾಗಿ ಕಾತಂತ್ರವನ್ನು ಅನುಸರಿಸುತ್ತವೆ (ಅಧ್ಯಾಯ : 8).

ಋ) ಸಮಾಸ

ಸಮಾಸಗಳ ಹೆಸರು, ಪ್ರಭೇದ ಮತ್ತು ಲಕ್ಷಣ ನಿರೂಪಣೆಯ ಮೇಲೆ ಕಾತಂತ್ರ ಅಷ್ಟಾಧ್ಯಾಯಿ, ಮಹಾಭಾಷ್ಯಗಳ ದಟ್ಟವಾದ ಪ್ರಭಾವವಿದೆ. ಪ್ರತಿಯೊಂದು ಸಮಾಸದ ಲಕ್ಷಣ ನಿರೂಪಣೆಯಲ್ಲಿ ಭೂಷಣ ಹೆಚ್ಚಾಗಿ ಮಹಾಭಾಷ್ಯವನ್ನನುಸರಿಸಿದೆ (ಅಧ್ಯಾಯ: 9).

ೠ) ಕ್ರಿಯೆ

ಧಾತುವಿನ ಕಲ್ಪನೆ ಕುರಿತಾಗಿ ಭೂಷಣ ದರ್ಪಣಗಳು ಶಾಕಟಾಯನ ಮತ್ತು ಸಿ.ಹೇ.ಶ ದ ಪ್ರಭಾವಕ್ಕೆ ಸಿಲುಕಿವೆ. ಧಾತುಗಳನ್ನು ಪಟ್ಟಿ ಮಾಡಿ ಅರ್ಥ ನಿರ್ದೇಶ ಮಾಡುವಲ್ಲಿ ಸಂಸ್ಕೃತದ ಧಾತುಪಾಠಗಳನ್ನು ದರ್ಪಣ ನೇರವಾಗಿ ಅನುಸರಿಸಿದೆ. ಆಖ್ಯಾತ ವಿಭಕ್ತಿಗಳನ್ನು ಉತ್ತಮ ಪುರುಷ, ಮಧ್ಯಮ ಪುರುಷ, ಪ್ರಥಮ ಪುರುಷ— ಹೀಗೆ ವಿಭಜಿಸುವಲ್ಲಿ ಅಷ್ಟಾಧ್ಯಾಯಿ ಮತ್ತು ಕಾತಂತ್ರವನ್ನನುಸರಿಸಲಾಗಿದೆ. ಆಖ್ಯಾತ ವಿಭಕ್ತಿಗಳಿಗೆ ಭೂತವತಿ, ವರ್ತಮಾನ, ಭವಿಷ್ಯಂತಿ ಎಂಬ ಸಂಜ್ಞೆಗಳನ್ನು ವಿಧಿಸುವಲ್ಲಿ ಸ್ಮೃತಿ ಭೂಷಣಗಳು ಕಾತಂತ್ರವನ್ನನುಸರಿಸಿವೆ. ಕನ್ನಡ ವ್ಯಾಕರಣಗಳು ಆಖ್ಯಾತ ವಿಭಕ್ತಿಗಳಲ್ಲಿ ಸ್ತ್ರೀನಪುಂಸಕಗಳನ್ನು (ಪ್ರಥಮ ಪುರುಷದಲ್ಲಿ) ಅವಗಣಿಸಿ 'ಆರು ವಿಭಕ್ತಿ ಗಳು' ಎನ್ನುವಲ್ಲಿ ಸಂಸ್ಕೃತದ ಪ್ರಭಾವ ನಿಚ್ಚಳವಾಗಿದೆ. ಸತಿಸಪ್ತಮಿಯ ಕಲ್ಪನೆಯಲ್ಲಿ ಸಂಸ್ಕೃತವನ್ನನುಸರಿಸಲಾಗಿದೆ (ಅಧ್ಯಾಯ: 10).

ಌ) ತದ್ಧಿತ ಪ್ರತ್ಯಯಗಳು

ತದ್ಧಿತ ಪ್ರತ್ಯಯಗಳು ಯಾವ ಯಾವ ಅರ್ಥದಲ್ಲಿ ಬರುತ್ತವೆಯೆಂದೂ ನಿರೂಪಿಸು ವಲ್ಲಿ ಸಂಸ್ಕೃತ ವ್ಯಾಕರಣಗಳ ಮಾದರಿಯನ್ನು ಅನುಸರಿಸಲಾಗಿದೆ (ಅಧ್ಯಾಯ: 11).

ೡ) ಅವ್ಯಯಗಳಿಗೆ ಮೊದಲು ವಿಭಕ್ತಿ ಸೇರಿ ಬಳಿಕ ಲೋಪ ಹೊಂದುವುದಾಗಿ ಹೇಳು ವಲ್ಲಿ ಸಂಸ್ಕೃತ ವ್ಯಾಕರಣಗಳ ಪ್ರಭಾವ ಸ್ಪಷ್ಟವಿದೆ (ಅಧ್ಯಾಯ: 12).

ಒ) ವಾಕ್ಯರಚನೆ

ವಿಶೇಷಣವು ವಿಶೇಷ್ಯದ ಲಿಂಗ, ವಚನ, ವಿಭಕ್ತಿಗಳನ್ನು ಹೊಂದಿರಬೇಕೆಂದು ಹೇಳುವಲ್ಲಿ, ಪ್ರಶ್ನಾರ್ಥಕ ಸರ್ವನಾಮಗಳನ್ನು ಸಂಬಂಧಾರ್ಥಕ ಸರ್ವನಾಮಗಳಂತೆ ಬಳಸುವ ವಿಚಾರದಲ್ಲಿ, ಸಮುಚ್ಚಯ ಪ್ರಯೋಗದ ವಿಚಾರದಲ್ಲಿ ಸಂಸ್ಕೃತದ ಪ್ರಭಾವ ಸ್ಪಷ್ಟವಾಗಿ ಗೋಚರಿಸುತ್ತದೆ (ಅಧ್ಯಾಯ: 13).

